|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೧೩

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1948

|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೧೩

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1948



# ಮುನ್ನುಡಿ

ಆಧ್ಯಾತ್ಮಿಕ ಜೀವನವೇ ಮಾನವನ ಪ್ರಗತಿ. ಆದರೆ ಅದನ್ನು ತಿಳಿದಿರುವವರು ವಿರಳ. ಐಹಿಕಸುಖಕ್ಕೆ ಮನಸೋತು ಆತ್ಮವಿಚಾರವನ್ನು ಪೂರ್ಣವಾಗಿ ಬಿಟ್ಟಿರುವವರೇ ಇಂದಿನ ಪ್ರಪಂಚದಲ್ಲಿ ಹೆಚ್ಚುಸಂಖ್ಯೆಯಲ್ಲಿ ಕಾಣುತ್ತಿರುವರು. ಆಧ್ಯಾತ್ಮಿಕಜೀವನವೆಂದರೆ, ಸದಾ ಆತ್ಮಾನಾತ್ಮವಿಚಾರಮಾಡುತ್ತಾ ಹಗಲಿರುಳೂ ಆಮುಷ್ಮಿಕಸುಖವನ್ನೇ ಪರಿಗಣಿಸುತ್ತಿರಲಿ ಎಂದು ಹೇಳುವುದಿಲ್ಲ. ಹಾಗೆ ಹೇಳಿದರೂ ಅದರಂತೆ ನಡೆಯುವುದು ಕಷ್ಟವಾದೀತು. ಜೀವನಯಾತ್ರೆಯಲ್ಲಿ ಹೆಚ್ಚುಕಾಲ ಐಹಿಕಸುಖಕ್ಕಾಗಿಯೇ ವ್ಯವಹಾರಮಾರ್ಗವನ್ನು ಅವಲಂಬಿಸಲಿ. ದೊರೆತ ಸ್ವಲ್ಪ ವಿರಾಮಕಾಲದಲ್ಲಿಯಾದರೂ, ತಾನು ಯಾರು? ತನ್ನ ಸ್ವರೂಪವೇನು? ತನ್ನ ಮುಂದಿನ ಪರಿಣಾಮು ಹೇಗೆ? ಇವುಗಳನ್ನು ಚಿಂತಿಸಿದರೆ ಸಾಕು. ಅದನ್ನೂ ಆಧ್ಯಾತ್ಮಜೀವನವೆನ್ನಬಹುದು. ಸ್ತ್ರೀಯಾಗಲಿ, ಪುರುಷನಾಗಲಿ ಜನ್ಮವೆತ್ತಿದಮೇಲೆ ತಮ್ಮ ಜೀವನಮಾರ್ಗದಲ್ಲಿ ಚಿತ್ತೈಕಾಗ್ರ್ಯತೆ, ಗುರುಹಿರಿಯರಲ್ಲಿ ಭಕ್ತಿ, ದೈವ ಸಾಕ್ಷಾತ್ಕಾರ, ತ್ರಿಕರಣಶುದ್ಧಿಯಿಂದ ನಡೆಸುವ ದಾನಧರ್ಮಾದಿಗಳು ಇವುಗಳ ಕಡೆಗೆ ಸ್ವಲ್ಪವಾದರೂ ಮನಗೊಡಬೇಕು. ಇದನ್ನೇ ಸನ್ಮಾರ್ಗ, ಆಧ್ಯಾತ್ಮಜೀವನವೆಂದರೆ ತಪ್ಪಲ್ಲ. ಈ ಆಸ್ತಿಕಧರ್ಮವೇ ಒಂದು ಹಸು. ಐಹಿಕಸುಖಾದಿಗಳು ಅದರ ಬಾಲ. ಹಸುವಿನ ಇಷ್ಟದಂತೆ ಹಸುವಿಗೆ ತೊಂದರೆಯಾಗದಂತೆ ಬಾಲವು ಹಾರಾಡುತ್ತಿರಬೇಕು. ಬಾಲವೇ ಹಸುವನ್ನು ಕುಣಿಸಬಾರದು. ನಮ್ಮ ಕ್ಷಣಿಕವಾದ ಭೋಗಾದಿಗಳು ಆಸ್ತಿಕಧರ್ಮವನ್ನು ಅನುಸರಿಸಿ ಮುಂದುವರಿಯಬೇಕು. ಕಾಲದೇಶಾನುಗುಣವಾಗಿ ಭೋಗ, ಅಥವಾ ಭೋಗಸಾಮಗ್ರಿಗಳು ವ್ಯತ್ಯಾಸಹೊಂದಬಹುದು. ಆಸ್ತಿಕಮನೋಭಾವಕ್ಕೆ ಯಾವಕಾಲದಲ್ಲಿಯೂ ಎಂತಹ ದೇಶದಲ್ಲಿಯೂ ಬದಲಾವಣೆಯಿರುವುದಿಲ್ಲ. ಹಸುವಿನಸೌಂದರ್ಯ ಎಂದೂ ಅದರ ಬಾಲಕ್ಕೆ ಬರುವುದಿಲ್ಲ. ಹಸುವಿಗಾಗಿ ಬಾಲವೇ ಹೊರತು ಬಾಲದಿಂದ ಹಸುವಲ್ಲ. ಈ ದೃಷ್ಟಾಂತದಿಂದ ನಾವು ಐಹಿಕ ಸುಖಾದಿಗಳನ್ನು ಆಮುಷ್ಮಿಕ ಸುಖದ ದೃಷ್ಟಿಯಿಂದ ಅಲ್ಪವೆಂದು ಗಮನಿಸಬೇಕು.

ಈ ಆಸ್ತಿಕಭಾವನೆಯು ಎಲ್ಲರಿಗೂ ಸುಲಭವಾಗಿ ಲಭಿಸತಕ್ಕುದಲ್ಲ. ಎಲ್ಲಕ್ಕೂ ಜನ್ಮಾಂತರದ ಸಂಸ್ಕಾರವಿರಬೇಕೆಂಬುದು ತಾತ್ತ್ವಿಕರ ವಾದ; ಅದು ನಿಜ. ಆ ಸಂಸ್ಕಾರವು ಉದ್ಬುದ್ಧವಾಗಿ ಕಾರ್ಯಗತವಾಗಲು ಕೆಲವು ಬಾಹ್ಯಕಾರಣಗಳೂ

ಆವಶ್ಯಕ. ಗ್ರಂಥಪಠನೆ, ಗುರೂಪದೇಶ, ಸತ್ಪುರುಷರ ಸಂಸರ್ಗ ಇವೇ ಆ ಕಾರಣಗಳು. ಇವುಗಳಲ್ಲಿ ಮೊದನೆಯದಾದ ಗ್ರಂಥವ್ಯಾಸಂಗವು ನಮ್ಮ ಭಾರತೀಯರಿಗೆ ಅಷ್ಟು ಅಸಾಧ್ಯವಾದುದಲ್ಲ. ಏಕೆಂದರೆ ಪ್ರಪಂಚದ ಎಲ್ಲ ದೇಶಗಳಿಗಿಂತಲೂ ನಮ್ಮ ದೇಶದಲ್ಲಿ ಆಧ್ಯಾತ್ಮಿಕಗ್ರಂಥಸಂಪತ್ತು ಹೇರಳವಾಗಿದೆ. ಹಿಂದೆ ಮಹಾತ್ಮರೆಂದು ತೋರಿದವರೆಲ್ಲಾ ಈ ವಿಷಯಕ್ಕಾಗಿಯೇ ದುಡಿದು ಚರ್ಚಿಸಿ ಗ್ರಂಥಭಂಡಾರವನ್ನು ತುಂಬಿರುವರು. ಈ ಕಾಲದಲ್ಲಂತೂ ಆ ಗ್ರಂಥಗಳು ಸ್ವತಂತ್ರವಾಗಿಯೂ, ಪರಿವರ್ತಿತ ವಾಗಿಯೂ, ಸಂಕ್ಷಿಪ್ತವಾಗಿಯೂ ಸುಲಭವಾಗಿ ಹಸ್ತಗತವಾಗುವುವು. ಅವುಗಳನ್ನು ಹಿಡಿದು ಮನಸ್ಸಿಟ್ಟು ಓದುವ ತಾಳ್ಮೆಯೊಂದು ಮಾತ್ರ ನಮಗೆ ಬೇಕಾಗಿದೆ. ಬೃಹದಾ ರಣ್ಯಕದ ಕಥೆಯೊಂದು ತಿಳಿಸುವಂತೆ ಮಾನವನಿಗೆ ದಮ, ದಾನ, ದಯೆ ಈ ಮೂರು ಸಕಲ ಕಾರ್ಯಸಾಧನೆಗೂ ಮುಖ್ಯ ಅಂಗಗಳೆನಿಸಿಬಿಡುವುವು. ಅಂತಹ ಗುಣಗಳನ್ನು ನಾವು ಪಡೆಯಲು ಆಧ್ಯಾತ್ಮಿಕಗ್ರಂಥವ್ಯಾಸಂಗವನ್ನು ಮುಂದುವರಿಸುವುದು ಶ್ರೇಯಸ್ಕರವಾದೀತು.

ಆಸ್ತಿಕಧರ್ಮಬೋಧಕಗಳಾದ ಗ್ರಂಥಗಳಲ್ಲಿ ಒಂದಾದ ಈ ಶಿವರಹಸ್ಯವೂ ಈ ಪ್ರತಿಯಿಂದ ಐದನೆಯ ಅಂಶವನ್ನು ಮುಗಿಸುವುದು. ಕೇವಲ ಕಥಾಸಂವಿಧಾನ, ವಿಷಯಸಂಗ್ರಹಣೆ, ನವರಸಭರಿತವಾದ ಸನ್ನಿವೇಶಗಳು, ಇವುಗಳ ದೃಷ್ಟಿಯಿಂದ ಓದುವವರಿಗೆ ಈ ಅಂಶವು ಅಷ್ಟು ಆಹ್ಲಾದಕರವಾಗಲಾರದು. ಧರ್ಮಾಭಿಮಾನದಲ್ಲಿ, ಭಕ್ತಿಭಾವನೆಯಲ್ಲಿ ಮುಂದುವರಿದ ಜನರಿಗೆ ಇದು ರತ್ನಪ್ರಾಯವೇ ಸರಿ. ನಾಮ ದೇವಋಷಿಕೃತವಾದ ಶಿವಸ್ತುತಿಯೊಂದು ಈ ಭಾಗದ ಇಪ್ಪತ್ತಾರನೆಯ ಅಧ್ಯಾಯದಲ್ಲಿ ಬಂದಿರುವುದು. ಆ ಸ್ತೋತ್ರದಲ್ಲಿ ಉಪನಿಷತ್ತಿನ ಸಾರವು ಕನ್ನಡಿಯ ಬೀರುವಿನಲ್ಲಿ ಮಾರಾಟಕ್ಕಾಗಿ ಇಟ್ಟಿರುವ ವಸ್ತುವಿನಂತೆ ಎಲ್ಲರ ಕಣ್ಣಿಗೂ ಸುಂದರ ವಾಗಿ ಕಂಡುಬರುವುದು. ಆದರೆ ಅದನ್ನು ಸ್ವಾಧೀನಮಾಡಿಕೊಳ್ಳುವವನು ಶ್ರೀಮಂತನೂ, ಧೀಮಂತನೂ ಆಗಿರಬೇಕು. ಅಂತಹ ಸ್ತೋತ್ರರತ್ನಗಳು ಶ್ರೀಮದಾ ಚಾರ್ಯವರ್ಯರೆನಿಸಿದ ಶಂಕರಾಚಾರ್ಯರಂತಹವರ ಕೃತಿಗಳಿಗೆ ಸರಿಸಮನಾಗಿ ನಿಲ್ಲುವುವು. ಈ ಶಿವರಹಸ್ಯದಲ್ಲಿ ಇಂತಹ ಬಹ್ವರ್ಥಗರ್ಭಿತವಾದ ಸ್ತುತಿವಚನಗಳು ಹೇರಳವಾಗಿವೆ. ಅದಲ್ಲದೆ ಶೇಷಕೃತ ಸಹಸ್ರನಾಮಸ್ತೋತ್ರವೊಂದು ಈ ಭಾಗದ ಕೊನೆಯ ಅಧ್ಯಾಯದಲ್ಲಿ ಬಂದಿರುವುದು. ಈಗ ಪ್ರಚಾರದಲ್ಲಿರುವ ಸಹಸ್ರನಾಮ ಸ್ತೋತ್ರಗಳಿಗಿಂತ ಇದು ಪ್ರತ್ಯೇಕವೆನಿಸಿದೆ. ಇಲ್ಲಿನ ಶಿವನಾಮಗಳನ್ನೂ ಚತುರ್ಥ್ಯಂತ ವಾಗಿ ಮಾಡಿ, ಪೂಜೆಗೆ ಅನುಕೂಲಿಸುವಂತೆ ಏರ್ಪಡಿಸುವುದು ಅತ್ಯವಶ್ಯಕವೆಂದು

ನನ್ನ ಅಭಿಪ್ರಾಯ. ಇಂತಹ ಅನೇಕ ವಿಷಯಗಳಿಂದ ಕೂಡಿ ಈ ಗ್ರಂಥಭಾಗವು ಆಸ್ತಿಕಜನರ ಮನಸ್ಸಿಗೆ ಅತ್ಯಂತ ಹರ್ಷದಾಯಕವಾಗಿದೆ ಎಂದರೆ ಅದು ಅತಿಶಯೋಕ್ತಿಯಲ್ಲ.

ಸುವಿಚಾರತರಂಗಗಳಿಂದಲೂ, ಆತ್ಮಜ್ಞಾನರತ್ನಗಳಿಂದಲೂ, ನರಕವರ್ಣನ ಮಹಾಮಕರಾದಿಗಳಿಂದಲೂ, ಇತಿಹಾಸಸ್ತೈಕತದಿಂದಲೂ, ಶಿವಸ್ವರೂಪವೆಂಬ ಅಗಾಧ ಜಲದಿಂದಲೂ ತುಂಬಿರುವ ಈ ಗ್ರಂಥಮಹಾಸಾಗರವನ್ನು ಸುಲಭವಾಗಿ ಪ್ರವೇಶಿಸಿ, ಅದರ ಸತ್ವವನ್ನೆಲ್ಲಾ ಅನಾಯಾಸವಾಗಿ ಪರಿಗ್ರಹಿಸಲು ಅನುಕೂಲವಾಗುವಂತೆ ಗ್ರಂಥಪರಿವರ್ತನಾದಿ ಪರಿಷ್ಕಾರಕಾರ್ಯಗಳಿಗೆ ಸರ್ವಸಹಾಯನೀಡುತ್ತಲಿರುವ ನಮ್ಮನ್ನಾಳುವ ಕರ್ಣಾಟಕ ಸಿಂಹಾಸನಾಧೀಶ್ವರ ಶ್ರೀಮಜ್ಜಯಚಾಮರಾಜ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ., ಮಹಾಪ್ರಭುವರ್ಯರಿಗೆ ಈ ಗ್ರಂಥಾಭಿಮಾನಿಯಾದ ಉಮಾಮಹೇಶ್ವರನು, ಕುಟುಂಬಪರಿವಾರಾದಿ ಸಕಲ ಸಂಪತ್ತಿನೊಡನೆ ಚಿರಕಾಲ ಯದುವಂಶಲಲಾಮರಾಗಿ ಬಾಳುವಂತೆ ಅನುಗ್ರಹಿಸಿ, ರಕ್ಷಿಸಲಿ, ಎಂದು ನಾನು ಸರ್ವದಾ ಭಗವಂತನಲ್ಲಿ ಶ್ರೇಯಃಪ್ರಾರ್ಥನೆಮಾಡುವೆನು.

ಶ್ರೀ ಸರ್ವಧಾರಿ ಸಂವತ್ಸರದ
ಮಾರ್ಗಶೀರ್ಷ ಶುದ್ಧ ದ್ವಿತೀಯಾ
ಗುರುವಾರ
2—12—1948.

ಸಜ್ಜನವಿಧೇಯ,
ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,
ಆಸ್ಥಾನವಿದ್ವಾನ್, ಮೈಸೂರು.

# ಶ್ರೀ ಶಿವರಹಸ್ಯದಲ್ಲಿ ಭರ್ಗನಾಮಕ ಐದನೆಯ ಅಂಶದ ವಿಷಯಾನುಕ್ರಮಣಿಕಾ

## ಅಧ್ಯಾಯಗಳು ೨೧—೪೦

## ಇಪ್ಪತ್ತೈದನೆಯ ಅಧ್ಯಾಯ



## ಇಪ್ಪತ್ತಾರನೆಯ ಅಧ್ಯಾಯ



## ಇಪ್ಪತ್ತೇಳನೆಯ ಅಧ್ಯಾಯ



## ಇಪ್ಪತ್ತೆಂಟನೆಯ ಅಧ್ಯಾಯ



## ಇಪ್ಪತ್ತೊಂಬತ್ತನೆಯ ಅಧ್ಯಾಯ



## ಮೂವತ್ತನೆಯ ಅಧ್ಯಾಯ

## ಮೂವತ್ತೊಂದನೆಯ ಅಧ್ಯಾಯ



## ಮೂವತ್ತೆರಡನೆಯ ಅಧ್ಯಾಯ



## ಮೂವತ್ತಮೂರನೆಯ ಅಧ್ಯಾಯ



## ಮೂವತ್ತನಾಲ್ಕನೆಯ ಅಧ್ಯಾಯ



## ಮೂವತ್ತೈದನೆಯ ಅಧ್ಯಾಯ



## ಮೂವತ್ತಾರನೆಯ ಅಧ್ಯಾಯ

## ಮೂವತ್ತೇಳನೆಯ ಅಧ್ಯಾಯ



## ಮೂವತ್ತೆಂಟನೆಯ ಅಧ್ಯಾಯ



## ಮೂವತ್ತೊಂಬತ್ತನೆಯ ಅಧ್ಯಾಯ



## ನಲವತ್ತನೆಯ ಅಧ್ಯಾಯ



ಇಲ್ಲಿಗೆ ಶಿವರಹಸ್ಯದ ಪಂಚಮಾಂಶದ ವಿಷಯಾನುಕ್ರಮಣಿಕೆ
ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಪಂಚಮಾಂಶೇ

## ಏಕವಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ತ್ರಿಯಂಬಕೋ ನಾಮ ಗಿರಿರಸ್ತಿ ಪ್ರಿಯತಮೋ ಮಮ ।
ಮಂದರಾಚ್ಚಾಪಿ ಕೈಲಾಸಾತ್ತಥೈವ ಕನಕಾಚಲಾತ್ ॥೧॥

ತೇ ನಿವಾಸಾ ಮಹೇಶಸ್ಯ ತ್ರಿಯಂಬಕಗಿರಿಸ್ತ್ವಹಂ ।
ತ್ರಿಯಂಬಕೇಶ್ವರಂ ನಾಮ್ನಾ ತಲ್ಲಿಂಗಂ ಪರಮಾದ್ಭುತಂ ॥೨॥

ತಲ್ಲಿಂಗಂ ಯೇನ ದೃಷ್ಟಂ ಸ್ಯಾತ್ತೇನ ದೃಷ್ಟಾ ತ್ರಿಲೋಕಿಕಾ ।
ತ್ರೈಲೋಕ್ಯೇ ಯಾನಿ ಲಿಂಗಾನಿ ತಾನಿ ಸರ್ವಾಣಿ ಶಂಕರಿ ॥೩॥

---

## ಶ್ರೀಶಿವರಹಸ್ಯದ ಐದನೆಯ ಅಂಶದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ

ಪರಶಿವನು ಪಾರ್ವತಿಗೆ ಪವಿತ್ರವಾದ ತ್ರಿಯಂಬಕಕ್ಷೇತ್ರದ ಮತ್ತು ತ್ರ್ಯಂಬಕೇಶ್ವರನ ಮಹಿಮೆಯನ್ನು ಹೀಗೆ ವಿವರಿಸತೊಡಗಿದನು:—ದೇವಿಯೇ, ನನಗೆ ಬಹು ಪ್ರಿಯವಾದ ತ್ರಿಯಂಬಕವೆಂಬ ಹೆಸರಿನ ಗಿರಿಯೊಂದಿರುವುದು. ಮಂದರ, ಕೈಲಾಸ, ಮೇರು ಈ ಪರ್ವತಗಳಿಗಿಂತಲೂ ಹೆಚ್ಚಾಗಿ ಅದು ನನಗೆ ಪ್ರಿಯವೆನಿಸಿದೆ. ಆ ಪರ್ವತಗಳಲ್ಲಿ ನನ್ನ ಸಾನ್ನಿಧ್ಯವು ತೋರಿಬಂದರೂ, ನಾನೇ ಈ ತ್ರಿಯಂಬಕಪರ್ವತರೂಪದಿಂದಿರುವೆನೆಂದು ನೀನು ಭಾವಿಸು. ಅಲ್ಲಿರುವ ತ್ರಿಯಂಬಕೇಶ್ವರಲಿಂಗವಂತೂ ಬಹಳ ಆಶ್ಚರ್ಯಕರವಾದುದು. ॥೧-೨॥

ಆ ತ್ರಿಯಂಬಕೇಶ್ವರಲಿಂಗವನ್ನು ದರ್ಶನಮಾಡಿದರೆ ಮೂರುಲೋಕದಲ್ಲಿರುವ ಎಲ್ಲಾ ಶಿವಲಿಂಗಗಳ ದರ್ಶನದಿಂದ ಒದಗುವ ಸುಕೃತವೂ ಲಭಿಸುವುದು. ಸಕಲ

ತ್ರಿಯಂಬಕೇಶ್ವರಂ ಲಿಂಗಂ ಮಮ ಸರ್ವಾರ್ಥಸಿದ್ಧಿದಂ ।
ಯೇನ ದೃಷ್ಟಂ ಶ್ರುತಂ ವಾಪಿ ಪ್ರಣತಂ ವಾ ಸಮರ್ಚಿತಂ ॥೪॥

ಸ ಏವ ಧನ್ಯಧೌರೇಯಃ ಪುರುಷಾರ್ಥೈಕಭಾಜನಃ ।
ತತ್ರ ಸಂತಿ ಮಹಾಶೈವಾಃ ತ್ರ್ಯಂಬಕೇಶಸಮರ್ಚಕಾಃ ॥೫॥

ಭಸ್ಮೋದ್ಧೂಲಿತಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ।
ರುದ್ರಾಕ್ಷಮಾಲಾಭರಣಾಃ ರುದ್ರಸೂಕ್ತಜಪಾದರಾಃ ॥೬॥

ಪಂಚಾಕ್ಷರಪರಾ ನಿತ್ಯಂ ಸದಾ ಮಲ್ಲಿಂಗಪೂಜಕಾಃ ।
ಬಹವಸ್ತತ್ರ ದೇವೇಶಿ ತ್ರ್ಯಂಬಕೇಶಂ ಯಜಂತಿ ಮಾಂ ॥೭॥

ಬಿಲ್ವಪತ್ರೈಶ್ಚ ಕಮಲೈಸ್ತಥಾ ಗೋದಾವರೀಜಲೈಃ ।
ಪೂತೈರ್ಮಾಂ ಸ್ನಪಯಂತೀಶೇ ರುದ್ರಮಂತ್ರೈರಹರ್ನಿಶಂ ॥೮॥

ಫಲಮೂಲೈಶ್ಚ ವಿವಿಧೈರ್ನೈವೇದ್ಯೈಶ್ಚ ಸದಾಂಬಿಕೇ ।
ತತ್ಪೂಜಾರಹಿತಾಸ್ತೇ ತು ಜಲಮನ್ನಂ ಫಲಾದಿಕಂ ॥೯॥

---

ವಾದ ಇಷ್ಟಾರ್ಥಗಳನ್ನೆಲ್ಲಾ ಸಿದ್ಧಿಗೊಳಿಸುವ ಆ ಈಶ್ವರಲಿಂಗದ ದರ್ಶನ, ಸ್ಪರ್ಶನ, ಅರ್ಚನ ಇವುಗಳಿಂದ ಮನುಷ್ಯರು ಧನ್ಯತಮರಾಗುವರು. ಅಂತಹವರೇ ಸಕಲರಿಗೂ ಪೂಜ್ಯರೆನಿಸುವರು. ॥೩-೪-೫॥

ಅಲ್ಲಿ ಭಸ್ಮದಿಂದ ಭೂಷಿತರಾಗಿ, ಭಸ್ಮತ್ರಿಪುಂಡ್ರವನ್ನು ಧರಿಸಿ, ರುದ್ರಾಕ್ಷಿಯ ಮಾಲೆಗಳಿಂದ ಒಪ್ಪುತ್ತಾ ಇರುವ ಈಶ್ವರಾರಾಧಕರು ಸರ್ವದಾ ರುದ್ರಸೂಕ್ತ, ಶಿವಪಂಚಾಕ್ಷರಮಂತ್ರ ಮೊದಲಾದ ಶೈವಮಂತ್ರಗಳನ್ನೇ ಪಠಿಸುತ್ತಾ ಯಾವಾಗಲೂ ಆ ಲಿಂಗವನ್ನೇ ಪೂಜಿಸುತ್ತಿರುವರು. ॥೬-೭॥

ಗೋದಾವರಿಯ ಪವಿತ್ರೋದಕದಿಂದ ಆ ಶಿವಲಿಂಗಕ್ಕೆ ಅಭಿಷೇಕಮಾಡುವರು. ರುದ್ರಮಂತ್ರೋಚ್ಚಾರಣೆಮಾಡುತ್ತಾ ಹಗಲುರಾತ್ರಿಗಳೆನ್ನದೆ ಫಲಮೂಲಗಳಿಂದಲೂ, ವಿಧವಿಧವಾದ ನಿವೇದನಾರ್ಹವಾದ ವಸ್ತುಗಳಿಂದಲೂ ಶಿವಲಿಂಗವನ್ನು ತೃಪ್ತಿಪಡಿಸುವರು. ಆ ಶಿವಲಿಂಗಪೂಜೆಯಿಲ್ಲದೆ ಅವರಾರೂ ಭೋಜನಮಾಡುವುದಿಲ್ಲ. ಗೋದಾವರೀ ನದಿಯು ನನ್ನ ಜಟೆಯಿಂದ ಉದ್ಭವವಾಯಿತು. ಗೌತಮ ಋಷಿಯ ಪ್ರೀತ್ಯರ್ಥವಾಗಿ ಆ ನದಿಯು ಭೂಲೋಕಕ್ಕೆ ತರಲ್ಪಟ್ಟಿತು. ॥೮-೯-೧೦॥

ನಾಶ್ನಂತಿ ನಿಯತಂ ದೇವಿ ನೈವೇದ್ಯೈರ್ವರ್ತಯಂತಿ ತೇ ।
ಗೌತಮಾರ್ಥೇ ಸಮಾನೀತಾ ಸ್ವಮೌಲಿಸ್ಥಜಟಾಗ್ರತಃ ॥೧೦॥

ಪುಣ್ಯಾ ಗೋದಾವರೀ ದೇವಿ ವೃದ್ಧಗಂಗೇತಿ ವಿಶ್ರುತಾ ।
ತಸ್ಯಾಂ ಸ್ನಾತ್ವಾ ಮಹಾನದ್ಯಾಂ ದೃಷ್ಟ್ವಾ ಶ್ರೀ ತ್ರ್ಯಂಬಕೇಶ್ವರಂ ॥೧೧॥

ಅಶ್ವಮೇಧಶತಾತ್ಪುಣ್ಯಂ ಭವಿಷ್ಯತಿ ನ ಸಂಶಯಃ ॥೧೨॥

॥ ಸೂತ ಉವಾಚ ॥

ಸಾ ಗೌರೀ ದೇವದೇವಸ್ಯ ಶ್ರುತ್ವಾ ವಾಕ್ಯಂ ಮುನೀಶ್ವರಾಃ ।
ಪ್ರಾಹ ದೇವಂ ವಿರೂಪಾಕ್ಷಂ ಪ್ರಾಂಜಲಿಃ ಪ್ರಣಯಾನ್ವಿತಾ ॥೧೩॥

॥ ಶ್ರೀ ಪಾರ್ವತ್ಯುವಾಚ ॥

ಗೌತಮಾರ್ಥಂ ಮಹಾದೇವ ಕಥಂ ಗೋದಾವರೀ ನದೀ ।
ಸಮಾನೀತಾ ಮಹೇಶಾನ ತನ್ಮಮಾಚಕ್ಷ್ವ ವಿಸ್ತರಾತ್ ॥೧೪॥

ಪಾರ್ವತೀವದನಾಂಭೋಜಾಚ್ಛ್ರುತ್ವಾ ವಾಕ್ಯಂ ಮಹೇಶ್ವರಃ ।
ಪ್ರಾಹ ದೇವೋ ಮಹಾದೇವೋ ಗೌರ್ಯೈ ತಾಂ ಗೌತಮೀಕಥಾಂ ॥೧೫॥

---

ಆ ಗೋದಾವರಿಗೆ ವೃದ್ಧಗಂಗೆಯೆಂಬ ಹೆಸರಿದೆ. ಆ ನದಿಯಲ್ಲಿ ಸ್ನಾನ ಮಾಡಿ ತ್ರ್ಯಂಬಕೇಶ್ವರ ಲಿಂಗದರ್ಶನಮಾಡಿದವರಿಗೆ ನೂರು ಅಶ್ವಮೇಧಯಾಗಗಳ ಪುಣ್ಯವು ಲಭಿಸುವುದರಲ್ಲಿ ಸಂಶಯವಿಲ್ಲ. ॥೧೧-೧೨॥

ಎಂದು ಹೇಳಿದ ಪತಿಯವಾಕ್ಯವನ್ನು ಕೇಳಿ ಗೌರೀದೇವಿಯು ಭಕ್ತಿಪೂರ್ವಕ ವಾಗಿ ಶಿವನನ್ನು ಪ್ರಾರ್ಥಿಸುತ್ತಾ 'ಮಹಾದೇವನೇ, ಗೋದಾವರೀನದಿಯನ್ನು ಗೌತಮಮಹರ್ಷಿಗಾಗಿ ಭೂಲೋಕಕ್ಕೆ ತರಲು ಕಾರಣವೇನು? ದಯೆಯಿಂದ ಅದನ್ನು ವಿವರಿಸಬೇಕು' ಎಂದು ಪ್ರಶ್ನೆಮಾಡಿದಳು. ॥೧೩-೧೪॥

ಆಗ ಪಾರ್ವತಿಯ ವಿನಯವಚನವನ್ನು ಲಾಲಿಸಿ ಮಹಾದೇವನು ಗೌತಮ ಋಷಿಯ ಕಥೆಯನ್ನು ಹೀಗೆ ಹೇಳಲಾರಂಭಿಸಿದನು. "ಎಲೌ ದೇವಿಯೇ, ಹಿಂದೆ

॥ ಈಶ್ವರ ಉವಾಚ ॥

ಶೃಣು ದೇವಿ ಪುರಾ ವಿಪ್ರೋ ಗೌತಮೋ ನಾಮ ಶಾಂಕರಃ ।
ಮಮ ಭಕ್ತವರೋತ್ಯಂತಂ ಸದಾ ಮಲ್ಲಿಂಗಪೂಜಕಃ ॥೧೬॥

ಅಹಲ್ಯಾಂ ತಾಂ ಪುರಾ ತ್ಯಕ್ತ್ವಾ ಸುತ್ರಾಮ್ಣಾ ಚ ಪ್ರಧರ್ಷಿತಾಂ ।
ತದ್ವಿಯೋಗೇಸ ದುಃಖಾರ್ತೋ ಶಪ್ತ್ವಾ ತಾಂ ಸುಪ್ರಿಯಾಂ ಪ್ರಿಯಾಂ॥೧೭॥

ಶಿವಕ್ಷೇತ್ರಾಣಿ ಪುಣ್ಯಾನಿ ಭ್ರಮಂಸ್ತದ್ದುಃಖಕರ್ಶಿತಃ ।
ಕೋಕಾಮುಖಂ ಚ ಕೇದಾರಮೋಂಕಾರಾಮರಕಂಟಕಂ ॥೧೮॥

ಕುರುಕ್ಷೇತ್ರಂ ಪ್ರಭಾಸಂ ಚ ಪುಷ್ಕರಂ ವಿರಜಂ ತಥಾ ।
ಕಾಲಂಜರಂ ಚ ಬದರೀಂ ಗಯಾಂ ಚೈವ ಪ್ರಯಾಗಕಂ ॥೧೯॥

ಹರಿದ್ವಾರಮಯೋಧ್ಯಾಂ ಚ ಪುಣ್ಯಂ ಪಿಂಡಾರಕಂ ತಥಾ ।
ಶ್ರೀ ಗಂಗಾಸಾಗರಂ ದೇವಿ ಹಲಸಂಗಂ ಮಹೇಶ್ವರಿ ॥೨೦॥

ತತ್ರತ್ಯಪುಣ್ಯತೀರ್ಥೇಷು ಪೂಜ್ಯಲಿಂಗಾನಿ ಭಕ್ತಿತಃ ।
ವಾರಾಣಸೀಮಪಿ ಪ್ರಾಪ್ಯ ತತ್ರ ನೋ ನಷ್ಟಕಿಲ್ಬಿಷಃ ॥೨೧॥

---

ಗೌತಮನೆಂಬ ನನ್ನ ಭಕ್ತಶ್ರೇಷ್ಠನು ಸದಾ ಶಿವಲಿಂಗಪೂಜಾಪರನಾಗಿ ಕಾಲಕಳೆಯುತ್ತಿದ್ದನು. ॥೧೫-೧೬॥

ಆತನ ಪತ್ನಿಯೇ ಅಹಲ್ಯೆಯು. ಆಕೆಯು ಇಂದ್ರನಿಂದ ವಂಚಿತಳಾಗಿ ದುರ್ಮಾರ್ಗಗಾಮಿನಿಯಾದ ಮೇಲೆ, ಶಾಪದಿಂದ ಅವಳನ್ನು ದೂರಮಾಡಿ, ಆಶ್ರಮದಿಂದ ಹೊರಟು ಅನೇಕ ಶಿವಕ್ಷೇತ್ರಗಳನ್ನು ದರ್ಶನಮಾಡುತ್ತಾ, ಪತ್ನೀವಿರಹದಿಂದ ಕೂಡಿ ಸಂಚರಿಸಿದನು. ಆತನು ಕೇದಾರ, ಓಂಕಾರತೀರ್ಥ, ಅಮರಕಂಟಕ, ಕುರುಕ್ಷೇತ್ರ, ಪುಷ್ಕರಕ್ಷೇತ್ರ, ವಿರಜಾತೀರ್ಥ, ಕಾಲಂಜರ, ಬದರಿ, ಗಯೆ, ಪ್ರಯಾಗ, ಹರಿದ್ವಾರ, ಅಯೋಧ್ಯೆ, ಪುಣ್ಯಕರವಾದ ಪಿಂಡಾರಕ, ಗಂಗಾಸಾಗರಸಂಗಮ ಇವೇ ಮುಂತಾದ ಶಿವಕ್ಷೇತ್ರಗಳಲ್ಲೆಲ್ಲಾ ಬಹುಕಾಲ ಸಂಚರಿಸಿದನು. ॥೧೭-೧೮-೧೯-೨೦॥

ಅಲ್ಲಲ್ಲಿ ಶಿವಲಿಂಗಗಳನ್ನೆಲ್ಲಾ ದರ್ಶನಮಾಡಿ ಅರ್ಚಿಸಿದನು. ಕೊನೆಗೆ ಕಾಶೀನಗರಕ್ಕೆ ಬಂದು ಅಲ್ಲಿರುವ ವಿಶ್ವೇಶ್ವರಲಿಂಗಕ್ಕೆ ಗಂಗಾತೋಯದಿಂದ ಅಭಿಷೇಕ

ಶ್ರೀವಿಶ್ವನಾಥಂ ತುಷ್ಟಾವ ಸ್ನಾತ್ವಾ ಚ ಮಣಿಕರ್ಣಿಕಾಂ ।
ಬಿಲ್ವಪತ್ರೈಸ್ಸಮಭ್ಯರ್ಚ್ಯ ಸ್ನಾಪ್ಯ ಗಂಗಾಂಭಸಾ ಶಿವಂ ॥೨೨॥

॥ ಗೌತಮ ಉವಾಚ ॥

ರತ್ನೇಶ ವೀರೇಶ ತ್ರಿಲೋಚನೇಶ
ಕೇದಾರ ಸಂಗೇಶ ಸುಮಧ್ಯಮೇಶ ।
ಶ್ರೀಕೃತ್ತಿವಾಸೇಶ್ವರ ಶೂಲಟಂಕ
ಶ್ರೀ ವೃದ್ಧಕಾಲೇಶ್ವರ ಮಂಗಲೇಶ ॥೨೩॥

ಭಾಂಡೀಶ್ವರೇಶಾನಕಭೈರಭೂತ
ಕಪರ್ದಿ ಶಂಭೋ ಹರಿ ನಾರದೇಶ ।
ಕ್ಷೇಮೇಶ್ವರೇಶಾನ ಸುಮಂಗಲೇಶ
ವ್ಯಾಸೇಶ ದಕ್ಷೇಶ್ವರ ದೇವಿಕೇಶ ॥೨೪॥

ಸರ್ವೇಶ ವಿಶ್ವೇಶ್ವರ ಪಾಹಿ ದೀನಂ
ಮಾಂ ಗೌತಮಂ ದುಃಖಶತಾಭಿವೃದ್ಧಂ ॥೨೫॥

---

ಮಾಡಿ, ಬಿಲ್ವಪತ್ರಾದಿಗಳಿಂದ ಅರ್ಚಿಸಿದನು. ಹಾಗೂ ತನ್ನ ಪಾಪವು ನಿವಾರಣೆಯಾಗದೆ ಮನಶ್ಶುದ್ಧಿಪಡೆಯದೆ ಶಂಕರನನ್ನು ಈ ರೀತಿ ಸಕಲ ಶಿವಲಿಂಗಗಳಲ್ಲಿಯೂ ಸ್ತೋತ್ರಮಾಡಿದನು. ॥೨೧-೨೨॥

ರತ್ನೇಶ, ವೀರೇಶ, ತ್ರಿಲೋಚನೇಶ, ಕೇದಾರೇಶ್ವರನೇ, ಸಂಗೇಶ್ವರನೇ, ಮಧ್ಯಮೇಶ್ವರನೇ, ಕೃತ್ತಿವಾಸೇಶ್ವರನೇ, ಶೂಲಟಂಕೇಶ್ವರನೇ, ಶ್ರೀ ವೃದ್ಧಕಾಲೇಶ್ವರನೇ, ಮಂಗಲೇಶ್ವರನೇ, ಭಾಂಡೀಶ್ವರನೇ ಮತ್ತು ಕಪರ್ದೀಶ್ವರ, ಹರಿನಾರದೇಶ್ವರ, ಕ್ಷೇಮೇಶ್ವರ, ಸುಮಂಗಲೇಶ್ವರ, ವ್ಯಾಸೇಶ್ವರ, ರಕ್ಷೇಶ್ವರ, ದೇವಿಕೇಶ್ವರ ಇವೇ ಮೊದಲಾದ ಅನೇಕ ನಾಮಗಳನ್ನು ಶಿವಲಿಂಗರೂಪಗಳಿಂದ ಪಡೆದಿರುವ ವಿಶ್ವೇಶ್ವರನೇ, ನೀನು ನನ್ನನ್ನು ರಕ್ಷಿಸು. ॥೨೩-೨೪॥

ಮಹೇಶ್ವರನೇ, ನಾನು ಅನೇಕ ದುಃಖಗಳನ್ನು ಅನುಭವಿಸುತ್ತಾ ಅತ್ಯಂತ ದೀನನೆನಿಸಿರುವೆನು. ಇಂತಹ ಅನಾಥನಾದ ನನ್ನನ್ನು ಸಲಹು" ಎಂದು ಬಹುವಾಗಿ ಪ್ರಾರ್ಥಿಸಿದನು. ॥೨೫॥

ಆತಾಮ್ರಾರುಣತ್ವಜ್ಜಟೋರುಪಟಲೀಲೀಲಾವಿಹಂಗಾಯಿತಾ
ಗಂಗಾವ್ಯೋಮ ಪಥಪ್ರಚಾರನಿಕರೈರ್ದೇವೈಃ ಸದಾ ಸಂಸ್ತುತಾ ।
ಸ್ವಾತ್ಮಾದ್ಧೃತ್ಯಪತದ್ಭುಜಂಗಕುಹರೇ ನಾನಾನರದ್ರಾವಿಣೀ
ಜಹ್ನೋರ್ಯಜ್ಞಸದಃ ಪ್ರಚಾರಶಮನೀ ತಾನ್ ಸಾಗರಾಪ್ಲಾವಿನೀ ॥೨೬॥

॥ ಶ್ರೀ ಈಶ್ವರ ಉವಾಚ ॥

ಇತ್ಥಂ ಸ ಗೌತಮೋ ದೇವಿ ಮಾಂ ವಿಶ್ವೇಶಂ ಪ್ರಣಮ್ಯ ಚ ।
ಮಯಾ ಚಾಜ್ಞಾಪಿತೋ ವಿಪ್ರಸ್ತ್ರ್ಯಂಬಕಂ ಗಚ್ಛ ಸುವ್ರತ ॥೨೭॥

ತತ್ರ ಗೋದಾವರೀಸ್ನಾನಂ ಸಿಂಹಯುಕ್ತೇ ಬೃಹಸ್ಪತೌ ।
ಅಶ್ವಮೇಧಶತಾತ್ಪುಣ್ಯಂ ಪ್ರಾಪ್ಸ್ಯತೇತಿ ಮದರ್ಚನಾತ್ ॥೨೮॥

ಮತ್ತೋ ವಿಶ್ವೇಶ್ವರಾದ್ಗೌರಿ ಲಬ್ಧಾನುಜ್ಞಃ ಸ ಗೌತಮಃ ।
ತ್ರಿಯಂಬಕಗಿರಿಂ ಪ್ರಾಪ್ಯ ತ್ರ್ಯಂಬಕೇಶಂ ಸಮರ್ಚಯನ್ ॥೨೯॥

---

ಅಲ್ಲದೆ ನನ್ನ ಶಿರಸ್ಸಿನಲ್ಲಿರುವ ಗಂಗೆಯನ್ನು ಹೀಗೆ ಸ್ತುತಿಸಿದನು. "ಪವಿತ್ರವಾದ ಗಂಗಾನದಿಯೇ, ನೀನು ಅತ್ಯಂತ ಕೆಂಪುಬಣ್ಣದಿಂದ ಪ್ರಕಾಶಿಸುವ ಈಶ್ವರನ ಜಟಾಕುಹರದಲ್ಲಿ ಪಕ್ಷಿಯಂತೆ ಆಟವಾಡುತ್ತಿರುವೆ. ದೇವಲೋಕಗಾಮಿಗಳಾದ ಸಕಲ ದೇವತೆಗಳೂ ನಿನ್ನನ್ನೇ ವಿಧವಿಧವಾಗಿ ಸ್ತುತಿಸುತ್ತಿರುವರು. ತಮ್ಮ ಅಹಂಕಾರದಿಂದ ಪಾತಾಳಲೋಕದಲ್ಲಿ ಮೃತರಾಗಿದ್ದ ಸಗರಪುತ್ರರನ್ನೆಲ್ಲಾ ಉದ್ಧಾರ ಮಾಡಿದೆ. ಜಹ್ನುಋಷಿಯ ಯಜ್ಞಮಂಟಪವನ್ನು ಪವಿತ್ರಗೊಳಿಸಿದೆ. ಮಹಾದೇವಿಯೇ, ಇಂತಹ ನೀನು ನನ್ನನ್ನೂ ಪವಿತ್ರಗೊಳಿಸು." ॥೨೬॥

ಮತ್ತೆ ಗೌತಮಮಹರ್ಷಿಯು ವಿಶ್ವೇಶ್ವರನೆನಿಸಿದ ನನ್ನನ್ನೂ ನಾನಾರೀತಿಯಲ್ಲಿ ಪ್ರಾರ್ಥಿಸಿದನು. ಆಗ ನಾನು ಕರುಣೆಯಿಂದ "ಬ್ರಾಹ್ಮಣಶ್ರೇಷ್ಠನೇ, ನೀನು ಈಗಲೇ ತ್ರ್ಯಂಬಕಕ್ಷೇತ್ರಕ್ಕೆ ಹೋಗು. ಅಲ್ಲಿ ಗುರುವು ಸಿಂಹರಾಶಿಯಲ್ಲಿ ಸಂಚರಿಸುವಾಗ ನೀನು ಗೋದಾವರಿಯಲ್ಲಿ ಸ್ನಾನಮಾಡಿ ತ್ರ್ಯಂಬಕೇಶ್ವರನನ್ನು ಪೂಜಿಸು. ಅದರಿಂದ ನಿನಗೆ ನೂರು ಅಶ್ವಮೇಧಯಾಗಾಚರಣೆಗಿಂತಲೂ ಹೆಚ್ಚಿನಪುಣ್ಯವು ಲಭಿಸುವುದು" ಎಂದೆನು. ॥೨೭-೨೮॥

ಎಲೌ ದೇವಿಯೇ, ಹಾಗೆ ನನ್ನಿಂದ ಆಜ್ಞಪ್ತನಾಗಿ ಆ ಗೌತಮನು ತ್ರ್ಯಂಬಕಪರ್ವತಕ್ಕೆ ಬಂದು, ಅಲ್ಲಿ ಗೋದಾವರೀಸ್ನಾನಮಾಡಿ, ಭಸ್ಮರುದ್ರಾಕ್ಷಗ

ಬಿಲ್ವಪತ್ರೈರ್ಮಹಾದೇವಿ ಮಾಂ ತದಾ ಲಿಂಗರೂಪಿಣಂ ।
ಭಸ್ಮೋದ್ಧೂಲಿತಸರ್ವಾಂಗೋ ರುದ್ರಾಕ್ಷಕೃತಭೂಷಣಃ ॥೩೦॥

ಪಂಚಾಗ್ನಿಮಧ್ಯನಿರತಃ ಸಂಸಾರಾದ್ವಿರತಸ್ಸದಾ ।
ಮಾಂ ಧ್ಯಾಯನ್ ರವಿಬಿಂಬಸ್ಥಂ ತ್ರ್ಯಂಬಕೇಶಂ ಸ ಭಕ್ತಿತಃ ॥೩೧॥

ಸ್ವಮಾನಸವರೋದ್ಬೋಧಂ ದಶಶ್ಲೋಕೈರುದಾಹರತ್ ॥೩೨॥

॥ ಗೌತಮ ಉವಾಚ ॥

ರೇ ರೇ ಮಾನಸ ಮುಂಚ ಲೌಲ್ಯಮನಿಶಂ ನಶ್ಯತ್ಸು ವಿತ್ತಾದಿಷು
ತನ್ನೈಸರ್ಗಿಕಮುಷ್ಯಮೀಷು ಪದಯೋಃ ಪ್ರೇತೇಶಸಂಹರ್ತ್ರಿಣಃ ।
ಕಾಮಾಸುಕ್ಷಪಣೈಕದೀಕ್ಷಿತಲಲಾಟಾಕ್ಷೇ ಕುರುಷ್ವಾಸ್ತಿ ಚೇತ್
ಭೀರಾಸೇಚನಕೇ ಜಟೇಂದುಶಕಲೇ ಶಂಭೋರ್ಗಲೇ ಚಾಸಿತೇ ॥೩೩॥

---

ಳಿಂದ ಅಲಂಕೃತನಾಗಿ ಬಿಲ್ವಪತ್ರಾದಿಗಳಿಂದ ತ್ರ್ಯಂಬಕೇಶ್ವರಲಿಂಗವನ್ನು ಭಕ್ತಿಯಿಂದ ಅರ್ಚಿಸಿದನು. ॥೨೯-೩೦॥

ಹಾಗೆಯೇ ನಾಲ್ಕು ದಿಕ್ಕುಗಳಲ್ಲಿಯೂ ಅಗ್ನಿಯನ್ನು ಪ್ರತಿಷ್ಠಿಸಿ, ಮೇಲು ಭಾಗದಲ್ಲಿರುವ ಸೂರ್ಯನನ್ನೇ ನೋಡುತ್ತಾ, ತ್ರ್ಯಂಬಕೇಶ್ವರನು ಸೂರ್ಯಮಂಡಲಾಂತರ್ವರ್ತಿಯಾಗಿರುವನೆಂದೇ ಧ್ಯಾನಿಸುತ್ತಾ, ತನ್ನ ಮನಸ್ಸಿನಿಂದ ಉದ್ಭವಿಸಿದ ಭಕ್ತಿಭಾವವನ್ನು ಮುಂದೆ ಹೇಳುವ ಹತ್ತು ಶ್ಲೋಕಗಳಿಂದ ವಿವರಿಸಿದನು. ॥೩೧-೩೨॥

"ಎಲೈ ಮನಸ್ಸೇ, ಇನ್ನು ನಿನ್ನ ಚಾಂಚಲ್ಯವನ್ನು ಬಿಡು. ನೀನು ಬಯಸುವ ಧನಕನಕಾದಿಗಳು ನಶ್ವರವಾದವುಗಳು. ನಿಜವಾದ ಸುಖವನ್ನು ಆಪೇಕ್ಷಿಸುವುದಾದರೆ, ಸಕಲಲೋಕ ಸಂಹಾರಕನಾದ ಪರಶಿವನ ಅಡಿದಾವರೆಗಳಲ್ಲಿ ಮನಸ್ಸಿಡು. ಮನ್ಮಥನನ್ನು ದಹಿಸಿದ ಪರಮೇಶ್ವರನ ಫಾಲನೇತ್ರದಿಂದ ನಿನಗೆ ಭಯವುಂಟಾದರೆ, ಸುಂದರವಾದ ಈಶ್ವರನ ಚಂದ್ರಚೂಡವನ್ನೂ, ನೀಲವಾದ ಕಂಠಪ್ರದೇಶವನ್ನೂ ನೋಡಿ ಆನಂದಪಡು. ॥೩೩॥

ಕಿಂ ಯಜ್ಞೈರ್ಬಹುಜ್ಞಕರ್ತೃಸುಲಭೈರ್ನಾಯಾಸವಿತ್ತಾದಿಭಿಃ
ಸಾಧ್ಯೈರ್ನೇಪ್ಸಿತಭೋಗದಾನನಿಪುಣೈರ್ನಾಜ್ಞಾನನಾಶ್ಯೈರ್ನ ಚ ।
ಶಂಭೋಸ್ತಾಂಡವಸುಂದರಂ ಪದಯುಗಂ ಭಕ್ತ್ಯಾಭಿಗಚ್ಛೇಃ ಸಕೃತ್
ಮುಕ್ತಿಃ ಸ್ಯಾತ್ಸುಖರೂಪಿಣೀ ತದವರಂ ಸರ್ವಂ ಸುಖಂ ಮಾನಸಂ ॥೩೪॥

ಚೇತಃ ಸಂಸೃತಿಲೋಲಯಾ ಭವಶುಚಂ ತತ್ರಾಪಿ ಸಂಸಾರ್ಯಸಿ
ಶಂಭೋಃ ಪಾದಸರೋರುಹಂ ಸದನಮಸ್ತ್ಯಸ್ತಿ ಸ್ವಸಾ ಭಕ್ತತಾ ।
ಶ್ರದ್ಧಾ ತೇ ಗೃಹಿಣೀ ಸುಪೂಜನವಿಧಿಃ ಪುತ್ರೋಽಸ್ತಿ ಸುಭ್ರಾತೃತಾ
ಶಾಂತ್ಯೈಕ್ರೋಧದಯಾದಿಷು ಪ್ರಸುಖಂ ಭುಂಕ್ಷ್ವಾಕ್ಷತಂ ಶಾಶ್ವತಂ ॥೩೫॥

ಶಾಠ್ಯೇರ್ಷ್ಯಾಮದಲೋಭಮೋಹಕರಣೈಃ ಕಿಂ ವಾಧಿಕಾರೈರ್ಧನೈಃ
ಕಿಂ ದಾರೈಃ ಸ್ವಸುಖೈಕಸಾಧನತಯಾ ಶುಶ್ರೂಷಮಾಣೈಃ ಪತೀನ್ ।

---

ಎಲೈ ಮನಸ್ಸೇ, ಬಹು ತಿಳಿವಳಿಕೆಯಿಂದಲೂ, ಅಧಿಕವಾದ ದ್ರವ್ಯವ್ಯಯದಿಂದಲೂ ನೆರವೇರಿಸಬಹುದಾದ ಯಜ್ಞಾದಿಗಳ ಆಚರಣೆಗಾಗಿ ಏಕೆ ವೃಥಾ ಶ್ರಮಪಡುವೆ? ಅದಕ್ಕಾಗಿ ಅನೇಕ ಸುಖಗಳನ್ನು ದೂರಮಾಡಿ ಅನೇಕ ವಸ್ತುಗಳನ್ನು ದಾನಮಾಡಬೇಕಾಗುವುದು. ಅದರಿಂದಲೂ ಅಜ್ಞಾನವು ನಾಶವಾದೀತೆ ಹೊರತು ಶಾಶ್ವತಮುಕ್ತಿಯು ಕರಗತವಾಗಲಾರದು. ಪರಶಿವನ ಸುಂದರವಾದ ಮುಖದಲ್ಲಿಯೂ, ಪಾದದ್ವಂದ್ವದಲ್ಲಿಯೂ ನೀನು ಸ್ಥಿರವಾಗಿ ನಿಂತದ್ದೇ ಆದರೆ, ಅತ್ಯಂತ ಸುಖಸ್ವರೂಪವಾದ ಮುಕ್ತಿಯು ಸುಲಭವಾಗಿ ದೊರಕುವುದಲ್ಲವೆ? ಉಳಿದ ಸುಖಗಳೆಲ್ಲವೂ ಇದಕ್ಕಿಂತ ಕಡಿಮೆಯಾದವುಗಳೆಂದೇ ಭಾವಿಸು. ||೩೪||

ಮನಸ್ಸೇ, ನಿನಗೆ ಸಂಸಾರದಲ್ಲಿ ಆಸೆಯಿದ್ದರೂ ಈಶ್ವರಸೇವಾನಿರತನಾಗಿ ಮತ್ತೊಂದು ಸಂಸಾರವನ್ನು ಹೊಂದು. ಅದೇ ನಿನಗೆ ಶಾಶ್ವತವಾದ ಆನಂದವನ್ನು ಕೊಡುವುದು. ಆ ಸಂಸಾರದಲ್ಲಿ ಶಂಕರನ ಪಾದಕಮಲವನ್ನೇ ಮನೆಯೆಂದು ತಿಳಿ. ಭಕ್ತಿಯನ್ನೇ ನಿನ್ನ ತಂಗಿಯೆಂದು ಭಾವಿಸು. ಶ್ರದ್ಧೆಯೇ ನಿನಗೆ ಪತ್ನಿಯಂತಾಗಲಿ. ಪೂಜಾವಿಧಿಯಲ್ಲಿ ಪುತ್ರಾಭಿಮಾನವನ್ನಿಡು. ಶಾಂತಿ, ಕ್ಷಮೆ, ಕರುಣೆ ಮೊದಲಾದುವುಗಳು ನಿನಗೆ ಅಣ್ಣತಮ್ಮಂದಿರಂತೆ ತೋರಿಬರಲಿ. ಈ ಭಾವನಾಸಂಸಾರವೇ ನಿನಗೆ ಮುಕ್ತಿಪ್ರದವೆಂದು ಭಾವಿಸು. ||೩೫||

ಮೋಸ, ಅಸೂಯೆ, ಅಹಂಕಾರ, ಅತ್ಯಾಸೆ ಮುಂತಾದುವುಗಳನ್ನುಂಟುಮಾಡುವ, ಅಧಿಕಾರ, ಹಣ ಮುಂತಾದುವುಗಳಿಗಾಗಿ ಆಸೆಪಡಬೇಡ. ಪತ್ನೀ

ಛಾಯಾಮಾತ್ರಫಲೈರಗಾರವಲಯೈಃ ಕಿಂ ಭೂರುಹಾಪೇಕ್ಷಯಾ
ಸರ್ವಂ ಭ್ರಾಂತಿವಿಜೃಂಭಿತಂ ಹೃದಯ ಮೇ ಮುಕ್ತ್ವಾಶಿವಂ ಭಾವಯ ॥೩೬॥

ವಿತ್ತಂ ರಿಕ್ತಜನೈಕದುರ್ಲಭತಮಂ ಕೃಚ್ಛ್ರೇಣ ಲಬ್ಧಂ ಯದಿ
ಭೋಕ್ತುಂ ನ ಪ್ರಭುರೇಷ ದುರ್ಗುಣಗಣೈರಾಲಿಪ್ಯತೇ ಕೇವಲಂ ।
ಭೃತ್ಯಾ ವಾ ಪತತಿ ಕ್ಷಣಾದವಿದಿತಂ ತದ್ವಂಶಜೈರ್ಜೀಯತೇ
ಕಿಂ ತ್ವಂ ನಾಸ್ತಿ ಭಜಸ್ವ ಶಂಭುಚರಣಾವಿಷ್ಟಾರ್ಥದಾನೇ ಚಣೌ ॥೩೭॥

ಚೇತಸ್ತ್ವಂ ಕುರು ಚಿಂತನೈಸ್ತ್ಯಜ ಶುಚಂ ಸಾಂಸಾರಿಕೀಂ ಕಿಂ ತಯಾ
ಬ್ರಾಹ್ಮಣ್ಯೇನ ಸಹ ಸ್ಥಿತಸ್ಯ ತವ ಯತ್ಸಾಧ್ಯಂ ತದೇವಾಚರ ।
ಯತ್ತತ್ತ್ವಾರ್ಥನಿಬೋಧನಶ್ರುತಿಗಿರಾಂ ತಾಸಾಮನುಷ್ಠಾನತೋ
ಸಾಫಲ್ಯೋದ್ಯಮಮೀಶ್ವರಾರ್ಪಣಧಿಯಾ ನಿಸ್ಸಂಗತಾಮಾವಹ ॥೩೮॥

---

ಪುತ್ರಾದಿಗಳು ತಮ್ಮ ಸುಖವನ್ನುದ್ದೇಶಿಸಿ ನಿನಗೆ ಅಲ್ಪಸ್ವಲ್ಪ ಉಪಚಾರಮಾಡುವರು. ಆದರಿಂದ ನಿನಗೆ ಆಗಬೇಕಾದ ಫಲವೇನು? ಮನೆ ಮಠ ಮುಂತಾದುವುಗಳು ಕೇವಲ ನೆರಳನ್ನು ಕೊಡುವ ಫಲವಿಲ್ಲದ ಮರದಂತೆ ಶೋಭಿಸತಕ್ಕವುಗಳು. ಇವೆಲ್ಲವೂ ಮನುಷ್ಯನಿಗೆ ಸುಖಭ್ರಾಂತಿಯನ್ನುಂಟುಮಾಡುವುವು. ಎಲೈ ಮನಸ್ಸೇ, ಅಂತಹ ಅಜ್ಞಾನಕ್ಕೆ ಎಡೆಗೊಡದೆ ಸರ್ವದಾ ಪರಶಿವನನ್ನೇ ಧ್ಯಾನಿಸುತ್ತಿರು. ॥೩೬॥

ಹಣವೆಂಬುದು ಬಡವರಿಗೆ ಸುಲಭವಾಗಿ ದೊರೆಯತಕ್ಕುದಲ್ಲ. ಹಾಗೂ ಕಷ್ಟಪಟ್ಟು ಸಂಪಾದಿಸಿದ ಹಣವನ್ನು ಸದುಪಯೋಗಪಡಿಸಿಕೊಳ್ಳದೆ, ಹಣದ ಕೊಬ್ಬಿನಿಂದ ದುರ್ಮಾರ್ಗವನ್ನವಲಂಬಿಸುವರು. ಹಾಗೆಯೇ ವಯೋವೃದ್ಧರಾಗಿ ಮರಣಹೊಂದಿದ ಮೇಲೆ, ತಾವು ಸಂಪಾದಿಸಿದ ಹಣವನ್ನೆಲ್ಲಾ ಸೇವಕರೋ, ಅಥವಾ ತದ್ವಂಶೀಯರೋ ದೋಚಿಕೊಳ್ಳುವರು. ಇಂತಹ ದ್ರವ್ಯಾರ್ಜನೆಗಿಂತ ಇಷ್ಟಾರ್ಥಪ್ರದಗಳಾದ ಶಂಕರನ ಪಾದಕಮಲಗಳನ್ನು ಸೇವಿಸುವುದು ಒಳ್ಳೆಯದಲ್ಲವೇ? ॥೩೭॥

ಎಲೈ ಮನಸ್ಸೇ, ವೃಥಾ ಸಾಂಸಾರಿಕವಾದ ದುಃಖದಲ್ಲಿ ಸೆಲಸಬೇಡ. ಆದರಿಂದ ನಿನಗೆ ಯಾವ ಸುಖವೂ ದೊರೆಯಲಾರದು. ಬ್ರಾಹ್ಮಣ ಜನ್ಮವನ್ನು ಪಡೆದು, ಆದರಲ್ಲಿ ತತ್ತ್ವಾರ್ಥವೇ ಮೊದಲಾದುವುಗಳನ್ನು ಅರಿತು, ವೇದಾರ್ಥಪ್ರತಿಪಾದಕಗಳಾದ ವಾಕ್ಯಗಳನ್ನುಚ್ಚರಿಸುತ್ತಾ, ಸಕಲ ಕಾರ್ಯಗಳನ್ನೂ ಈಶ್ವರಾರ್ಪಣಬುದ್ಧಿಯಿಂದ ನೆರವೇರಿಸುತ್ತಾ ನಿಸ್ಸಂಗನಾಗಿರು. ॥೩೮॥

ಚೇತಸ್ತ್ವಂ ಸಕಲಪ್ರಮಾಣಪದವೀ ದೂರಾಲ್ಪಸಾರೇ ಪುನಃ
ಸಂಸಾರೇ ರಮಸೇ ತ್ವದೇಕವಿದಿತಂ ಸಾರಂ ಸಮಾಲಂಬ್ಯ ವೈ ।
ಏತಾದೃಶ್ಯದಿ ಶಂಭುಮೇವ ಭಜಸೇ ತತ್ಪ್ರೈವ ರಾಗೋ ಭವೇತ್
ಸೌವರ್ಣಸ್ಯ ಕಣುಕೇನ ತೋಷಮಯುತಃ ಪ್ರಾಪ್ತಸ್ಸುಮೇರುರ್ಯದಿ ॥೩೯॥

ಚೇತೋ ಯತ್ಪರಿಚಿಂತ್ಯತೇ ಚ ಭವತಾ ತತ್ಪೌರುಷಂ ಚೇದ್ಫಲಂ
ವಿಘ್ನಸ್ತತ್ರ ಕಿಯಾಂಸ್ತಥಾಪ್ಯಧಿಗತಂ ಕಿಂ ವಾ ಸುಖೈಕೋತ್ತರಂ ।
ಯತ್ಸಾಧ್ಯಂ ಶ್ರುತಿಚೋದಿತವ್ಯವಸಿತಂ ನಿತ್ಯೇಪ್ಸ ವಿಹ್ಯಕ್ಷತಂ
ತದ್ಧೇತೌ ಯದಿ ಯತ್ನಮುದ್ಯ ಕುರುಷೇ ತಚ್ಛ್ಲಾಘನೀಯಂ ಭವೇತ್ ॥೪೦॥

ಬೋಧಾದಿತ್ಯಕರಪ್ರಸಾರವಿರಹಾದಮ್ಲಾನರಾಗಚ್ಛದೈಃ
ಸಚ್ಛಾಯಾಂ ವಿಷಯಾಖ್ಯಕಂಧಜನಿತಪ್ರೇಮಾಂಬುಪೂರಾದ್ರಿತಾಂ ।
ಸ್ವಸ್ಥಿತ್ಯಾ ಮೃತಿದಾಯಿನೀಮಪಿ ಫಲಭ್ರಾಂತ್ಯಾಜ್ಞಸಂಮಾನಿತಾ
ಮಾಶಾಖ್ಯಾಂ ವಿಷವಲ್ಲರೀಂ ತ್ಯಜ ಮನಸ್ತನ್ಮುಕ್ತಿಬೀಜಂ ತವ ॥೪೧॥

---

ಪ್ರತ್ಯಕ್ಷಾದಿ ಸಕಲ ಪ್ರಮಾಣಗಳಿಂದಲೂ ಸಂಸಾರ ಸುಖವು ಕ್ಷಣಿಕವಾದದ್ದು ಎಂಬುದನ್ನು ತಿಳಿದೂ, ಅದರಲ್ಲಿ ಎಲ್ಲೋ ಸ್ವಲ್ಪ ಸಾರಭಾಗವನ್ನು ಹುಡುಕಿ ಅದರಲ್ಲೇ ಲೀನವಾಗುತ್ತಿರುವುದು ನ್ಯಾಯವೇ ? ಒಂದುವೇಳೆ ನಿನಗೆ ಅನುರಾಗ ವಿದ್ದದ್ದೇ ಆದರೆ, ಅದೇ ರಾಗದಿಂದ ಶಂಕರನನ್ನು ಭಜಿಸು. ಆದರಿಂದ ಒಂದು ಚೂರು ಸುವರ್ಣಕ್ಕಾಗಿ ಪ್ರಯತ್ನಿಸುತ್ತಿರುವವನಿಗೆ ಸುವರ್ಣಾಚಲವೇ ದೊರೆತಂತೆ, ನಿನಗೆ ಪೂರ್ಣ ತೃಪ್ತಿಯೊದಗುವುದು. ಅದಕ್ಕಾಗಿ ಮನಸ್ಸೇ, ನೀನು ಸರ್ವದಾ ಬಿಡದೆ ಈಶ್ವರನನ್ನೇ ಭಜಿಸುತ್ತಿರು. ॥೩೯॥

ಎಲೈ ಮನಸ್ಸೇ, ಲೋಕದಲ್ಲಿ ನೀನು ಒಂದು ಇಷ್ಟಾರ್ಥಪ್ರಾಪ್ತಿಗಾಗಿ ಎಷ್ಟು ಪ್ರಯತ್ನಪಡುವೆಯೋ, ಅಷ್ಟೇ ಪ್ರಯತ್ನವನ್ನು ಶಂಕರಪಾದಸೇವೆಗೂ, ಶ್ರುತ್ಯರ್ಥದ ಅವಗಾಹನೆಗೂ ಉಪಯೋಗಿಸು. ಆಗ ಆ ಪ್ರಯತ್ನಕ್ಕೆ ಹೊಗಳಿಕೆ ದೊರಕುವುದು. ಮತ್ತು ಫಲ ಸಿದ್ಧಿಸುವುದು. ನಿಜವಾದ ಸುಖವು ಲಭಿಸುವುದು. ॥೪೦॥

ಮನವೇ, ಲೋಕದಲ್ಲಿ ಆಸೆಯೆಂಬುದು ಒಂದು ವಿಷದ ಬಳ್ಳಿಯಂತೆ. ಅದು ಜ್ಞಾನವೆಂಬ ಸೂರ್ಯನ ಕರಸ್ಪರ್ಶವಿಲ್ಲದೆ ಕತ್ತಲೆಯಲ್ಲಿ ಬೆಳೆದಿರುವುದು. ಅದರಲ್ಲಿರುವ ಎಲೆಗಳು ರಾಗದ್ವೇಷಾದಿಗಳೇ. ಆ ವಿಷವಲ್ಲರಿಯು ವಿಷಯ ಸುಖಗಳೆಂಬ ಮೊಳಕೆ

ರೇ ರೇ ಮಾನಸರಾಜಹಂಸ ನಿತರಾಂ ಶಂಭೋಃ ಪದಾಬ್ಧೇಸ್ತಟೇ
ಭಕ್ತ್ಯಾ ಚಂಚುಪುಟೇನ ಸಾಧು ವಿಲಸನ್ಮುಕ್ತಾವಲೀ ಗೃಹ್ಯತಾಂ ।
ತೇನ ತ್ವಂ ಭವಿತಾ ಜರಾದಿರಹಿತೋ ರೋಗಾದಿಹೀನಸ್ಸುಖಂ
ಗಚ್ಛೋಡ್ಡೀಯ ದಿವಾನಿಶಂ ದ್ವಿಜಕುಲೈರ್ಜುಷ್ಟಂ ಮಹೇಶಾಲಯಂ ॥೪೨॥

ಸ ಇತ್ಥಂ ಚೇತಸೋದ್ಭೂತಂ ಕೃತ್ವಾ ಪಲ್ಲಕನಂದನಃ ।
ಗೌತಮಃ ಪೂಜಯಾಮಾಸ ಬಿಲ್ವೈರ್ಗೋದಾವರೀಜಲೈಃ ॥೪೩॥

ತತಃ ಕಾಲೇನ ಮಹತಾ ತದ್ದೃಷ್ಟಿಪಥಮಾಗತಃ ॥೪೪॥

ರೈಕ್ವಾದ್ಯೈರ್ಮುನಿಭಿರ್ವೃತಃ ಸ ಭಗವಾನ್ ಆರುಹ್ಯ ಸಚ್ಛಾಕ್ವರಂ
ಹಿಕ್ಕಾರೋಗಗಣಾನ್ವಿತಾಂತಕಹರಸ್ತತ್ರಾಯಯೌ ಗೌತಮಂ ।

---

ಯಿಂದ ಹುಟ್ಟಿ, ಪ್ರೇಮವೆಂಬ ನೀರಿನಿಂದ ಬೆಳೆಸಲ್ಪಟ್ಟಿರುವುದು. ಅದು ಬೆಳೆದಷ್ಟೂ ಮನುಷ್ಯನನ್ನು ಬೇಗ ಕೊಲ್ಲುವುದು. ಅಜ್ಞಾನಿಗಳಿಂದ ಹಾಗೆ ಬೆಳೆಸಲ್ಪಡುವ ಬಳ್ಳಿಯಲ್ಲಿ ನೀನು ಫಲವಿದೆಯೆಂಬ ಭ್ರಾಂತಿಯನ್ನು ತೊರೆದು, ಅದನ್ನು ದೂರಮಾಡು. ಮುಕ್ತಿಗೆ ಮೂಲಕಾರಣವಾದ ಈಶ್ವರಾರ್ಚನೆಯಲ್ಲಿ ಉದ್ಯುಕ್ತನಾಗು. ॥೪೧॥

ಎಲೈ ಮನಸ್ಸೆಂಬ ರಾಜಹಂಸವೇ, ನೀನು ಸರ್ವದಾ ಮಹೇಶ್ವರನ ಪಾದವೆಂಬ ಸಮುದ್ರದ ದಡದಲ್ಲಿಯೇ ತಪ್ಪದೆ ವಾಸಮಾಡು. ಅಲ್ಲಿ ಭಕ್ತರಿಂದ ಸಮರ್ಪಿಸಲ್ಪಟ್ಟ ಮುಕ್ತಾವಳಿಗಳನ್ನು ನಿನ್ನ ಕೊಕ್ಕಿನಿಂದ ಸ್ವೀಕರಿಸು. ಹಾಗೆ ಮಾಡಿದರೆ ನಿನಗೆ ಎಂದೂ ಮುಪ್ಪು, ಸಾವು, ರೋಗ ಮುಂತಾದ ದುಃಖಗಳು ಒದಗಲಾರವು. ಅದಕ್ಕಾಗಿ ಈಗಲೇ ಹಾರಿಹೋಗಿ, ಸಕಲಪಕ್ಷಿಗಳಿಂದಲೂ, ಅನೇಕ ಬ್ರಾಹ್ಮಣವರ್ಗದಿಂದಲೂ ತುಂಬಿ, ಸಂಸೇವಿತವಾಗಿರುವ ಮಹೇಶ್ವರಾಲಯವನ್ನು ಸೇರು. ಅದರಿಂದಲೇ ನಿನಗೆ ನಿತ್ಯಸುಖವು ಲಭಿಸುವುದು. ॥೪೨॥

ಎಂದು ಪಲ್ಲಕನಂದನ (ಪಲ್ಲಕಮುನಿಪುತ್ರ) ಗೌತಮ ಋಷಿಯು ಗೋದಾವರೀ ನದಿಯ ನಿರ್ಮಲೋದಕದಿಂದಲೂ, ಬಿಲ್ವಪತ್ರಾದಿಗಳಿಂದಲೂ, ಶಂಭುಲಿಂಗವನ್ನು ಭಕ್ತಿಯಿಂದರ್ಚಿಸಿದನು. ಇವನ ಭಕ್ತಿಗೆ ಮೆಚ್ಚಿ ಒಡನೆಯೇ ಮಹಾದೇವನು ಪ್ರತ್ಯಕ್ಷನಾದನು. ॥೪೩-೪೪॥

ಆಗ ಶಂಕರನ ಸುತ್ತಲೂ ರೈಕ್ವನೇ ಮೊದಲಾದ ಮಹರ್ಷಿಗಳ ಗುಂಪು ನೆರೆದಿದ್ದಿತು. ವೃಷಭಾರೂಢನಾಗಿ ಸಮಸ್ತ ಗಣಗಳೊಡಗೂಡಿ ಕಾಲಕಾಲನಾದ

ದೃಷ್ಟ್ವಾ ಸಾಧುಸುಧಾರ್ದ್ರಯಾ ಕರುಣಯಾ ಪಶ್ಯಂಸ್ತದೀಯಂ ವಪು
ರ್ಭಸ್ಮಾಕ್ಷಾದಿಸಮನ್ವಿತಂ ಚ ತಪಸಾ ಕಾರ್ಶ್ಯಂ ಗತಃ ಶಂಕರಃ ॥೪೫॥

ದೃಷ್ಟ್ವಾ ಮಾಮಂಬಿಕಾಯುಕ್ತಂ ನೀಲಕಂಠಂ ತ್ರಿಶೂಲಿನಂ ।
ಸ ತುಷ್ಟಾವಾಷ್ಟಮೂರ್ತಿಂ ಮಾಂ ಗೌತಮೋ ಹೃಷ್ಟಧೀಸ್ತದಾ ॥೪೬॥

॥ ಗೌತಮ ಉವಾಚ ॥

ಕರಧೃತಮೃಗಬಾಲಂ ಭಕ್ತಚಿತ್ತಾನುಕೂಲಂ
ಶ್ರಿತಜನಸುಖಸಾಲಂ ಹಸ್ತವರ್ಯೈಕಶೂಲಂ ।
ಗಲಲಸದಹಿಮಾಲಂ ನೇತ್ರಸಂಶೋಭಿಫಾಲಂ
ಶ್ರಿತಸುರತರುಮೂಲಂ ತಂ ಭಜೇ ಕಾಲಕಾಲಂ ॥೪೭॥

ಶ್ರೇಯಾಂಸಿ ಸಂದಿಶತಿ ಪಾಪಮಪಾಕರೋತಿ
ಬುದ್ಧಿಂ ಪ್ರಸಾದಯತಿ ಸೌಖ್ಯತತಿಂ ತನೋತಿ ।

---

ಅಂತಹ ಮಹಾದೇವನು ತಪಸ್ಸಿನಿಂದ ಕೃಶನಾಗಿ, ಭಸ್ಮರುದ್ರಾಕ್ಷಿಗಳಿಂದ ಶೋಭಿತನಾದ ಗೌತಮನ ಎದುರಿನಲ್ಲಿ ನಿಂತು, ತನ್ನ ಕರುಣಾಮೃತವನ್ನು ಸ್ರವಿಸುವ ಕಟಾಕ್ಷದಿಂದ, ಗೌತಮನ ದೇಹವನ್ನು ಈಕ್ಷಿಸಿದನು. ॥೪೫॥

ಅಂಬಿಕಾಯುಕ್ತನಾಗಿ, ನೀಲಕಂಠನೆನಿಸಿ, ತ್ರಿಶೂಲಧಾರಿಯಾಗಿ ನಿಂತಿರುವ ಅಷ್ಟಮೂರ್ತ್ಯಾತ್ಮಕನಾದ ಮಹೇಶ್ವರನನ್ನು (ನನ್ನನ್ನು) ನೋಡಿ, ಸಂತುಷ್ಟನಾದ ಗೌತಮನು ಈರೀತಿ ಪ್ರಾರ್ಥಿಸಿದನು. ॥೪೬॥

"ಕಾಲಕಾಲನೇ, ನೀನು ಕೈಯ್ಯಲ್ಲಿ ಮೃಗಶಿಶುವನ್ನು ಹಿಡಿದಿರುವೆಯಲ್ಲವೆ! ಭಕ್ತರ ಮನಸ್ಸಿಗೆ ಸುಲಭವಾಗಿ ಗೋಚರನಾಗುವೆ. ಆಶ್ರಿತವರ್ಗಕ್ಕೆ ಸುಖಸಂಪತ್ತುಗಳನ್ನು ಅನುಗ್ರಹಿಸುವೆ. ಅತಿಬಲಿಷ್ಠವಾದ ತ್ರಿಶೂಲವನ್ನು ಕೈಯ್ಯಲ್ಲಿ ಧರಿಸಿರುವೆ. ಸರ್ಪಾಭರಣವು ನಿನ್ನ ಕಂಠಪ್ರದೇಶವನ್ನು ಅಲಂಕರಿಸುತ್ತಿರುವುದು. ಅಗ್ನಿನೇತ್ರದಿಂದ ನಿನ್ನ ಹಣೆಯು ಪ್ರಜ್ವಲಿಸುತ್ತಿರುವುದು. ನೀನು ಸದಾ ದೇವವೃಕ್ಷದ ಬುಡದಲ್ಲಿ ನೆಲಸಿರುವೆ. ಮಹಾದೇವನೇ, ಅಂತಹ ನಿನ್ನನ್ನು ನಾನು ಸರ್ವದಾ ಭಜಿಸುವೆನು. ॥೪೭॥

ಶಂಕರನ (ನಿನ್ನ) ಪಾದಕಮಲವು ಭಕ್ತರಿಗೆ ಶ್ರೇಯಸ್ಸನ್ನೊದಗಿಸುವುದು. ಪಾಪವನ್ನು ನಿವಾರಿಸುವುದು. ಬುದ್ಧಿಯನ್ನು ವಿಕಾಸಗೊಳಿಸುವುದು. ಸೌಖ್ಯವನ್ನು

ದುಃಖಂ ವಿನಾಶಯತಿ ಶಂಕರಪಾದಪದ್ಮಂ
ಸಂಪೂಜಕಂ ಜನಮಿಮಂ ಸಫಲಂ ಕರೋತಿ ॥೪೮॥

ವಿನಿಹತನರಸಿಂಹಚರ್ಮಚೇಲಾ
ಬ್ಜಜಕಪಾಲೋದ್ಧೃತವಿಷ್ಣುರಕ್ತಪಾನಲೋಲ ।
ಧೃತಚಂದ್ರಕಲಾನಲಾಕ್ಷಿಫಾಲ
ಕೃತಹಾಲಾಹಲಪಾನಶೋಣ ಗಲೇಂದ್ರನೀಲ ॥೪೯॥

ಕುರಂಗಾಲಸತ್ಪಾಣಿಪದ್ಮಾಮಲಾಂಗ
ಸ್ಫುರದ್ಭೋಗಿಮಾಲಾವೃತಾಶಾದಿಚೇಲ ।
ಮಹಾಶೂಲಹಸ್ತಾಖಿಲಾಂಡಾದಿಲೀಲಾ
ಬಲಾಕ್ಲುಪ್ತಸಾಮ್ಯಂಗಬಾಲೈಕಪಾಲ ॥೫೦॥

ಇತ್ಥಂ ತೇನ ಸ್ತುತೋಽಹಂ ವೈ ದೇವಿ ಬಿಲ್ವೈಸ್ಸಮರ್ಚಿತಃ ।
ವರೇಣ ಛಂದಿತೋ ಗೌರಿ ಗೌತಮಶ್ಶಾಂಭವೋತ್ತಮಃ ॥೫೧॥

---

ಹೆಚ್ಚಿಸುವುದು. ದುಃಖವನ್ನು ಧ್ವಂಸಮಾಡುವುದು. ಈರೀತಿ ಭಕ್ತರನ್ನು ರಕ್ಷಿಸಿ ಪೂಜಾಫಲವನ್ನು ಅನುಗ್ರಹಿಸುವುದೆಂದರೆ ಶಂಕರನ ಪಾದಕಮಲವೊಂದೇ. ॥೪೮॥

ಶರಭಾವತಾರದಿಂದ ನರಸಿಂಹಾವತಾರಮಾಡಿದ ವಿಷ್ಣುವನ್ನು ಸೋಲಿಸಿ ಅವನ ಚರ್ಮವನ್ನು ವಸ್ತ್ರವನ್ನಾಗಿಮಾಡಿ, ಅವನ ರಕ್ತವನ್ನು ಬ್ರಹ್ಮನ ತಲೆ ಬುರುಡೆಯಲ್ಲಿ ಹಾಕಿಕೊಂಡು ಕುಡಿದ ಮಹೇಶ್ವರನೇ, ನಿನ್ನ ಚಂದ್ರಕಲೆಯೂ, ಫಾಲನೇತ್ರವೂ ನಿನ್ನನ್ನು ವಿಶೇಷವಾಗಿ ಅಲಂಕರಿಸಿವೆಯಲ್ಲವೇ! ಹಾಲಾಹಲವಿಷ ಪಾನಮಾಡಿ ಅದರ ಗುರುತನ್ನು ಕಂಠದಲ್ಲಿ ಧರಿಸಿ ಶೋಭಿಸುವವನೇ, ನಿನಗೆ ವಂದನೆ. ॥೪೯॥

ಬಾಲಕುರಂಗದಿಂದ ಶೋಭಿಸುವ ಕರಕಮಲವುಳ್ಳವನೂ, ಸರ್ಪಮಾಲೆಗಳಿಂದ ರಂಜಿಸುವ ಕಂಠಪ್ರದೇಶವುಳ್ಳವನೂ, ದಿಗಂಬರನೂ, ತ್ರಿಶೂಲಧಾರಿಯೂ ಆದ ಮಹೇಶ್ವರನೇ, ನೀನು ಬಲಾತ್ಕಾರವಾಗಿ ಯಮನಿಂದ ಎಳೆಯಲ್ಪಡುತ್ತಿದ್ದ ಮಾರ್ಕಂಡೇಯ ಕುಮಾರನನ್ನು ಆಲಿಂಗಿಸಿಕೊಂಡು ದಯೆಯಿಂದ ರಕ್ಷಿಸಿದೆಯಲ್ಲವೆ!" ॥೫೦॥

ದೇವಿಯೇ, ಹೀಗೆ ಆ ಗೌತಮನು ಪ್ರಾರ್ಥಿಸಿ, ಬಿಲ್ವಾದಿಗಳಿಂದ ಅರ್ಚಿಸಲಾಗಿ ನಾನು ಅವನಿಗೆ ಸುಪ್ರೀತನಾಗಿ ಬೇಕಾದ ವರವನ್ನು ಕೇಳಿಕೊಳ್ಳುವಂತೆ

॥ ಗೌತಮ ಉವಾಚ ॥

ತ್ವದ್ಭಕ್ತಿಪಾವಿತಸ್ಯಾದ್ಯ ಸ್ನಾತುಮಂಭೋ ಮಹೇಶ್ವರಃ ।
ಪ್ರದೇಹಿ ಪಾವನಂ ಪುಣ್ಯಂ ಲೋಕಾನಾಮಘನುತ್ತಯೇ ॥೩೩॥

ಭಗೀರಥಾರ್ಥಂ ದೇವೇಶ ದತ್ತಾ ಗಂಗಾ ತ್ವಯೋದ್ಧೃತಾ ।
ಸಾಗರಾಶ್ಚ ತದಂಭೋಭಿಃ ಪ್ಲಾವಿತಾಸ್ತೇ ದಿವಂಗತಾಃ ॥೩೪॥

ಮತ್ಪಾವನಾರ್ಥಂ ವಿಶ್ವೇಶ ದೇಹಿ ಪುಣ್ಯಾಂ ನದೀಂ ಶಿವಾಂ ।
ಲೋಕಾನಾಮಪಿ ದೇವೇಶ ಪಾಪತಾಪವಿನಾಶಿನೀಂ ॥೩೫॥

ಶಿವೇ ಗೌತಮವಾಕ್ಯೇನ ತತ್ಸ್ತುತ್ಯಾ ಚಾಪಿ ಹರ್ಷಿತಃ ।
ನಿಃಸೃಷ್ಟಾ ಮಜ್ಜಟಾಮೂಲಾನ್ಮಮಪರ್ವತರೂಪಿಣಃ ॥೩೬॥

ಸಾ ಪಪಾತ ಮಹೀಪೃಷ್ಠೇ ತರಂಗಾವಲಿಭಾಸುರಾ ।
ಮತ್ಸ್ಯಕರ್ಕಟನಕ್ರಾದ್ಯೈಃ ಪ್ಲಾವಯಂತೀ ತಟದ್ವಯಂ ॥೩೭॥

---

ಅನುಜ್ಞೆಯಿತ್ತೆನು. ಅನಂತರ ಆ ಋಷಿಯು ತಾನು ಪವಿತ್ರನಾಗುವುದಕ್ಕಾಗಿ ಈ ರೀತಿಯಾದ ವರವನ್ನು ಕೇಳಿಕೊಂಡನು. ॥೨೧-೩೨॥

"ಮಹಾದೇವನೇ, ನಿನ್ನ ಭಕ್ತರು ಪವಿತ್ರವಾದ ಗಂಗೆಯಲ್ಲಿ ಸ್ನಾನಮಾಡಿ ಸರ್ವಪಾಪಮುಕ್ತರಾಗಬೇಕು. ಅದೇ ಉದ್ದೇಶದಿಂದ ಭಗೀರಥನು ನಿನ್ನ ದಯೆಯಿಂದ ಗಂಗೆಯನ್ನು ಪಡೆದು ತಾನೂ ಧನ್ಯನಾಗಿ ಸಗರಪುತ್ರರನ್ನೆಲ್ಲಾ ಉದ್ಧರಿಸಿದನು. ಆದರಿಂದ ಅವರೆಲ್ಲರೂ ಮುಕ್ತರಾದರು. ॥೩೩-೩೪॥

ಅದೇ ರೀತಿ ನನ್ನನ್ನು ಪರಿಶುದ್ಧಿಗೊಳಿಸಲು, ಜನ ಸಮುದಾಯದ ಪಾಪ ರಾಶಿಯನ್ನೆಲ್ಲಾ ನಿರ್ಮೂಲಮಾಡುವ ಪವಿತ್ರತಮವಾದ ಗಂಗಾನದಿಯನ್ನು ಈ ಸ್ಥಳಕ್ಕೆ ಬರುವಂತೆ ಅಪ್ಪಣೆಮಾಡು" ಎಂದು ಪ್ರಾರ್ಥಿಸಿದನು. ಎಲೌ ದೇವಿಯೇ, ಅವನ ಕೋರಿಕೆಯಂತೆ ನಾನು ನನ್ನ ಪರ್ವತಾಕಾರದಲ್ಲಿರುವ ಜಟಾಜೂಟದಿಂದ ಗಂಗಾನದಿಯನ್ನು ಕಳುಹಿಸಿದೆನು. ॥೩೫-೩೬॥

ಆಗ ಗಂಗೆಯು ಅತ್ಯಂತ ವೇಗದಿಂದ ಹೊರಟು ದೊಡ್ಡದೊಡ್ಡ ಕಪ್ಪೆ, ಮೊಸಳೆ, ಮೀನು ಮುಂತಾದುವುಗಳನ್ನೊಳಗೊಂಡು ತ್ರ್ಯಂಬಕಾಚಲದ ಮೇಲೆ ಬಿದ್ದು ಪ್ರವಹಿಸಿ, ಕೊನೆಗೆ ಸಮುದ್ರವನ್ನು ಸೇರಿತು. ಅದನ್ನು ನೋಡಲು ಅಲ್ಲಿಗೆ

ತ್ರಿಯಂಬಕೋತ್ತಮಾಂಗೇನ ನಿರ್ಜಗಾಮಾಥ ಸಾಗರಂ ।
ತತ್ರ ಬ್ರಹ್ಮಾದಯೋ ದೇವಾ ಗಂಧರ್ವೋರಗಕಿನ್ನರಾಃ ॥೫೮॥

ವಿದ್ಯಾಧರಾಪ್ಸರೋಮುಖ್ಯಾ ನಾರದಾದ್ಯಾ ಮಹರ್ಷಯಃ ।
ವೈಹಾಯಸೇನ ಮಾರ್ಗೇಣ ಸಮಾಜಗ್ಮುಸ್ತದಂಬಿಕೇ ॥೫೯॥

ದೃಷ್ಟ್ವಾ ತದಾಶ್ಚರ್ಯಕರಂ ಗೋದಾವರ್ಯುದ್ಭವಂ ತದಾ ।
ತ್ರಿಯಂಬಕಮಹಾಲಿಂಗಜಟಾಜೂಟತರಂಗಿತಾಂ ॥೬೦॥

ಗೋದಾವರೀಂ ತದಾ ಸರ್ವೇ ದೃಷ್ಟ್ವಾ ನತ್ವಾ ಮಹೇಶ್ವರಂ ।
ಸ್ನಾತ್ವಾ ತಸ್ಯಾಂ ಗೌತಮೇನ ಸಿಂಹಸಂಸ್ಥೇ ಬೃಹಸ್ಪತೌ ॥೬೧॥

ಸಮುದ್ಧೂಲ್ಯ ತಥಾಂಗಾನಿ ತ್ರಿಪುಂಡ್ರಾವಲಿಭಾಸುರಾಃ ।
ತ್ರಿಯಂಬಕೇಶ್ವರಂ ದೇವಾಃ ಸಂಪೂಜ್ಯಾಥ ಪ್ರಣಮ್ಯ ಚ ॥೬೨॥

ಬಿಲ್ವಪತ್ರೈಸ್ಸಮಭ್ಯರ್ಚ್ಯ ರುದ್ರಸೂಕ್ತೈಸ್ತದಾ ಸುರಾಃ ।
ಜಹ್ರುಃ ಸ್ವಪಾಪಜಂ ತಾಪಂ ವೃದ್ಧಗಂಗಾಜಲಾಪ್ಲವಾತ್ ॥೬೩॥

---

ಬ್ರಹ್ಮಾದಿ ಸಕಲ ದೇವತೆಗಳೂ ಗಂಧರ್ವರೂ, ಉರಗಗಳೂ, ವಿದ್ಯಾಧರರೂ ಅಪ್ಸರಸ್ಸುಗಳೂ ನಾರದಾದಿ ಸಕಲ ಮಹರ್ಷಿಗಳೂ ಆಕಾಶಮಾರ್ಗದಿಂದ ಬಂದಿಳಿದರು. ||೫೭-೫೮||

ಮತ್ತು ಆ ತ್ರ್ಯಂಬಕೇಶ್ವರನ ಜಟಾಕಲಾಪದಿಂದ ಅಲೆಯಲೆಯಾಗಿ ಹೊರಡುತ್ತಿದ್ದ ಗೋದಾವರೀ ನದಿಯ ಪ್ರವಾಹವನ್ನು ನೋಡಿ ಆಶ್ಚರ್ಯಭರಿತರಾದರು. ಒಡನೆಯೇ ಅವರೆಲ್ಲರೂ ಆ ಗೋದಾವರೀ ನದಿಯನ್ನು ಪೂಜಿಸಿ, ಗುರುವು ಸಿಂಹರಾಶಿಯಲ್ಲಿ ಸಂಚರಿಸುತ್ತಿದ್ದ ಕಾಲವಾದುದರಿಂದ ಅದನ್ನು ಪುಣ್ಯಕಾಲವೆಂದು ಭಾವಿಸಿ, ಎಲ್ಲರೂ ಅದರಲ್ಲಿ ಸ್ನಾನಮಾಡಿದರು. ||೫೯-೬೦-೬೧||

ಭಸ್ಮದಿಂದ ತಮ್ಮ ದೇಹವನ್ನು ಬಳಿದುಕೊಂಡು, ತ್ರಿಪುಂಡ್ರಾಂಕಿತರಾಗಿ ತ್ರಿಯಂಬಕೇಶ್ವರನನ್ನು ಬಿಲ್ವಪತ್ರಾದಿಗಳಿಂದಲೂ, ರುದ್ರಸೂಕ್ತಪಠನಾದಿಗಳಿಂದಲೂ ಅರ್ಚಿಸಿ, ತಮ್ಮ ಪಾಪರಾಶಿಯನ್ನೆಲ್ಲಾ ಕಳೆದುಕೊಂಡು ವೃದ್ಧಗಂಗಾಸ್ನಾನದಿಂದ ನಾವು ಪರಿಪೂತರಾದೆವೆಂದು ತಿಳಿದುಕೊಂಡರು. ||೬೨-೬೩||

ಶಿವಲಿಂಗೋತ್ತಮಾಂಗೋತ್ಥಪೂತನದ್ಯುದ್ಭವೈರ್ಜಲೈಃ ।
ಸ್ನಾತ್ವಾ ಸ ಗೌತಮೋ ವಿಪ್ರೋ ತದಾಭೂನ್ಮುಕ್ತಕಿಲ್ಬಿಷಃ ॥೬೪॥

ಶಿಲಾರೂಪಾ ಚ ತತ್ಪತ್ನೀ ಅಹಲ್ಯಾ ಶಾಪಿತಾ ಶಿವೇ ।
ಗೋದಾವರೀತರಂಗೋತ್ಥಶೀಕರೈರ್ಧೂತಕಿಲ್ಬಿಷಾ ॥೬೫॥

ಭಾಸುರಂ ಸ್ವಂ ತದಾ ರೂಪಂ ಪ್ರಾಪಾಶ್ಚರ್ಯಕರಂ ಶಿವೇ ।
ಪತ್ನ್ಯಾ ಸಮನ್ವಿತೋ ದೇವಿ ಗೌತಮೋ ಮಾಂ ತದಾಸ್ತುವೀತ್ ॥೬೬॥

ತ್ರಿಯಂಬಕಂ ತ್ವಾ ಸುಭಗಂ ಸುಗಂಧಿಂ ಪುಷ್ಟಿವರ್ಧನಂ ।
ಯಜಾಮಿ ಸತತಂ ದೇವ ಮೃತ್ಯುಭೀತೋಽಹಮೀಶ್ವರ ॥೬೭॥

ಮಹೇಶ್ವರ ಮಹಾದೇವ ಚಂದ್ರಚೂಡ ಮಹೇಶ್ವರ ।
ನಮಸ್ತೇ ಪಾರ್ವತೀಕಾಂತ ಪ್ರಪನ್ನಂ ಪಾಹಿ ಮಾಂ ಸದಾ ॥೬೮॥

---

ಗೌತಮಋಷಿಯಾದರೋ, ಆರೀತಿ ಪರಶಿವನ ಶಿರಸ್ಸಿನಿಂದ ಆವಿರ್ಭವಿಸಿ ಪವಿತ್ರವೆನಿಸಿದ ವೃದ್ಧಗಂಗಾರೂಪವಾದ ಗೋದಾವರಿಯಲ್ಲಿ ಸ್ನಾನಮಾಡಿ, ಸಕಲ ಪಾಪಗಳನ್ನೂ ಕಳೆದುಕೊಂಡನು. ಅದೇ ರೀತಿ ಗೌತಮಋಷಿಯ ಶಾಪದಿಂದ ಶಿಲಾರೂಪವನ್ನು ಪಡೆದಿದ್ದ ಆವನ ಪತ್ನಿಯಾದ ಅಹಲ್ಯೆಯೂ ಸಹ ಅದೇ ಗೋದಾವರೀನದಿಯ ಅಲೆಗಳಿಂದ ಎದ್ದ ನೀರಿನ ಹನಿಗಳಿಂದ ಪ್ರೋಕ್ಷಿತಳಾಗಿ ಪವಿತ್ರಳೆನಿಸಿದಳು. ॥೬೪-೬೫॥

ಅಲ್ಲದೆ ಶಾಪಮುಕ್ತಳಾಗಿ ತನ್ನ ಹಿಂದಿನ ರೂಪವನ್ನೇ ಪಡೆದಂತಹ ಪತ್ನಿಯನ್ನು ನೋಡಿ ಗೌತಮಮಹರ್ಷಿಯು ಸಂತುಷ್ಟನಾಗಿ, ಆಗ ನನ್ನನ್ನು ಈ ರೀತಿ ಸ್ತೋತ್ರಮಾಡಿದನು. ॥೬೬॥

"ಮಹೇಶ್ವರನೇ, ನೀನು ತ್ರಿಲೋಚನನು. ಸಕಲ ಸೌಭಾಗ್ಯಗಳಿಗೂ ಆಶ್ರಯ ಸ್ಥಾನನು. ಭಕ್ತರನ್ನು ನಾನಾರೀತಿಯಲ್ಲಿ ವೃದ್ಧಿಗೊಳಿಸುವವನು. ಮಹೇಶ್ವರನೇ, ಚಂದ್ರಶೇಖರನೇ, ಪಾರ್ವತೀಪತಿಯೇ, ನಾನು ಮೃತ್ಯುವಿನಿಂದ ಹೆದರಿರುವೆನು. ಅದಕ್ಕಾಗಿಯೇ ನಿನ್ನನ್ನು ಮೊರೆಹೊಕ್ಕಿರುವೆನು. ಇಂತಹ ನನ್ನನ್ನು ಉದ್ಧರಿಸಿ ಕಾಪಾಡು. ॥೬೭-೬೮॥

ವಿಶ್ವಾಧಿಕ ಮಹೇಶಾನ ವೃಷಭಧ್ವಜ ಶಂಕರ ।
ನಮಸ್ತೇ ರುದ್ರದೇವೇಶ ಬಾಹುಭ್ಯಾಂ ತೇ ನಮೋ ನಮಃ ॥೧೯॥

ಧನ್ವನೇ ತೇ ನಮಸ್ತುಭ್ಯಂ ಜಗತಾಂ ಪತಯೇ ನಮಃ ।
ಪತ್ತೀನಾಂ ಪತಯೇ ತುಭ್ಯಮನ್ನಾನಾಂ ಪತಯೇ ನಮಃ ॥೨೦॥

ಬಭ್ಲುಶಾಯ ನಮಸ್ತುಭ್ಯಂ ನಮಸ್ತೇ ಕೃತ್ತಿವಾಸಸೇ ।
ನಮ ಉಗ್ರಾಯ ಭೀಮಾಯ ನಮಸ್ಸೋಮಾಯ ಶಂಭವೇ ॥೨೧॥

ನಮಸ್ತೇ ಸಹಮಾನಾಯ ಅಷಾಢಾಯ ನಮೋ ನಮಃ ।
ನಮಶ್ಶಿವಾಯ ಶಂಗಾಯ ನಮಶ್ಶಿವತರಾಯ ಚ ॥೨೨॥

ಗಿರಿಶಾಯ ನಮಸ್ತುಭ್ಯಂ ತ್ರ್ಯಂಬಕಾಯ ನಮೋ ನಮಃ ॥೨೩॥

ದ್ರಾಪಿನ್ ಹಿರಣ್ಯಯಶರೀರ ಹಿರಣ್ಯಬಾಹೋ ।
ತ್ವಾಮಂಧಸಾಂ ಪತಿರಿತಿ ಪ್ರವದಂತಿ ವೇದಾಃ ॥೨೪॥

---

ಪ್ರಪಂಚವನ್ನು ಮೀರಿದವನೇ, ವೃಷಭಧ್ವಜನೇ, ಸುಖಕರನೇ, ನಿನ್ನ ಬಲಿಷ್ಠವಾದ ಬಾಹುಗಳಿಗೆ ವಂದಿಸುವೆನು. ಸಕಲ ಜಗತ್ತಿಗೂ ಒಡೆಯನೆನಿಸಿದ ನಿನ್ನ ಧನುಸ್ಸಿಗೂ, ಸಕಲ ವಿಧವಾದ ಸೈನ್ಯಕ್ಕೂ, ಸಮಸ್ತ ಆಹಾರವಸ್ತುಗಳಿಗೂ ಸ್ವಾಮಿಯೆನಿಸಿದ ನಿನಗೂ ನಮಸ್ಕರಿಸುವೆನು. ॥೧೯-೨೦॥

ಚರ್ಮವನ್ನೇ ವಸ್ತ್ರವನ್ನಾಗಿ ಮಾಡಿಕೊಂಡಿರುವ ಭಯಂಕರರೂಪಿಯೂ, ಉಗ್ರಸ್ವಭಾವದವನೂ, ಭಕ್ತರ ವಿಷಯದಲ್ಲಿ ಸೌಮ್ಯರೂಪದಿಂದಿರುವವನೂ ಆದ ಶಂಕರನೇ, ನಿನಗೆ ವಂದನೆ. ಸಕಲ ಜಗತ್ತನ್ನೂ ಧರಿಸಿ, ಪಾಪರಹಿತನಾಗಿರುವ ಪರಶಿವನೇ, ಸುಖಕರನೇ, ಅತ್ಯಂತ ಮಂಗಳಸ್ವರೂಪನೇ ನಿನಗೆ ವಂದನೆ.॥೨೧-೨೨॥

ಪರ್ವತವಾಸಿಯೂ, ಫಾಲನೇತ್ರನೂ, ಹಿರಣ್ಮಯ ಶರೀರಿಯೂ, ಹಿರಣ್ಯ ರೂಪವಾಗಿರುವ ತೋಳುಳ್ಳವನೂ ಸಕಲ ಅಜ್ಞಾನಗಳಿಗೂ ಒಡೆಯನೆನಿಸಿ ಅಜ್ಞಾನ ನಾಶಕನಾಗಿರುವ ಮಹಾದೇವನೇ, ನಿನಗೆ ವಂದನೆ. ಇದೇರೀತಿ ನಿನ್ನನ್ನು ಸಕಲ ವೇದಗಳೂ ಹೊಗಳುತ್ತಿವೆಯಲ್ಲವೇ! ॥೨೩-೨೪॥

ದಾರಿದ್ರ್ಯಂ ಮಮ ದುಷ್ಕೃತಂ ಚ ಭಗವನ್ ಸದ್ಯೋ ವಿನಾಶ್ಯಾಧುನಾ ।
ಸಂಪೂರ್ಣಂ ಧನಧಾನ್ಯಗೋಗಣಶತೈಃ ಪೂರ್ಣಂ ಗೃಹಂ ಮೇ ಕುರು ॥೭೫॥

ಯೋ ಮಾಂ ನ ಸಂತರ್ಪಯತ್ಯಭಿಮಾನಗರ್ವಾನ್
ನಿಂದತ್ಯನಿಂದ್ಯಂ ತವ ಪಾದಸೇವಿನಂ ।
ಯೋಽಸ್ಮಾನಹೋ ದ್ವೇಷ್ಟಿ ಚ ಯಂ ವಯಂ ಚ
ದ್ವಿಷ್ಮಸ್ತ್ವಂ ರುದ್ರಜಂಭೇ ವಿದಧಾಮಿ ಶಂಭೋ ॥೭೬॥

ವಾಜಾದಿಪ್ರಥಿತಂ ಮಹಾಫಲಗಣಂ ತ್ವತ್ಪಾದುಕಾರಾಧಕಂ
ಪ್ರಾಪ್ಯಂ ದೇವದಯಾನಿಧೇ ಚಮಕಜಾಸಾರಾರ್ಥಸಂಸೂಚಿತಂ ।
ಭಕ್ತೈಃ ಶಾಂಭವಪುಂಗವೈಸ್ತವ ಸದಾ ಸದ್ಭಿಃ ಸಪೀತಿಶ್ಚ ಮೇ
ಕ್ಷುಚ್ಚೈವಾಸ್ತು ಮಹೇಶ ತೇಽದ್ಯ ಕೃಪಯಾ ನೈವೇದ್ಯಸಂಭೋಜನೇ ॥೭೭॥

---

ಎಲೈ ಮಹಾತ್ಮನೇ, ನನ್ನಲ್ಲಿರುವ ದಾರಿದ್ರ್ಯವನ್ನೂ, ಪಾಪರಾಶಿಯನ್ನೂ ನಿವಾರಣೆಮಾಡಿ ನನ್ನ ಗೃಹವು ಸರ್ವದಾ ಧನಧಾನ್ಯಗಳಿಂದಲೂ, ಗೋಸಮೂಹಗಳಿಂದಲೂ ಭರಿತವಾಗಿರುವಂತೆ ಅನುಗ್ರಹಿಸುವವನಾಗು. ॥೭೫॥

ಶಂಭುವೇ, ಯಾವನು ನನ್ನನ್ನು ತೃಪ್ತಿಗೊಳಿಸಲಾರನೋ ಮತ್ತು ಅಭಿಮಾನದಿಂದ ಮತ್ತರಾಗಿರುವ ಜನರನ್ನು ಆನಂದಪಡಿಸುವನೋ, ಮತ್ತು ನಮ್ಮನ್ನು ಯಾರು ಅತ್ಯಂತವಾಗಿ ದ್ವೇಷಿಸುವರೋ, ಅಂತಹವರನ್ನು ಮಾತ್ರ ನಾವು ದ್ವೇಷಿಸುವೆವು. ಆದಕ್ಕಾಗಿಯೂ ನಿನ್ನನ್ನು ನಾನು ಮೊರೆಹೋಗುವೆನು. ॥೭೬॥

ಪರಶಿವನೇ, 'ವಾಜಶ್ಚಮೇ' ಎಂಬ ಮಂತ್ರವೇ ಆದಿಯಾಗಿದ್ದು, ಸಮಸ್ತ ಫಲಸಮೂಹವನ್ನೂ ಒದಗಿಸಿಕೊಡುವ, ನಿನ್ನ ಪಾದಪದ್ಮವನ್ನೇ ಸ್ತುತಿಸುವ ಚಮಕಾಧ್ಯಾಯವು ಮಹಾಶಾಂಭವರಿಂದ ಮಾತ್ರ ಹೊಂದಲ್ಪಡುವುದು. ದಯಾಸಮುದ್ರನಾದ ಶಂಕರನೇ, ಅಂತಹ ನಿನ್ನ ನಾಮಾಮೃತವನ್ನು ಪಾನಮಾಡುವುದಕ್ಕೆ ನನಗೆ ಬಾಯಾರಿಕೆಯೂ, ನಿನ್ನ ನೈವೇದ್ಯಶೇಷವನ್ನು ತಿನ್ನುವಂತಹ ಹಸಿವೂ ನನಗೆ ಸರ್ವದಾ ಉಂಟಾಗುತ್ತಿರಲಿ ಎಂದು ಸದಾ ನಿನ್ನನ್ನು ಪ್ರಾರ್ಥಿಸುವೆನು. ॥೭೭॥

|| ಈಶ್ವರ ಉವಾಚ ||

ಇತ್ಥಂ ಸ್ತುತ್ವಾ ಗೌತಮೋಽಪಿ ಮಾಂ ಪ್ರಣಮ್ಯಾಂಬಿಕೇ ತದಾ ।
ಪ್ರಾಹ ಮಾಂ ದೇವ ಪೂತೋಽಸ್ಮಿ ಧನ್ಯೋಽಸ್ಮೀತಿ ಮುಹುರ್ಮುಹುಃ ||೭೮||
ತ್ವಲ್ಲಿಂಗಮೌಳಿಸಂಗ್ಯೈಕಪೂತಯಾ ವೃದ್ಧಗಂಗಯಾ ||೭೯||

ದರ್ಶನಾದಖಿಲಪಾಪನಾಶಕಂ
ಸ್ಪರ್ಶನಾದಖಿಲಕಾಮದಂ ಶುಭಂ ।
ಪ್ರಾಶನಾಚ್ಚ ನಿಜಬೋಧದಾಯಕಂ
ಚಂದ್ರಚೂಡ ಚರಣೋದಕಂ ಭಜೇ ||೮೦||

ಇತಿ ಸ್ತುತ್ವಾ ಪ್ರಹೃಷ್ಟಾತ್ಮಾ ತ್ರ್ಯಂಬಕೇ ಶಿಖರೇ ಮುನಿಃ ।
ತತ್ರೋವಾಸ ಮಹಾದೇವ್ಯಾಹಲ್ಯಯಾ ಚ ಸಮನ್ವಿತಃ ||೮೧||

ಇತ್ಥಂ ತ್ರ್ಯಂಬಕಭೂಧರೋರುಶಿಖರೋತ್ತುಂಗೈಸ್ತರಂಗೈರ್ಯುತಾ
ಗಂಗಾ ವೃದ್ಧತಮಾ ಶಿವಾದ್ಯ ಶಿರಸೋದ್ಭೂತಾ ಜಗತ್ಪಾವನೀ ।

---

ಎಲೌ ದೇವಿಯೇ, ಆರೀತಿ ಗೌತಮನು ನನ್ನನ್ನು ಬಹುವಾಗಿ ಸ್ತುತಿಸಿ, ತಾನು ಶಿವಲಿಂಗೋದ್ಭವವಾದ ವೃದ್ಧಗಂಗಾದರ್ಶನದಿಂದ ಧನ್ಯನಾದೆನೆಂದು ಮತ್ತೆ ಮತ್ತೆ ಹರ್ಷಿಸಿ ಬಾರಿಬಾರಿಗೂ ನನ್ನನ್ನು ಸ್ತುತಿಸುತ್ತಾ ಕಾಲಕಳೆದನು. ||೭೮-೭೯||

ಚಂದ್ರಶೇಖರನ ಪಾದತೀರ್ಥವಾದ ಈ ವೃದ್ಧಗಂಗೆಯು (ಗೋದಾವರಿಯು) ದರ್ಶನದಿಂದ ಸಕಲ ಪಾಪವೂ ನಾಶವಾಗುತ್ತದೆ. ಸ್ಪರ್ಶನದಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಸುತ್ತವೆ. ಪ್ರಾಶನದಿಂದ ಸುಜ್ಞಾನವು ಲಭಿಸುತ್ತದೆ. ಇಂತಹ ಮಹಾಮಹಿಮೆಯುಳ್ಳದ್ದು ಈ ತೀರ್ಥ, ಎಂದು ಗೌತಮನು ಹೊಗಳಿದನು. ||೮೦||

ಅನಂತರ ಗೌತಮ ಋಷಿಯು ಅದೇ ತ್ರ್ಯಂಬಕಪರ್ವತದ ಶಿಖರದಲ್ಲಿಯೇ, ಪತ್ನಿಯಾದ ಅಹಲ್ಯೆಯೊಡನೆ ವಾಸಮಾಡುತ್ತಾ ಸಂತೋಷದಿಂದ ಕಾಲಕಳೆಯುತ್ತಿದ್ದನು. ||೮೧||

ಹೀಗೆ ಗೋದಾವರೀ ನದಿಯು ವೃದ್ಧಗಂಗೆಯೆಂಬ ಹೆಸರಿನಿಂದ ಪರಶಿವನ ಆವಾಸಸ್ಥಾನವಾದ ತ್ರ್ಯಂಬಕ ಶಿಖರದಲ್ಲಿ ಆವಿರ್ಭವಿಸಿ, ತರಂಗತರಂಗವಾಗಿ ಹರಿಯುತ್ತಾ, ಪಾವಿತ್ರ್ಯದಿಂದ ಜನರ ಸಕಲ ಪಾಪಗಳನ್ನೂ ಪರಿಹರಿಸುತ್ತಾ, ದೇವತೆ

ಸಾ ಸರ್ವಾನ್ ಸುರಸತ್ತಮಾನಥ ಮುದಾ ಶೈವಂ ಮುನಿಂ ಗೌತಮಂ
ಪುಷ್ಣಂತೀತ್ಯಘಸಂಘಭಂಜನಕರೀ ಗಂಗೇವ ಗೋದಾವರೀ ॥೮೨॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ, ಗೋದಾವರ್ಯುತ್ಪತ್ತಿಃ ಗೌತಮಾಹಲ್ಯಾ ಪಾವನ ಕಥನಂ ನಾಮ ಏಕವಿಂಶೋಽಧ್ಯಾಯಃ

---

ಗಳಿಗೂ, ಈಶ್ವರ ಭಜಕರಿಗೂ ಹರ್ಷದಾಯಕವಾಗಿ, ವಿರಾಜಿಸುತ್ತಿದೆ ಎಂದು ಸೂತ ಮಹರ್ಷಿಯು ಸಕಲ ಮುನಿವೃಂದಕ್ಕೂ ಉಪದೇಶಿಸಿದನು. ॥೮೨॥

ಇಲ್ಲಿಗೆ ಭರ್ಗನಾಮಕವಾದ ಶಿವರಹಸ್ಯದ ಪಂಚಮಾಂಶದಲ್ಲಿ, ಗೋದಾವರೀ ನದಿಯ ಉತ್ಪತ್ತಿ ಅದರ ಸ್ನಾನದಿಂದ ಗೌತಮಾಹಲ್ಯರು ಪವಿತ್ರವಾದ ವಿಷಯವನ್ನು ತಿಳಿಸುವ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಪಂಚಮಾಂಶೇ

## ದ್ವಾವಿಂಶೋಽಧ್ಯಾಯಃ

॥ ಶ್ರೀಈಶ್ವರ ಉವಾಚ ॥

ಬ್ರಹ್ಮಾದಯಸ್ತದಾ ದೇವಿ ತ್ರಿಯಂಬಕಮುಮಾಸಖಂ ।
ಮಾಂ ತುಷ್ಟುವುಸ್ತದಾ ಭಕ್ತ್ಯಾ ನದೀಂ ಗೋದಾವರೀಂ ತದಾ ॥೧॥

ಭಗಾಕ್ಷಿಮಥನಾಂತಕ ಪ್ರಮಥನಾಥ ನಸ್ಸರ್ವಥಾ
ಸುರಾಸುರಮುನಿವ್ರಜಪ್ರಣತಪಾದಪಂಕೇರುಹ ।
ಪ್ರಪನ್ನಜನರಕ್ಷಕ ಪ್ರಮಥನಾಥ ವಿಶ್ವಾಧಿಕ
ಪ್ರಸೀದ ದುರಿತಾಪಹ ಪ್ರವರನಾಮದೇವೋತ್ತಮ ॥೨॥

---

## ಇಪ್ಪತ್ತೆರಡನೆಯ ಅಧ್ಯಾಯ

ಪರಶಿವನು ಆದೇ ತ್ರ್ಯಂಬಕೇಶ್ವರನ ಮಹಿಮೆಯನ್ನು ವಿವರಿಸುತ್ತಾ ಪಾರ್ವತಿಯೊಡನೆ ಹೀಗೆಂದನು. ದೇವಿಯೇ, ಆಗ ಬ್ರಹ್ಮಾದಿಗಳಾದ ಸಕಲ ದೇವತೆಗಳು ಸಂತುಷ್ಟರಾಗಿ, ತ್ರಿಯಂಬಕೇಶ್ವರನನ್ನೂ, ಪವಿತ್ರವಾದ ಗೋದಾವರೀ ನದಿಯನ್ನೂ ಈ ರೀತಿಯಾಗಿ ಸ್ತುತಿಸಿದರು. ॥೧॥

" ಪರಮೇಶ್ವರನೇ, ನೀನು ದಕ್ಷಯಾಗದಲ್ಲಿ ಭಗದೇವತೆಯ ಕಣ್ಣನ್ನು ಕಿತ್ತು ಅವನ ಗರ್ವವನ್ನು ನಾಶಪಡಿಸಿದೆಯಲ್ಲವೆ? ಸಕಲ ಪ್ರಮಥ ವರ್ಗಕ್ಕೂ, ಸುರಾಸುರಾದಿಗಳಿಗೂ ಒಡೆಯನೆನಿಸಿ, ಸರ್ವರಿಂದಲೂ ನಮಸ್ಕೃತವಾದ ಪಾದಪದ್ಮವುಳ್ಳವನೇ, ಅನಾಥಜನರಕ್ಷಕನೇ, ಪ್ರಪಂಚ ನಿರ್ಮಾಪಕನೇ, ಪಾಪನಾಶಕನೇ, ದೇವದೇವೋತ್ತಮನೇ, ನಮ್ಮನ್ನು ರಕ್ಷಿಸು. ॥೨॥

ಪ್ರಕೃಷ್ಟಜನಿನಾಶದ ಪ್ರವರಮಾಯಮಾಯಾಹರ
ಉಮಾಧವ ರಮಾಧವಪ್ರಣತಪಾದಪದ್ಮ ಪ್ರಭೋ ।
ಶಚೀಧವ ಮುಖಾಮರದ್ವಿರದವಕ್ತ್ರನಂದಿಸ್ತುತ
ಗದಾಧರ ಧರಾಧರಪ್ರವರಹಸ್ತ ಪಂಕೇರುಹ ।
ಗದಾಧರ ನಿಶಾಕರಾದ್ಯಮರಚಾರಬಾಣಾವ ನಃ ॥೩॥

ಏವಂ ಬ್ರಹ್ಮಾದಯಸ್ತತ್ರ ತ್ರ್ಯಂಬಕಂ ಮಾಂ ಮಹೇಶ್ವರಿ ।
ಯಯುಃ ಸ್ವಸ್ಥಾನಮಮಲಂ ಬ್ರಹ್ಮಲೋಕಂ ಸನಾತನಂ ॥೪॥

ವರ್ಣಯಂತೋ ವಿಮಾನೇಷು ಗೋದಾವರ್ಯಾಸ್ತದುದ್ಭವಂ ।
ತ್ರಿಯಂಬಕೋರುಶಿಖರಾಡ್ಗೋಬಾಯಾಸ್ತೇ ತದಂಬಿಕೇ ॥೫॥

ತತ್ರ ಸಪ್ತಮುಖೀ ಭೂತ್ವಾ ಕುಶಾವರ್ತೇ ಮಹೇಶ್ವರಿ ।
ತತ್ರತ್ಯಾನ್ ಪಾವಯಂತೀ ಸಾ ಶೈವಾನ್ಮನು ಪದಾಶ್ರಯಾನ್ ॥೬॥

ತತ್ರತ್ಯಾ ಮುನಯಸ್ಸರ್ವೇ ಪ್ರವರಾತೀರವಾಸಿನಃ ।
ಗೋದಾವರೀಂ ತದಾ ದೇವಿ ಯುಕ್ತಾಂ ಪ್ರವರಯಾ ಸಹ ॥೭॥

---

ಪರಶಿವನೇ, ನೀನು ನಿನ್ನ ಭಕ್ತರ ಜನನಮರಣಾದಿ ದುಃಖಗಳನ್ನು ನಾಶಪಡಿಸುವವನು. ಬಲವಾದ ಮಾಯೆಗೆ ಅಧೀನನಾಗದೆ ಮಾಯಾತೀತನೆನಿಸಿಕೊಂಡಿರುವೆ. ಪಾರ್ವತೀಪತಿಯೆನಿಸಿ, ಲಕ್ಷ್ಮೀಪತಿಯಾದ ವಿಷ್ಣುವಿನಿಂದ ಪೂಜಿತನಾಗಿರುವೆ. ಇಂದ್ರಾದಿದೇವತೆಗಳೂ, ಗಜಾನನ, ನಂದಿ, ಗದಾಧರನಾದ ವಿಷ್ಣು, ಧರಾಧರನಾದ ಆದಿಶೇಷ, ಮುಂತಾದವರಿಂದಲೂ ಸ್ತುತನಾಗಿ, ಚಂದ್ರಚೂಡನಾಗಿ, ವಿಷ್ಣುವೇ ಬಾಣವಾಗಿ ರಂಜಿಸುವ ಮಹಾದೇವನೇ ನಮ್ಮನ್ನು ಕಾಪಾಡು." ॥೩॥

ಹೀಗೆ ನನ್ನನ್ನು ಎಲ್ಲ ದೇವತೆಗಳೂ ಸ್ತುತಿಸಿ, ವಿಮಾನಾರೂಢರಾಗಿ, ಗೋದಾವರೀ ನದಿಯು ತ್ರಿಯಂಬಕಾಚಲದಲ್ಲಿ ಉದ್ಭವವಾದ ಸೊಬಗನ್ನೇ ವರ್ಣಿಸುತ್ತಾ ತಮ್ಮ ತಮ್ಮ ಲೋಕಗಳಿಗೆ ಹಿಂದಿರುಗಿದರು. ॥೪-೫॥

ಗೋದಾವರೀ ನದಿಯು ಹಾಗೆಯೇ ಮುಂದುವರಿದು, ಕುಶಾವರ್ತಕ್ಷೇತ್ರದಲ್ಲಿ ಏಳು ಕವಲಾಗಿ ಒಡೆಯುವುದು. ಅದರಲ್ಲಿ ಒಂದು ಪವಿತ್ರವಾದ ಶಾಖೆಗೆ ಪ್ರವರಾ ಎಂಬ ಹೆಸರಿದೆ. ಅದು ವಿಶೇಷ ವರಪ್ರದವಾದುದರಿಂದ ಅಲ್ಲಿ ಈಶ್ವರಸೇವಕರು ಬಹಳವಾಗಿ ನೆಲಸಿ ಸರ್ವದಾ ಶಿವಲಿಂಗಾರಾಧನಾಸಕ್ತರಾಗಿರುವರು. ॥೬-೭॥

ತತ್ರ ಸ್ನಾನವರಂ ದೇವಿ ಮಮ ಸಾನ್ನಿಧ್ಯಕೃತ್ತಮಂ ।
ಭೀಮಶಂಕರಸಂಜ್ಞಂ ತಂ ಲಿಂಗಂ ಮಮ ಮನೋಹರಂ ॥೮॥

ತತ್ರ ಪೂರ್ವಂ ಮಹಾದೇವಿ ಬ್ರಹ್ಮಣಃ ಪಂಚಮಂ ಶಿರಃ ।
ಮಯಾ ವಿವದತಾ ತಸ್ಯ ಸಾಮ್ಯವಾದೇನ ಶಂಕರಿ ॥೯॥

ತತ್ಪಂಚಮಂ ಶಿರಸ್ತಸ್ಯ ಕೃತ್ತಂ ಮಮ ನಖಾಗ್ರತಃ ।
ತತ್ರ ಸ್ತುವಂತಿ ಮಾಂ ವಿಪ್ರಾ ಭೀಮಶಂಕರಸಂಜ್ಞಕಂ ॥೧೦॥

ತ್ವತ್ಸಾಮ್ಯವಾದಪರಿಚಿಹ್ನಿತಪಂಚಸಂಸ್ಥಂ
ಪಂಚಾನನಸ್ಯ ಕರಕೋಣನಖಾಗ್ರಕೃತ್ತಂ ।
ತತ್ಕಂಧರೇಣ ವಿಲಸತ್ಕರಪಲ್ಲವಂ ತೇ
ಶೂಲಾಮಲೇನ ವಿಲಸತ್ತವ ಘೋರರೂಪಂ ॥೧೧॥

ತ್ವಂ ಭೀಮಶಂಕರ ಇತಿ ಶ್ರುತಿಷು ಪ್ರಸಿದ್ಧಃ ॥೧೨॥

---

ಆ ಪ್ರವರಾನದಿಯಲ್ಲಿ ಸ್ನಾನಮಾಡುವುದು ಬಹಳ ಶ್ರೇಷ್ಠವಾದದ್ದು. ಅಲ್ಲಿ ಭೀಮಶಂಕರ ಸಂಜ್ಞಕವಾದ ಶಿವಲಿಂಗವೊಂದು ಮನೋಹರವಾಗಿರುವುದು. ಆದರ ದರ್ಶನದಿಂದ ಜನರಿಗೆ ಶಿವಸಾನ್ನಿಧ್ಯವು ತಪ್ಪದೇ ದೊರೆಯುವುದು. ಅಲ್ಲಿಯೇ ನಾನು ಹಿಂದೆ ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿದೆನು. ನನಗೂ ಅವನಿಗೂ ಶಿರಸ್ಸಿನಲ್ಲಿ ಸಾಮ್ಯ ಬಂದುದರಿಂದಲೇ ನಾನು ಹಾಗೆ ಮಾಡಿದೆನು. ಅದನ್ನೂ ನನ್ನ ಕೈಯುಗುರಿನಿಂದಲೇ ಚುಗುಟಿ ಕತ್ತರಿಸಿದೆನು. ಅದರಿಂದಲೇ ನನ್ನನ್ನು ಆ ಸ್ಥಳದಲ್ಲಿ ಭೀಮಶಂಕರನೆಂಬ ಹೆಸರಿನಿಂದ ಪೂಜಿಸುತ್ತಿರುವರು. ಅಲ್ಲಿ ವಿಪ್ರರನೇಕರು ನನ್ನನ್ನು ಈ ರೀತಿಯಾಗಿ ಸ್ತುತಿಸುವರು. ॥೮-೯-೧೦॥

" ಮಹಾದೇವನೇ, ನಿನಗೆ ಪಂಚಮುಖಗಳಲ್ಲಿ ಸರಿಸಮನಾದ ಬ್ರಹ್ಮನನ್ನು ಕೆಳದರ್ಜೆಗಿಳಿಸಲು ನಿನ್ನ ಉಗುರಿನ ತುದಿಯಿಂದಲೇ ಬ್ರಹ್ಮನ ಒಂದು ತಲೆಯನ್ನು ಕತ್ತರಿಸಿ, ಅದೇ ಬ್ರಹ್ಮಕಪಾಲವನ್ನು' ಹಿಡಿದು ನೀನು ಪ್ರಕಾಶಿಸಿದೆಯಲ್ಲವೇ ? ಮತ್ತು ಭಯಂಕರವಾದ ನಿನ್ನ ತ್ರಿಶೂಲದಿಂದ ಜಗತ್ತನ್ನೇ ಭಯಗೊಳಿಸುವೆ. ಆದರಿಂದಲೇ ಇಂತಹ ನೀನು ಭೀಮ ಶಂಕರನೆಂದು ವೇದದಲ್ಲಿ ಸ್ತುತನಾಗಿರುವೆ. ॥೧೧॥

ಪ್ರವರಾನದಿಯಿಂದ ಸಹಿತವಾದ ಗೋದಾವರೀ ತೀರವೇ ನಿನಗೆ ಇಷ್ಟವಾದ ಸ್ಥಳವೆಂದು ನಾವು ತಿಳಿದಿರುವೆವು. ಪರಶಿವನೇ, ಬ್ರಹ್ಮನ ಗರ್ವವನ್ನು ಮುರಿದವನೇ,

ಸ್ಥಾನಂ ತವೈತದಮಲಂ ಮುನಯೋ ವದಂತಿ
ಗೋದಾ ಸದಾ ವಹತಿ ಯಾ ಪ್ರವರಾಸಮೇತಾ ।
ತತ್ತೀರಗೋಸಿ ವಿಧಿಹನ್ ಪುರಕಾಮಶತ್ರೋ
ದಕ್ಷಾಂತಕಾಂತಕ ಮಹೇಶ್ವರ ಪಾಹಿ ದೀನಾನ್ ॥೧೩॥

ಏವಂ ಸ್ತುವಂತಿ ಮುನಯೋ ಭೃಗ್ವಾದ್ಯಾ ಮಾಂ ಮಹೇಶ್ವರಿ ।
ಸಾಪಿ ಗೋದಾವರೀ ಪುಣ್ಯಾ ತಟೆಲಿಂಗೈರ್ವಿಭೂಷಿತಾ ॥೧೪॥

ಸಮುದ್ರಂ ಸಂಗತಾ ಗೌರೀ ತರಂಗಾವಲಿಭಾಸುರಾ ।
ಗೋದಾವರ್ಯಾಂ ಸಕೃತ್ ಸ್ನಾತ್ವಾ ಸದಾ ಪರ್ವಣಿ ಸತ್ತಮೇ ॥೧೫॥

ಸರ್ವಮೇಧಫಲಂ ಪ್ರಾಪ್ಯ ಮಲ್ಲೋಕೇ ನಿವಸೇಚ್ಚಿರಂ ।
ಗೋದಾವರ್ಯಾಂ ಶಿವೇ ಸ್ನಾತ್ವಾ ಸಿಂಹಸಂಸ್ಥೇ ಬೃಹಸ್ಪತೌ ॥೧೬॥

ಸಪ್ತಜನ್ಮಕೃತೈಃ ಪಾಪೈಸ್ತತ್ಕ್ಷಣಾದೇವ ಮುಚ್ಯತೇ ।
ಭೂಮ್ಯಾಮೇತನ್ನಾಸಿಕಾಖ್ಯಂ ಕ್ಷೇತ್ರಮಾಸೀನ್ಮನೋರಮೇ ॥೧೭॥

---

ತ್ರಿಪುರಾರಿಯೇ, ಮನ್ಮಥನಾಶಕನೇ, ನೀನು ದಕ್ಷಬ್ರಹ್ಮನನ್ನೂ, ಯಮನನ್ನೂ ಧ್ವಂಸಮಾಡಿದೆಯಲ್ಲವೆ! ಅಂತಹ ಭೀಮಶಂಕರನೇ, ದೀನರಾದ ನಮ್ಮನ್ನು ಸರ್ವದಾ ರಕ್ಷಿಸು." ॥೧೨-೧೩॥

ಹೀಗೆ ಭೃಗ್ವಾದಿಯಾದ ಮಹರ್ಷಿಗಳೆಲ್ಲರೂ ನನ್ನನ್ನು ಬಹಳವಾಗಿ ಸ್ತುತಿಸಿದರು. ಅಲ್ಲಿ ಗೋದಾವರೀ ನದಿಯಾದರೋ ಅತ್ಯಂತ ವೇಗದಿಂದ ಎರಡು ದಡಗಳಲ್ಲಿಯೂ ಶಿವಲಿಂಗಗಳನ್ನು ಸ್ಪರ್ಶಮಾಡುತ್ತಾ ಪ್ರವಹಿಸುವುದು. ॥೧೪॥

ಹಾಗೆಯೇ ಅಲೆಯಲೆಗಳಿಂದ ಶೋಭಿಸುತ್ತಾ ಸಮುದ್ರವನ್ನು ಸೇರುವುದು. ಪರ್ವಕಾಲದಲ್ಲಿ ಈ ಗೋದಾವರೀಸ್ನಾನಮಾಡಿದವರಿಗೆ ಸಕಲ ಯಾಗಾಚರಣೆಯ ಫಲವೂ ಲಭಿಸಿ, ನನ್ನಲೋಕದಲ್ಲಿ ಸ್ಥಿರವಾಸವು ದೊರಕುವುದು. ಗುರುವು ಸಿಂಹರಾಶಿಯಲ್ಲಿ ಸಂಚಾರಮಾಡುವಾಗ ಗೋದಾವರಿಯಲ್ಲಿ ಸ್ನಾನಮಾಡಿದವರು ಸಪ್ತಜನ್ಮಕೃತವಾದ ಪಾಪಗಳಿಂದಲೂ ಮುಕ್ತರಾಗುವರು. ಹಾಗೆಯೇ ಅದೇ ಪ್ರದೇಶದಲ್ಲಿ ನಾಸಿಕವೆಂಬ ಬೇರೆ ಪ್ರಸಿದ್ಧ ಕ್ಷೇತ್ರವೊಂದಿರುವುದು. ॥೧೫-೧೬-೧೭॥

ತಸ್ಮಾನ್ನಾಸಾಂ ತ್ರ್ಯಂಬಕಾಖ್ಯಾಂ ವರ್ಣಯಂತಿ ಪುರಾವಿದಃ ।
ಅವಿಮುಕ್ತಂ ಚ ಭ್ರೂಸ್ಥಾನಂ ಹಾಲಾಸ್ಯಂ ದ್ವಾದಶಾಂತಕಂ ॥೧೮॥

ಶ್ರೀಶೈಲೋಜ್ಜಯಿನೀ ದೇವಿ ನೇತ್ರೇ ಮಮ ಮನೋರಮೇ ।
ಓಂಕಾರಕಂಠಮೂಲಂ ಮೇ ಶ್ರವಣೇ ಕುಂಡಲೀಶ್ವರಂ ॥೧೯॥

ಕೇದಾರಂ ಚೈವ ಕಲ್ಯಾಣಿ ಅನ್ಯಾನ್ಯಂಗಾನಿ ಸತ್ತಮೇ ।
ಭೂಮಂಡಲಗತಾನೀಹ ಶಿವಕ್ಷೇತ್ರಾಣಿ ಶಂಕರಿ ॥೨೦॥

ದ್ವಾಸಪ್ತತಿಸಹಸ್ರಾಣಿ ನಾಡೀಜಾಲಂ ಮಮಾಂಗನೇ ।
ಶ್ರೀಮಚ್ಚಿದಂಬರಂ ದೇವಿ ಹೃದ್ಯಂ ಯನ್ಮಮ ಸದ್ಮ ತತ್ ॥೨೧॥

ತತ್ರಾಹಂ ಸರ್ವದಾ ದೇವಿ ನಿವಸಾಮಿ ಸ್ವರೂಪತಃ ।
ತ್ವಯಾ ಚ ಗಣಪೈಸ್ಸಾರ್ಧಂ ಸ್ಕಂದವಿಘ್ನೇಶ್ವರೇಣ ಚ ॥೨೨॥

ಚಿದಂಬರಮಿತಿ ಪ್ರೋಕ್ತಂ ವೇದವೇದಾಂತಸಂಸ್ತುತಂ ।
ಮಾಂ ಸರ್ವೇ ತತ್ರ ನೃತ್ಯಂತಂ ವರ್ಣಯಂತಿ ಮುನೀಶ್ವರಾಃ ॥೨೩॥

---

ಈ ಕ್ಷೇತ್ರವನ್ನು ತ್ರ್ಯಂಬಕೇಶ್ವರನ ನಾಸಿಕವೆನ್ನುವರು. ಹಾಗೆಯೇ ಅವಿಮುಕ್ತೇಶ್ವರ ಕ್ಷೇತ್ರವೆನಿಸಿದ ಕಾಶಿಯನ್ನೂ, ಭ್ರೂ (ಹುಬ್ಬು) ಸ್ಥಾನವೆಂದೂ, ಹಾಲಾಸ್ಯ ಕ್ಷೇತ್ರವನ್ನೇ ಮೂರ್ಧಸ್ಥಾನವೆಂದೂ, (ಶಿರಸ್ಸು) ಶ್ರೀಶೈಲ, ಉಜ್ಜಯನೀ, ಇವೆರಡೂ ನೇತ್ರಗಳೆಂದೂ, ಓಂಕಾರೇಶ್ವರ ಕ್ಷೇತ್ರವೇ ಕಂಠಸ್ಥಾನವೆಂದೂ, ಕುಂಡಲೀಶ್ವರಕ್ಷೇತ್ರ ಕೇದಾರಕ್ಷೇತ್ರ ಇವೆರಡೂ ಕರ್ಣಸ್ಥಾನಗಳೆಂದೂ ನಂಬಿರುವರು. ॥೧೮-೧೯॥

ದೇವಿಯೇ, ಭೂಲೋಕದಲ್ಲಿ ಇತರ ಶಿವಕ್ಷೇತ್ರಗಳು ನನ್ನ ಇತರ ಅಂಗಗಳೆಂದು ತಿಳಿ. ನನ್ನ ಅವಯವದಲ್ಲಿ ಎಪ್ಪತ್ತೆರಡು ಸಹಸ್ರ ನಾಡೀಜಾಲಗಳಿವೆ. ಅಷ್ಟು ಕ್ಷೇತ್ರಗಳು ಭೂಲೋಕದಲ್ಲಿ ಪ್ರಸಿದ್ಧವಾಗಿವೆ. ಅದರಲ್ಲಿ ಚಿದಂಬರಕ್ಷೇತ್ರವೆಂಬುದು ನನಗೆ ಆಹ್ಲಾದವನ್ನುಂಟುಮಾಡುವ ಮಂದಿರವೆನಿಸಿದೆ. ॥೨೦-೨೧॥

ಅಲ್ಲಿ ನಾನು ನಿನ್ನೊಡನೆಯೂ (ಗೌರಿಯೊಡನೆ) ಸ್ಕಂದ ಹೇರಂಬರೊಡನೆಯೂ ಕೂಡಿ ಸಂತೋಷದಿಂದ ನೆಲಸಿರುವೆನು. ಅಂತಹ ಚಿದಂಬರಕ್ಷೇತ್ರವು ವೇದವೇದಾಂತಗಳಿಂದಲೂ ಹೊಗಳಲ್ಪಟ್ಟಿದೆ. ಅಲ್ಲಿ ಸಂತೋಷದಿಂದ ನರ್ತನಮಾಡುವ ನನ್ನನ್ನು ಸಕಲ ಋಷಿಗಳೂ ಬಹಳವಾಗಿ ಸ್ತುತಿಸುವರು. ॥೨೨-೨೩॥

॥ ದೇವ್ಯುವಾಚ ॥

ತತ್ರ ತ್ವಾಂ ದೇವದೇವೇಶಂ ನೃತ್ಯಂತಂ ತೇ ಮುನೀಶ್ವರಾಃ ।
ಕಥಂ ಸ್ತುವಂತಿ ಹೇ ಶಂಭೋ ಶ್ರೋತುಮಿಚ್ಛಾಮಿ ತತ್ಸ್ತುತಿಂ॥೨೪॥

॥ ಸೂತ ಉವಾಚ ॥

ಮಹಾದೇವೋ ಗಿರಿಜಯಾ ತದಾ ಸಂಪ್ರಾರ್ಥಿತೋ ದ್ವಿಜಾಃ ।
ಸ ನೃತ್ತಚಿತ್ರಂ ತದ್ದೇವ್ಯೈ ಕಥಯಾಮಾಸ ವಿಸ್ತರಾತ್ ॥೨೫॥

॥ ಈಶ್ವರ ಉವಾಚ ॥

ವ್ಯಾಘ್ರಪಾದಾದಯೋ ಗೌರಿ ಶೇಷಾದ್ಯಾಃ ಪ್ರಮಥಾಧಿಪಾಃ ।
ಜೈಮಿನಿಪ್ರಮುಖಾಸ್ಸರ್ವೇ ಮನ್ನೃತ್ಯಂ ವರ್ಣಯಂತಿ ಚ ॥೨೬॥
ತತ್ರೇಹಂ ವರ್ಣಯಿಷ್ಯಾಮಿ ಸಾವಧಾನಮನಾಃ ಶೃಣು ॥೨೭॥

॥ ವ್ಯಾಘ್ರಪಾದ ಜೈಮಿನಿಶೇಷಾದಯ ಊಚುಃ ॥

ವಿನಿಹಿತವಿಧಿಜಾತ ರುಂಡಮಾಲಾ
ಕಲಿತೋರಸ್ಥಲಶೂಲಮೂಲಬಾಹೋ ।

---

ಹಾಗೆಂದ ಶಂಕರನ ಮಾತನ್ನು ಕೇಳುತ್ತಲೇ ಪಾರ್ವತಿಯು ಪತಿಯನ್ನು ಕುರಿತು "ಸ್ವಾಮಿಯೇ, ನಿನ್ನ ನಾಟ್ಯಮೂರ್ತಿಯನ್ನು ಋಷಿಜನರು ಯಾವರೀತಿ ಸ್ತುತಿಸುವರು? ಅದನ್ನು ನಾನು ಕೇಳಬೇಕೆಂದಿರುವೆನು. ದಯೆಯಿಂದ ಹೇಳಬೇಕು," ಎನ್ನಲು ಮಹಾದೇವನು ಗಿರಿಜೆಯ ಪ್ರಾರ್ಥನೆಯಂತೆ, ಆ ನೃತ್ತಚಿತ್ರವನ್ನೆಲ್ಲಾ ವಿಸ್ತಾರವಾಗಿ ವರ್ಣಿಸಲಾರಂಭಿಸಿದನು. ॥೨೪-೨೫॥

ವ್ಯಾಘ್ರಪಾದ, ಜೈಮಿನಿ ಮುಂತಾದ ಮಹರ್ಷಿಗಳೂ, ಆದಿಶೇಷನೇ ಮೊದಲಾದವರೂ, ಪ್ರಮಥಗಣವರ್ಗದವರೂ ನನ್ನ ನಾಟ್ಯವನ್ನು ಹೀಗೆ ವರ್ಣಿಸಿರುವರು. ಅದನ್ನು ಈಗ ವಿವರವಾಗಿ ನಿನಗೆ ತಿಳಿಸುವೆನು. ಸಾವಧಾನದಿಂದ ಕೇಳು ಎಂದು ಆ ಸ್ತೋತ್ರವಿಧಿಯನ್ನು ಪರಶಿವನೇ ದೇವಿಗೆ ವರ್ಣಿಸಲು ಆರಂಭಿಸಿದನು. ॥೨೬-೨೭॥

"ಮಹೇಶ್ವರನೇ, ನಾಟ್ಯಕಾಲದಲ್ಲಿ ಬ್ರಹ್ಮನ ತಲೆಯ ಬುರುಡೆಯಂತಹ ಅನೇಕ ರುಂಡಗಳು ಮಾಲಾರೂಪವಾಗಿ ನಿನ್ನ ಎದೆಯ ಮೇಲೆ ನೇತಾಡುತ್ತಿವೆ.

ಮಣಿಗಣಖಚಿತಾಂಘ್ರಿನೂಪುರೋದ್ಯತ್
ಪ್ರಭವವಿದೀಪಿತದಿಕ್ತಟ ಪ್ರಸೀದ ॥೨೮॥

ಡಮರುಕ ನಿನದೋತ್ಥಿತಪ್ರಕರ್ಷ
ಪ್ರತಿಶಬ್ದೈರ್ಬಧಿರೀಕೃತಾಖಿಲಾಮರೇಂದ್ರಾಃ ।
ಕರಚಾಲನಖೇಲನೋರ್ಧ್ವಪಾದ
ಪ್ರತಿಹತಭೂತಲನಮ್ರದಿಕ್ಸ್ಥನಾಗಾಃ ॥೨೯॥

ಪತತ್ತಾರಾಜಾಲಸ್ಫುಟಿತಗಣನಾಭೋಗ
ವಿಲಸದ್ವಿಮಾನಸ್ಥೈರ್ದೇವೈಃ ಕಲಿತಸುಮನೋವರ್ಷನಿಕರೈಃ ।
ಅದಭ್ರಾಭ್ರಸ್ಥಲಕೃತನಿವಾಸೈರ್ಮುನಿಗಣೈ
ರ್ಭವಜ್ಞಾತಂ ದೃಷ್ಟಂ ನಟನಮಖಿಲೈಃ ಸಾಯುಮುಮಯಾ ॥೩೦॥

---

ತ್ರಿಶೂಲವನ್ನು ಒಂದು ಕೈಯ್ಯಲ್ಲಿ ಹಿಡಿದಿರುವೆ. ಅದರ ಮೂಲವು ನಿನ್ನ ಬಾಹು ಮೂಲದ ವರೆಗೂ ಬಂದಿರುವುದು. ರತ್ನಮಯವಾದ ಕಾಲುಬಳೆಗಳು ಕಾಲಿನಲ್ಲಿ ರಂಜಿಸುತ್ತಿವೆ. ನಾಟ್ಯರಭಸದಿಂದ ಅದರ ಕಾಂತಿಯು ಸಕಲ ದಿಕ್ಕುಗಳನ್ನೂ ಬೆಳಗಿಸು ತ್ತಲಿದೆ. ॥೨೮॥

ನಾಟ್ಯಕಾಲದಲ್ಲಿ ಪರಶಿವನ ಕೈಯ್ಯಲ್ಲಿರುವ ಡಮರುಗಧ್ವನಿಯಿಂದ ಇಂದ್ರನೇ ಮೊದಲಾದ ಸಕಲ ದೇವತೆಗಳ ಕಿವಿಯೆಲ್ಲಾ ಕಿವುಡಾಗಿ ಹೋಗುವುವು. ಕೈಯ್ಯನ್ನು ಅಲುಗಿಸುತ್ತಾ, ಕಾಲನ್ನು ತಿರುಗಿಸುತ್ತಾ, ಒಂದುಸಾರಿ ಹಾರಿ ನಿಂತರೆ, ಅದರ ಭಾರಕ್ಕೆ ಬ್ರಹ್ಮಾಂಡವನ್ನು ಧರಿಸಿರುವ ದಿಗ್ಗಜಗಳ ಕತ್ತುಗಳು ಕುಗ್ಗಿಹೋಗುವುವು. ॥೨೯॥

ನಿನ್ನ ನಾಟ್ಯದ ವೇಗದಿಂದ ಭಗೋಳದಲ್ಲಿರುವ ನಕ್ಷತ್ರಗಳೆಲ್ಲಾ ಕೆಳಗೆ ಬೀಳುವಂತಿರುವುವು. ಹಾಗೆಯೇ ಅಂತರಿಕ್ಷಭಾಗದಲ್ಲಿ ದಿವ್ಯವಿಮಾನಾರೂಢರಾದ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸುತ್ತಾ ಆನಂದಭರಿತರಾಗಿರುವರು. ಎತ್ತರವಾದ ಸ್ಥಳದಲ್ಲಿ ನಿಂತು ಸಕಲ ಮುನಿಗಳೂ ನಿನ್ನ ನಾಟ್ಯಕಲೆಯನ್ನೂ, ನಾಟ್ಯಚಮತ್ಕಾ ರವನ್ನೂ ನೋಡುತ್ತಾ ಪಾರ್ವತಿಯೊಡನೆ ವಿಹರಿಸುವುದನ್ನು ನೋಡಿ ಆನಂದಪಡು ವರು. ॥೩೦॥



ವಾರಂ ವಾರಮಘಾಪಹಾರಿಚರಣಂ ಲೀಲಾಕೃತಾಂಡಸ್ಫುಟತ್
ತ್ರುಟ್ಯತ್ತಾರಪತಂಗದೀಪ್ತಿವಿಶಿಖೈರ್ವಿಧ್ವಸ್ತಧ್ವಾಂತಂ ಸ್ಫುಟಂ ।
ಪಾತಾಳಾಂತರಗಾಂಬಿಕೇಶನಖರೈರ್ದೃಷ್ಟ್ವಾಭಿಜಿಹ್ವೋಲ್ಲಸ
ದ್ರಕ್ತಾಂತೋತ್ಥಿತಲೋಚನೋರುಯುಗಲಂ ನಕ್ತಂ ಚರಸ್ಯಾಂತಕೃತ್ ॥೩೧॥

ಶ್ರೀಮಚ್ಚಾರುಶಶಾಂಕ ಸಂಕುಲಮಿಲದ್ಗಂಗಾತರಂಗೋಲ್ಲಸ
ಲ್ಲೀಲಾಲೋಲಜಟಾ ಸಟಾ ವಿಘುಟಿತತ್ರುಟ್ಯನ್ಮಹೋಡುಚ್ಛಟಾ ।
ಢಕ್ಕಾಡಂಬರಘಾಂಘುಮಧ್ವನಿಕೃತಾಹಂಕಾರದಿಕ್ಚಕ್ರಕಂ
ತಾಲೋದ್ಭೇದಮೃದಂಗಕಾಹಲಕರಾಪಾರಪ್ರಭೇದೈಸ್ಸುರಾಃ ॥೩೨॥

ತ್ವಾಂ ಸೇವಂತಿ ಶಿವಂ ಮುಕುಂದವಿಧಯಃ ಸೇಂದ್ರಾಃ ಪ್ರದೋಷೇ ಮುದಾ
ವೀಣಾಪಾಣಿನಖಪ್ರಘಟ್ಟನಭವೈಃ ಶಬ್ದೈಃ ಸುರಾಗೈಃ ಕ್ವಣತ್ ।

---

ಸಕಲ ಪಾಪಗಳನ್ನೂ ಪರಿಹಾರಮಾಡುವಂತಹ ಶಂಕರನ ಪಾದವು ಬ್ರಹ್ಮಾಂಡದಲ್ಲೆಲ್ಲಾ ವ್ಯಾಪಿಸಿ, ಸೂರ್ಯನಂತೆ ಪ್ರಕಾಶಮಾನವಾಗಿ ತನ್ನ ಕಿರಣ ಜಾಲಗಳಿಂದ ಕತ್ತಲೆಯನ್ನೆಲ್ಲಾ ಓಡಿಸುತ್ತಿರುವುದು. ಆ ಕತ್ತಲೆಯು ಪಾತಾಳಕ್ಕೆ ಹೋದರೂ, ಅಲ್ಲಿಯೂ ಅಂಬಿಕೇಶ್ವರನ ತೀಕ್ಷ್ಣವಾದ ಕಾಂತಿಯಿಂದ ಓಡಿಸಲ್ಪಟ್ಟು, ಕೊನೆಗೆ ರಾಕ್ಷಸರ ಕಣ್ಣುಗಳ ಮಧ್ಯಭಾಗವನ್ನು ಆಶ್ರಯಿಸುವುದು. ಒಡನೆಯೇ ಶಂಕರನ ಪಾದಕಾಂತಿಯು ಅಂತಹ ರಾಕ್ಷಸರನ್ನೆಲ್ಲಾ ಧ್ವಂಸಗೊಳಿಸುವುದು. ॥೩೧॥

ನಾಟ್ಯಕಾಲದಲ್ಲಿ ಪರಮೇಶ್ವರನ ಜಟಾಕಲಾಪವು ಅಲ್ಲಿಯೇ ಇರುವ ಚಂದ್ರನ ಚಂದ್ರಿಕೆಯಿಂದಲೂ, ಗಂಗಾನದಿಯ ಶುಭ್ರವಾದ ನೊರೆಯಿಂದಲೂ ಪ್ರಕಾಶಿತವಾಗಿ ಶಂಕರನ ನಾಟ್ಯರಭಸದಲ್ಲಿ ಅದು ದಿಗಂತದಲ್ಲೆಲ್ಲಾ ವ್ಯಾಪಿಸಿ, ನಕ್ಷತ್ರಗಳ ಕಾಂತಿಯನ್ನು ಮಂಕುಮಾಡುತ್ತಿರುವುದು. ಇಂದ್ರಾದಿ ಸಕಲ ದೇವತೆಗಳೂ, ದಿಕ್ಪತಿಗಳೂ, ಆ ನಾಟ್ಯಕ್ಕನುಸಾರವಾಗಿ ಢಕ್ಕೆ, ತಾಲ, ಮೃದಂಗ ಇವೇ ಮೊದಲಾದ ವುಗಳನ್ನು ಬಾರಿಸುತ್ತಾ ಆ ಆನಂದದಲ್ಲಿ ತಾವೂ ಭಾಗಿಗಳಾಗುತ್ತಿರುವರು. ॥೩೨॥

ಪರಶಿವನೇ, ಪ್ರತಿ ಪ್ರದೋಷಕಾಲದಲ್ಲಿಯೂ ನಿನ್ನ ಸುಂದರ ತಾಂಡವ ವನ್ನು ನೋಡಲು, ಬ್ರಹ್ಮವಿಷ್ಣ್ವಾದಿ ದೇವತೆಗಳು ಬಂದು ನೆರೆಯುವರು. ಆಗ ಸರಸ್ವ ತಿಯು ತನ್ನ ವೀಣೆಯಿಂದ ನಾಟ್ಯಕ್ಕನುಗುಣವಾದ ಸಂಗೀತಧಾರೆಯನ್ನು ಕರ್ಣಾ

ವಾಣೀತಾಲಕರಾ ಮಹೇಶ ಪರಮಾನಂದೋಲ್ಲಸತ್ತಾಂಡವಂ
ಶರ್ವಾಣ್ಯಾ ಸಹಿತಂ ಪ್ರಸೀದ ಸತತಂ ಸಂಗೀತಧಾರಾರಸೈಃ ।
ಸಂಪ್ರೀಣಾತಿ ಶಿವಂ ಪ್ರದೋಷಸಮಯೇ ಮಾಂ ಶಂಕರಂ ಚಾಂಬಿಕೇ
॥೩೩॥

ಜಟಾಹೀಂದುಗಂಗಾತರಂಗೋತ್ತಮಾಂಗಂ
ಲಸತ್ಪಾಣಿಪಾದೋಜ್ಜ್ವಲಚ್ಚಾರುನಾಗಂ ।
ಕೃಪಾಸ್ರಾವ್ಯಪಾಂಗೈರ್ನಿರೀಕ್ಷಂ ತಮೀಶಂ
ಹುತಾಶಂ ನದಡ್ಡಾಮರಾರಾವನಾದ್ಯತ್ಸುರಂಗಂ ॥೩೪॥

ನಂದಿಭೃಂಗಿಕೃತಮರ್ದಲಘೋಷೈ
ರ್ಗಲಝ್ಝಲ್ಲರೀಕರೈರ್ಗಣವೃಂದೈಃ ।
ತಂಡುಚಂಡಕರತಾಲಲಯೋತ್ಥೈಃ
ನರ್ತನೈರ್ಮಣಿಝುಣತ್ಕೃತಶಬ್ದೈಃ ॥೩೫॥

---

ನಂದಕರವಾಗಿ ಬಾರಿಸುವಳು. ಬ್ರಹ್ಮಾದಿಗಳು ಆ ಲಯವನ್ನು ಅನುಸರಿಸಿ ತಾಳವನ್ನು ಹಾಕುತ್ತಿರುವರು. ಎದುರಿನಲ್ಲಿ ಕುಳಿತಿರುವ ಪಾರ್ವತಿಯು ಆನಂದಪಡುವಂತೆ ಪರಶಿವನು ತನ್ನ ನಾಟ್ಯಕಲೆಯಿಂದ ಸಕಲ ದೇವತೆಗಳನ್ನೂ ಮುಗ್ಧರನ್ನಾಗಿ ಮಾಡುತ್ತಿರುವನು. ಇಂತಹ ಆನಂದಾಮೃತವನ್ನು ಪಾನಮಾಡಿಸುವ ಮಹಾ ದೇವನೇ, ನಮ್ಮನ್ನುದ್ಧರಿಸು. ॥೩೩॥

ಮಹಾದೇವನೇ, ನಿನ್ನ ಶಿರಸ್ಸು, ಜಟೆ, ಸರ್ಪ, ಚಂದ್ರ, ಗಂಗಾತರಂಗ ಇವುಗಳಿಂದ ಕೂಡಿ ತೇಜೋಮಯವಾಗಿದೆ. ಕೈಯ್ಯಲ್ಲಾದರೋ ಮಣಿಗಳಿಂದ ರಂಜಿಸುವ ಸರ್ಪಗಳು ವಿರಾಜಿಸುತ್ತಿವೆ. ಕಟಾಕ್ಷಗಳಾದರೋ ಕರುಣಾಮೃತವನ್ನು ಸುರಿಸುತ್ತಿವೆ. ನರ್ತನಕಾಲದ ಡಮರುಗಧ್ವನಿಯು ಪ್ರಪಂಚವೆಂಬ ರಂಗಸ್ಥಳವನ್ನೆಲ್ಲಾ ಧ್ವನಿಯುತವನ್ನಾಗಿ ಮಾಡುತ್ತಿರುವುದು. ॥೩೪॥

ಸ್ವಾಮಿಯೇ, ನಿನ್ನ ನಾಟ್ಯಕಾಲದಲ್ಲಿ ನಂದಿ, ಭೃಂಗಿ ಇವರಿಬ್ಬರೂ ಮದ್ದಲೆಯನ್ನು ಬಾರಿಸುತ್ತಿರುವರು. ಪ್ರಮಥಗಣಗಳೆಲ್ಲರೂ ಝಲ್ಲರೀವಾದ್ಯವನ್ನು ಹೊಡೆಯುತ್ತಿರುವರು. ತಂಡು, ಚಂಡ, ಇವರಿಬ್ಬರೂ ಮಟ್ಟಸಮವಾಗಿ ತಾಳವನ್ನು ಹಾಕುತ್ತಿರುವರು. ಅದರ ಜೊತೆಗೆ ನಿನ್ನ ಅವಯವಸಂಬಂಧಿಯಾದ ನೂಪುರಾದಿಗಳು ಇಂಪಾಗಿ ಝಣಝಣತ್ಕಾರ ಮಾಡುತ್ತಿರುವುವು. ॥೩೫॥

ಶಿಂಜಿತೈರ್ಮಧುರ ನೂಪುರಘೋಷೈ
ರ್ಮಂಡಿತಂ ಚ ನಟನಂ ಶ್ರುತಿಘೋಷಂ ।
ಶ್ರೇಷ್ಠಸ್ಸುರಾಣಾಂ ಪತಿರಘ್ನಿಯಾನಾಂ
ರೌದ್ರಂ ತವಾದ್ರಾರ್ಪ್ರಥಿತಂ ಚ ಋಕ್ಷಂ ॥೩೬॥

ತಸ್ಮಿನ್ ಪ್ರಭಾತೇ ತವ ಪಾದಸೂರ್ಯಂ
ದೃಷ್ಟ್ವಾಭಿನಂದತ್ಯಥ ಭಕ್ತಪದ್ಮಂ ।
ಅಂಬರಚರಡಂಬರವರಘೋಷಣ
ಶಶಿಭೂಷಣ ಫಣಿಕಂಕಣ ಗರಶೋಷಣ
ಸ್ಮರಮಾರಣ ಭಗವನ್ ॥೩೭॥

ಶರಣಾರುಣಚರಣಾವಿತ
ಜನನೀಕ್ಷಣ ಭಗಹಾರಣಪುರಹನ್ ।
ಕರುಣಾಕರ ಭವತಾರಣ ವರುಣಾಲಯ
ಕೃತಪಾರಣ ಮುನಿಕಾರಣ ಪರಿಪಾಲಯ ಶಿವ ಮಾಂ ॥೩೮॥

---

ನಿನ್ನ ಕಾಲಿನ ಬಳೆಯು ಮಧುರಧ್ವನಿಯನ್ನು ಬೀರುತ್ತಿರುವುದು. ನಾಟ್ಯ ಘೋಷವು ಶ್ರುತಿಮಧುರವಾಗಿರುವುದು. ಸಕಲ ದೇವತೆಗಳಿಗೂ ಪತಿಯೆನಿಸಿದ ನಿನ್ನ ರುದ್ರನಾಟ್ಯವು ಭಕ್ತರ ಶ್ರೋತ್ರಪಥವನ್ನೆಲ್ಲಾ ಆದ್ರ್ರವನ್ನಾಗಿಮಾಡುವುದಲ್ಲವೆ? ॥೩೬॥

ಮಹಾದೇವನೇ, ನಿನ್ನ ಪಾದಗಳೆಂಬ ಸೂರ್ಯದರ್ಶನದಿಂದ ಭಕ್ತರ ಮನಸ್ಸೆಂಬ ಪದ್ಮವು ಪ್ರಾತಃಕಾಲವಾದೊಡನೆಯೇ ವಿಕಾಸಗೊಳ್ಳುವುದಲ್ಲವೆ! ಅಂತರಿಕ್ಷ ಸಂಚಾರಿಗಳಾದ ಸಕಲ ದೇವತೆಗಳಿಗೂ ಘೋಷಣರೂಪವಾದ ಆಜ್ಞೆಯನ್ನು ನೀಡುವವನು ನೀನಲ್ಲವೇ? ಚಂದ್ರಶೇಖರನೆನಿಸಿ ಸರ್ಪಾಭರಣನಾಗಿ ವಿಷಭಕ್ಷಕನಾದ ಮನ್ಮಥಾರಿಯೇ, ನಿನಗೆ ನಮಸ್ಕಾರ. ಶರಣಾಗತರಿಗೆ ಅರುಣಕಿರಣನಾದ ಸೂರ್ಯನಂತೆ ತೇಜೋದಾಯಕನೂ, ದಕ್ಷಬ್ರಹ್ಮನ ಯಾಗದಲ್ಲಿ ಭಗದೇವತೆಯನ್ನು ಅಪಮಾನಗೊಳಿಸಿದ ಪುರಾರಿಯೂ ಆದ ಕರುಣಾಕರನೇ, ಸಂಸಾರದುಃಖತಾರಕನೇ, ಸಮುದ್ರವನ್ನೇ ಏಕಾಪೋಶನವಾಗಿ ತೆಗೆದುಕೊಂಡ ಅಗಸ್ತ್ಯಮಹರ್ಷಿಯಿಂದ

ತತ್ರೈವಂ ದೇವದೇವೇಶಿ ಮಾಂ ಸ್ತುವಂತಿ ಮುನೀಶ್ವರಾಃ ।
ತತ್ಕ್ಷೇತ್ರಮಹಿಮಾನಂ ತೇ ಕಥಯಾಮ್ಯಗ್ರತಶ್ಶಿವೇ ॥೩೯॥

ಗೋದಾವರ್ಯಾ ತದಾ ದೇವಿ ತಪಸ್ತಪ್ತಂ ಮಮಾಗ್ರತಃ ।
ಭಸ್ಮಾಭ್ಯಕ್ತಾ ಸದಾ ಗೌರೀ ರುದ್ರಾಕ್ಷಾವಲಿಭಾಸುರಾ ॥೪೦॥

ಪಂಚಾಕ್ಷರಪರಾ ನಿತ್ಯಂ ಮಾಂ ಧ್ಯಾಯಂತಿ ಹೃದಂಬುಜೇ ।
ಸಂವತ್ಸರಗಣಾಂಶ್ಚಕ್ರೇ ತಪಃ ಪರಮದುಷ್ಕರಂ ॥೪೧॥

ಪ್ರಸನ್ನೋಽಹಂ ತದಾ ತಸ್ಯೈ ಗೋದಾವರ್ಯೈ ತದಾಂಬಿಕೇ ।
ತ್ರಿಯಂಬಕಂ ನೀಲಕಂಠಂ ವ್ಯಾಘ್ರಚರ್ಮೋತ್ತರೀಯಕಂ ॥೪೨॥

॥ ಗೋದಾವರ್ಯುವಾಚ ॥

ನಂದಿಕೇಶಾದಿಗಣಪೈಸ್ಸಮಂತಾತ್ಪರಿವಾರಿತಂ ।
ವೃಷಾರೂಢಂ ತದಾ ಮಾಂ ಸಾ ಪ್ರಣತಾಯಾಸ್ತುವೀತ್ತದಾ ॥೪೩॥

---

ವಂದಿತನಾದ ಪರಮೇಶ್ವರನೇ, ನಿನ್ನನ್ನು ನಾವು ಮೊರೆಹೋಗುವೆವು. ನಮ್ಮನ್ನು ದ್ಧರಿಸು." ॥೩೭-೩೮॥

ದೇವಿಯೇ, ಹೀಗೆ ನನ್ನನ್ನು ಸಕಲ ಮುನೀಶ್ವರರೂ ಸರ್ವದಾ ಸ್ತುತಿಸುವರು. ಇನ್ನು ಆ ಕ್ಷೇತ್ರಮಹಿಮೆಯನ್ನು ಹೇಳುವೆನು ಕೇಳು. ಒಂದು ಸಾರಿ ಗೋದಾವರಿಯು ನನ್ನನ್ನು ಕುರಿತು ಘೋರವಾಗಿ ತಪಸ್ಸುಮಾಡಿದಳು. ಆಗ ಗೋದಾವರಿಯು ಭಸ್ಮದಿಂದ ದೇಹವನ್ನು ಅಲಂಕರಿಸಿಕೊಂಡು ರುದ್ರಾಕ್ಷಾವಳಿಗಳ ಧಾರಣೆಯಿಂದ ಶೋಭಿಸಿದಳು. ॥೩೯-೪೦॥

ಸರ್ವದಾ ತನ್ನ ಮನಸ್ಸಿನಲ್ಲಿ ಶಿವಪಂಚಾಕ್ಷರ ಮಂತ್ರವನ್ನೇ ಜಪಿಸುತ್ತಾ ಅನೇಕ ವರ್ಷಪರ್ಯಂತ ಘೋರತಪಸ್ಸನ್ನಾಚರಿಸಿದಳು. ಆಗ ನಾನು ಗೋದಾವರೀ ದೇವಿಗೆ ಪ್ರಸನ್ನನಾಗಿ ಪ್ರತ್ಯಕ್ಷನಾದೆನು. ॥೪೧-೪೨॥

ಪ್ರತ್ಯಕ್ಷವಾದ ಕಾಲದಲ್ಲಿ ನನ್ನ ಆಕಾರವು ನೇತ್ರತ್ರಯವಿಶಿಷ್ಟವಾಗಿಯೂ, ನೀಲವಾದ ಕಂಠಪ್ರದೇಶವುಳ್ಳದಾಗಿಯೂ ವ್ಯಾಘ್ರಚರ್ಮಾಂಬರಧಾರಿಯಾಗಿಯೂ ಕಂಗೊಳಿಸುತ್ತಿದ್ದಿತು. ನಂದಿಕೇಶನೇ ಮೊದಲಾದ ಸಕಲ ಗಣನಾಯಕರೂ ನಿನ್ನ

ಅನಲಾನಿಲಭಾಸ್ಕರೇಂದುವೃತ್ರೋ
ದ್ಧೃತದರ್ಪಘ್ನಮುರಘ್ನಪದ್ಮಜಾದೀನ್ ।
ಪಥನೋತ್ಪಥಿತಾನ್ ಗರಾವಧೂತಾನ್
ಸಮುರಕ್ಷತ್ತ್ರಮುಪಾಸ್ಮಹೇ ಮಹೇಶಂ ॥೪೪॥

ಪದ್ಮೋತ್ಪಲಾನಿಲಸಖೈಃ ಕೃತಚಾರುನೇತ್ರಂ
ಕುಬೇರಮಿತ್ರಂ ಹೃತದಕ್ಷಸತ್ರಂ ।
ಗೋತ್ರಾತ್ಮಜಾಮಿತ್ರಕಪಾಲಪಾತ್ರಂ
ಭಜಾಮಿ ಶಂಭುಂ ಸುಕುಮಾರಪುತ್ರಂ ॥೪೫॥

ಮಾಚುಕ್ರುಧಸ್ತ್ವಂ ಭಗವನ್ ಮಹೇಶ
ಸುರೈರ್ನ ಚಾಹ್ವಾನಮಹಂ ಕರೋಮಿ ।
ಇಮಂ ಪಶುಂ ತೇ ಸಮುಪಾಕರೋಮಿ
ಪತಿಃ ಪಶೂನಾಮಸಿ ಶಂಕರೋಸಿ ॥೪೬॥

---

ಸುತ್ತಲೂ ನೆರೆದಿದ್ದರು. ನಾನು ಎತ್ತಿನಮೇಲೆ ಕುಳಿತಿದ್ದೆನು. ಆಗ ಗೋದಾವರೀ ದೇವಿಯು ಅಂತಹ ನನ್ನನ್ನು ನೋಡಿ ನಮಸ್ಕರಿಸಿ ಹೀಗೆ ಸ್ತುತಿಸಿದಳು. ॥೪೩॥

"ಪರಮೇಶ್ವರನೇ, ಕ್ಷೀರಸಮುದ್ರಮಥನಕಾಲದಲ್ಲಿ ಹುಟ್ಟಿದ ಹಾಲಾಹಲ ವಿಷವು, ಅಗ್ನಿ, ವಾಯು, ಸೂರ್ಯ, ಚಂದ್ರ, ಇಂದ್ರ, ವಿಷ್ಣು, ಬ್ರಹ್ಮ ಮುಂತಾದವರನ್ನೆಲ್ಲಾ ಧ್ವಂಸಮಾಡತೊಡಗಿದಾಗ, ನೀನು ಅವರನ್ನೆಲ್ಲಾ ರಕ್ಷಿಸಿ ವಿಷವನ್ನು ಭಕ್ಷಿಸಿದೆಯಲ್ಲವೇ! ಮಹಾದೇವನೇ, ಅಂತಹ ನಿನ್ನನ್ನು ನಾನು ಸರ್ವದಾ ಸೇವಿಸುತ್ತಿರುವೆನು. ॥೪೪॥

ಪರಶಿವನೇ, ನಿನಗೆ ಸೂರ್ಯ, ಚಂದ್ರ, ಅಗ್ನಿ ಇವುಗಳೇ ನೇತ್ರರೂಪದಿಂದಿರುವರು. ನೀನು ಕುಬೇರನಿಗೆ ಮಿತ್ರನಾಗಿರುವೆ. ದಕ್ಷಬ್ರಹ್ಮನ ಸೊಕ್ಕನ್ನು ಯಾಗದಲ್ಲಿ ಮುರಿದಿರುವೆ. ಪಾರ್ವತಿಯ ಪ್ರಿಯಪತಿಯೆನಿಸಿ, ಬ್ರಹ್ಮಕಪಾಲವನ್ನೇ ಕೈಯ್ಯಲ್ಲಿ ಧರಿಸಿರುವೆ. ಷಣ್ಮುಖಜನಕನಾದ ಮಹಾದೇವನೇ, ಸದಾ ನಿನ್ನನ್ನೇ ಭಜಿಸುವೆನು. ॥೪೫॥

ಭಗವಂತನೇ, ನಾನು ಎಂದೂ ಯಾವ ದೇವತೆಗಳನ್ನೂ ಆಹ್ವಾನಿಸುವುದಿಲ್ಲ. ನೀನೊಬ್ಬನೇ ನನಗೆ ಶರಣನು. ಆದಕ್ಕಾಗಿ ಕೋಪಿಸಿಕೊಳ್ಳಬೇಡ. ನಾನು

ನಾದ್ಯಸ್ತ್ವನಾದ್ಯೋಽಸಿ ಸುರಾಸುರಾಣಾಂ
ವೈದ್ಯೋಽಸಿ ಸಂಸಾರರುಜಾಂ ನಿಹಂತಾ।
ಅಚ್ಛೇದ್ಯಭೇದ್ಯೋಽಸಿ ನಿರಿಂದ್ರಿಯೋಽಸಿ
ಗದ್ಯೈಸ್ತಥಾ ಪದ್ಯಗಣೈಸ್ಸ್ತುತೋಽಸಿ ॥೪೭॥

ಏವಂ ಸ್ತುತ್ವಾ ತದಾ ದೇವೀ ವರಂ ಗೋದಾವರೀನದೀ।
ಅಯಾಚಂತೀ ತದಾ ಪಾದೌ ಮದೀಯೌ ಪ್ರಣನಾಮ ಸಾ ॥೪೮॥

ತ್ವಜ್ಜಟಾಮೂಲತೋ ದೇವ ಗೌತಮಾರ್ಥಂ ವಿನಿರ್ಗತಾ।
ದೇಯೋ ವರೋ ಮೇ ಭಗವನ್ ತ್ವತ್ಕೃಪಾಗೌರವಾಚ್ಛಿವ ॥೪೯॥

ಗಂಗಾತ್ವದಂಗಸಂಗೇನ ತ್ವನ್ಮೌಳಿಕೃತಕೇತನಾ।
ತಸ್ಯಾಂ ತವ ರತಿರ್ದೇವ ಅವಿಮುಕ್ತೇ ಸ್ಥಿತಂ ತ್ವಯಾ ॥೫೦॥

ವಿಶ್ವೇಶ್ವರಮಹಾಲಿಂಗರೂಪೇಣ ತ್ವಂ ಸದಾ ಸ್ಥಿತಃ।
ನರ್ಮದಾಯಾಮಪಿ ವಿಭೋ ಲಿಂಗರೂಪೋಽಸಿ ಶಂಕರ ॥೫೧॥

---

ಕೇವಲ ಅಜ್ಞಾನಿಯಾಗಿ ಪಶುವಿನಂತಿರುವೆನು. ಪಶುಪತಿಯಾದ ನೀನು ನನ್ನನ್ನು ಪ್ರೀತಿಯಿಂದ ರಕ್ಷಿಸಬೇಕಲ್ಲವೆ! ॥೪೬॥

ಮಹಾದೇವನೇ, ಸಕಲ ಜಗತ್ತಿಗೂ ನೀನೇ ಮೊದಲನೆಯವನು. ನಿನಗೆ ಆದಿಯೆನಿಸಿದವರು ಮತ್ತಾರೂ ಇಲ್ಲ. ಸಂಸಾರದಲ್ಲಿ ಒದಗುವ ಅನೇಕ ರೋಗ ರುಜಿನಾದಿಗಳಿಗೆ ನೀನು ವೈದ್ಯನಂತಿರುವೆ. ಯಾವ ಇಂದ್ರಿಯ ವ್ಯಾಪಾರವಾಗಲಿ, ನಾಶವಾಗಲಿ, ನಾಶಕ್ಕೆ ಲಕ್ಷ್ಯವಾಗುವ ಅವಯವಗಳಾಗಲಿ ಯಾವುದೂ ನಿನ್ನಲ್ಲಿ ಇಲ್ಲ. ಗದ್ಯಪದ್ಯಾತ್ಮಕಗಳಾದ ಸ್ತುತಿವಚನಗಳಿಂದ ನೀನು ಸರ್ವದಾ ಸ್ತುತ್ಯನಾಗಿರುವೆ.॥೪೭॥

ಹೀಗೆ ಗೋದಾವರಿಯು ನಿಷ್ಕಾಮಬುದ್ಧಿಯಿಂದ ನನ್ನನ್ನು ಸ್ತುತಿಸಿ, ನನ್ನ ಪಾದಗಳಿಗೆ ವಂದಿಸುತ್ತಾ ಹೀಗೆಂದಳು. "ಮಹಾದೇವನೇ, ನೀನು ನನ್ನನ್ನು ನಿನ್ನ ಭಕ್ತನೆನಿಸಿದ ಗೌತಮಋಷಿಯ ಅನುಗ್ರಹಕ್ಕಾಗಿ ಜಟಾಮೂಲದಿಂದ ಇಲ್ಲಿಗೆ ಕಳುಹಿಸಿರುವೆಯಲ್ಲವೆ? ಹಾಗೆ ನಿನ್ನ ಕೃಪೆಗೆ ಪಾತ್ರಳಾದ ನಾನು ನಿನ್ನಲ್ಲಿ ಒಂದು ವರವನ್ನು ಬೇಡುವೆನು. ॥೪೯॥

ಮಹೇಶ್ವರನೇ, ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ಪ್ರವಹಿಸುವ ಗಂಗಾ ನದಿಯ ಮೇಲಿನ ಮಮತೆಯಿಂದ ನೀನು ಅಲ್ಲಿಯೇ ವಿಶ್ವೇಶ್ವರಲಿಂಗರೂಪದಿಂದ

ಗಂಗಾ ಮತ್ತೋಽಧಿಕಾ ವಾಪಿ ಪಾವನೀ ವಾ ಮಹೇಶ್ವರ ।
ವೃದ್ಧಗಂಗಾಹಮೇವಾದ್ಯ ಭವೇಯಂ ತ್ವತ್ಪ್ರಸಾದತಃ ॥೫೨॥

ಮದಂಬುಕಣಸಂಸ್ಪರ್ಶಾತ್ಸಾಪಿ ಪೂತತಮಾ ಭವೇತ್ ।
ತ್ವಲ್ಲಿಂಗಸೇಚನೇ ಯೋಗ್ಯಾ ಭವೇದೇವ ಮಹೇಶ್ವರ ॥೫೩॥

ಇತಿ ದೇಯೋ ವರೋ ಮೇಽದ್ಯ ತ್ರಿಯಂಬಕ ದಯಾನಿಧೇ ।
ಗೋದಾವರ್ಯಾ ತದಾ ದೇವಿ ಮತ್ತಃ ಸಂಪ್ರಾರ್ಥಿತೋ ವರಃ ॥೫೪॥

ತಸ್ಯೈ ಮಯೋಕ್ತಂ ದೇವೇಶಿ ತಚ್ಛೃಣುಷ್ವ ತ್ವಮಾದರಾತ್॥ ೫೫॥

॥ ಈಶ್ವರ ಉವಾಚ ॥

ತ್ವದಂಬುಲವಸೇಕೇನ ಗಂಗಾ ಪೂತತಮಾ ಭವೇತ್ ।
ಸರ್ವದಾ ಮಮ ಪೂಜ್ಯಾ ತ್ವಂ ತ್ವತ್ತೀರೇಽಹಂ ಸದಾ ಸ್ಥಿತಃ ॥೫೬॥

ವೃದ್ಧಗಂಗಾಸಿ ನಾಮ್ನಾ ತ್ವಂ ಭಗಿನೀ ತೇ ಕನೀಯಸೀ ।
ಗಂಗಾ ಪಾಪೌಘಶಮನೀ ತ್ವಂ ಚ ಕೈವಲ್ಯದಾ ಸದಾ ॥೫೭॥

---

ಅವಳನ್ನು ಎಡೆಬಿಡದೆ ನೆಲಸಿರುವೆ. ಹಾಗೆಯೇ ನರ್ಮದಾನದಿಯ ಮೇಲೆಯೂ ಅಭಿಮಾನವಿಟ್ಟು, ಲಿಂಗರೂಪದಲ್ಲಿ ಅಲ್ಲಿಯೇ ನೆಲಸಿರುವೆ. ॥೫೦-೫೧॥

ಆ ಗಂಗಾನದಿಯು ನನಗಿಂತಲೂ ಶ್ರೇಷ್ಠಳಾದವಳೇ? ನಿನ್ನ ಅನುಗ್ರಹದಿಂದ ನಾನೂ ವೃದ್ಧಗಂಗೆಯೆನಿಸಿರುವೆನಲ್ಲವೆ? ನನ್ನ ಜಲಸ್ಪರ್ಶದಿಂದಲೇ ಜನರು ಪವಿತ್ರರೆನಿಸುವರಲ್ಲವೆ? ನಿನ್ನ ಶಿವಲಿಂಗಕ್ಕೆ ಅಭಿಷೇಕಮಾಡುವ ಪವಿತ್ರತೀರ್ಥಗಳಲ್ಲಿ ನಾನೂ ಒಬ್ಬಳಾಗಿಲ್ಲವೇ? ॥೫೨-೫೩॥

ಆದ್ದರಿಂದ ನೀನು ಸರ್ವದಾ ನನ್ನಲ್ಲಿಯೇ ನೆಲಸಿ ನಾನು ಎಲ್ಲರಿಗಿಂತ ಪವಿತ್ರತಮಳು ಎನ್ನಿಸುವಂತಹ ವರವನ್ನು ಕೊಡು ಎಂದು ವಿಧವಿಧವಾಗಿ ಪ್ರಾರ್ಥಿಸಲು, ಪಾರ್ವತಿಯೇ, ಅವಳ ಇಷ್ಟದಂತೆ ನಾನು ಹಾಗೆಯೇ ವರವಿತ್ತಿರುವೆನು. ॥೫೪-೫೫॥

ನಿನ್ನ ಜಲಸ್ಪರ್ಶದಿಂದ ಗಂಗಾನದಿಯು ಮತ್ತೂ ಪರಿಶುದ್ಧವಾಗಲಿ. ನಿನ್ನನ್ನು ನಾನು ಪೂಜ್ಯಳೆಂದು ಭಾವಿಸಿ, ಸರ್ವದಾ ನಿನ್ನ ತೀರದಲ್ಲಿಯೇ ನೆಲಸಿರುವೆನು. ನಿನಗೆ ವೃದ್ಧಗಂಗೆಯೆಂಬ ಹೆಸರು ಶಾಶ್ವತವಾಗಿರಲಿ. ಸಕಲ ಪಾಪಕರ್ಮಗಳನ್ನೆಲ್ಲಾ

ತ್ವತ್ಪಾಥೋಲವಸೇಕೇನ ಗಂಗಾ ಹೃಷ್ಟತರಾ ಭವೇತ್ ।
ಗಂಗಾ ಗೋದಾವರೀ ಮಿಶ್ರಂ ಜಲಂ ಮಲ್ಲಿಂಗಮಸ್ತಕೇ ॥೫೮॥

ಯೋ ದದಾತಿ ನರೋ ಭಕ್ತ್ಯಾ ತಸ್ಮೈ ಮುಕ್ತಿಂ ದದಾಮ್ಯಹಂ ।
ತ್ರಿಯಂಬಕ ಜಟಾಜೂಟತಟಿನೀ ಪಾಪಘಟ್ಟಿನೀ ॥೫೯॥

ತ್ವಯಿ ಸ್ನಾತ್ವಾ ಪೂತತನೋ ಭವಿಷ್ಯತಿ ನ ಸಂಶಯಃ ।
ತ್ವಜ್ಜಲೈರ್ಯಃ ಪಿತ್ರೂನ್ ದೇವಿ ಸಂತರ್ಪಯತಿ ಪರ್ವಣಿ ॥೬೦॥

ತಸ್ಯ ಷೋಡಶ ವರ್ಷಾಣಿ ಪಿತರಸ್ತೃಪ್ತಿಮಾಸತೇ ।
ಕಿಂ ಪುನಃ ಶ್ರಾದ್ಧಕರಣಾತ್ತ್ವತ್ತೀರೇ ಪಾವನೇ ಶುಭೇ ॥೬೧॥

ಗೋದಾವರ್ಯಾಂ ಸಕೃತ್ ಸ್ನಾತ್ವಾ ದೃಷ್ಟ್ವಾ ಶ್ರೀತ್ರ್ಯಂಬಕೇಶ್ವರಂ ।
ಸರ್ವಪಾಪೈರ್ವಿಮುಚ್ಯೇತ ನಾತ್ರಕಾರ್ಯಾ ವಿಚಾರಣಾ ॥೬೨॥

---

ನಾಶಮಾಡುವ ದೇವಗಂಗೆಯು ನಿನಗೆ ತಂಗಿಯಾಗಿರಲಿ. ಅವಳಂತೆಯೇ ನೀನು ಭಕ್ತರಿಗೆ ಮೋಕ್ಷಪ್ರದಳಾಗಿ ವರ್ತಿಸು. ॥೫೬-೫೭॥

ನಿನ್ನ ಜಲಸಮಾಗಮದಿಂದ ಗಂಗಾನದಿಯು ಸಂತುಷ್ಟಳಾಗುವಳು. ಗಂಗಾ ಮಿಶ್ರಿತವಾದ ಗೋದಾವರೀ ಜಲಾಭಿಷೇಕದಿಂದ ನಾನು ಸುಪ್ರೀತನಾಗಿ, ಅಂತಹವರಿಗೆ ಸ್ಥಿರವಾದ ಮುಕ್ತಿಯನ್ನು ಅನುಗ್ರಹಿಸುವೆನು. ನೀನು ತ್ರ್ಯಂಬಕೇಶ್ವರನ ಜಟಾ ಜೂಟದಿಂದ ಉದ್ಭವಿಸಿ, ಸಕಲರ ಪಾಪರಾಶಿಯನ್ನೆಲ್ಲಾ ನಿರ್ಮೂಲಮಾಡುವವಳಾ ಗಿರುವೆ. ॥೫೮-೫೯॥

ನಿನ್ನಲ್ಲಿ ಸ್ನಾನಮಾಡಿದವನು ಅತ್ಯಂತ ಪರಿಶುದ್ಧನೆನಿಸುವನು. ನಿನ್ನ ಜಲದಿಂದ ಯಾರು ಪಿತೃತರ್ಪಣಮಾಡುವರೋ, ಅವರ ಷೋಡಶಪಿತೃಗಳು ಅದರಿಂದ ಹದಿನಾರುವರ್ಷಪರ್ಯಂತ ತೃಪ್ತಿಯನ್ನು ಹೊಂದುವರು. ಇನ್ನು ನಿನ್ನ ತೀರದಲ್ಲಿ ಶ್ರಾದ್ಧಮಾಡುವುದರಿಂದ ಅವರಿಗೆ ಬರುವ ಸುಕೃತವನ್ನು ಏನೆಂದು ಹೇಳಲಿ ? ॥೬೦-೬೧॥

ಗೋದಾವರೀಸ್ನಾನ, ತ್ರ್ಯಂಬಕೇಶ್ವರದರ್ಶನ ಇವೆರಡರಿಂದ ನನ್ನ ಭಕ್ತರ ಪಾಪವೆಲ್ಲಾ ನಾಶವಾಗುವುದು. ಗುರುವು ಸಿಂಹರಾಶಿಯಲ್ಲಿ ಸಂಚರಿಸುವಾಗ, ತಮ್ಮ

ಬ್ರಹ್ಮವಿಷ್ಣ್ವಾದಯೋ ದೇವಾ ಮುನಯಶ್ಚಾಪಿ ತಾಪಸಾಃ ।
ಸಿಂಹಸಂಸ್ಥೇ ದೇವಗುರೌ ತಸ್ಯಾಂ ಸ್ನಾತಿ ಚ ಭಕ್ತಿತಃ ॥೬೩॥

ಬ್ರಹ್ಮಹತ್ಯಾಸುರಾಪಾನಸ್ವರ್ಣಸ್ತೇಯಾದಿಪಾತಕೈಃ ।
ವಿಮುಚ್ಯೇತ ನರಃ ಸದ್ಯೋ ಗೋದಾವರ್ಯವಗಾಹನಾತ್ ॥೬೪॥

ಶ್ರೀಮತ್ತ್ರಿಯಂಬಕಂ ದೃಷ್ಟ್ವಾ ಶತಕೃಚ್ಛ್ರಫಲಂ ಲಭೇತ್ ।
ಅಶೀತಿಕೃಚ್ಛ್ರಂ ಸ್ನಾನಂ ತತ್ ಗೋದಾವರ್ಯಾ ವರಾನನೇ ॥೬೫॥

ಸಿಂಹಸಂಸ್ಥೇ ದೇವಗುರೌ ಮಹಾದಾನಫಲಾದಿಕಂ ।
ಸಂಪ್ರಾಪ್ನೋತಿ ನರೋ ಗೌರಿ ಗೋದಾವರ್ಯಘಮರ್ಷಣಾತ್ ॥೬೬॥

ರುದ್ರಸೂಕ್ತೈರ್ಮಹಾದೇವಮಭಿಷಿಚ್ಯ ತ್ರಿಯಂಬಕಂ ।
ಶತಗೋದಾನಜಂ ಪುಣ್ಯಂ ಲಭತೇ ನಾತ್ರ ಸಂಶಯಃ ॥೬೭॥

ಗೋದಾವರೀಜಲೈಶ್ಶುದ್ಧೈಃ ಸಮಂ ಕ್ಷೀರಾಭಿಷೇಚನೈಃ ।
ಯಸ್ತು ಬಿಲ್ವದಲೈಃ ಪೂಜ್ಯಂ ತ್ರ್ಯಂಬಕೇಶಂ ಹಿ ಪೂಜಯೇತ್॥೬೮॥

---

ಪಾಪನಿವಾರಣೆಗಾಗಿ, ಬ್ರಹ್ಮ, ವಿಷ್ಣುವೇ ಮೊದಲಾದ ಸಕಲ ದೇವತೆಗಳೂ ಋಷಿಗಳೂ ನಿನ್ನಲ್ಲಿಗೆ ಸ್ನಾನಮಾಡಲು ಬರುವರು. ॥೬೨-೬೩॥

ಒಂದುಸಾರಿ ಈ ಗೋದಾವರಿಯಲ್ಲಿ ಸ್ನಾನಮಾಡಿದ ಮಾತ್ರಕ್ಕೇ, ಬ್ರಹ್ಮಹನನ, ಸುರಾಪಾನ, ಸುವರ್ಣಚೌರ್ಯ ಮುಂತಾದ ಪಾಪಕರ್ಮಗಳಿಂದ ಒದಗುವ ಮಹಾಮಹಾ ಪಾತಕಗಳು ನಿವಾರಣೆಯಾಗುವುವು. ಹಾಗೆಯೇ ತ್ರಿಯಂಬಕೇಶ್ವರನ ದರ್ಶನದಿಂದ ನೂರು ಕೃಚ್ಛ್ರಾಚರಣೆ ಮಾಡಿದಷ್ಟು ಪುಣ್ಯವು ಲಭಿಸುವುದು. ಗೋದಾವರೀಸ್ನಾನದಿಂದ ಎಂಬತ್ತು ಕೃಚ್ಛ್ರಾಚರಣೆಯ ಫಲವು ದೊರಕುವುದು. ॥೬೪-೬೫॥

ಗುರುವು ಸಿಂಹರಾಶಿಸ್ಥನಾದಾಗ ಗೋದಾವರಿಯಲ್ಲಿ ಸ್ನಾನಮಾಡುವುದರಿಂದ ಮಹಾದಾನಗಳ ಫಲವನ್ನೆಲ್ಲಾ ಏಕಕಾಲದಲ್ಲಿ ಪಡೆಯಬಹುದು. ಗೋದಾವರೀ ಜಲದಿಂದ ತ್ರ್ಯಂಬಕೇಶ್ವರನಿಗೆ ಅಭಿಷೇಕಮಾಡಿದರೆ, ನೂರು ಗೋದಾನಗಳ ಫಲವು ಲಭಿಸುವುದು. ಇದರಲ್ಲಿ ಸಂಶಯವಿಲ್ಲ. ॥೬೬-೬೭॥

ತ್ರ್ಯಂಬಕೇಶ್ವರಲಿಂಗವನ್ನು ಗೋದಾವರೀಜಲದಿಂದಲೂ, ಕ್ಷೀರದಿಂದಲೂ

ತೇನ ಸರ್ವೇ ಕೃತಾ ಯಜ್ಞಾಸ್ತೇನ ಸರ್ವಮನುಷ್ಠಿತಂ ।
ನೈವೇದ್ಯಂ ಯಃ ಶಿವೇ ದತ್ತಂ ತದನಂತಫಲಂ ಸ್ಮೃತಂ ॥೬೯॥

ಇತ್ಥಂ ಮತ್ತೋ ವರಂ ಲಬ್ಧ್ವಾಗತಾ ಸಾ ಸಾಗರಂಗಮಾ ।
ಯಃ ಶೃಣೋತಿ ಸಕೃದ್ಭಕ್ತ್ಯಾ ತ್ರ್ಯಂಬಕಾಖ್ಯಾನಮುತ್ತಮಂ ॥೭೦॥

ತಸ್ಯ ಪಾಪಾನಿ ನಶ್ಯಂತಿ ಬಹುಜನ್ಮಾರ್ಜಿತಾನ್ಯುಮೇ ॥೭೧॥

ರೇ ಚಿತ್ತಭ್ರಮರಾಶು ಶಂಕರಮಹೇಶಾನೇಶಪಾದಾಂಬುಜೇ
ತದ್ಭಕ್ತ್ಯಾಖ್ಯಮರಂದಸಾರಮಸಕೃತ್ಪೇಪೀಯತಾಂ ಕೇವಲಂ ।
ವಿಶ್ರಾಂತಃ ಕ್ಷಣಕಂ ಷಡಿಂದ್ರಿಯಪದೈಃ ಧೈರ್ಯೋರುಶಾಖಾಂದಧ
ನ್ಮಾಗಚ್ಛ ತ್ವಮಗಂಧಗಂಧಫಲಿಕಂ ಕಾಮ್ಯೈಕದುಷ್ಕೇತಕಂ ॥೭೨॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ತ್ರ್ಯಂಬಕೇಶ
ಗೋದಾವರೀ ಮಹಿಮಾನಿರೂಪಣಂ ನಾಮ ದ್ವಾವಿಂಶೋಽಧ್ಯಾಯಃ

---

ಅಭಿಷೇಕಮಾಡಿ, ಬಿಲ್ವದಳಗಳಿಂದ ಪೂಜಿಸಿದವರಿಗೆ ಸರ್ವಯಜ್ಞದ ಫಲವೂ ಲಭಿಸುವುದು. ಭಕ್ತಿಯಿಂದ ನೈವೇದ್ಯಮಾಡಿದವರಿಗಂತೂ ಅನಂತವಾದ ಫಲವು ದೊರಕುವುದು. ॥೬೮-೬೯॥

ಪಾರ್ವತಿಯೇ, ಹೀಗೆ ನಾನು ಗೋದಾವರೀದೇವಿಗೆ ವರಕೊಟ್ಟು ಸಮುದ್ರಕ್ಕೆ ಕಳುಹಿಸಿದೆನು. ಈ ತ್ರ್ಯಂಬಕಾಖ್ಯಾನವನ್ನು ಭಕ್ತಿಯಿಂದ ಕೇಳಿದವರ ಬಹುಜನ್ಮಾರ್ಜಿತಗಳಾದ ಸಕಲ ಪಾಪಗಳೂ ನಿವಾರಣೆಯಾಗುತ್ತವೆ ಎಂದು ಶಂಕರನು ದೇವಿಗೆ ಹೇಳಿದನು. ॥೭೦-೭೧॥

ಎಲೈ ಮನಸ್ಸೆಂಬ ಭ್ರಮರವೇ, ನೀನು ಸರ್ವದಾ ಶಂಕರನ ಪಾದಕಮಲಗಳ ಮಕರಂದವನ್ನೇ ಆಸ್ವಾದನಮಾಡುತ್ತಾ, ಅದರ ಸುಖಾನುಭವದಲ್ಲಿಯೇ ಮಗ್ನನಾಗಿರು. ಅಲ್ಲಿಗೆ ಹೋಗಲು ಮೊದಲು ಷಡಿಂದ್ರಿಯಗಳೆಂಬ ಆ ನಿನ್ನ ಆರುಕಾಲುಗಳಿಂದ ಧೈರ್ಯವೆಂಬ ಒಂದು ದೊಡ್ಡ ಕೊಂಬೆಯನ್ನು ಆಶ್ರಯಿಸಿ, ಅಲ್ಲಿಯೇ ಕ್ಷಣಕಾಲ ಸ್ಥಿರವಾಗಿದ್ದು, ಗಂಧರಹಿತವಾದ ಮತ್ತು ಫಲವಿಲ್ಲದ ಯಾವ ದೇವತಾ

ರಾಧನೆಯನ್ನೂ ಆಶ್ರಯಿಸದೆ, ಸರ್ವದಾ ಶಂಕರಪಾದಧ್ಯಾನದಲ್ಲಿಯೇ ವರ್ತಿಸು. ಅದೇ ನಿನ್ನ ನಿರತಿಶಯವಾದ ಮುಕ್ತಿಪದವಿಗೆ ಹೆದ್ದಾರಿಯೆಂದು ನಂಬು ಎಂದು ಸೂತಮಹರ್ಷಿಗಳು ನುಡಿಯುತ್ತಾ ಅಲ್ಲಿ ನೆರೆದಿದ್ದ ಋಷಿವರ್ಗಕ್ಕೆ ಶಿವಪ್ರಭಾವ ವನ್ನು ಬೋಧಿಸಿದರೆಂಬಲ್ಲಿಗೆ ||೭೨||

ಶ್ರೀಶಿವರಹಸ್ಯದ ಭರ್ಗನಾಮಕವಾದ ಪಂಚಮಾಂಶದಲ್ಲಿ ತ್ರ್ಯಂಬಕೇಶ್ವರ ಮತ್ತು ಗೋದಾವರೀಮಹಿಮಾ ವರ್ಣನೆಯೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಪಂಚಮಾಂಶೇ

## ತ್ರಯೋವಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಮಮಾಸ್ತಿ ದೇವಿ ಸುಭಗೇ ಕ್ಷೇತ್ರಂ ಗೋಕರ್ಣಸಂಜ್ಞಿತಂ ।
ಗೋಕರ್ಣೇಶಂ ಸಮಾರಾಧ್ಯ ವಿಮುಕ್ತಾ ಬಹವೋ ಜನಾಃ ॥೧॥

ಪಶ್ಚಿಮೇ ಸಾಗರೋಪಾಂತೇ ತತ್ಕ್ಷೇತ್ರಂ ಮಮ ಕಾಮದಂ ।
ಭೋಗಮೋಕ್ಷಪ್ರದಂ ದೇವಿ ಸರ್ವಪಾಪವಿನಾಶಕಂ ॥೨॥

ತತ್ರೈವ ಬ್ರಹ್ಮವಿಷ್ಣ್ವಾದ್ಯಾ ಮುನಯಃ ಕಾಶ್ಯಪಾದಯಃ ।
ಪುಲಸ್ತ್ಯಭಾರ್ಗವಾದ್ಯಾಶ್ಚ ವಿಶ್ವಾಮಿತ್ರಪರಾಶರಾಃ ॥೩॥

ಪೌಲಸ್ತ್ಯಶ್ಚಾಪಿ ತತ್ರೈವ ರಾವಣಾದ್ಯಾ ಮಹೌಜಸಃ ।
ಗಂಧರ್ವಾಃ ಕಿನ್ನರಾ ಯಕ್ಷಾ ನಾಗಾ ವಿದ್ಯಾಧರಾ ಗಣಾಃ ॥೪॥

---

## ಇಪ್ಪತ್ತುಮೂರನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಗೆ ಗೋಕರ್ಣೇಶ್ವರಮಹಿಮೆಯನ್ನು ವಿವರಿಸುತ್ತಾ ಹೀಗೆಂದನು. ಎಲೌ ದೇವಿಯೇ, ಪಶ್ಚಿಮಸಮುದ್ರದ ಸಮೀಪದಲ್ಲಿ ಗೋಕರ್ಣವೆಂಬ ಶಿವಕ್ಷೇತ್ರವೊಂದಿರುವುದು. ಅದು ನನಗೆ ಬಹುಪ್ರಿಯವಾದುದು. ಅನೇಕರು ಆ ಗೋಕರ್ಣೇಶ್ವರನನ್ನು ಆರಾಧಿಸಿ ಸ್ಥಿರಮುಕ್ತಿಯನ್ನು ಸಂಪಾದಿಸಿರುವರು. ಅಲ್ಲದೆ ಅದು ಐಹಿಕ ಭೋಗಾದಿಗಳನ್ನೂ ಒದಗಿಸುವುದಲ್ಲದೆ ಸಕಲ ಪಾಪ ನಿವಾರಕವೂ ಎನಿಸಿದೆ. ॥೧-೨॥

ಬ್ರಹ್ಮವಿಷ್ಣ್ವಾದಿ ದೇವತೆಗಳೂ, ಕಶ್ಯಪನೇ ಮೊದಲಾದ ಮಹರ್ಷಿಗಳೂ, ಪುಲಸ್ತ್ಯ, ಭೃಗು ಇವರ ವಂಶದವರೂ, ವಿಶ್ವಾಮಿತ್ರ ಪರಾಶರಾದಿ ಮಹರ್ಷಿಗಳೂ,

ನಂದಿಭೃಂಗಿಪ್ರಭೃತಯೋ ನಾರದಾದ್ಯಾ ಮುನೀಶ್ವರಾಃ ।
ದೈತ್ಯನಾಥಾಶ್ಚ ತತ್ರೈವ ದೇವಾಮಿತಾಬಲಾಭವನ್ ॥೫॥

ಅನ್ಯೇ ಸುರಾಸುರಾಸ್ಸರ್ವೇ ಮುನಯಸ್ತಾಪಸಾಸ್ತಥಾ ।
ಗೋಕರ್ಣೇಶಂ ಸಮಾರಾಧ್ಯ ಲೇಭಿರೇ ತಪಸಃ ಫಲಂ ॥೬॥

ಗೋಕರ್ಣೇಶಮಹೋ ದೃಷ್ಟ್ವಾ ಮಹಾಬಲಮನುತ್ತಮಂ ।
ತತ್ರೈವ ಭಾರ್ಗವೋ ರಾಮೋ ರೇಣುಕಾತನಯಶ್ಶಿವೇ ॥೭॥

ನಿಃಕ್ಷತ್ರಿಯಕೃತಂ ಪಾಪಂ ತ್ಯಕ್ತ್ವಾ ಮಾಂ ಶರಣಂಗತಃ ।
ವಾಮದೇವೋಽಪಿ ಸಾರ್ವಾತ್ಮ್ಯಂ ಯತ್ರ ಪ್ರಾಪ ಮಹಾಬಲೇ ॥೮॥

ಗೋಕರ್ಣೇಶಂ ಸಮಾರಾಧ್ಯ ಮುನಯೋ ಭಕ್ತಿತತ್ಪರಾಃ ।
ಜ್ಞಾನಂ ವೇದಾಂತವಾಕ್ಯೋತ್ಥಂ ಲೇಭಿರೇ ಮುಕ್ತಿದಾಯಕಂ ॥೯॥

ಗೋಕರ್ಣಸಂಜ್ಞಕಂ ಲಿಂಗಂ ದರ್ಶನಾನ್ಮುಕ್ತಿದಾಯಕಂ ।
ಸಂಸಾರಪಾಶಬದ್ಧಾನಾಂ ಮೋಚಕಂ ಭವಭೇಷಜಂ ॥೧೦॥

---

ಇನ್ನೂ ರಾವಣ, ಕುಬೇರ, ಮುಂತಾದವರೂ, ಗಂಧರ್ವ, ಕಿನ್ನರ, ಯಕ್ಷ, ನಾಗ, ವಿದ್ಯಾಧರರೇ ಮೊದಲಾದ ದೇವಯೋನಿಗಳೂ ಈ ಕ್ಷೇತ್ರದಲ್ಲಿ ನನ್ನನ್ನು ಪೂಜಿಸಿರುವರು. ॥೩-೪॥

ನಂದಿ ಭೃಂಗಿಯೇ ಮೊದಲಾದ ಗಣನಾಯಕರೂ, ನಾರದಾದಿಗಳೂ, ದೇವ ರಾಕ್ಷಸರಲ್ಲಿ ಶ್ರೇಷ್ಠರಾದವರೂ, ಇನ್ನೂ ಅನೇಕ ದೇವರ್ಷಿಗಳೂ ರಾಕ್ಷಸರೂ ಗೋಕರ್ಣೇಶ್ವರನನ್ನು ಪೂಜಿಸಿ, ತಮ್ಮ ತಪಃ ಫಲವನ್ನು ಸಂಪಾದಿಸಿದರು. ॥೫-೬॥

ಮಹಾಬಲಶಾಲಿಯಾದ ರೇಣುಕಾಪುತ್ರನೆನಿಸಿದ ಪರಶುರಾಮನು, ತಾನು ಮಾಡಿದ ಕ್ಷತ್ರಿಯ ಸಂಹಾರರೂಪವಾದ ಮಹಾಪಾಪವನ್ನು ಕಳೆದುಕೊಂಡುದು ಈ ಗೋಕರ್ಣೇಶ್ವರನನ್ನು ಮೊರೆಹೊಕ್ಕೇ. ಹಾಗೆಯೇ ವಾಮದೇವಮಹರ್ಷಿಯೂ ಸಹ ಮಹಾಬಲೇಶ್ವರನನ್ನು ಆಶ್ರಯಿಸಿಯೇ ತಾನು ಸರ್ವವ್ಯಾಪಿಯಾಗುವ ಶಕ್ತಿಯನ್ನು ಸಂಪಾದಿಸಿದನು. ॥೭-೮॥

ಅನೇಕ ಮಹರ್ಷಿಗಳು ಗೋಕರ್ಣೇಶ್ವರನನ್ನು ಆರಾಧಿಸಿ, ಸಂದೇಹರಹಿತವಾದ ವೇದವೇದಾಂತಗಳ ಅರಿವನ್ನು ಸಂಪಾದಿಸಿ, ಅದರಿಂದ ಮುಕ್ತರೆನಿಸಿದರು. ಅಂತೂ

ಶಕ್ರೋ ದೂರ್ವಾಸಸಾ ಶಪ್ತೋ ನಿಶ್ರೀಕಶ್ಚಾಭವತ್ಪುರಾ ।
ಅತ್ರ ಗೋಕರ್ಣಮಾರಾಧ್ಯ ಮಹತೀಂ ಶ್ರಿಯಮಾಪ್ತವಾನ್ ॥೧೧॥

ಗೋಕರ್ಣೇ ಸಾಗರೈಃ ಪೂಜಾ ಕೃತಾ ಭಕ್ತಿಪುರಸ್ಸರಂ ।
ಅತ್ರ ಸಂತಿ ಮಹಾಶೈವಾಃ ಸದಾ ಭಸ್ಮಾಂಗಪಾಂಡುರಾಃ ॥೧೨॥

ರುದ್ರಾಕ್ಷಮಾಲಾಭರಣಾ ರುದ್ರಾವರ್ತನತತ್ಪರಾಃ ।
ಪಂಚಾಕ್ಷರಪರಾ ನಿತ್ಯಂ ಮಮ ಲಿಂಗಾರ್ಚನಾದರಾಃ ॥೧೩॥

ಭವಭಕ್ತಾರ್ಚನಪರಾ ಮನ್ತ್ರಾನುಜಪತತ್ಪರಾಃ ।
ವೇದವೇದಾಂತತತ್ತ್ವಜ್ಞಾ ಯತಯಶ್ಚ ತಥಾಂಬಿಕೇ ॥೧೪॥

ಗೃಹಸ್ಥಾ ಯತಯಶ್ಚೈವ ವನಸ್ಥಾಶ್ಚ ತಥಾ ಪರೇ ।
ವರ್ಣಿನೋಽಪಿ ತಥಾ ಗೌರಿ ಫಲಾಂಬುಫಲಭೋಜಿನಃ ॥೧೫॥

ಗೋಕರ್ಣನಿಲಯಂ ಶಂಭುಮಪರ್ಣಾಪತಿಮೀಶ್ವರಂ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ನಿತ್ಯಂ ನೈವೇದ್ಯಭೋಜಿನಃ ॥೧೬॥

---

ಗೋಕರ್ಣೇಶ್ವರನ ಆರಾಧನೆಯಿಂದಲೂ, ಭಕ್ತಿಪೂರ್ವಕವಾದ ದರ್ಶನದಿಂದಲೂ, ಸಂಸಾರದುಃಖಗಳು ನಾಶವಾಗಿ ತನ್ಮೂಲಕ ಸುಖಶಾಂತಿಗಳು ದೊರಕುವುವು. ॥೧೦॥

ದೂರ್ವಾಸನಿಂದ ಶಾಪಹೊಂದಿದ ಇಂದ್ರನು ಕೇವಲ ದರಿದ್ರನಂತಾಗಿ ಕೊನೆಗೆ ಗೋಕರ್ಣಕ್ಕೆ ಬಂದು ಅನಂತರ ಸಂಪೂರ್ಣವಾದ ಐಶ್ವರ್ಯವನ್ನು ಹೊಂದಿದನು. ಹಾಗೆಯೇ ಸಮಸ್ತ ಸಾಗರಗಳೂ, ಭಕ್ತಿಪುರಸ್ಸರವಾಗಿ ಗೋಕರ್ಣೇಶ್ವರನನ್ನು ವಂದಿಸಿ, ।ಪಾವಿತ್ರ್ಯವನ್ನು ಸಂಪಾದಿಸಿದರು. ಮಹಾಶೈವರನೇಕರು ಭಸ್ಮದಿಂದ ಭೂಷಿತರಾದ ದೇಹವುಳ್ಳವರಾಗಿ ಇಂದಿಗೂ ಶಿವಲಿಂಗವನ್ನು ಪೂಜಿಸುತ್ತಿರುವರು. ॥೧೧-೧೨॥

ಅವರೆಲ್ಲರೂ ರುದ್ರಾಕ್ಷಮಾಲೆಗಳನ್ನು ಧರಿಸಿ, ಶ್ರೀರುದ್ರಪಾರಾಯಣ ಮಾಡುತ್ತಾ, ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ, ಈಶ್ವರಭಕ್ತರನ್ನು ಸೇವಿಸುತ್ತಾ, ವೇದವೇದಾಂತತತ್ತ್ವಗಳನ್ನೂ ಮನನಮಾಡುತ್ತಾ, ಸಂನ್ಯಾಸಧರ್ಮದಿಂದ ಅಲ್ಲಿ ವರ್ತಿಸುತ್ತಿರುವರು. ॥೧೩-೧೪॥

ಅಲ್ಲಿ ಗೃಹಸ್ಥರೂ, ಯತಿಗಳೂ, ವಾನಪ್ರಸ್ಥಾಶ್ರಮಿಗಳೂ ಬ್ರಹ್ಮಚಾರಿಗಳೂ,

ಅಗಸ್ತ್ಯೋಽಪಿ ಸದಾ ಭಕ್ತ್ಯಾ ನಿತ್ಯಂ ಮಾಂ ಸ್ತೌತಿ ನಿತ್ಯಶಃ ।
ರುದ್ರಸೂಕ್ತೈರ್ಮಹಾದೇವಿ ಬಿಲ್ವೈಃ ಪದ್ಮೈಃ ಸಮರ್ಚ್ಯ ಚ ॥೧೭॥

ವೇದಾಸ್ಸಾಂಗೋಪನಿಷದೋ ಮೂರ್ತಿಮಂತಸ್ಸದಾಂಬಿಕೇ ।
ಸೇವಾವಸರಮಾಲೋಕ್ಯ ಮಹಾಬಲಮುಪಾಸತೇ ॥೧೮॥

ಬ್ರಹ್ಮಾ ಚತುರ್ಭಿರ್ವದನೈಶ್ಚಾತುರ್ಹೋತ್ರೈಃ ಸ್ತುವನ್ಸದಾ ।
ಷಣ್ಮುಖೋಽಪಿ ಸದಾ ಭಕ್ತ್ಯಾ ಮಾಮುಪಾಂಸ್ತೇಂಬಿಕಾಸುತಃ ॥೧೯॥

ಗಣೇಶೋಽಪಿ ಸದಾ ಗೌರಿ ಬಿಲ್ವೈರಭ್ಯರ್ಚಯತ್ಸದಾ ।
ಶೇಷಃ ಪ್ರತ್ಯಹಮಾಗತ್ಯ ಪಾತಾಳವಿವರಾದುಮೇ ॥೨೦॥

ಸ್ವಫಣಾಮಣಿಮಾಣಿಕ್ಯೈರ್ಬಿಲ್ವೈಃ ಸಂಪೂಜಯೇತ್ಸದಾ ।
ಸಹಸ್ರವದನೈರೀಶಂ ನಾಮಭಿಶ್ಚ ಸಹಸ್ರಶಃ ॥೨೧॥

ಕೋಮಲೈರ್ಬಿಲ್ವಪತ್ರೈಶ್ಚ ಕಮಲೈಃ ಪೂಜಯತ್ಯಹೋ ।
ದಿಗ್ಗಜಾಶ್ಚ ಸದಾ ಗೌರಿ ಸ್ವಶುಂಡಾವಲಯೋದ್ಧೃತೈಃ ॥೨೨॥

---

ಸರ್ವದಾ ನನ್ನನ್ನೇ ಧ್ಯಾನಮಾಡುತ್ತಾ ಗೋಕರ್ಣೇಶ್ವರನನ್ನು ಬಿಲ್ವಪತ್ರಾದಿಗಳಿಂದ ಅರ್ಚಿಸಿ ನೈವೇದ್ಯಶೇಷವನ್ನು ಭುಂಜಿಸಿ ಸುಖವಾಗಿರುವರು. ॥೧೫-೧೬॥

ಅಗಸ್ತ್ಯಮಹರ್ಷಿಯೂ ಕೂಡ ಸರ್ವದಾ ಅಲ್ಲಿಯೇ ನೆಲಸಿ, ರುದ್ರಸೂಕ್ತಾದಿಗಳಿಂದ ನನ್ನನ್ನು ಧ್ಯಾನಿಸುತ್ತಾ, ಬಿಲ್ವಾದಿಗಳಿಂದ ನನ್ನನ್ನು ಅರ್ಚಿಸಿ ಧನ್ಯನಾಗುತ್ತಿರುವನು. ಹಾಗೆಯೇ ವೇದವೇದಾಂಗಗಳೆಲ್ಲವೂ ಮೂರ್ತಿಮತ್ತಾಗಿ ಅಲ್ಲಿಗೆ ಬಂದು ಸಂದರ್ಭಾನುಸಾರವಾಗಿ ನನ್ನನ್ನೇ ಪೂಜಿಸುತ್ತಿರುವುವು. ॥೧೭-೧೮॥

ಬ್ರಹ್ಮನು ತನ್ನ ಚತುರ್ವದನಗಳಿಂದಲೂ ನನ್ನನ್ನು ಸ್ತುತಿಸುತ್ತಾ ಪೂಜಿಸುವನು. ಸ್ಕಂದಗಣಪತಿಗಳೂ ಸಹ ಅಲ್ಲಿಗೆ ಹೋಗಿ ಭಕ್ತಿಯಿಂದ ನನ್ನನ್ನು ಆರಾಧಿಸುವರು. ಆದಿಶೇಷನಾದರೋ, ತನ್ನ ನಿವಾಸ ಸ್ಥಳವಾದ ಪಾತಾಳದಿಂದ ಅಲ್ಲಿಗೆ ಬಂದು, ತನ್ನ ಸಹಸ್ರ ಫಣಗಳಲ್ಲಿರುವ ರತ್ನಗಳಿಂದಲೂ, ಬಿಲ್ವಾದಿ ಪೂಜಾ ದ್ರವ್ಯಗಳಿಂದಲೂ ಪೂಜಿಸಿ, ತನ್ನ ಸಹಸ್ರವದನಗಳಿಂದಲೂ ಈಶ್ವರ ಸಹಸ್ರನಾಮವನ್ನು ಉಚ್ಚರಿಸುತ್ತಾ ನನ್ನನ್ನು ತೃಪ್ತಿಗೊಳಿಸುವನು. ॥೧೯-೨೦-೨೧॥

ಅಲ್ಲದೆ ಕೋಮಲವಾದ ಬಿಲ್ವದಳಗಳಿಂದಲೂ, ಕಮಲ ಪುಷ್ಪಗಳಿಂದಲೂ ಅರ್ಚಿಸುವನು. ಅಷ್ಟದಿಗ್ಗಜಗಳೂ ಅಲ್ಲಿಗೆ ಬಂದು ತಮ್ಮ ಸೊಂಡಲಿನಿಂದ ನೀರನ್ನು

ಪಾನೀಯೈರ್ಬಿಲ್ವಪತ್ರೈಶ್ಚ ಸಾಬ್ಜನಾಲೈಸ್ತಥಾಂಬಿಕೇ ।
ಪೂಜಯಂತಿ ಮಹಾಲಿಂಗೇ ಗೋಕರ್ಣೇಶಂ ಮಹಾಬಲಂ ॥೨೩॥

ವಿಷ್ಣುನಾತ್ರ ತಪಸ್ತಪ್ತಂ ದಾನವೈಶ್ಚ ಪುರಾ ಜಿತಃ ।
ಪುನರಾಪ್ಯಾಯಿತಶ್ಚಾಸೀನ್ಮತ್ಕಟಾಕ್ಷೇಣ ಶೋಭನೇ ॥೨೪॥

ಬ್ರಹ್ಮಣಾಪಿ ತಪಸ್ತಪ್ತಂ ಸೃಷ್ಟಿವಿಜ್ಞಾನಹೇತವೇ ।
ಭೂಮ್ಯಂತರಿಕ್ಷಗಾ ರುದ್ರಾ ಯೇ ದಿವ್ಯಪ್ಸು ಪ್ರತಿಷ್ಠಿತಾಃ ॥೨೫॥

ನಿಷಂಗಿಣಃ ಕವಚಿನಃ ಖಡ್ಗಖೇಟಧನುರ್ಧರಾಃ ।
ಈಶಾನಪ್ರಮುಖಾಃ ಸರ್ವೇ ಮಹಾಬಲಮುಪಾಸತೇ ॥೨೬॥

ಅಶ್ವಿನೌ ಮರುತಶ್ಚಾಪಿ ವಸ್ವಾದಿತ್ಯಾ ದಿಗೀಶ್ವರಾಃ ।
ತೃಪ್ಯಂತಿ ಮತ್ಪ್ರಸಾದಾರ್ಥಂ ಧನದೋಽಪಿ ಸದಾ ಮುದಾ ॥೨೭॥

ಮತ್ಪ್ರಸಾದಾದ್ಧನೇಶತ್ವಂ ಸಖಿತ್ವಂ ತಸ್ಯ ಚಾಭವತ್ ।
ಅತ್ರ ಚಂದ್ರೋಽಪಿ ದೇವೇಶಿ ಗೋಕರ್ಣೇಶಂ ಸಮರ್ಚಯತ್ ॥೨೮॥

---

ತಂದು ಅಭಿಷೇಕಮಾಡಿ, ಕಮಲದ ದಂಟುಗಳಿಂದ ಕೂಡಿದ ಪುಷ್ಪವನ್ನೂ ತಂದು ಗೋಕರ್ಣ ಕ್ಷೇತ್ರದಲ್ಲಿರುವ ಮಹಾಬಲೇಶ್ವರನನ್ನು ಪೂಜಿಸುವುವು. ॥೨೨-೨೩॥

ಹಿಂದೆ ವಿಷ್ಣುವು ರಾಕ್ಷಸರನ್ನು ಗೆಲ್ಲುವ ಉದ್ದೇಶದಿಂದಲೂ, ಬ್ರಹ್ಮನು ಸೃಷ್ಟಿ ಚಮತ್ಕಾರವನ್ನು ತಿಳಿಯುವುದಕ್ಕೂ, ಭೂಮ್ಯಂತರಿಕ್ಷಗಾಮಿಗಳಾದ ರುದ್ರರು ಸಂಹಾರ ಕಾರ್ಯದಲ್ಲಿ ಮುಂದುವರಿಯುವುದಕ್ಕೂ ಅಲ್ಲಿಗೆ ಬಂದು ಮಹಾಬಲೇಶ್ವರನನ್ನು ಪೂಜಿಸಿರುವರು. ॥೨೪-೨೫॥

ಈಶಾನನೇ ಮೊದಲಾದ ದಿಕ್ಪಾಲಕರೆಲ್ಲರೂ, ಬಾಣಬತ್ತಳಿಕೆಗಳನ್ನೂ, ಕತ್ತಿ ಕಠಾರಿಗಳನ್ನೂ ಧರಿಸಿಕೊಂಡೇ ಅಲ್ಲಿ ನನ್ನನ್ನು ಪೂಜಿಸಿರುವರು. ಹಾಗೆಯೇ ಅಶ್ವಿನೀ ದೇವತೆಗಳೂ, ವಸ್ವಾದಿತ್ಯಾದಿದಿಗೀಶ್ವರರೂ, ಕುಬೇರನೂ, ಸಹ ನನ್ನ ಅನುಗ್ರಹ ಪ್ರಾಪ್ತಿಗಾಗಿ ಅಲ್ಲಿಗೆ ಹೋಗಿ ಮಹಾಬಲೇಶ್ವರನನ್ನು ಪೂಜಿಸಿರುವನು. ॥೨೬-೨೭॥

ಹಾಗೆ ನನ್ನ ಪ್ರಸಾದವನ್ನು ಸ್ವೀಕರಿಸಿ ಕುಬೇರನು ನಿಧಿಪತಿಯೂ, ಶಿವ ಸಖನೂ ಎನಿಸಿಕೊಂಡನು. ಚಂದ್ರನು ಅಲ್ಲಿ ಮಹಾಬಲೇಶ್ವರನನ್ನು ಪೂಜಿಸಿ,

ಗುರುದಾರರತಾತ್ಪಾಪಾನ್ಮುಕ್ತೋಽಭೂನ್ಮತ್ಪ್ರಸಾದತಃ ।
ಚಂಡಾಂಶುರಪಿ ದೇವೇಶಿ ಗೋಕರ್ಣೇಶಂ ಸಮರ್ಚಯನ್ ॥೨೯॥

ಛಾಯಾತ್ಯಾಗಜಪಾಪೇನ ಮುಕ್ತೋಽಭೂದತ್ರ ಸುಂದರಿ ।
ಗೋಕರ್ಣೇಶಂ ಸಮಾರಾಧ್ಯ ಮಹತೀಂ ಶ್ರಿಯಮಾಪ್ನುಯಾತ್ ॥೩೦॥

ದೈತ್ಯನಾಥಸ್ತತೋ ಬಾಣೋ ವಿರೋಚನಸುತೋ ಬಲೀ ।
ಪ್ರಚಿತ್ತಿರ್ವಿಘಸಶ್ಚೈವ ಮುರೋ ಜಂಬಸ್ತಥಾಂಧಕಃ ॥೩೧॥

ವೃತ್ರಶ್ಚ ನಮುಚಿಶ್ಚೈವಾಸುರೌ ಮಧುಕೈಟಭೌ ।
ಸುಂದೋಪಸುಂದೌ ದೇವೇಶಿ ಶೂರಸ್ತಾರಕ ಏವ ಚ ॥೩೨॥

ಹಿರಣ್ಯಾಕ್ಷಶ್ಚ ಕಶಿಪುಃ ಪ್ರಹ್ಲಾದೋ ಮಂಥರಸ್ತಥಾ ।
ಬಲೋ ನಾಮಾಸುರೇಂದ್ರಶ್ಚ ಮಹತೀಂ ಪ್ರಾಪ್ನುಯಾಚ್ಛ್ರಿಯಂ ॥೩೩॥

ಏತೇ ಸರ್ವೇ ತಪಸ್ತಪ್ತ್ವಾ ಗೋಕರ್ಣೇಶಂ ಸಮರ್ಚ್ಯ ಚ ।
ಸರ್ವೇ ಪ್ರಾಪ್ತಬಲಾಶ್ಶೂರಾಶ್ಶಕ್ರವಿತ್ರಾಸಕಾಸ್ಸದಾ ॥೩೪॥

ಗೋಕರ್ಣೇಶಂ ಸಮಾರಾಧ್ಯ ಪೂಜಯಾ ತಪಸಾಪಿ ಚ ।
ಗಂಧರ್ವಾದ್ಯಾ ಮಹಾಭಾಗೇ ಚಿತ್ರಾವರ್ಮಾಹಾಹಾಹೂಹೂಃ ॥೩೫॥

---

ಗುರುಪತ್ನಿ ಗಮನವನ್ನೂ, ಸೂರ್ಯನು ತನ್ನ ಪತ್ನಿಯಾದ ಛಾಯಾದೇವಿಯನ್ನು ಪರಿತ್ಯಾಗಮಾಡಿದ ದುಷ್ಕೃತವನ್ನೂ ಕಳೆದುಕೊಂಡರು. ॥೨೮-೨೯॥

ಹಾಗೆಯೇ ರಾಕ್ಷಸರಾಜನಾದ ಬಾಣ, ವಿರೋಚನಪುತ್ರನಾದ ಬಲಿಚಕ್ರವರ್ತಿ, ಪ್ರಚಿತ್ತಿ, ವಿಘಸ, ಮುರ, ಜಂಭ, ಅಂಧಕ, ವೃತ್ರ, ನಮುಚಿ, ಮಧು, ಕೈಟಭ, ಸುಂದ, ಉಪಸುಂದ, ತಾರಕ, ಹಿರಣ್ಯಾಕ್ಷ, ಹಿರಣ್ಯಕಶಿಪು, ಪ್ರಹ್ಲಾದ, ಮಂಥರ, ಬಲ ಮುಂತಾದ ರಾಕ್ಷಸರೆಲ್ಲಾ ಮಹಾಬಲೇಶಾರ್ಚನೆಯಿಂದಲೇ ಅಷ್ಟು ಶೂರರೆನಿಸಿದರು. ಕೊನೆಗೆ ತಮ್ಮ ಪರಾಕ್ರಮದಿಂದ ಅವರು ಇಂದ್ರಾದಿದೇವತೆಗಳನ್ನೂ ಸಹ ಭಯಪಡಿಸುವವರಾದರು. ॥೩೦-೩೧-೩೨-೩೩-೩೪॥

ಸಕಲ ಗಂಧರ್ವರೂ, ಚಿತ್ರವರ್ಮ, ಹಾಹಾ, ಹೂಹೂ, ತುಂಬುರು, ವಿಕಂಡು, ನಾರದ ಮುಂತಾದ ಗಂಧರ್ವಶ್ರೇಷ್ಠರೂ ಗೋಕರ್ಣೇಶ್ವರನನ್ನು ಆರಾಧನೆ

ತುಂಬುರುಶ್ಚ ವಿಕೆಂಡುಶ್ಚ ನಾರದೋ ದೇವಗಾಯನಃ ।
ಗಾಂಧರ್ವವೇದಮಖಿಲಂ ಪ್ರಾಪ್ನುವನ್ ಮತ್ಪ್ರಸಾದತಃ ॥೩೬॥

ನಾಗನಾಥಾ ಮಹಾಭಾಗೇ ಗೋಕರ್ಣೇಶಾರ್ಚನೇ ರತಾಃ ।
ಧೃತರಾಷ್ಟ್ರಶ್ಶಂಖಪಾಲಃ ಕಂಬಲಾಶ್ವ ತತೌ ತಥಾ ॥೩೭॥

ಅನಂತೋ ವಾಸುಕಿಶ್ಚೈವ ತಕ್ಷಕಃ ಕುಡರಸ್ತಥಾ ।
ಸ್ವಫಣಾಭಿರ್ಮಹಾಲಿಂಗಂ ಛಾದ್ಯ ಸಂಪೂಜ್ಯ ಬಿಲ್ವಜೈಃ ॥೩೮॥

ಕೋಮಲೈಃ ಕಮಲೈರೀಶಂ ದಲೈಃ ಸಂಪೂಜಯಂತಿ ಹಿ ।
ಕಾಮಧೇನುಗಣಾಶ್ಚಾಪಿ ಸುರಭಿರ್ನಂದಿನೀ ತಥಾ ॥೩೯॥

ಸ್ವೋಧಸ್ಸಂಭೂತಪಯಸಾ ಸಫೇನೇನಾಭ್ಯಷೇಚಯನ್ ।
ಬಿಲ್ವೈರ್ಮಹಾಬಲೇಶಾನಂ ಸಂಪೂಜ್ಯ ಮುದಮಾಪ್ನುವನ್ ॥೪೦॥

ಧರ್ಮೋಽಪಿ ವೃಷರೂಪೇಣ ತಪಸ್ತಪ್ತ್ವಾತ್ರ ಮಾಂ ಶಿವೇ ।
ಮತ್ತೋ ಲಬ್ಧವರೋ ದೇವಿ ಮಾಂ ವಹತ್ಯೇವ ಪೃಷ್ಠತಃ ॥೪೧॥

ಗೋಕರ್ಣೇಶಪ್ರಸಾದೇನ ಚಂದ್ರಸೂರ್ಯಾನ್ವಯೋದ್ಭವಾಃ ।
ನೃಪಾಣಾಂ ಚ ಸಹಸ್ರಾಣಿ ಮಾಮುಪಾಸ್ತೇ ಸದಾಂಬಿಕೇ ॥೪೨॥

---

ಯಿಂದಲೂ, ತಪಸ್ಸಿನಿಂದಲೂ ತೃಪ್ತಿಪಡಿಸಿ, ಸಂಪೂರ್ಣವಾದ ಗಾಂಧರ್ವವೇದವನ್ನು ಅಭ್ಯಾಸಮಾಡಿ ಅದರಲ್ಲಿ ನಿಪುಣರೆನಿಸಿದರು. ॥೩೫-೩೬॥

ಧೃತರಾಷ್ಟ್ರ, ಶಂಖಪಾಲ, ಕಂಬಲ, ಅಶ್ವತರ, ಅನಂತ, ವಾಸುಕಿ, ತಕ್ಷಕ, ಕುಡರ, ಇವೇ ಮೊದಲಾದ ನಾಗಲೋಕದ ಶ್ರೇಷ್ಠಸರ್ಪಗಳು ತಮ್ಮ ಸ್ವಫಣಾಫಣಿಗಳಿಂದಲೂ ಮಹಾಬಲೇಶ್ವನನ್ನೂ ಪೂಜಿಸಿರುವುವು. ॥೩೭-೩೮॥

ಕಾಮಧೇನು, ನಂದನೀಧೇನು ಮುಂತಾದ ಕಾಮಧೇನು ಗಣಗಳು, ತಮ್ಮ ಕೆಚ್ಚಲಿನಿಂದ ನೊರೆನೊರೆಯಾಗಿ ಬರುವ ಹಾಲಿನಿಂದ ಮಹಾಬಲೇಶ್ವರನಿಗೆ ಅಭಿಷೇಕ ಮಾಡುತ್ತಾ, ಬಿಲ್ವಾದಿಗಳಿಂದ ಪೂಜಿಸುತ್ತವೆ. ॥೩೯-೪೦॥

ಧರ್ಮವಾದರೋ ವೃಷಭಾಕಾರದಲ್ಲಿ ಬಂದು ಗೋಕರ್ಣೇಶನನ್ನು ಅರ್ಚಿಸಿ ತಪಸ್ಸನ್ನೂ ಮಾಡಿ, ನನ್ನ ಅನುಗ್ರಹವನ್ನು ಸಂಪಾದಿಸಿ, ಈಗ ನನಗೆ ವಾಹನವಾಗಿ

ಮುನಿರ್ವಿಕುಕ್ಷಿಃ ಕುಕ್ಷಿಶ್ಚ ಶಶಬಿಂದುರ್ಭಗೀರಥಃ ।
ರಘುಶ್ಚೈವಾಥ ಮಾಂಧಾತಾ ಯುವನಾಶ್ವೋ ಗಯಸ್ತಥಾ ॥೪೩॥

ರಂತಿದೇವಃ ಪೃಥುರ್ವೈನ್ಯಃ ಮುಚುಕುಂದೋ ದೃಢಾಶ್ವಕಃ ।
ದಿಲೀಪಸ್ಸಗರೋ ವಿಂಶೋ ನಾಭಾಗಶ್ಚ ಕರಂಧಮಃ ॥೪೪॥

ಆಯುಃಪೂರುಶ್ಚ ಭರತೋ ಯಯಾತಿರ್ನಹುಷಃ ಕುರುಃ ।
ಖಟ್ವಾಂಗೋಽಥ ನೃಗೋರಿಷ್ಟೋ ತಥಾ ಸಂವರಣೋ ನೃಪಃ ॥೪೫॥

ಗೋಕರ್ಣೇಶಂ ಸಮಾರಾಧ್ಯ ಪೃಥಿವ್ಯಾಃ ಪತಯೋ ಭವನ್ ॥೪೬॥

ದೇವಿ ಕಿಂ ಬಹುನೋಕ್ತೇನ ಗೋಕರ್ಣೇಶಪ್ರಸಾದತಃ ।
ಸಮಭ್ಯರ್ಚ್ಯ ಮಹಾಲಿಂಗಂ ಸ್ವಂ ಸ್ವಂ ಸ್ಥಾನಂ ಸುರಾಸುರಾಃ ॥೪೭॥

ಲೇಭಿರೇ ಪರಮೇಶಾನಿ ಮಹಾಬಲಸಮರ್ಚನಾತ್ ।
ಭುಕ್ತಿಮುಕ್ತಿಪ್ರದಂ ಕ್ಷೇತ್ರಂ ಸರ್ವಸಿದ್ಧಿಪ್ರದಾಯಕಂ ॥೪೮॥

---

ರುವನು. ಹಾಗೆಯೇ ಸೂರ್ಯವಂಶದ ರಾಜರು, ಚಂದ್ರವಂಶದ ಭೂಪರು ಸಹಸ್ರಾರು ಸಂಖ್ಯೆಯಿಂದ ಈ ಮಹಾಬಲೇಶ್ವರನನ್ನೇ ಅರ್ಚಿಸಿ ಧನ್ಯರಾಗಿರುವರು. ॥೪೧-೪೨॥

ರಾಜರ್ಷಿಗಳಾದ ವಿಕುಕ್ಷಿ, ಕುಕ್ಷಿ, ಶಶಬಿಂದು, ಭಗೀರಥ, ರಘು, ಮಾಂಧಾತಾ, ಯುವನಾಶ್ವ, ಗಯ, ರಂತಿದೇವ, ಪೃಥು, ವೈನ್ಯ, ಮುಚುಕುಂದ, ದೃಢಾಶ್ವಕ, ದಿಲೀಪ, ಸಗರ, ವಿಂಶ, ನಾಭಾಗ, ಕರಂಧಮ, ಆಯು, ಪೂರು, ಭರತ, ಯಯಾತಿ, ನಹುಷ, ಕುರು, ಖಟ್ವಾಂಗ, ನೃಗ, ಅರಿಷ್ಟ, ಸಂವರಣ ಮುಂತಾದವರೆಲ್ಲರೂ ಗೋಕರ್ಣಪತಿಯಾದ ಮಹಾಬಲೇಶ್ವರನನ್ನೇ ಅರ್ಚಿಸಿ ಶ್ರೇಷ್ಠರಾದ ರಾಜರೆನಿಸಿಕೊಂಡರು. ॥೪೩-೪೪-೪೫-೪೬॥

ಎಲೌ ದೇವಿಯೇ, ಹೆಚ್ಚೇನು? ಇಲ್ಲಿನವರೆಗೆ ಪ್ರಸಿದ್ಧರಾಗಿ ಖ್ಯಾತಿಗೊಂಡ ಸಕಲ ದೇವರಾಕ್ಷಸರೂ, ಈ ಮಹಾಬಲೇಶನನ್ನು ಪೂಜಿಸಿಯೇ ತಮ್ಮ ತಮ್ಮ ಸ್ಥಾನಮಾನಗಳನ್ನು ರಕ್ಷಿಸಿಕೊಂಡರು. ಒಟ್ಟಿನಲ್ಲಿ ಈ ಗೋಕರ್ಣೇಶಾರ್ಚನೆಯು, ಐಹಿಕ ಮತ್ತು ಆಮುಷ್ಮಿಕವಾದ ಸಕಲ ಸುಖಸಂಪತ್ತುಗಳಿಗೂ ಮೂಲಸ್ಥಾನ ವೆನಿಸುವುದು. ॥೪೭-೪೮॥

ಅತ್ರ ಜಪ್ತ್ವೋಽಥ ಯಃ ಕಶ್ಚಿತ್ ಮಂತ್ರಸಿದ್ಧಿಂ ಗಮಿಷ್ಯತಿ ।
ಪಂಚಾಗ್ನಿಮಧ್ಯನಿರತಾ ವಾಯುಭಕ್ಷಾಸ್ತಥಾಪರೇ ॥೪೯॥

ಜಟೋರುಶಿರಸಃ ಕೇಚಿತ್ಕೇಚಿದ್ದಂಶೋಲೂಖಲಿನಃ ಪರೇ ।
ಭಸ್ಮಾಭ್ಯಕ್ತಾಃ ಸದಾ ಕೇಚಿದ್ರುದ್ರಾಧ್ಯಾಯಜಪಾದರಾಃ ॥೫೦॥

ಪಂಚಾಕ್ಷರಪರಾಃ ಕೇಚಿತ್ಕೇಚಿನ್ಮನ್ನಾಮಜಾಪಕಾಃ ।
ಶಿವಶಂಕರದೇವೇಶ ಗೋಕರ್ಣೇಶ ಮಹೇಶ್ವರ ॥೫೧॥

ಪ್ರಸೀದ ಪರಮೇಶೇತಿ ತತ್ರ ಶೈವಾ ವದಂತಿ ಮಾಂ ।
ಕೇಚಿಲ್ಲಿಂಗಾರ್ಚನಪರಾಃ ಬಿಲ್ವಪತ್ರಾದಿಭಿಶ್ಶಿವೇ ॥೫೨॥

ಸಾಗ್ನಯೋಽನಗ್ನಯಃ ಕೇಚಿದ್ಯತಯೋ ಭಕ್ತಿಭಾವಿತಾಃ ।
ವರ್ಣಿನೋ ವನಸಂಸ್ಥಾಶ್ಚ ಬ್ರಾಹ್ಮಣಾ ಮಾಮುಪಾಸತೇ ॥೫೩॥

ಬ್ರಹ್ಮಣ್ಯಪತಿರೇವಾಹಂ ಮಹಾಬ್ರಾಹ್ಮಣ ಈಶ್ವರಃ ।
ವಸಂತಿ ಶೈವಾ ಗೋಕರ್ಣೇ ಮನ್ನೈವೇದ್ಯೈಕಭೋಜನಾಃ ॥೫೪॥

---

ಈ ಕ್ಷೇತ್ರದಲ್ಲಿ ಯಾವ ಮಂತ್ರವನ್ನು ಪುರಶ್ಚರಣೆಮಾಡಿದರೂ, ಒಡನೆಯೇ ಆ ಮಂತ್ರಸಿದ್ಧಿಯು ಲಭಿಸುವುದು. ಆದಕ್ಕಾಗಿ ಇಲ್ಲಿ ಅನೇಕ ತಪಸ್ವಿಗಳು ಪಂಚಾಗ್ನಿ ಮಧ್ಯದಲ್ಲಿ ನಿಂತು, ಅನಿಲಾಹಾರಿಗಳಾಗಿ, ಜಟಾಧಾರಿಗಳಾಗಿ, ಮುಳ್ಳಿನಮೇಲೆ, ಒರಳಿನಮೇಲೆ ಕುಳಿತು ತಪಸ್ಸು ಮಾಡುತ್ತಿರುವರು. ಅವರು, ಸರ್ವದಾ ಭಸ್ಮಧಾರಿಗಳಾಗಿ ರುದ್ರಾಧ್ಯಾಯವನ್ನೂ, ಶಿವಪಂಚಾಕ್ಷರಿಯನ್ನೂ ಪಠಿಸುತ್ತಾ ಶಿವ, ಶಂಕರ ದೇವೇಶ, ಗೋಕರ್ಣೇಶ್ವರ, ನಮ್ಮನ್ನು ಕಾಪಾಡು, ನಮ್ಮಲ್ಲಿ ಕೃಪೆಯಿಡು ಎಂದು ಮೊರೆಯಿಡುತ್ತಿರುವರು. ॥೪೯-೫೦-೫೧॥

ಆಲ್ಲಿ ಕೆಲವರು, ಸದಾ ಮಹಾಲಿಂಗಾರ್ಚನೆಯನ್ನು ಬಿಲ್ವಾಪತ್ರಾದಿಗಳಿಂದ ನೆರವೇರಿಸುತ್ತಾ ಕಾಲಕಳೆಯುವರು. ಹಾಗೆಯೇ ಗೃಹಸ್ಥರು, ವಾನಪ್ರಸ್ಥರು, ಯತಿಗಳು, ಬ್ರಹ್ಮಚಾರಿಗಳೂ, ಬ್ರಹ್ಮಕರ್ಮನಿರತರು ಈ ಎಲ್ಲರೂ ಸದಾ ಈಶ್ವರಾರಾಧಕರಾಗಿಯೇ ನೆಲಸಿರುವರು. ಬ್ರಹ್ಮಮಾರ್ಗದಲ್ಲಿ ಮೂಲವಸ್ತುವೆನಿಸಿ ಬ್ರಹ್ಮಣ್ಯಪತಿಯಾದ ನಾನೇ, ಮಹಾಬ್ರಾಹ್ಮಣನು. ಇಂತಹ ನನ್ನನ್ನೇ ಆಶ್ರಯಿಸಿ ಅನೇಕ

ಅತ್ರ ಶೈವಂ ಸಮಭ್ಯರ್ಚ್ಯ ಮಮ ಲೋಕೇ ವಸೇನ್ನರಃ ।
ಅತ್ರ ಸರ್ವೇಷು ಕಾಲೇಷು ಸಾಗರಸ್ನಾನಕೃನ್ನರಃ ॥೫೫॥

ಮಹಾಬಲಮಹಾಲಿಂಗಂ ದೃಷ್ಟ್ವಾ ನೋ ಮುಕ್ತಿಭಾಙ್ನರಃ ।
ಬಿಲ್ವಪತ್ರೈಸ್ಸಮಭ್ಯರ್ಚ್ಯ ಮಮ ಲೋಕೇವಸೇನ್ನರಃ ॥೫೬॥

ಬಿಲ್ವಪತ್ರೈಸ್ಸಮಭ್ಯರ್ಚ್ಯ ವಿಜ್ಞಾನಂ ಪ್ರಾಪ್ನುಯಾನ್ನರಃ ।
ಏಕಂ ಶೈವಂ ಭೋಜಯಿತ್ವಾ ಮತ್ಪ್ರೀತ್ಯರ್ಥಮುಮೇ ಶುಭೈಃ॥೫೭॥

ಭಕ್ಷ್ಯಭೋಜ್ಯೈಸ್ಸದನ್ನೈಶ್ಚ ಸ ಮಾಂ ಭೋಜಯಿತಾಂಬಿಕೇ ।
ಗೋಕರ್ಣೇಶಂ ಪೂಜಯಿತ್ವಾ ಬಿಲ್ವಪತ್ರಾದಿಸಾಧನೈಃ ॥೫೮॥

ಕೋಟಿಲಿಂಗಾರ್ಚನಫಲಂ ಪ್ರಾಪ್ನೋತಿ ಸ ವರಾನನೇ ।
ಪುರಾ ವಸುಮನಾ ನಾಮ ರಾಜಾಸೀದತಿಧಾರ್ಮಿಕಃ ॥೫೯॥

ವಿದರ್ಭವಿಷಯೇ ದೇವಿ ಸ ಕೈಂಕರ್ಯಪರೋ ಮಮ ॥೬೦॥

---

ಬ್ರಾಹ್ಮಣರು ಶಿವಾರಾಧಕರಾಗಿ, ಶಿವನೈವೇದ್ಯದಿಂದ ಜೀವಿಸುತ್ತಾ ವಾಸಿಸುತ್ತಿರುವರು. ॥೫೩-೫೪-೫೮॥

ಇಲ್ಲಿ ಭಕ್ತಿಯಿಂದ ಒಬ್ಬ ಶೈವನನ್ನು ಸತ್ಕರಿಸಿ ಅವನಿಗೆ ತೃಪ್ತಿಕರವಾಗಿ ಭೋಜನಮಾಡಿಸಿದರೂ, ಸಮುದ್ರಸ್ನಾನದಿಂದ ಶುದ್ಧನಾಗಿ ಬಿಲ್ವಪತ್ರಾದಿಗಳಿಂದ ಮಹಾಬಲೇಶ್ವರನನ್ನು ಪೂಜಿಸಿದರೂ, ಅಥವಾ ಪೂಜಿತವಾದ ಮಹಾಬಲಲಿಂಗವನ್ನು ದರ್ಶನಮಾಡಿದರೂ, ಮನುಷ್ಯನು ಜ್ಞಾನಿಯೆನಿಸಿ, ನನ್ನನ್ನು ತೃಪ್ತಿಪಡಿಸಿ, ಕೊನೆಗೆ ನನ್ನ ಸಾಯುಜ್ಯವನ್ನೇ ಸೇರುವನೆಂಬುದರಲ್ಲಿ ಸಂಶಯ ಲೇಶವೂ ಇಲ್ಲ. ॥೫೫-೫೬-೫೭॥

ಯಾರು ವಿಧವಿಧವಾದ ಭಕ್ಷ್ಯಭೋಜ್ಯಗಳನ್ನು ನನಗೆ ನಿವೇದನಮಾಡಿ, ಬಿಲ್ವಪತ್ರಾದಿಗಳಿಂದ ಅರ್ಚಿಸಿ, ನನ್ನ ಭಕ್ತನೊಬ್ಬನನ್ನು ತೃಪ್ತಿಪಡಿಸುವರೋ, ಅಂತಹವರಿಗೆ ಕೋಟಿಲಿಂಗಾರ್ಚನೆಯ ಫಲವು ದೊರಕುವುದು. ಹಿಂದೆ ವಿದರ್ಭ ದೇಶದಲ್ಲಿ ವಸುಮನನೆಂಬ ರಾಜನೊಬ್ಬನು ಅತಿಧಾರ್ಮಿಕನೆನಿಸಿ, ಸದಾ ನನ್ನ ಸೇವೆಯಲ್ಲಿಯೇ ನಿರತನಾಗಿದ್ದನು. ॥೫೯-೬೦॥

ನಾನಾಪ್ರಾಕಾರಶೋಭಾಢ್ಯೈರ್ಭೂಧರಾಕಾರಗೋಪುರೈಃ ।
ಪ್ರಾಕಾರರಾಜದ್ವೃಷಭೈರ್ಧೂಯಮಾನಪತಾಕಕೈಃ ॥೬೧॥

ನವರತ್ನಚಿತಾನೇಕಮಂಟಪೈಃ ಶೋಭಿತಂ ನೃಪ ।
ವಾಹನೈಶ್ಚೈವ ದೇವೇಶಿ ರಥೈಶ್ಚ ಶತಚಕ್ರಕೈಃ ॥೬೨॥

ಮದಾಗಾರಪರೋ ರಾಜಾ ಮುಕ್ತ್ಯಗಾರಾಧಿನಾಯಕಃ ।
ಛತ್ರಚಾಮರಜಾಲೈಶ್ಚ ಸ್ವರ್ಣಶಯ್ಯಾದಿಭಾಜನೈಃ ॥೬೩॥

ಕ್ಷೌಮಾಂಬರೈಃ ಸ್ವರ್ಣಕ್ಲೃಪ್ತೈರ್ಭೂಷಣೈರ್ಮಣಿಕಲ್ಪಿತೈಃ ।
ಕಾರಯಾಮಾಸ ನೃಪತಿರ್ಗೋಲಕಂ ರತ್ನನಿರ್ಮಿತಂ ॥೬೪॥

ಧೂಪೈರ್ದೀಪೈಶ್ಚ ನೈವೇದ್ಯೈಃ ಸ್ನಾಪನೀಯೈರಹರ್ನಿಶಂ ।
ಸಲಕ್ಷಗೋಘೃತಾಸಾರದೀಪೈರ್ದೀಪಯದಂಬಿಕೇ ॥೬೫॥

ತಾಂಬೂಲಪರ್ವತಾಂಶ್ಚಾಪಿ ದತ್ತವಾನ್ ಮತ್ಕೃಪಾಪ್ತಯೇ ।
ಕರ್ಪೂರಖಂಡೈಃ ಶತಶೋ ದೀಪಯಾಮಾಸ ಮಾಂ ಶಿವೇ ॥೬೬॥

---

ಆತನು ಶಿವದೇವಾಲಯವೊಂದನ್ನು ಕಟ್ಟಿಸಿದ್ದನು. ಅದು ನಾನಾರೀತಿಯಾದ ಅಲಂಕಾರದಿಂದ ಶೋಭಿಸುತ್ತಾ, ಪ್ರಾಕಾರಗಳ ಮೇಲೆ ರಂಜಿಸುವ ವೃಷಭವಿಗ್ರಹಗಳಿಂದಲೂ, ಶಿಖರಭಾಗದಲ್ಲಿ ಹಾರಾಡುವ ಧ್ವಜಗಳಿಂದಲೂ, ನವರತ್ನಮಯವಾದ ಮಂಟಪಗಳಿಂದಲೂ, ಅನೇಕ ಚಕ್ರಗಳಿಂದ ಶೋಭಿಸುವ ರಥಗಳಿಂದಲೂ, ವಾಹನಗಳಿಂದಲೂ ಪ್ರಕಾಶಿಸುತ್ತಿದ್ದಿತು. ॥೬೧-೬೨॥

ಆ ರಾಜನು ಸರ್ವದಾ ನನ್ನ ದೇವಾಲಯದಲ್ಲಿಯೇ ವಿಹರಿಸುತ್ತಾ ಮುಕ್ತಿಸ್ಥಾನವೆನಿಸಿದ ಅದಕ್ಕೆ ತಾನೇ ಅಧಿಪತಿಯಂತಾಗಿ, ಛತ್ರಿ, ಚಾಮರ, ಇವುಗಳಿಂದಲೂ ಸುವರ್ಣಮಯವಾದ ತಟ್ಟೆಗಳಿಂದಲೂ, ಪೀತಾಂಬರಗಳಿಂದಲೂ, ರತ್ನಾಭರಣಗಳಿಂದಲೂ, ಆ ಶಿವಾಲಯಗಳನ್ನು ಶೃಂಗರಿಸಿ, ರತ್ನದಿಂದ ಅಲಂಕೃತವಾದ ಒಂದು ಗೋಲಕವನ್ನು ಮಾಡಿಸಿಟ್ಟರು. ॥೬೩-೬೪॥

ಪ್ರತಿನಿತ್ಯವೂ ಶಿವಲಿಂಗವನ್ನು ಪಂಚಾಮೃತಾಭಿಷೇಕಗಳಿಂದಲೂ, ಧೂಪದೀಪನೈವೇದ್ಯಾದಿಗಳಿಂದಲೂ ತೃಪ್ತಿಪಡಿಸಿ, ಹಸುವಿನ ತುಪ್ಪದಿಂದ ಉರಿಯುವ ಲಕ್ಷದೀಪಗಳಿಂದ ಉತ್ಸವವನ್ನು ಜರುಗಿಸಿದನು. ಅನಂತರ ಕರ್ಪೂರಾದಿ ಸುಗಂಧ

ಛತ್ರಚಾಮರಕೋಟೀಭಿರ್ವ್ಯಜನಾದರ್ಶಕೈರಪಿ ।
ನಾನಾವಾದ್ಯರವೈರ್ದೇವಿ ಪೂರಯಾಮಾಸ ಮದ್ಗೃಹಂ ॥೬೭॥

ನಾಟ್ಯಾಂಗನಾಸ್ತದಾ ತೇನ ಕಲ್ಪಿತಾಸ್ಸುಮನೋಹರಾಃ ।
ಸಹಸ್ರಕಂಬುಕಂಠ್ಯಸ್ತಾಃ ಪೀನಶ್ರೋಣಿಪಯೋಧರಾಃ ॥೬೮॥

ಶೈವಾನ್ ಸಂಭೋಜಯಾಮಾಸ ಶಿವನೈವೇದ್ಯರಾಶಿಭಿಃ ।
ಪ್ರಫುಲ್ಲಪುಷ್ಪಾರಾಮಂ ಚ ಮತ್ಪೂಜಾರ್ಥಂ ಪ್ರಕಲ್ಪಯತ್ ॥೬೯॥

ಸೋಮವಾರೇ ಪ್ರದೋಷೇಷು ಚತುರ್ದಶ್ಯಷ್ಟಮೀಷು ಚ ।
ಶಿವರಾತ್ರಿಷು ದೇವೇಶಿ ಪರ್ವಸ್ವಪಿ ವಿಶೇಷತಃ ॥೭೦॥

ಪೂಜಯತ್ಯೇವ ಭೂಪಾಲೋ ನಿತ್ಯಾದ್ದಶಗುಣಾ ಶಿವೇ ।
ತತ್ಪ್ರದೋಷೇ ಕೃತಾಂ ಪೂಜಾಂ ಶೃಣು ತ್ವಮಗಜೇ ಶಿವಾಂ ॥೭೧॥

ಶ್ರುತ್ವಾಪಿ ಲಭತೇ ಗೌರಿ ಮಮ ಲೋಕಂ ನ ಸಂಶಯಃ ।
ಪ್ರದೋಷಪೂಜನಂ ಕುರ್ವನ್ನಿತ್ಯಮಾಸ್ತೇ ಪ್ರಹೃಷ್ಟಧೀಃ ॥೭೨॥

---

ದ್ರವ್ಯಗಳಿಂದ ಸುವಾಸನೆಯಾಗಿರುವ ತಾಂಬೂಲ ರಾಶಿಯನ್ನು ಸಮರ್ಪಿಸಿ, ನನ್ನ ಕೃಪಾಪಾತ್ರನಾಗಲು ಕಾದಿದ್ದನು. ॥೬೫-೬೬॥

ಪೂಜಾನಂತರದಲ್ಲಿ, ಛತ್ರಿ, ಚಾಮರ, ಬೀಸಣಿಗೆ, ಕನ್ನಡಿ, ಮುಂತಾದ ಉಪಚಾರಗಳಿಂದ ಸತ್ಕರಿಸಿ, ನಾನಾವಾದ್ಯರವಗಳಿಂದಲೂ, ದಪ್ಪವಾದ ಕಟಿಭಾಗದಿಂದಲೂ, ಸ್ತನದ್ವಯಗಳಿಂದಲೂ ಮನೋಹರರಾದ ಸುಂದರಿಯರ ನಾಟ್ಯಾದಿಗಳಿಂದಲೂ ಮಹಾದೇವನಾದ ನನ್ನನ್ನು ತೃಪ್ತಿಗೊಳಿಸಿದನು. ॥೬೭-೬೮॥

ಈಶ್ವರ ನಿವೇದಿತವಾದ ಪ್ರಸಾದವನ್ನು ಅನೇಕ ಶಿವಾರಾಧಕರಾದವರಿಗೆ ಭೋಜನ ಮಾಡಿಸಿದನು. ನನ್ನ ಪೂಜಾರ್ಥವಾದ ಪುಷ್ಪಗಳಿಗಾಗಿ ಕೆಲವು ಉದ್ಯಾನಗಳನ್ನು ಕಲ್ಪಿಸಿದನು. ಸೋಮಪ್ರದೋಷ, ಚತುರ್ದಶೀ, ಅಷ್ಟಮೀ ತಿಥಿಗಳಲ್ಲಿ ಶಿವರಾತ್ರಿಯ ದಿನ, ಮತ್ತು ಉಳಿದ ಪರ್ವತಿಥಿಗಳಲ್ಲಿಯೂ, ವಿಶೇಷವಾದ ರೀತಿಯಲ್ಲಿ ಪೂಜಿಸುತ್ತಿದ್ದನು. ॥೬೯-೭೦॥

ಅಂತಹ ವಿಶೇಷ ದಿವಸಗಳಲ್ಲಿ ನಿತ್ಯಪೂಜೆಗೆ ದಶಗುಣವಾಗಿ ಪೂಜೆಮಾಡುತ್ತಿದ್ದನು. ಒಂದು ಪ್ರದೋಷದಲ್ಲಿ ಆತನು ಪೂಜಿಸಿದ ಕ್ರಮವನ್ನು ವಿವರಿಸುವೆನು.

॥ ಈಶ್ವರ ಉವಾಚ ॥

ಗೋಕರ್ಣೇಶಂ ಮಹಾಲಿಂಗಂ ಪಶ್ಯನ್ನಷ್ಟೋರುಕಿಲ್ಬಿಷಃ ॥೭೩॥

ಪ್ರದೋಷಪೂಜಾರತಚಿತ್ತವೃತ್ತಿ
ರ್ನೃಪಸ್ತದಾ ಮತ್ಪದಪೂಜನೋತ್ಸವೈಃ ।
ಸಮಾಭ್ಯಷಿಂಚದ್ಗಿರಿಜೇ ಮಹೇಶಂ
ಗೋಕರ್ಣಲಿಂಗಸ್ಥಮಪಾರಭಾಗ್ಯೈಃ ॥೭೪॥

ಕ್ಷೀರಾಜ್ಯಾದಿಘಟೈಃ ಸುತೈಲಜಘಟೈಃ ಸತ್ಕ್ಷೌದ್ರಸಚ್ಛರ್ಕರಾಭಾರೈಃ
ಖಂಡದಧಿಪ್ರಸರ್ಪಿತಸುಸಪುರ್ತ್ಯಾಢ್ಯಮಂಡಾದಿಭಿಃ ।
ರಂಭಾಮ್ರಾದಿಫಲೈಸ್ತಥೇಕ್ಷುಜರಸೈರ್ಜಂಬೀರನೀರೈಶ್ಶಿವಂ
ಸನ್ನಾರಿಕೇಲೋದಕಪಾನಸೋದ್ಭವದ್ರವತ್ಸಕ್ಷೌದ್ರಮಹೋರುಕೋಶೈಃ ॥೭೫॥

ಆಸಿಂಚ್ಯ ಗಂಧೋದಕಪುಷ್ಪರತ್ನ
ಸೌವರ್ಣನೀರೈಶ್ಚ ಸುಗಂಧಪೂರೈಃ ।

---

ಕೇಳು. ಅದರ ಶ್ರವಣಮಾತ್ರದಿಂದಲೇ ಭಕ್ತರಿಗೆ ಕೈಲಾಸ ಪ್ರಾಪ್ತಿಯಾಗುವುದು. ಅದೇ ರೀತಿ ಪ್ರದೋಷಾರ್ಚನೆ ಮಾಡುವುದು ಅತ್ಯಂತ ಶ್ರೇಯಸ್ಕರ. ॥೭೧-೭೨॥

ಒಮ್ಮೆ ಆ ರಾಜನು ಅರ್ಚನೆಮಾಡಿ ಇಲ್ಲಿಗೆ ಬಂದು ಗೋಕರ್ಣೇಶ್ವರನನ್ನೇ ದೃಷ್ಟಿಸಿ ನೋಡುತ್ತಾ, ಪ್ರದೋಷಕಾಲದಲ್ಲಿ ಈ ಮಹಾಬಲೇಶ್ವರನನ್ನೇ ಸದಾ ಧ್ಯಾನಿಸುತ್ತಾ, ವಿವಿಧವಾದ ಪೂಜಾವಿಧಾನಗಳಿಂದ ತೃಪ್ತಿಪಡಿಸಲು ಪ್ರಯತ್ನಿಸಿದನು. ॥೭೩-೭೪॥

ಈ ಗೋಕರ್ಣೇಶ್ವರಲಿಂಗಕ್ಕೆ ಅಭಿಷೇಕಮಾಡಲು, ಹಾಲು, ತುಪ್ಪ, ಮೊಸರು, ಜೇನುತುಪ್ಪ, ಶುದ್ಧವಾದ ತೈಲ ಮುಂತಾದ ವಸ್ತುಗಳ ಗಡಿಗೆಗಡಿಗೆಗಳನ್ನೇ ತರಿಸಿಟ್ಟುಕೊಂಡನು. ಬಾಳೆ, ಮಾವು, ನಿಂಬೆ, ಹಲಸು, ತೆಂಗು ಮುಂತಾದ ಫಲಗಳ ರಸವನ್ನು ಇನ್ನೂ ರುಚಿರುಚಿಯಾದ ರಾಸಾಯನಿಕ ದ್ರವ್ಯಗಳನ್ನೂ ಅಭಿಷೇಕಕ್ಕಾಗಿ ಒದಗಿಸಿಕೊಂಡನು. ॥೭೫॥

ಮೇಲೆ ಹೇಳಿದ ಪಂಚಾಮೃತವಸ್ತುಗಳ ಅಭಿಷೇಕಾನಂತರ, ಗಂಧೋದಕ, ಪುಷ್ಪೋದಕ, ರತ್ನೋದಕ, ಸುವರ್ಣೋದಕ, ಶ್ರೀಗಂಧಸಾರ, ಕಸ್ತೂರೀಮಿಶ್ರಿತ

ಪಾಟೀರಸಾರೈರ್ಮೃಗನಾಭಿಪೂರೈಃ
ಕರ್ಪೂರಸಾರೈಶ್ಚ ಸುಶೋಭಿತೈರ್ಜಲೈಃ ॥೨೬॥

ಆಲಿಪ್ಯ ಗಂಧೈಶ್ಚ ತದೋರುಲಿಂಗಂ
ಸಂವೇಷ್ಟ್ಯ ಶುಭ್ರೋತ್ತಮಧೌತವಸ್ತ್ರೈಃ ।
ದತ್ತೋಪವೀತಾನ್ಯುಪವೀತಿನೇ ಮೇ
ಅಖಂಡಶಾಲ್ಯುದ್ಭವತಂಡುಲಾಕ್ಷತೈಃ ॥೨೭॥

ಬಿಲ್ವತ್ವಕ್ಪರಿಕಲ್ಪಿತೋಗರುರಸೈರ್ಧೂಪಸ್ತದಾ ದೀಯತೇ ।
ದೀಪೈರ್ಗೋಘೃತಪೂರಿತೈರತಿಸಿತೈರ್ವರ್ತಿಭಿರತ್ಯುಜ್ಜ್ವಲೈಃ ॥೨೮॥

ನೈವೇದ್ಯೈರ್ದಧಿಖಂಡ ಸಾರಸುಭಗೈಸ್ಸತ್ತೋಪದಂಶಾನ್ವಿತೈ ।
ಸೂಪಾಪೂಪಾದಿರಾಶಿಪ್ರಭವಪರಿಮಲಾಮೋದಿಸ್ವಾದ್ವನ್ನಜಾಲೈಃ ॥೨೯॥

ಶುಭ್ರದ್ರೋಣಸುಮಪ್ರಭಾನ್ನಜಮಹಾರಾಶೀಭಿರೀಶಂ ಶಿವೇ
ಸೂಪಾಪೂಪಮರಂದಸುಂದರಮಹಾಹವ್ಯಂಗವೀನೋತ್ಥಿತೈಃ ।

---

ಜಲ, ಕರ್ಪೂರೋದಕ ಮುಂತಾದ ವಿಧವಿಧವಾದ ದ್ರವವಸ್ತುಗಳಿಂದ ಅಭಿಷೇಕ ಮಾಡಿದನು. ॥೨೬॥

ಅನಂತರ ಪವಿತ್ರವಾದ ಈ ಶಿವಲಿಂಗಕ್ಕೆ ಶ್ರೀಗಂಧವನ್ನು ಬಳಿದು, ಶುಭ್ರವಾದ ವಸ್ತ್ರವನ್ನು ಧರಿಸಿ, ಸದಾ ಯಜ್ಞೋಪವೀತಧಾರಿಯಾದ ನನಗೆ ಒಂದು ಉಪವೀತವನ್ನೂ ಸಮರ್ಪಿಸಿ, ನುಚ್ಚಿಲ್ಲದೆ ಅಖಂಡವಾದ ಅಕ್ಕಿಯಿಂದ ನಿರ್ಮಿಸಿದ ಮಂತ್ರಾಕ್ಷತೆಯಿಂದ ಅರ್ಚಿಸಿದನು. ॥೨೭॥

ಬಿಲ್ವವೃಕ್ಷದ ತೊಗಟೆ, ಅಗುರು ಮುಂತಾದ ಶಿವವೃಕ್ಷಗಳ ಭಾಗದಿಂದ ರಚಿತವಾದ ಧೂಪ ಗಂಧವನ್ನೂ, ಹಸುವಿನ ತುಪ್ಪದಿಂದ ನೆನೆಸಿದ ಬತ್ತಿಯ ದೀಪವನ್ನೂ, ಸಮರ್ಪಿಸಿದನು. ಮತ್ತು ಗರಣೆ ಮೊಸರಿನಿಂದ ಮಾಡಿಸಿದ ದಧ್ಯನ್ನ ಉಪದಂಶ (ಉಪ್ಪಿನಕಾಯಿ) ಗಳನ್ನೂ ತೊವ್ವೆ, ಕಡಬು, ಒಬ್ಬಟ್ಟು ಮುಂತಾದ ಸುವಾಸನಾಪರಿವೃತವಾದ ಭಕ್ಷ್ಯಭೋಜ್ಯಗಳನ್ನೂ, ಸ್ವಾಮಿಗೆ ನಿವೇದಿಸಿದನು. ॥೨೮-೨೯॥

ಶುಭ್ರವಾದ ತುಂಬೇಹೂವಿನ ರಾಶಿಯಂತೆ ನಯನಾನಂದಕರವಾಗಿರುವ ಮಹಾನೈವೇದ್ಯ (ಅನ್ನ) ರಾಶಿಯನ್ನೂ ಸುವಾಸನೆಯಿಂದಲೂ ರುಚಿಯಿಂದಲೂ

ಆಜ್ಯೈಃ ಪ್ರಾಜ್ಯೈಃ ಸುತಪ್ತಪ್ರಭವಪರಿಮಲೈಃ ಕಾಲಕಾಲೇ ನಿವೇದ್ಯ
ಹೃಷ್ಟೋಽಭೂತ್ಪಾರ್ಥಿವೇಂದ್ರೋ ಜನಿಶತವಿತತಾನಂದಪುಣ್ಯೈಕಮೂರ್ತಿಃ
॥೮೦॥

ಸನ್ನಾಗವಲ್ಲೀದಳ ಭಾರಕಲ್ಪಿತೈರ್ನಿಷ್ಟಪ್ತಹೇಮಾದಿವಿಶಾಲಪಾತ್ರೈಃ ।
ತಾಂಬೂಲೈಃಕೇತಕೈರ್ಲವಂಗಮುಖ್ಯೈಃ ಪೂಗೀಫಲೈಶ್ಚೂರ್ಣಕೈಃ ॥೮೧॥

ಉಡುಗಣಪತಿಮೌಳಿಧೇಸುಕರ್ಣೇಶಲಿಂಗಂ
ಸುರಗಣಗಣಕೃಷ್ಟೈರ್ವಾದ್ಯಜಾಲೋತ್ಥಶಬ್ದೈಃ ।
ಗಣಪತಿವರಶುಂಡಾಲಗ್ನಕಂಜೋತ್ಥನಾದೈ
ರ್ದಶಶತವರದೀಪೈರ್ದೀಪಯಾಮಾಸ ಭೂಪಃ ॥೮೨॥

ಸುಧಾಸಾರಕರ್ಪೂರಖಂಡೋತ್ಥಿತಾಪಾರದೀಪೈ
ರಖಂಡೈಶ್ಚ ಬಿಲ್ವೈಸ್ತದಾಖಂಡಲಾದ್ಯಾಃ ।
ಸುಧಾಧಾಮಖಂಡೋಜ್ಜ್ವಲನ್ಮೌಲಿಲಿಂಗಂ
ಅಖಂಡೈಕಬೋಧಾಯ ನೀರಾಜಯಂತಿ ॥೮೩॥

---

ಮನೋಹರವಾಗಿರುವ ತೊವ್ವೆಯ ರಾಶಿಯನ್ನೂ, ಚೆನ್ನಾಗಿ ಕಾದು ಗಮಗಮಿಸುತ್ತಿರುವ ಹಸುವಿನ ತುಪ್ಪವನ್ನೂ, ಭಗವಂತನಾದ ಗೋಕರ್ಣೇಶ್ವರನಿಗೆ ಭಕ್ತಿಯಿಂದ ಸಮರ್ಪಿಸಿ, ರಾಜನು ತಾನು ಧನ್ಯನೆಂದು ಭಾವಿಸಿಕೊಂಡನು. ॥೮೦॥

ಕೋಮಲವಾದ ವೀಳೆಯದೆಲೆಯನ್ನೂ ಚಿನ್ನದ ತಟ್ಟೆಯಲ್ಲಿಟ್ಟು, ಲವಂಗ, ಏಲಕ್ಕಿ ಇವುಗಳಿಂದ ಮಿಶ್ರಿತವಾದ ಅಡಕೆಯನ್ನು ಅದರ ಮೇಲಿಟ್ಟು ಮಹೇಶ್ವರನಿಗೆ ಸಮರ್ಪಿಸಿದನು. ॥೮೧॥

ಹಾಗೆಯೇ ಚಂದ್ರಶೇಖರನೆನಿಸಿದ ಗೋಕರ್ಣೇಶ್ವರ ಲಿಂಗಕ್ಕೆ, ಸಾವಿರಾರು ದೀಪಗಳಿಂದ ನೀರಾಜನಮಾಡಿದನು. ದೇವಗಣಗಳೆಲ್ಲಾ ಮಧುರವಾದ ವಾದ್ಯಧ್ವನಿಗೈಯುತ್ತಿದ್ದುವು. ಗಣಪತಿಯು ತನ್ನ ಸೊಂಡಲಿನ ತುದಿಯಲ್ಲಿ ಕಮಲವನ್ನು ಹಿಡಿದು ಘೀಂಕಾರ ಮಾಡುತ್ತಿದ್ದನು. ಇಂತಹ ಸಂಭ್ರಮದಿಂದ ಮಹಾಮಂಗಳಾರತಿಯನ್ನೂ ರಾಜನು ನೆರವೇರಿಸಿದನು. ॥೮೨॥

ಹಾಗೆಯೇ ಇಂದ್ರಾದಿದೇವತೆಗಳು ಕರ್ಪೂರ ಖಂಡಗಳಿಂದ ಅಖಂಡವಾದ ದೀಪಗಳನ್ನು ಹೊತ್ತಿಸಿ, ಬಿಲ್ವದಳಗಳಿಂದ ಅದನ್ನು ಹಿಡಿದುಕೊಂಡು ಶಿವಜ್ಞಾನವು

ಹರ ಹರ ಶಿವ ಶಂಕರ ಪ್ರಸೀದ ಶಂಭೋ
ದುರಿತೋತ್ಥಿತತಾಪಹರಾಸ್ತದೋಷೇ ।
ಇತಿ ಸುರವರಕಿಂನರೋಕ್ತಶಬ್ದೈಃ
ಕರಬದ್ಧಾಂಜಲಿಭಿಸ್ತದಾ ಪ್ರದೋಷೇ ॥೮೪॥

ಛತ್ರೈಶ್ಚಾಮರಕೋಟಿಭಿಶ್ಚ ಗಿರಿಜೇ ಮಾಂ ವೀಜಯತ್ಯಾದರಾ
ನ್ಮಾಯೂರೈರ್ವ್ಯಜನೈಸ್ತಥೈವ ವಿಮಲಾದರ್ಶೈಶ್ಚ ನಾಟ್ಯೈರಪಿ ।
ದೇವಿ ಪ್ರಸ್ತವನಪ್ರದಕ್ಷಿಣನಮಸ್ಕಾರೈಃ ಶಿವಂ ತೋಷಯತ್
ಭೇರೀಶಂಖಮೃದಂಗಕಾಹಲರವೈರ್ನಾಟ್ಯಾಂಗನಾಕಲ್ಪಿತೈಃ ॥೮೫॥

ನಾಟ್ಯೈಸ್ತಾಲಮೃದಂಗನೂಪುರರಣತ್ಕಾಹಳರವೈಃ ಶಂಕರಂ ।
ಸಂತೋಷ್ಯ ಪ್ರಮಥೇಶ್ವರಂ ಸ ಮುಮುದೇ ಧನ್ಯೋ ಹಿ ಭೂಷಾಗ್ರಣೀಃ ॥೮೬॥

---

ನಮಗೆ ಸಂಪೂರ್ಣವಾಗಿ ದೊರಕಲಿ ಎಂಬ ಉದ್ದೇಶದಿಂದ ಭಕ್ತಿಪೂರ್ವಕವಾಗಿ ಮಂಗಳಾರತಿ ಮಾಡಿದರು. ॥೮೩॥

ಅನಂತರ ಅವರೆಲ್ಲರೂ ಆ ಪ್ರದೋಷಕಾಲದಲ್ಲಿ ಶಿವಲಿಂಗಕ್ಕೆದುರಾಗಿ ನಿಂತು, “ಹರ, ಹರ, ಮಹಾದೇವ, ಶಂಭೋ, ಪಾಪನಿವಾರಕ ನಮ್ಮ ವಿಷಯದಲ್ಲಿ ನೀನು ಪ್ರಸನ್ನನಾಗು” ಎಂದು ಪ್ರಾರ್ಥಿಸುತ್ತಾ ನಮಸ್ಕಾರಮಾಡಿದರು. ॥೮೪॥

ಹಾಗೆಯೇ ಛತ್ರಿ, ಚಾಮರಾದಿಗಳಿಂದ ನನ್ನನ್ನು ಉಪಚರಿಸಿದರು. ನವಿಲುಗರಿಯ ಬೀಸಣಿಗೆಗಳಿಂದಲೂ, ಪರಿಶುದ್ಧವಾದ ಕನ್ನಡಿಗಳಿಂದಲೂ, ವಿಧವಿಧವಾದ ನಾಟ್ಯಗಳಿಂದಲೂ ನನ್ನನ್ನು ಸಂತೋಷಗೊಳಿಸಿದರು. ದೇವಿಯನ್ನು ವಿಧವಿಧವಾದ ಸ್ತುತಿವಚನಗಳಿಂದ ಸ್ತುತಿಸಿ, ಭೇರಿ, ಶಂಖ, ಮೃದಂಗ, ತುತ್ತೂರಿ ಮುಂತಾದ ವಾದ್ಯರವಗಳಿಂದ ನನ್ನನ್ನು ಬಹಳವಾಗಿ ತೃಪ್ತಿಪಡಿಸಿದರು. ॥೮೫॥

ತಾಲಮೃದಂಗಾದಿವಾದ್ಯಗಳಿಂದ ಕಣ್ಣುಗಳಿಗೂ, ಕಿವಿಗಳಿಗೂ ಇಂಪನ್ನುಂಟುಮಾಡುವ ನಾಟ್ಯಗಳಿಂದ ಪರಶಿವನಾದ ನನ್ನನ್ನು ಸಂತೋಷಗೊಳಿಸಿ, ಆ ರಾಜನೂ ಸ್ವಯಂ ಸಂತೋಷಪಟ್ಟನು. ॥೮೬॥

|| ರಾಜಾ ಉವಾಚ ||

ಶ್ರೀಮದ್ಗೋಕರ್ಣ ಶಂಭೋ ಭವಶತಜನಿತಾಪಾರತಾಪೈಕಭಂಗಂ
ತ್ವಲ್ಲಿಂಗಂ ದೃಷ್ಟಿಸಂಗಂ ಯದಿ ಭವತಿ ಮಹಾಭಾಗ್ಯಪೂರ್ಣೇ ಜನೇಸ್ಮಿನ್ ।
ಕಾಲೇ ವೀತಭಯೇ ಪ್ರದೋಷಸಮಯೇ ಸರ್ವೈಃ ಸುರೈಸ್ಸೇವ್ಯತೇ
ತ್ವತ್ಪಾದಾಂಬುರುಹಂ ಪ್ರಕೃಷ್ಟಭವಜಾಪಾರವ್ಯಥಾಂ ಸಂಹರೇತ್ ॥೮೭॥

|| ಶ್ರೀ ಶಿವ ಉವಾಚ ||

ಇತ್ಥಂ ಮಾಮಂಬಿಕೇಶಂ ಸುರವರನಿಕರೈಶ್ಯಾಂಕರೈರ್ದೇವಿ ಪೂಜ್ಯೈಃ
ಕಾಲೇ ತಸ್ಮಿನ್ ಪ್ರದೋಷೇ ಗಿರಿವರತನಯೇ ಸರ್ವಸೌಖ್ಯೇಸ್ತ್ವದೋಷೇ ।
ಭೂಪಸ್ತ್ರಾಪೈರ್ವಿಹೀನೋ ಮುದಿತವಸುಮನಾಃ ಸನ್ಮನಾಸ್ತತ್ಪದಾಬ್ಜಂ
ಸಂಪೂಜ್ಯಾಲೋಕ್ಯ ಪೂತೋ ಮಮ ಗಣವರಭಾಕ್ ಭಾಗ್ಯವರ್ಯಃ
ಕೃತೋ ಮೇ ॥೮೮॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಗೋಕರ್ಣೇಶ
ಮಾಹಾತ್ಮ್ಯೇ ವಸುಮನಾ ನಾಮ ವಿದರ್ಭರಾಜಕೃತ ಪ್ರದೋಷಪೂಜಾದಿ
ಕೈಂಕರ್ಯವರ್ಣನಂ ನಾಮ ತ್ರಯೋವಿಂಶೋಧ್ಯಾಯಃ

---

ಕೊನೆಯಲ್ಲಿ ಹೀಗೆ ನನ್ನನ್ನು ಸ್ತುತಿಸಿದನು. "ಗೋಕರ್ಣೇಶ್ವರನೆಂದು ಪ್ರಸಿದ್ಧಿಪಡೆದ ಮಹಾದೇವನೇ, ನಿನ್ನ ಈ ಶಿವಲಿಂಗದ ದರ್ಶನವು ನಮ್ಮ ನೂರಾರು ಜನ್ಮಗಳಲ್ಲಿ ಸಂಕಲಿತವಾದ ಪಾಪರಾಶಿಯನ್ನೆಲ್ಲಾ ಹೋಗಲಾಡಿಸುವುದು. ಆದರಲ್ಲಿಯೂ ಈಶ್ವರ ದರ್ಶನಕ್ಕೆ ಅತ್ಯಂತ ಶ್ರೇಷ್ಠವೆನಿಸಿರುವ, ಈ ಪ್ರದೋಷ ಕಾಲದಲ್ಲಿ ದೇವತೆಗಳೂ ಸಹ ತಮ್ಮ ಪಾಪನಿವಾರಣೆಗಾಗಿಯೂ, ದುಃಖಶಮನ ಕ್ಕಾಗಿಯೂ ನನ್ನನ್ನು ಆರಾಧಿಸುತ್ತಿರುವರು. ॥೮೭॥

ಎಲೌ ಪಾರ್ವತಿಯೇ, ಹೀಗೆ ಪಾರ್ವತೀಪತಿಯೆನಿಸಿದ ನನ್ನನ್ನು, ದೇವತೆ ಗಳೂ, ಶೈವವರ್ಯರೂ, ಗೋಕರ್ಣಕ್ಷೇತ್ರದಲ್ಲಿ ತಮ್ಮ ಇಷ್ಟಾರ್ಥ ಪ್ರಾಪ್ತಿಗಾಗಿ ಸದಾ ಆರಾಧನೆಗೈಯುವರು. ಅದಲ್ಲಿಯೂ, ಪ್ರದೋಷಕಾಲವೆನ್ನುವುದು, ಸಕಲ ಭಕ್ತರ ತಾಪವನ್ನು ನಿವಾರಿಸತಕ್ಕದು. ಅಂತಹ ಪ್ರದೋಷಕಾಲದಲ್ಲಿ ವಸುಮನನೆಂಬ

ಹೆಸರಿನ ಆ ರಾಜನು ಗೋಕರ್ಣೇಶ್ವರ ಲಿಂಗವನ್ನು ಭಕ್ತಿಯಿಂದ ಅರ್ಚಿಸಿ, ಸಕಲ ಇಷ್ಟಾರ್ಥಗಳನ್ನೂ ಸಂಪಾದಿಸಿ, ಕೊನೆಗೆ ಪವಿತ್ರತಮನೆನಿಸಿ, ತನ್ನ ಗಣಗಳಲ್ಲಿ ಶ್ರೇಷ್ಠವಾದ ಪದವಿಯನ್ನೂ ಸಂಪಾದಿಸಿ ನನ್ನ ಲೋಕವನ್ನು ಹೊಂದಿದನು. ಆದ್ದರಿಂದ ಎಲೌ ಗಿರಿರಾಜ ಪುತ್ರಿಯೇ, ಭೂಲೋಕದಲ್ಲಿ ವಿಶೇಷ ಮಹಿಮೆಯಿಂದ ಪ್ರಸಿದ್ಧಿ ಪಡೆದಿರುವ ಗೋಕರ್ಣಕ್ಷೇತ್ರವೆಂಬುದು ಅತಿ ಪುರಾತನವೂ, ಪವಿತ್ರವೂ ಎಂಬುದನ್ನು ತಿಳಿ, ಎಂದು ಶಂಕರನು ತಿಳಿಸಿದನು. ||೮೮||

ಇಲ್ಲಿಗೆ ಶ್ರೀ ಶಿವರಹಸ್ಯದ ಪಂಚಮಾಂಶದಲ್ಲಿ ಗೋಕರ್ಣೇಶ ಮಾಹಾತ್ಮ್ಯೆಯನ್ನೂ ವಸುಮನಸ್ಸೆಂಬ ರಾಜನ ಇತಿಹಾಸವನ್ನೂ ತಿಳಿಸುವ ಇಪ್ಪತ್ತು ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಶಿವರಹಸ್ಯೇ

## ಪಂಚಮಾಂಶೇ

## ಚತುರ್ವಿಂಶೋಽಧ್ಯಾಯಃ

॥ ದೇವ್ಯುವಾಚ ॥

ಶ್ರೀಗೌರಿ ಭಾರ್ಗವೋ ರಾಮೋ ಮಾಮಾರಾಧ್ಯಾವಸತ್ತದಾ ।
ತದಾ ತದಾಖ್ಯಾನವರಂ ತೇದ್ಯ ವಕ್ಷ್ಯೇ ಶೃಣುಷ್ವ ತತ್ ॥೧॥

ಕಥಮಾರಾಧಯದ್ರಾಮಸ್ತ್ವತ್ಪಾದಾಂಬುಜಮೀಶ್ವರ ।
ಕೃಪಯಾ ಬ್ರೂಹಿ ದೇವದೇವೇಶ ತದ್ವದಸ್ವಾನುಪೂರ್ವಶಃ ॥೨॥

॥ ಈಶ್ವರ ಉವಾಚ ॥

ಕೃತವೀರ್ಯೋ ಮಹಾದೇವಿ ಮಾಹಿಷ್ಮತ್ಯಾಮಭೂನ್ನೃಪಃ ।
ಯಜ್ವಾ ಸ ವಿಭವೋಪೇತಃ ಧರ್ಮಾತ್ಮಾ ಕ್ಷತ್ರಿಯರ್ಷಭಃ ॥೩॥

ಕುಮುದ್ವತೀ ತಸ್ಯ ಭಾರ್ಯಾ ತಸ್ಯಾಂ ತಸ್ಯ ಸುತೋಽಭವತ್ ।
ಕಾರ್ತವೀರ್ಯಾರ್ಜುನೋ ನಾಮ್ನಾ ಸ ಶಾಸ್ತಿ ಪೃಥಿವೀಮಿಮಾಂ ॥೪॥

---

## ಇಪ್ಪತ್ತನಾಲ್ಕನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಯನ್ನು ಕುರಿತು, " ದೇವಿಯೇ, ಭೃಗುಋಷಿ ಪುತ್ರನಾದ ಭಾರ್ಗವನು ನನ್ನನ್ನು ತಪಸ್ಸಿನಿಂದ ಮೆಚ್ಚಿಸಿದ ಕಥೆಯನ್ನೂ ವಿಸ್ತರಿಸಿ ಹೇಳುವೆನು, ಕೇಳು ಎನ್ನಲು, ಪಾರ್ವತಿಯು ಒಡನೆಯೇ ಅಂಜಲಿಬದ್ಧಳಾಗಿ ' ಮಹಾದೇವನೇ, ಭಾರ್ಗವರಾಮನು ನಿನ್ನನ್ನು ಆರಾಧಿಸಿದ ಕ್ರಮವನ್ನೂ ವಿವರಿಸಿ ನನಗೆ ಹೇಳಬೇಕು ' ಎಂದು ಪ್ರಾರ್ಥಿಸಿದಳು. ॥೧-೨॥

ಆಗ ಶಂಕರನು ಅದೇ ಕಥೆಯನ್ನು ಮುಂದುವರಿಸುತ್ತಾ ದೇವಿಯೊಡನೆ ಹೀಗೆಂದನು. " ಮಾಹಿಷ್ಮತೀ ನಗರದಲ್ಲಿ ಕೃತವೀರ್ಯನೆಂಬ ಕ್ಷತ್ರಿಯ ಶ್ರೇಷ್ಠನು

ದತ್ತಾತ್ರೇಯೋ ಗುರುಸ್ತಸ್ಯ ಸದಾ ಮದ್ಭಕ್ತಿಭಾವಿತಃ ।
ಸ ಪರ್ಯಟನ್ ನರ್ಮದಾಯಾಸ್ತೀರೇ ಸುಂದರಕಾನನೇ ॥೫॥

ದದಾರ್ಶಾಶ್ರಮಮೇಕಾಂತೇ ಕ್ಷುತ್ತೃಷ್ಣಾಭ್ಯಾಂ ಸಮನ್ವಿತಃ ।
ಜಮದಗ್ನಿಂ ಮುನಿವರಂ ಶಾಂಭವಂ ಪ್ರಣನಾಮ ಚ ॥೬॥

ಪೃಷ್ಟಸ್ತೇನಾಪಿ ಕುಶಲಮಾತಿಥ್ಯೇನ ನ್ಯಮಂತ್ರಯತ್ ।
ಕಾಮಧೇನುಪಯೋಭೂತೈರ್ವಿಭವೈಸ್ತಂ ಸಮರ್ಚಯತ್ ॥೭॥

ಸ ಕಾಮಧೇನುಂ ಚಕಮೇ ನೃಪೋ ಬಾಹುಬಲೋದ್ಧತಃ ।
ತನ್ನೈಚ್ಛಜ್ಜಮದಗ್ನಿಶ್ಚ ಗೋಗಣಾನಾಂ ಶತೈರಪಿ ॥೮॥

ವಿಧ್ವಾ ಶರಶತೈರ್ವಿಪ್ರಂ ಕಾಮಧೇನುಂ ನೃಪೋಽಹರತ್ ।
ವಿದ್ಧಂ ಸಾ ಸ್ವಪತಿಂ ದೃಷ್ಟ್ವಾ ರಾಮೇ ವಿಪಿನಗೇ ತದಾ ॥೯॥

---

ಕುಮುದ್ವತಿಯೆಂಬ ಪತ್ನಿಯೊಡಗೂಡಿ ಧರ್ಮದಿಂದ ರಾಜ್ಯವಾಳುತ್ತಿದ್ದನು. ಅವನ ಪುತ್ರನೆನಿಸಿದ ಕಾರ್ತವೀರ್ಯಾರ್ಜುನನೂ, ತಂದೆಯಂತೆಯೇ ಧರ್ಮಿಷ್ಠನೆನಿಸಿಕೊಂಡು ರಾಜ್ಯವಾಳುತ್ತಿದ್ದನು. ॥೩-೪॥

ಆತನಿಗೆ ತನ್ನ ಭಕ್ತನಾದ ದತ್ತಾತ್ರೇಯನೇ ಗುರುವು. ಒಂದು ಸಾರಿ ಕಾರ್ತವೀರ್ಯಾರ್ಜುನನು ಅರಣ್ಯದಲ್ಲಿ ಸಂಚರಿಸುತ್ತಾ, ನರ್ಮದಾ ತೀರಕ್ಕೆ ಬಂದನು. ಅಲ್ಲಿರುವ ಸುಂದರತರವಾದ ಜಮದಗ್ನಿಯ ಆಶ್ರಮವನ್ನೂ ನೋಡಿ ಹಸಿವು ಬಾಯಾರಿಕೆಗಳಿಂದ ಕೂಡಿದವನಾಗಿ, ಆಶ್ರಮವನ್ನು ಪ್ರವೇಶಿಸಿ, ಅಲ್ಲಿದ್ದ ಮುನಿ ಶ್ರೇಷ್ಠನಾದ ಜಮದಗ್ನಿ ಮಹರ್ಷಿಗೆ ನಮಸ್ಕರಿಸಿದನು. ॥೫-೬॥

ಜಮದಗ್ನಿಯಾದರೋ, ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ತನ್ನ ಆಶ್ರಮಕ್ಕೆ ಬಂದ ಕಾರ್ತವೀರ್ಯರಾಜನನ್ನು ನೋಡಿ, ಕುಶಲಪ್ರಶ್ನೆ ಮಾಡಿ, ತನ್ನಲ್ಲಿದ್ದ ಕಾಮಧೇನುವಿನ ಸಹಾಯದಿಂದ ಅವನಿಗೂ, ಅವನ ಪರಿವಾರಕ್ಕೂ ತೃಪ್ತಿಕರವಾಗಿ ಸತ್ಕಾರಮಾಡಿದನು. ಅದು ಕಾಮಧೇನುವಿನ ಮಹಿಮೆಯೆಂದರಿದು, ರಾಜನು ಆ ಕಾಮಧೇನುವು ತನಗೆ ಬೇಕೆಂದೂ, ಪ್ರತಿಯಾಗಿ ಅನೇಕ ಗೋವುಗಳನ್ನು ತಾನು ಕೊಡುವೆನೆಂದೂ ಕೇಳಿಕೊಂಡನು. ಜಮದಗ್ನಿಯು ಅದಕ್ಕೆ ಒಪ್ಪಲಿಲ್ಲ. ॥೭-೮॥

ಒಡನೆಯೇ ರಾಜನು ಕೋಪದಿಂದ ಋಷಿಯನ್ನು ಬಾಣಗಳಿಂದ ಹೊಡೆದು ಕಾಮಧೇನುವನ್ನು ಎಳೆದೊಯ್ದನು. ಆಗ ಅವನ ಪತ್ನಿಯಾದ ರೇಣುಕಾದೇವಿಯು

ರುರೋದ ರೇಣುಕಾ ದೀನಾ ದೃಷ್ಟ್ವಾ ಪುತ್ರಂ ಸಮಾಗತಂ ।
ಉವಾಚ ರುದತೀ ಮಾತಾ ರಾಮರಾಮೇತಿ ಸುಸ್ವರಂ ॥೧೦॥

॥ ರಾಮ ಉವಾಚ ॥

ತದಾ ತತ್ಕರುಣಾಂ ಶ್ರುತ್ವಾ ಸ್ವಮಾತುಃ ಪರಿದೇವನಂ ।
ಸಂಕ್ರುದ್ಧೋ ವಚನಂ ರಾಮಃ ಶ್ರುತ್ವೋದಂತಂ ತಪಸ್ವಿಭಿಃ ॥೧೧॥

ಉವಾಚ ಮಾತರಂ ದೀನಾಂ ಭರ್ತಾರಮನುಗಚ್ಛತೀಂ ॥೧೨॥

ನ್ಯೈವಂ ರುದೋ ವಿಶಾಲಾಕ್ಷಿ ಭರ್ತುರ್ಗಚ್ಛ ಸಲೋಕತಾಂ ।
ಅಸ್ಯ ಶಾಂಭವವರ್ಯಸ್ಯ ಹನನೇ ಕಸ್ಸುಖೀ ಭವೇತ್ ॥೧೩॥

ಅಪರಾಧ್ಯಾಪಿ ವಿಪ್ರೋ ವೈ ನ ಹಂತವ್ಯ ಇತಿ ಶ್ರುತಿಃ ।
ಶಾಂಭವಶ್ಚೇದ್ದಶ ಗುಣಂ ತಸ್ಯ ಪಾಪಂ ಭವಿಷ್ಯತಿ ॥೧೪॥

ಬ್ರಹ್ಮಘ್ನೇ ನಿಷ್ಕೃತಿರ್ಮಾತಃ ಕಲ್ಪಿತಾಸ್ತಿ ಕ್ವಚಿತ್ಸುರೈಃ ।
ಅಬುದ್ಧಿಪೂರ್ವೇ ಬುದ್ಧ್ವಾ ತು ಮರಣಾಂತಮಿತಿಶ್ರುತಿಃ ॥೧೫॥

---

ಅಳುತ್ತಾ ತನ್ನ ಪತಿಯು ಮೂರ್ಛಿತನಾಗಿ ಬಿದ್ದಿರುವುದನ್ನು ನೋಡಿ ನೋಡಿ ತನ್ನ ಮಗನಾದ ರಾಮನನ್ನು ಕೂಗಿಕೊಂಡಳು. ॥೯-೧೦॥

ಆಗ ಆ ದೀನಧ್ವನಿಯನ್ನು ಕೇಳಿ ರಾಮನು ಓಡಿಬಂದು, ಅದನ್ನೆಲ್ಲಾ ನೋಡಿ, ಅಳುತ್ತಿರುವ ತಾಯಿಯನ್ನು ಹೀಗೆ ಸಮಾಧಾನಪಡಿಸಿದನು. “ಮಾತೆಯೇ, ದುಃಖಿಸಬೇಡ. ನೀನು ಪತಿಯನ್ನೇ ಹಿಂಬಾಲಿಸು. ಈ ಶಿವಪೂಜಾಧುರಂಧರನಾದ ನಮ್ಮ ತಂದೆಯನ್ನು ಕೊಂದವನು ಎಂದಾದರೂ ಸುಖಿಯಾಗಿರುವನೇ ? ॥೧೧-೧೨-೧೩॥

ಒಂದು ವೇಳೆ ತಪ್ಪುಮಾಡಿದರೂ, ತಪ್ಪುಮಾಡಿದ ಬ್ರಾಹ್ಮಣನನ್ನು ಕೊಲ್ಲ ಕೂಡದೆಂದು ಶ್ರುತಿಯಿರುವುದು. ಅದರಲ್ಲಿಯೂ ಈಶ್ವರಾರ್ಚಕನಾದ ಬ್ರಾಹ್ಮಣನನ್ನು ಕೊಂದವನಿಗೆ, ದಶಗುಣವಾದ ಬ್ರಹ್ಮಹತ್ಯಾದೋಷವು ಒದಗುವುದು. ಅಂತಹವನನ್ನು ವಿಚಾರ ಮಾಡದೆ ಕೊಲ್ಲಬಹುದೆಂಬ ಶ್ರುತಿಯೂ ತೋರಿಬರುತ್ತಿದೆ. ಬುದ್ಧಿಪೂರ್ವಕ ವಾಗಿ ಕೊಂದ ಈ ಪಾಪಿಯನ್ನೂ ನಾನು ಶಿಕ್ಷಿಸದೆ ಬಿಡುವೆನೇ. ॥೧೪-೧೫॥

ಶಾಂಭವಸ್ಯಾದ್ಯ ಹನನೇ ಬುದ್ಧಿರ್ಬುದ್ಧಿಕೃತಾಂಹಸಾಂ ।
ನೈವ ನೈಷ್ಕೃತಿಕೋ ಭೂಯಾದ್ರುದ್ರಕೋಪೋನ್ಮುಖೋ ಹಿ ಸಃ ॥೧೬॥

ರುದ್ರಕೋಪಾಗ್ನಿದಗ್ಧಸ್ಯ ಕೋ ವಾ ತ್ರಾಣಕರೋ ಭವೇತ್ ।
ಅಮರೈಶ್ಚ ವೃತಃ ಪೂರ್ವಂ ಸ್ಮರೋ ದೇವಾದಿಕಾರ್ಯಕೃತ್ ॥೧೭॥

ವಿಷ್ಣೋರ್ಲಕ್ಷ್ಮ್ಯಾಶ್ಚ ಯಃ ಪುತ್ರಃ ಪುಷ್ಪೈರಿಷುಗಣೈಶ್ಶಿವಂ ।
ಅನ್ಯಸಾಧಾರಣಂ ಜ್ಞಾತ್ವಾ ಅವಿಧ್ಯತ್ತಂ ಮಹೇಶ್ವರಂ ॥೧೮॥

ಕ್ಷಣೇನ ಭಸ್ಮತಾಂ ನೀತಃ ಕಿಂ ಪುನರ್ದ್ರೋಹಕೃಜ್ಜನಃ ।
ಶಾಂಭವೋ ಹಿ ಶಿವಸ್ಯೈವ ಚರಾಮೂರ್ತಿರಿತಿ ಶ್ರುತಿಃ ॥೧೯॥

ಬ್ರಹ್ಮಾ ಬ್ರಹ್ಮಾಭವದ್ಯಸ್ಯ ಸದಸ್ಯೋ ವಿಷ್ಣುರೇವ ಹಿ ।
ರುದ್ರಕ್ರೋಧಾಗ್ನಿದಗ್ಧಸ್ಯ ಕೋ ದಕ್ಷಸ್ಯ ಪರಾಯಣಂ ॥೨೦॥

ಪಶ್ಯತಾಂ ಸರ್ವದೇವಾನಾಂ ವೀರಭದ್ರೇಣ ನಾಶಿತಃ ।
ದಕ್ಷಮನ್ಯುಸ್ತದಾ ಮಾತಃ ಸ ಮಮಾಸ್ತೇ ಪರಾಯಣಂ ॥೨೧॥

---

ಈಶ್ವರಭಕ್ತನನ್ನು ಬುದ್ಧಿಪೂರ್ವಕವಾಗಿ ಕೊಂದವನಿಗೆ ಎಂದೂ ಸುಖವಿಲ್ಲ. ಏಕೆಂದರೆ ಆತನು ಈಶ್ವರನ ಕೋಪಕ್ಕೆ ಪಾತ್ರನಾಗುವನು. ರುದ್ರಕೋಪಕ್ಕೆ ಗುರಿಯಾದವನು ಎಷ್ಟೇಧೀರನಾಗಿದ್ದರೂ ಉಳಿಯುವುದುಂಟೆ ? ದೇವತೆಗಳ ಸುಖಕ್ಕಾಗಿ, ಅವರ ಕಾರ್ಯಸಾಧನೆಗಾಗಿ ಬಂದ ಮನ್ಮಥನು ಉಳಿದನೇ ? ॥೧೬-೧೭॥

ವಿಷ್ಣು ಲಕ್ಷ್ಮಿಯರಿಗೆ ಪುತ್ರನಾಗಿ, ಪುಷ್ಪಬಾಣಗಳಿಂದ ಸಾಮಾನ್ಯ ಮನುಷ್ಯನೆಂದು ಭಾವಿಸಿ ಶರಪ್ರಹಾರಮಾಡಿದ ಮನ್ಮಥನು ಕ್ಷಣಕಾಲದಲ್ಲಿ ರುದ್ರನಿಟಿಲಾಕ್ಷದಿಂದ ಭಸ್ಮವಾದನಲ್ಲವೇ ? ಹಾಗಿರುವಾಗ ಈಶ್ವರಕೋಪಕ್ಕೆ ಸಿಕ್ಕಿದ ದ್ರೋಹಿಯು ಬದುಕುವುದುಂಟೇ ? ಈಶ್ವರಭಕ್ತನೂ ಸಹ ಚರರೂಪಿಯಾದ ಈಶ್ವರನೇ ಅಲ್ಲವೆ ? ಚರಲಿಂಗವೇ ಶಾಂಭವನು. ॥೧೮-೧೯॥

ದಕ್ಷಬ್ರಹ್ಮನ ಯಾಗದಲ್ಲಿ ಬ್ರಹ್ಮನು ಬ್ರಹ್ಮನಾಗಿಯೂ, ವಿಷ್ಣುವು ಸದಸ್ಯನಾಗಿಯೂ ಇದ್ದರು. ಆಗಲೂ ರುದ್ರನ ಕೋಪದಿಂದ ಸೃಷ್ಟವಾದ ವೀರಭದ್ರನ ಹಾವಳಿಯನ್ನು ತಡೆಗಟ್ಟಲು ಯಾರಿಗೂ ಸಾಧ್ಯವಾಗಲಿಲ್ಲ. ಸಕಲ ದೇವತೆಗಳೂ

ಶಾಂಭವಸ್ಯ ಚ ಬಾಲಸ್ಯ ಮಾರ್ಕಂಡೇಯಸ್ಯ ಪೀಡನಾತ್ ।
ಕಾಲಮೃತ್ಯೋರಪಿ ಶಿವಾನ್ಮಾತಮೃತ್ಯುರುಪಾಗತಃ ॥೨೨॥

ಶಿವೇ ಶಾಂಭವವರ್ಗೇ ಚ ನಾಂತರಂ ಪಶ್ಯ ಮೇಧುನಾ ।
ಕ್ಷತ್ರಬಂಧುರಯಂ ಪಾಪೀ ನ ಚಿರಾದ್ವರ್ತಯಿಷ್ಯತಿ ॥೨೩॥

ಶಾಂಭವದ್ರೋಹಕೃನ್ಮರ್ತ್ಯೋ ಸುರೋ ವಾಪ್ಯಸುರೋಽಥವಾ ।
ನ ಬ್ರಹ್ಮಾ ನ ಹರಿರ್ವಾಪಿ ಕಿಮುನ್ಯೇ ಪಾಮರೇ ನರಾಃ ॥೨೪॥

ಕೃತ್ವಾಪಿ ಸರ್ವಪಾಪಾನಿ ಯೋ ರುದ್ರಂ ಮನಸಾ ಸ್ಮರೇತ್ ।
ಸದ್ಯಸ್ತತ್ಕೃತಪಾಪಾನಿ ಭಸ್ಮಭೂತಾನಿ ಶೋಭನೇ ॥೨೫॥

ತಸ್ಯೈವ ಚಾಪರಾಧೇನ ಕೋ ವಾ ತನ್ಮೋಚಕೋ ಭವೇತ್ ।
ತಮುರಾಧ್ಯತಮಂ ದೇವಂ ಸಮಾರಾಧ್ಯೈವ ಭಕ್ತಿತಃ ॥೨೬॥

ಕಾರ್ತವೀರ್ಯಕುಲಂ ಸರ್ವಂ ನಿಹಂತಾ ವಿಜ್ವರಾ ಭವ ।
ಅಹಂ ಸತ್ಯಪ್ರತಿಜ್ಞಶ್ಚ ತ್ವತ್ತೋ ಜಾತೋಸ್ಮಿ ಮಾ ಶುಚಃ ॥೨೭॥

---

ನೋಡುತ್ತಿರುವಾಗಲೇ ದಕ್ಷಬ್ರಹ್ಮನ ಯಾಗವು ಸಂಪೂರ್ಣವಾಗಿ ನಾಶವಾಯಿತು. ಅಂತಹ ಶಂಕರನೇ ಈಗ ನನಗೆ ರಕ್ಷಕನಾಗುವನು. ॥೨೦-೨೧॥

ಈಶ್ವರಭಕ್ತನೆನಿಸಿದ ಮೃಕಂಡುಪುತ್ರನನ್ನು ಹಿಂಸಿಸಿದ ತಪ್ಪಿಗಾಗಿ ಮೃತ್ಯುವಿಗೂ ಮೃತ್ಯುವನ್ನು ತಂದಿಟ್ಟವನು ಪರಶಿವನಲ್ಲವೇ? ಆದ್ದರಿಂದ ಈಶ್ವರನಿಗೂ ಈಶ್ವರಭಕ್ತನಿಗೂ ಎಂದೂ ಭೇದವನ್ನೆಣಿಸಬಾರದು. ಈ ಪಾಪಿಕ್ಷತ್ರಿಯನಾದ ಕಾರ್ತವೀರ್ಯನು ಇನ್ನು ಹೆಚ್ಚುಕಾಲ ಉಳಿಯಲಾರನು. ॥೨೨-೨೩॥

ಈಶ್ವರಭಕ್ತನಿಗೆ ದ್ರೋಹವೆಸಗಿದವನು ಹರಿಯೇ ಆಗಲಿ, ಬ್ರಹ್ಮನೇ ಆಗಲಿ, ಇತರ ಯಾವ ದೇವತೆಯೇ ಆದರೂ ಅವನಿಗೆ ಉಳಿಗಾಲವಿಲ್ಲದಿರುವಾಗ ಪಾಮರರಾದ ಮನುಜರ ಮಾತೇನು? ಅನೇಕ ಪಾಪಗಳನ್ನು ಮಾಡಿದ್ದರೂ ಭಕ್ತಿಯಿಂದ ಒಂದಾವರ್ತಿ ಶಂಕರನನ್ನು ಸ್ಮರಿಸಿದರೆ ಆತನ ಪಾಪರಾಶಿಯೆಲ್ಲಾ ನಿರ್ಮೂಲವಾಗುವುದು. ॥೨೪-೨೫॥

ಅಂತಹ ದೇವದೇವನಿಗೆ ಅಪರಾಧವೆಸಗಿದವನನ್ನು ಬದುಕಿಸುವವರು ಯಾರು? ಆದ್ದರಿಂದ ಎಲೌ ಜನನಿಯೇ, ಈಗಲೇ ಅಂತಹ ಮಹಾಮಹಿಮನಾದ

ಇತಿ ಸಾ ಸಾಂತ್ವಿತಾ ಮಾತಾ ರಾಮೇಣಾಕ್ಲಿಷ್ಟಕರ್ಮಣಾ ।
ಭರ್ತಾರಮನುಗಚ್ಛತ್ಸಾ ಧ್ಯಾಯಂತೀ ಸಾಂಬಮೀಶ್ವರಂ ॥೨೮॥

ನೈಧನೇನ ವಿಧಾನೇನ ರಾಮಸ್ಸಂಸ್ಕೃತ್ಯ ತೌ ತದಾ ।
ಶ್ರೀಮದ್ಗೋಕರ್ಣಮಗಮತ್ಕೋಪದುಃಖವಶಂಗತಃ ॥೨೯॥

ಸ ಸಾಗರೇ ತದಾ ಸ್ನಾತ್ವಾ ಭಸ್ಮರುದ್ರಾಕ್ಷಭೂಷಣಃ ।
ರುದ್ರಮಾವರ್ತಯನ್ನಾಸಂ ವತ್ಸರತ್ರಯಮಾದರಾತ್ ॥೩೦॥

ಬಿಲ್ವಪತ್ರೈಸ್ಸಮಭ್ಯರ್ಚ್ಯ ಪಂಚಾಕ್ಷರಪರಾಯಣಃ ।
ವಿನಿಶ್ವಾಸಪರೋ ನಿತ್ಯಂ ಕುಂಭರುದ್ಧಾಹಿರಾಡಿವ ॥೩೧॥

ಮಾತಾಪಿತ್ರೋಸ್ತದಾ ದುಃಖಂ ಸಂಸ್ಕೃತ್ಯ ಮನಸಾ ಶಿವೇ ।
ಕೃತಂ ತತ್ಕಾರ್ತವೀರ್ಯೇಣ ಪಾಪಿನಾ ಕ್ಷತ್ರಬಂಧುನಾ ॥೩೨॥

---

ಶಂಕರನನ್ನು ಅರ್ಚಿಸಿ, ಆ ಕಾರ್ತವೀರ್ಯಕುಲವನ್ನೇ ಧ್ವಂಸಮಾಡುವೆನು. ನಿನ್ನ ಪ್ರಿಯಪುತ್ರನಾದ ನನ್ನ ಈ ಪ್ರತಿಜ್ಞೆಯು ನಿಜವೆಂದು ನಂಬಿ, ನೀನು ದುಃಖವನ್ನು ಬಿಡು. ॥೨೬-೨೭॥

ಎಂದು ತಾಯಿಯನ್ನು ರಾಮನು ಸಮಾಧಾನಪಡಿಸಿದನು. ಆಕೆಯು ಮೃತನಾದ ಪತಿಯೊಡನೆ ತಾನೂ ಸಹಗಮನ ಮಾಡಿದಳು. ಅವರಿಬ್ಬರಿಗೂ, ರಾಮನು ವಿಧಿವತ್ತಾಗಿ ಸಂಸ್ಕಾರಾದಿಗಳನ್ನು ನೆರವೇರಿಸಿ, ಅಲ್ಲಿಂದ ದುಃಖಿತನಾಗಿ ಗೋಕರ್ಣಕ್ಷೇತ್ರಕ್ಕೆ ಬಂದನು. ಪ್ರತಿದಿನವೂ ಸಮುದ್ರಸ್ನಾನಮಾಡುತ್ತಾ, ಭಸ್ಮರುದ್ರಾಕ್ಷಾದಿಗಳನ್ನು ಧರಿಸಿಕೊಂಡು, ರುದ್ರಾಧ್ಯಾಯ ಪುರಶ್ಚರಣೆಯಿಂದ ಮೂರು ವರ್ಷಪರ್ಯಂತ ಅಲ್ಲಿ ವಾಸ ಮಾಡಿದನು. ॥೨೮-೨೯-೩೦॥

ಗೋಕರ್ಣೇಶನನ್ನು ಬಿಲ್ವಪತ್ರಾದಿಗಳಿಂದ ಅರ್ಚಿಸುತ್ತಾ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ ಕಾಲ ಕಳೆಯುತ್ತಿದ್ದರೂ ರಾಮನಿಗೆ ದುಷ್ಟನಾದ ಕಾರ್ತವೀರ್ಯನಿಂದ ಮಾತಾ ಪಿತೃಗಳಿಗೆ ಒದಗಿದ ಕಷ್ಟವು ಪದೇ ಪದೇ ಸ್ಮರಣೆಗೆ ಬರುತ್ತಿದ್ದಿತು. ಆಗಲೆಲ್ಲಾ ಆತನು ಮಡಕೆಯಲ್ಲಿ ಮುಚ್ಚಿಟ್ಟಿದ್ದ ಹಾವಿನಂತೆ ತನ್ನ ಕೋಪವನ್ನೂ ತಾನೇ ಅಡಗಿಸಿಕೊಳ್ಳುತ್ತಿದ್ದನು. ॥೩೧-೩೨॥

ಕ್ಷತ್ರಮುತ್ಸಾದಿತುಂ ರಾಮೋ ತತಾಪ ಪರಮಂ ತಪಃ ।
ಪಂಚಾಗ್ನಿಮಧ್ಯನಿರತೋ ಫಲಪರ್ಣಾಂಬುಭೋಜನಃ ॥೩೩॥

ಭಸ್ಮನಿಷ್ಠೋ ಭಸ್ಮಶಾಯೀ ರುದ್ರಾಧ್ಯಾಯಪರಾಯಣಃ ।
ಗೋಕರ್ಣೇಶಂ ಲಿಂಗರೂಪಂ ಮಾಂ ತುಷ್ಟಾವ ಸಮರ್ಚಯನ್ ॥೩೪॥

॥ ರಾಮ ಉವಾಚ ॥

ಮಹೇಶ್ವರ ಹರಾಮರಪ್ರವರಧೀರವಿಶ್ವೇಶ್ವರ
ಪ್ರಸೀದ ಪರಮೇಶ್ವರ ಪ್ರಮಥನಾಥ ನಾಥಾವ ಮಾಂ ।
ಭವಚ್ಚರಣಸಾರಸಪ್ರಸವಗಂಧಮಂದಾನಿಲೋ
ವಿನಾಶಯತು ಮಚ್ಛುಚಂ ಪಿತೃವಧೇನ ಸಂತಾಪಿತಂ ॥೩೫॥

ತ್ವಂ ಮಾತಾ ಜನಕಸ್ತ್ವಮೇವ ಭಗವನ್ ತ್ವತ್ಪಾದುಕಾರಾಧಕಂ
ತ್ವಂ ಸಂಗಾನಿಲಗಂಧಬಂಧುರಯುತಂ ದೃಷ್ಟ್ವಾ ಸದಾ ಪಾಲಯ ।
ತ್ವತ್ಪಾದಾಬ್ಜರಜೋ ವಿಘೂರ್ಣಿತಶಿರಾ ವಿಷ್ಣುಃ ಸಮಸ್ತಾನ್ ಸುರಾನ್
ಸಂಜಘ್ನೇ ತ್ರಿಪುರಾಂತಕಾಂತಕ ವಿಭೋ ಚಕ್ರಪ್ರದಾನಾತ್ಪುರಾ ॥೩೬॥

---

ಹಾಗೆಯೇ ಒಂದು ಸಾರಿ ರಾಮನು ಕ್ಷತ್ರಿಯ ಕುಲವನ್ನೇ ನಾಶಮಾಡುವ ಶಕ್ತಿಯನ್ನೂ ಸಂಪಾದಿಸಬೇಕೆಂದು, ಪಂಚಾಗ್ನಿ ಮಧ್ಯದಲ್ಲಿ ನಿಂತು, ಫಲಪರ್ಣಭಕ್ಷಕ ನಾಗಿಯೇ, ಭಸ್ಮರುದ್ರಾಕ್ಷಾದಿಗಳನ್ನು ಧರಿಸಿಕೊಂಡು, ರುದ್ರಾಧ್ಯಾಯವನ್ನೇ ಜಪಿಸುತ್ತಾ ಘೋರವಾದ ತಪಸ್ಸನ್ನಾಚರಿಸಿದನು. ಲಿಂಗರೂಪಿಯಾಗಿ ಗೋಕರ್ಣದಲ್ಲಿ ನೆಲಸಿದ್ದ ನನ್ನನ್ನು ಆದರದಿಂದ ತೃಪ್ತಿಪಡಿಸಿದನು. ॥೩೩-೩೪॥

ಆಗ ರಾಮನು ನನ್ನನ್ನು ಈರೀತಿ ಸ್ತುತಿಸಿದನು. "ಮಹೇಶ್ವರನೇ, ದೇವತೆಗಳಲ್ಲಿ ಶ್ರೇಷ್ಠನೆನಿಸಿದ ವಿಶ್ವೇಶ್ವರನೇ, ನಿನ್ನ ಪಾದಗಳ ಮೇಲೆ ಬಿದ್ದಿರುವ ಪುಷ್ಪಗಳ ಮಕರಂದವು ನನಗೆ ಸ್ಪರ್ಶವಾಗಿ, ನನ್ನ ಪಿತೃವಧೆಯಿಂದ ಉಂಟಾಗಿರುವ ದುಃಖವೆಲ್ಲಾ ಈಗಲೇ ನಾಶವಾಗಲಿ. ನನಗೆ ಒದಗಿರುವ ಈ ಸಂತಾಪವನ್ನು ಶೀಘ್ರವಾಗಿ ಹೋಗಲಾಡಿಸಿ ನನ್ನನ್ನು ಕಾಪಾಡು. ॥೩೫॥

ಅನಾಥನಾಗಿ ನಿಂತಿರುವ ನನಗೆ ನೀನೇ ತಾಯಿತಂದೆಯು. ಮಹಾದೇವನೇ, ಸದಾ ನಿನ್ನ ಪಾದಸೇವಕನಾಗಿ ನಿನ್ನ ಪಾದದಮೇಲೆ ಬೀಸುವ ಗಂಧಬಂಧುರವಾದ

ತ್ವತ್ಪಾದಾಬ್ಜಪ್ರಣಮನಪರಃ ಶಕ್ತಿಹಸ್ತಃ ಕುಮಾರಃ
ಶೂರಾದೀಂಸ್ತಾನಸುರಗಣಪಾನ್ ಸಂಗರಾದೌ ನಿಹತ್ಯ ।
ಸ್ವರ್ಗಂ ಶಕ್ರೇ ದದದಿಖಿಲಪೋ ವೀರವೀರಸ್ತ್ವಮೀಶೋ
ಮಾಮಾಲೋಕ್ಯಾಧಿತಪ್ತಂ ಹರಹರ ಭವಹನ್ ಪಾಹಿ ಗೋಕರ್ಣನಾಥ॥೩೭

ತದಾ ರಾಮಸ್ತುತಿಂ ಶ್ರುತ್ವಾ ತುಷ್ಟೋಽಹಂ ಪರಮೇಶ್ವರಿ ।
ಪ್ರಸನ್ನೋಽಹಂ ತದಾ ರಾಮಮವೋಚಂ ದುಃಖಿತಂ ಶಿವೇ ॥೩೮॥

ತಸ್ಮೈ ದತ್ತೋ ಮಯಾ ದೇವಿ ಸ್ವಹಸ್ತಪರಶುಸ್ತದಾ ।
ಸಾಂತ್ವಿತಶ್ಚ ತದಾ ರಾಮಃ ಪ್ರಣತಃ ಪುರತಃ ಸ್ಥಿತಃ ॥೩೯॥

॥ ಈಶ್ವರ ಉವಾಚ ॥

ಪಿತಾ ತೇ ಜಮದಗ್ನಿಶ್ಚ ಶಾಂಭವೋ ಮತ್ಪರಾಯಣಃ ।
ತಸ್ಯಾದ್ಯ ಹನನೇ ರಾಮ ಕಸ್ಸುಖೀ ಭವಿತಾ ಸುತ ॥೪೦॥

---

ವಾಯುವನ್ನೇ ಸೇವಿಸುತ್ತಿರುವ ನನ್ನನ್ನು ಕಾಪಾಡು. ವಿಷ್ಣುವು ನಿನ್ನ ಅನುಗ್ರಹ ದಿಂದಲೇ ಬಲಿಷ್ಠವಾದ ಚಕ್ರವೊಂದನ್ನು ಸಂಪಾದಿಸಿ, ಶೂರರಾದ ಎಲ್ಲಾ ರಾಕ್ಷಸ ರನ್ನೂ ಧ್ವಂಸಮಾಡಿದನಲ್ಲವೇ! ಅಂತಹ ಶಕ್ತಿಯನ್ನು ನನಗೂ ಕರುಣಿಸು. ॥೩೬॥

ನಿನ್ನನ್ನು ನಮಸ್ಕಾರಾದಿಗಳಿಂದ ಮೆಚ್ಚಿಸಿ ಕುಮಾರಸ್ವಾಮಿಯು ಶಕ್ತ್ಯಾ ಯುಧವನ್ನು ಪಡೆದು, ಅದರಿಂದ ಶೂರರಾದ ಅನೇಕ ರಾಕ್ಷಸರನ್ನು ಧ್ವಂಸಮಾಡಿ ದನು. ಅಲ್ಲದೆ ಸ್ವರ್ಗನಿವಾಸಿಗಳಾದ ಇಂದ್ರಾದಿ ಸಕಲ ದೇವತೆಗಳಿಗೆಲ್ಲಾ ನಾಯಕ ನಾಗಿ ವೀರಸೇನಾಪತಿಯೆನಿಸಿದನು. ಹಾಗೆ ಶರಣಾಗತನಾಗಿ ಬಂದಿರುವ ನನಗೂ ಒಂದು ಶಕ್ತಿಯನ್ನು ಅನುಗ್ರಹಿಸು, ನನ್ನನ್ನು ಶೂರನನ್ನಾಗಿ ಮಾಡು. ಎಂದು ಗೋಕರ್ಣೇಶ್ವರನನ್ನು ಬಹುವಾಗಿ ಪ್ರಾರ್ಥಿಸಿಕೊಂಡನು. ॥೩೭॥

ಹಾಗೆ ಸ್ತುತಿಸಿದ ರಾಮನ ತಪಸ್ಸಿಗೆ ಮೆಚ್ಚಿ, ಎಲೌ ದೇವಿಯೇ, ನಾನು ನನ್ನ ಕೈಯ್ಯಲ್ಲಿದ್ದ ಪರಶುವನ್ನು ಅವನಿಗೆ ಅನುಗ್ರಹಿಸಿಕೊಟ್ಟೆನು. ರಾಮನು ಭಕ್ತಿಯಿಂದ ನನಗೆರಗಿ ಅದನ್ನು ಭಯಭಕ್ತಿಯಿಂದ ಸ್ವೀಕರಿಸಿದನು. ॥೩೮-೩೯॥

ಆಗ ನಾನು ಅವನಿಗೆ ಈ ಮಾತನ್ನು ಹೇಳಿದೆನು "ವತ್ಸ, ನಿನ್ನ ತಂದೆ ಯಾದ ಜಮದಗ್ನಿಯು ಪರಮಶಾಂಭವನಾಗಿದ್ದನು. ಅವನನ್ನು ಕಾರ್ತವೀರ್ಯನು

ಕೃತವೀರ್ಯಾದಯಃ ಪೂರ್ವಂ ಸ್ವರ್ಗೇ ಲೋಕೇ ಚ ಸಂಸ್ಥಿತಾಃ ।
ಶಾಂಭವಸ್ಯಾದ್ಯ ಹನನಾಲ್ಲಂಬಂತೇ ನರಕೇ ನೃಪಾಃ ॥೪೧॥

ದತ್ತಸ್ತೇ ಪರಶುಸ್ತೇದ್ಯ ನಿಷ್ಟಪ್ತಕನಕತ್ಸರುಃ ।
ಅನೇನ ಸೇನಾಜಾಲಂ ತದ್ಗಜವಾಜಿರಥಾಕುಲಂ ॥೪೨॥

ನಿಹಂತಾಸಿ ನ ಸಂದೇಹಃ ಕ್ಷಯದ್ವೀರಪರೋ ಯತಃ ।
ಗಚ್ಛ ರಾಮ ಪ್ರಹೃಷ್ಟಾತ್ಮಾ ಜಹಿ ಕ್ಷತ್ರಿಯ ಪಾಂಸನಂ ॥೪೩॥

ನಿಃಕ್ಷತ್ರಿಯಾಂ ಚ ಪೃಥಿವೀಂ ಕೃತ್ವಾ ತ್ವಂ ಮಾಮಗಾಃ ಪುನಃ ।
ಶಾಂಭವೇಷ್ವದ್ಯ ಭಕ್ತೇಷು ಯಃ ಪಾಪಂ ಸಮ್ಯಗಾಚರೇತ್ ॥೪೪॥

ತಾನ್ ಹನಿಷ್ಯಾಮಿ ತದ್ವಂಶ್ಯಾನ್ ನಾಶಯಾಮಿ ಸುಖಂ ವ್ರಜ ।
ಇತ್ಯುಕ್ತವಂತಂ ಮಾಂ ದೇವಿ ಪ್ರಣಮ್ಯ ಸ ವಿನಿರ್ಗತಃ ॥೪೫॥

ದತ್ತೋ ಮಯಾ ರಥಸ್ತಸ್ಮೈ ಸಾಶ್ವಸ್ತೂಣೀರಖಡ್ಗವಾನ್ ।
ಶರೀ ನಿಷಂಗೀ ಕವಚೀ ಸಪತಾಕೋರುಕೂಬರಃ ॥೪೬॥

---

ಕೊಂದುದರಫಲವಾಗಿ ಅವನ ಹಿರಿಯರಾದ ಕೃತವೀರ್ಯಾದಿಗಳೆಲ್ಲರೂ ಸ್ವರ್ಗದಿಂದ ಜಾರಿ ಈಗ ನರಕಕ್ಕೆ ಇಳಿದಿರುವರು. ॥೪೧॥

ಈಗ ನಿನಗೆ ಸುವರ್ಣನಿರ್ಮಿತವಾದ ಪರಶುವೆಂಬ ಆಯುಧವನ್ನು ಅನುಗ್ರಹಿಸಿಕೊಟ್ಟಿರುವೆನು. ಇದರ ಪ್ರಭಾವದಿಂದ ನೀನು ಗಜವಾಜಿಗಳಿಂದ ಭರಿತವಾದ ಕ್ಷತ್ರಿಯಸೈನ್ಯವನ್ನೆಲ್ಲಾ ಧ್ವಂಸಮಾಡಿ, ಭೂಲೋಕದಲ್ಲಿ ಕ್ಷತ್ರಿಯರ ಮೊಳಕೆಯನ್ನೇ ಕಿತ್ತು ಬಿಸುಡುವೆ. ಇದರಲ್ಲಿ ಸಂದೇಹವಿಲ್ಲ. ॥೪೨-೪೩॥

ಹಾಗೆ ನೀನು ಭೂಮಿಯಲ್ಲಿ ಕ್ಷತ್ರಿಯರನ್ನೆಲ್ಲಾ ತೊಡೆದುಹಾಕಿ, ಅನಂತರ ನನ್ನ ಸಮೀಪವನ್ನೇ ಐದುವೆ. ಇದೇ ರೀತಿ ಯಾರು ಇನ್ನು ಮುಂದೆ ನನ್ನ ಭಕ್ತರ ವಿಷಯದಲ್ಲಿ ಹಿಂಸಾಕಾರ್ಯಗಳನ್ನು ಎಸಗುವರೋ ಅವರನ್ನು ಖಂಡಿತವಾಗಿಯೂ ನಾಶಮಾಡುವೆನು. ಇದನ್ನು ನೀನು ನಂಬು " ಎಂದು ಹೇಳಿದೊಡನೆಯೇ, ಆ ರಾಮನು ಅದರಂತೆ ಸಂತೋಷಪಟ್ಟು ಮತ್ತೆ ನಮಸ್ಕಾರಾದಿಗಳಿಂದ ನನ್ನನ್ನು ತೃಪ್ತಿಪಡಿಸಿ ಹೊರಟುಹೋದನು. ॥೪೪-೪೫॥

ಆಗಲೇ ಅವನಿಗೆ ಅಶ್ವಗಳಿಂದಲೂ, ಬಾಣಬತ್ತಳಿಕೆಗಳಿಂದಲೂ, ಕತ್ತಿ

ಸಹಾಯ್ಯಾರ್ಥ್ಯಭವತ್ತಸ್ಯ ಅಕೃತವ್ರಣಸಾರಥಿಃ ।
ಸ ಮಾಂ ಪ್ರಣಮ್ಯ ದೇವೇಶಿ ಲಸತ್ತೂಣೀಶರಾಸನಃ ॥೪೭॥

ಕವಚೀ ಸಶರೀ ಖಡ್ಗೀ ತದಾ ರಥಪತಿಂ ಮುದಾ ।
ಶೈವಃ ಶಂಖವರೋ ದತ್ತಸ್ತದಾ ರಾಮುಜಯಾಯ ಮೇ ॥೪೮॥

ಶಂಖಪೂಧ್ಮಾಪಯದ್ರಾಮ ಅಕೃತವ್ರಣಸಾರಥಿಃ ।
ಶ್ರುತ್ವಾ ಶಂಖರವಂ ಸರ್ವೇ ಕ್ಷತ್ರಿಯಾ ನಿಷ್ಪ್ರಭಾಸ್ತಥಾ ॥೪೯॥

ಅಭೂವನ್ ಕಾಂದಿಶೀಕಾಸ್ತೇ ಕೇಚಿದಾಜಿಂಗತಾಸ್ತದಾ ।
ವಾಹನಾನಿ ಚ ಸರ್ವಾಣಿ ಶಕೃನ್ಮೂತ್ರಂ ಪ್ರಸುಸ್ರುವುಃ ॥೫೦॥

ಹಸ್ತಿನೋಪಿ ಮದಾಂಧಾ ಯೇ ನಿರ್ಮದಾಸ್ತೇಭವನ್ ಶಿವೇ ।
ಮಾಹಿಷ್ಮತೀಂ ತದಾ ಪ್ರಾಪ್ಯ ರಾಮೋಪ್ಯರ್ಜುನಸೈನಿಕಾನ್ ॥೫೧॥

---

ಕಠಾರಿಗಳಿಂದಲೂ ತುಂಬಿದ ರಥವನ್ನು ಅನುಗ್ರಹಿಸಿದೆನು. ಒಡನೆಯೇ ನನ್ನ ಅಪ್ಪಣೆಯಂತೆ ಬಾಣಬಿಲ್ಲುಗಳಿಂದ ಸಿದ್ಧನಾದ ಸಾರಥಿಯೂ ದೊರೆತನು. ಅವನ್ನೆಲ್ಲಾ ಸ್ವೀಕರಿಸಿ ಪರಶುರಾಮನು ಧನುರ್ಧಾರಿಯಾಗಿ ನನಗೆ ವಂದಿಸಿ ಮುಂದೆ ನಡೆದನು. ॥೪೬-೪೭॥

ಬಲವಾದ ಕವಚದಿಂದಲೂ, ಬಾಣಬತ್ತಳಿಕೆಗಳಿಂದಲೂ, ಖಡ್ಗದಿಂದಲೂ ರಂಜಿಸುತ್ತಾ ರಾಮನು ರಥಪತಿಯಾದ ನನ್ನನ್ನೇ ಸ್ಮರಿಸುತ್ತಾ ಮುಂದುವರಿದನು. ಅಂತಹವನಿಗೆ ಮತ್ತೆ ನಾನು ಶೈವಶಕ್ತಿಯಿಂದ ಕೂಡಿದ ಒಂದು ದೊಡ್ಡ ಶಂಖವನ್ನು ಕೊಟ್ಟೆನು. ಸರಿಯಾದ ಸಾರಥಿಯೊಡನೆ ಕುಳಿತು ರಾಮನು ಒಂದುಸಾರಿ ಆ ಶಂಖವನ್ನು ಊದಿದೊಡನೆಯೇ ಆ ಧ್ವನಿಯ ವೇಗಕ್ಕೆ ಅನೇಕ ಯುದ್ಧವೀರರು ದಿಕ್ಕಾಪಾಲಾಗಿ ಓಡಲಾರಂಭಿಸಿದರು. ಅವರ ವಾಹನಗಳಾದರೋ ಹೆದರಿ ಮಲ ಮೂತ್ರಗಳನ್ನು ಬಿಡಲು ಆರಂಭಿಸಿದುವು. ॥೪೮-೪೯-೫೦॥

ಮದಶಾಲಿಗಳಾದ ಆನೆಗಳೆಲ್ಲಾ ಮದರಹಿತಗಳಾದುವು. ಇಂತಹ ಸನ್ನಿವೇಶದಲ್ಲಿ ರಾಮನು ಮಾಹೀಷ್ಮತೀನಗರಕ್ಕೆ ಹೋಗಿ ಕಾರ್ತವೀರ್ಯಾರ್ಜುನನ ಸೈನಿಕರನ್ನೆಲ್ಲಾ ನಾಶಮಾಡಿದನು. ಮತ್ತು ಅವನ ಆನೆಗಳ ದೀರ್ಘಾಕಾರವಾದ ಸೊಂಡಿಲುಗಳನ್ನೆಲ್ಲಾ ಸುಲಭವಾಗಿ ಕತ್ತರಿಸಿದನು. ರಥಗಳನ್ನು ಅವುಗಳ ವಾಹನಸಮೇತವಾಗಿ

ಗಜೋರುಶುಂಡಾದಂಡೇಷು ಹಸ್ತಿಮಾತ್ರೇಷು ರಕ್ಷಿಷು ।
ರಥೇಷು ವಾಹನಾಶ್ವೇಷು ತದಾ ಯೋಕ್ತ್ರಕೇಶಾಸು ಚ ॥೫೨॥

ಚಕ್ರಕೂಬರಸಂಘೇಷು ವ್ಯಧಮತ್ತಿಲಶಃ ಶರೈಃ ।
ಶೂರಾಣಾಂ ಚ ವಿಶೀರ್ಣಾನಿ ಶಿರೋಹಸ್ತಾಂಗಸಂಧಿಷು ॥೫೩॥

ಶತಂ ಸಹಸ್ರಮಯುತಂ ನಿಯುತಂ ಪ್ರಯುತಂ ತಥಾ ।
ಚಕಾರ ಶರವರ್ಷಾಣಿ ಗಿರಾವಂಬುದವೃಷ್ಟಿವತ್ ॥೫೪॥

ತೇ ರಾಮಂ ಶರವರ್ಷೇಣ ಸಮಂತಾತ್ಪರ್ಯವಾರಯನ್ ।
ಶತಘ್ನೀಭಿರ್ಭುಶುಂಡೀಭಿರ್ಲಗುಡೈಃ ಪ್ರಾಸಮುದ್ಗರೈಃ ॥೫೫॥

ಚಕ್ರೈಃ ಖಡ್ಗೋರುಧಾರಾಭಿಸ್ತದಾ ತೇಽರ್ಜುನಸೈನಿಕಾಃ ।
ಆಪತಂತಿ ಗಜೈರಶ್ವೈಃ ಸ್ಯಂದನೈಸ್ತೂರ್ಯನಾದಿತಾಃ ॥೫೬॥

ತಾನ್ ರಾಮಸ್ಸನುರೇ ಸರ್ವಾನನಯದ್ಯಮಸಾದನಂ ।
ಶರೋರುಕಾಂಡೈಶ್ಯತಶಶ್ಛಿಚ್ಛೇದ ಕರವಾಲತಃ ॥೫೭॥

---

ಧ್ವಂಸಮಾಡಿದನು. ಕಡಿವಾಣ, ಚಾವುಟಿ ಇವುಗಳು ಮಾತ್ರ ಉಳಿಯುವ ಸ್ಥಿತಿಯಲ್ಲಿ ಎಲ್ಲಾ ಸೈನ್ಯವನ್ನೂ ಉರುಳಿಸಿದನು. ॥೫೧-೫೨॥

ರಥದ ಚಕ್ರಗಳನ್ನೂ, ಶಿರೋಭಾಗಗಳನ್ನೂ ಬಾಣಗಳಿಂದ ಕತ್ತರಿಸಿದನು. ಶೂರರ ಶಿರಸ್ಸು, ಕೈ, ಅವಯವಗಳು ಇವೆಲ್ಲವನ್ನೂ ಕಡಿದುಹಾಕಿದನು. ಅದೇರೀತಿ ಬೆಟ್ಟದ ಮೇಲೆ ಸುರಿಯುವ ಮಳೆಯ ಹನಿಗಳಂತೆ ಅನೇಕ ಬಾಣಗಳನ್ನು, ಸಾವಿರ ಸಂಖ್ಯೆಯಲ್ಲಿ, ಹತ್ತುಸಾವಿರ ಸಂಖ್ಯೆಯಲ್ಲಿ, ಲಕ್ಷಸಂಖ್ಯೆಯಲ್ಲಿ ಪ್ರಯೋಗಿಸಿದನು. ॥೫೩-೫೪॥

ಅವನ ಸೈನಿಕರಾದರೋ, ಮತ್ತೆ ಮತ್ತೆ ಶರವರ್ಷದಿಂದ ಮುಂದುವರಿಯುತ್ತಾ, ಶತಘ್ನೀ, ಈಟಿ, ದೊಣ್ಣೆ, ಪ್ರಾಸ, ಒನಕೆ, ಚಕ್ರ, ಕತ್ತಿ ಮೊದಲಾದುವುಗಳಿಂದ ಕೂಡಿ, ಅನೇಕ ಗಜಾಶ್ವಾದಿಗಳೊಡನೆಯೂ, ರಥಗಳೊಡನೆಯೂ, ತೂರ್ಯನಾದದಿಂದಲೂ ಘೋರ್ಗರೆಯುತ್ತಾ ಬರುತ್ತಲೇ ಇದ್ದರು. ॥೫೫-೫೬॥

ಅವರೆಲ್ಲರನ್ನೂ ಪರಶುರಾಮನು ತನ್ನ ತೀಕ್ಷ್ಣವಾದ ಬಾಣಗಳಿಂದಲೂ ಕತ್ತಿಗಳಿಂದಲೂ, ತುಂಡುತುಂಡಾಗಿ ಕತ್ತರಿಸಿ ಯಮನ ಮನೆಗೆ ಅತಿಥಿಗಳನ್ನಾಗಿ

ಕೇಚಿದ್ದ್ವಿಧಾಕೃತಾಃ ಖಡ್ಗೈಶ್ಚಕ್ರಕೃತ್ತಾಸ್ತಥಾ ಪರೇ ।
ಭುಶುಂಡೀನಿಹತಾಶ್ಚಾನ್ಯೇ ಶರಕೃತ್ತಾಸ್ತಥಾಪರೇ ॥೫೮॥

ಗಿರಿಮಾತ್ರಾ ಗಜಾಸ್ತತ್ರ ಶೇರತೇ ಗರಜೀವಿತಾಃ ।
ಭಿನ್ನಭಾಂಡೋರುಮಸ್ತಿಷ್ಕಾಃ ನಿರ್ಜತಾಂತ್ರಾಸ್ತಥಾಪರೇ ॥೫೯॥

ಅಶ್ವಾ ವಿನಿಹತಾಸ್ತತ್ರ ಶತಶಃ ಪರಮೇಶ್ವರಿ ।
ಕಬಂಧಾಶ್ಚ ಸಮುತ್ಪೇತುಃ ಖಡ್ಗಹಸ್ತಾಶ್ಶರಾರ್ದಿತಾಃ ॥೬೦॥

ರಾಮಂ ತೇ ದದೃಶುಸ್ಸರ್ವೇ ಧನುರ್ಮಂಡಲಮಧ್ಯಗಂ ।
ಕಿರಂತಂ ಶರವರ್ಷಾಣಿ ಪ್ರಾವೃಟ್ಕಾಲಾಂಬುದಪ್ರಭಂ ॥೬೧॥

ವಿಸಾರಥಿರಥಾಸ್ತತ್ರ ಬಭ್ರಮುಶ್ಚಸ್ಖಲುಃ ಪಥಿ ।
ರಥಿನೋ ರಥಮಧ್ಯಸ್ಥಾಃ ಗತಾಸವ ಇವಾಸತೇ ॥೬೨॥

ತಾನ್ ರಾಮಶ್ಶರವರ್ಷೇಣ ಚಿಚ್ಛೇದ ತಿಲಶೋಂಬಿಕೇ ।
ಮನುಷ್ಯಶೀರ್ಷಪಾಷಾಣಾಂ ಗಜೋರುಪುಲಿನಾಂ ನದೀಂ ॥೬೩॥

---

ಕಳುಹಿಸಿದನು. ಅವರಲ್ಲಿ ಕೆಲವರು ಕತ್ತಿಯ ಏಟಿನಿಂದ ಎರಡು ತುಂಡಾಗಿದ್ದರು. ಕೆಲವರು ಬಾಣಗಳ ಏಟಿನಿಂದ ಮೃತರಾಗಿದ್ದರು. ॥೫೭-೫೮॥

ಬೆಟ್ಟದಂತಿರುವ ಆನೆಗಳು ವಿಷದ ಬಾಣಗಳಿಂದ ಪ್ರಾಣಬಿಟ್ಟು, ಒಡೆದು ಹೋದ ತಲೆಬುರುಡೆ, ಕರುಳು ಇವುಗಳುಳ್ಳದ್ದಾಗಿ ಮೃತವಾದವು. ಹಾಗೆಯೇ ಕುದುರೆಗಳೂ ಬಾಣದ ಏಟಿನಿಂದ ತಲೆಯನ್ನು ಕಳೆದುಕೊಂಡು ಕೇವಲ ಮುಂಡಗ ಳಂತೆ ಕೆಳಗೆ ಬಿದ್ದಿದ್ದುವು. ॥೫೯-೬೦॥

ಪರಶುರಾಮನಾದರೋ, ಧನುರ್ಮಂಡಲ ಮಧ್ಯದಲ್ಲಿ ನಿಂತವನಂತೆ ಆ ಸೈನಿಕರಿಗೆ ತೋರುತ್ತಿದ್ದನು. ಅವನ ಎಲ್ಲಾ ಭಾಗಗಳಿಂದಲೂ ಬಾಣವೃಷ್ಟಿಯು ಹೊರಸೂಸುವಂತಿದ್ದಿತು. ವರ್ಷಾಕಾಲದ ಮೇಘದಂತೆ ಘುಡುಘುಡುಸುತ್ತಿದ್ದನು. ಇದರಿಂದ ಶತ್ರುಸೈನ್ಯದಲ್ಲಿ ರಥಿಕರು ತಮ್ಮ ಸಾರಥಿಯನ್ನು ಕಳೆದುಕೊಂಡು ಶವಗ ಳಂತೆಯೇ ಆಗಿದ್ದರು. ॥೬೧-೬೨॥

ಅಂತಹವರನ್ನೆಲ್ಲಾ ರಾಮನು ತೃಣಪ್ರಾಯವನ್ನಾಗಿ ತಿಳಿದು ಕತ್ತರಿಸಿದನು. ಆಗ ರಣರಂಗದಲ್ಲಿ ಒಂದು ನದಿಯೇ ಹರಿಯಿತು. ಆದರಲ್ಲಿ ಮನುಷ್ಯರ

ಅಸೃಗ್ವಹಾಂ ಮೇದಪಂಕಾಂ ಕೇಶಶೈವಲಶಾದ್ವಲಾಂ ।
ಸಕಾಪುರುಷದುಸ್ತಾರಾಂ ಶರೈಸ್ತತ್ರಾರತಾಂ ನದೀಂ ॥೬೪॥

ಕಂಕಗೃಧ್ರಬಲಾರಾವೈಃ ಘೇರುನಾದೈಶ್ಚ ಭೀತಿದಾಂ ।
ಚಕಾರ ಕ್ಷಣಮಾತ್ರೇಣ ರಾಮೋ ಯುದ್ಧಂ ಸುದಾರುಣಂ ॥೬೫॥

ವಿನಾಶಿತಂ ತದಾ ಸೈನ್ಯಂ ದೃಷ್ಟ್ವಾ ಪುತ್ರೈಸ್ಸಮನ್ವಿತಃ ।
ಹಯಸ್ಥೈಶ್ಚ ಗಜಸ್ಥೈಶ್ಚ ರಥಸ್ಥೈಶ್ಚ ತದಾ ನೃಪಃ ॥೬೬॥

ಸೋಽರ್ಜುನಃ ಕ್ವಾದ್ಯ ರಾಮೇತಿ ಭ್ರುಕುಟೀಕುಟಿಲಾನನಃ ।
ಅಭಿಮುಖ್ಯೇನಾಜಗಾಮ ತದಾ ರಾಮರಥಂ ಪ್ರತಿ ॥೬೭॥

ರಥೇನಾಯಾತಿ ಸೈನ್ಯೇನ ಪುತ್ರೈಶ್ಚಾಶ್ವೈಃ ಪರೀವೃತಃ ।
ಸಹಸ್ರಭುಜದೋರ್ದಂಡೈರ್ಮಂಡಲೀಕೃತ ಕಾರ್ಮುಕೈಃ ॥೬೮॥

---

ತಲೆಬುರುಡೆಗಳೇ ಕಲ್ಲುಗಳಂತಿದ್ದುವು. ಆನೆಗಳ ಶರೀರವೇ ಮರಳುರಾಶಿಯಂತಿದ್ದಿತು. ರಕ್ತವೇ ಆ ನದಿಯ ನೀರಾಗಿತ್ತು. ಪ್ರಾಣಿಗಳ ಮೇದಸ್ಸೇ ಕೆಸರಿನಂತೆಯೂ, ಕೂದಲುಗಳೇ ಪಾಚಿಯಂತೆಯೂ ಇದ್ದು, ಆ ನದಿಯನ್ನು ಯಾವ ನೀಚನೂ ದಾಟುವಂತೆಯೇ ಇದರಲಿಲ್ಲ. ಹಾಗೆ ದಾಟಲಸಾಧ್ಯವಾದ ಒಂದು ನದಿಯೇ ಆಗ ಅಲ್ಲಿ ನಿರ್ಮಿತವಾಯಿತು. ॥೬೩-೬೪॥

ಆ ನದಿಯಲ್ಲಿ ಹದ್ದು, ಕಂಕಪಕ್ಷಿ, ಕೊಕ್ಕರೆ ಇವುಗಳು ನಾನಾರೀತಿಯಲ್ಲಿ ಭಯಂಕರವಾಗಿ ಧ್ವನಿಗೈಯ್ಯುತ್ತಿದ್ದುವು. ಹೀಗೆ ರಾಮನು ಕ್ಷಣಮಾತ್ರದಲ್ಲಿ ಆ ಸೈನ್ಯವನ್ನೆಲ್ಲಾ ಧ್ವಂಸಮಾಡಿದನು. ಅದನ್ನು ರಾಜನಾದ ಅರ್ಜುನನು ನೋಡಿ ತನ್ನ ಮಕ್ಕಳನ್ನು ಆನೆ, ಕುದುರೆ, ರಥ ಇವುಗಳಲ್ಲಿ ಕೂರಿಸಿಕೊಂಡು ತಾನೇ ಯುದ್ಧಕ್ಕೆ ಬಂದನು. ॥೬೫-೬೬॥

ಮತ್ತೂ ಆ ರಾಮನೆಲ್ಲಿ ಎಂದು ರಾಮನನ್ನೇ ಹುಡುಕುತ್ತಾ ರಾಮರಥಕ್ಕೆ ಎದುರಾಗಿ ಬಂದನು. ಅವನ ರಥವನ್ನು ಹಿಂಬಾಲಿಸಿ, ಅವನ ಮಕ್ಕಳೆಲ್ಲರೂ ಸೈನ್ಯಸಮೇತರಾಗಿ ಬರುತ್ತಿದ್ದರು. ಅವನಿಗೆ ಸಾವಿರ ಭುಜಗಳು ಇದ್ದುದರಿಂದ ಎಲ್ಲಾ ಭುಜಗಳಲ್ಲಿಯೂ ಬಿಲ್ಲುಗಳನ್ನು ಹಿಡಿದು ಮಂಡಲಾಕಾರವಾಗಿ ಕಾಣುತ್ತಿದ್ದನು. ॥೬೭-೬೮॥

ಕಿರನ್ನಿಷುಗಣಾನ್ ರಾಮಂ ಯಂತಾರಂ ಚೋದಯೇತ್ಕಶಾನ್ ।
ಸರಥಂ ಚೋದಯಾಮಾಸ ಅತಿಮಾರುತಯಾಯಿಭಿಃ ॥೬೯॥

ಜವನಾಶ್ವೈಸ್ತದಾ ದೇವಿ ಶೀಘ್ರಂ ಮಾಹಿಷ್ಮತೀಪತಿಃ ।
ಆಪತಂತಂ ತದಾ ರಾಮ ಅಕ್ಷತತ್ರವ್ರಣಸಾರಥಿಃ ॥೭೦॥

ಚಿರಾದ್ದೃಷ್ಟೋಽಯಮಧುನಾ ದೃಷ್ಟೋಽ ನೋ ಪಿತೃಘಾತಕಃ ।
ಸಂಚೋದಯಾಶ್ವಾನ್ ಸುಪ್ರೀತೋಽಸ್ಮ್ಯಧುನಾದ್ಯಾಕೃತವ್ರಣಃ ॥೭೧॥

ಕ್ಷಣೇನ ತಂ ನಿಹಂತಾಸ್ಮಿ ಶೀಘ್ರಂ ತ್ರ್ಯಕ್ಷಪ್ರಸಾದತಃ ।
ತಚ್ಛ್ರುತ್ವಾ ರಾಮವಚನಂ ಚೋದಯಚ್ಚಾಕೃತವ್ರಣಃ ॥೭೨॥

ಅಶ್ವಾನ್ ಮನೋಜವಾನ್ ತಸ್ಮೈ ತದ್ವೈ ರಥಮಭೋಚ್ಛಿವೇ ।
ಕೃತಪ್ರತಿಕೃತೈರಸ್ತ್ರೈಃ ಶತೇನೋತ್ತಮಧನ್ವಿನಂ ॥೭೩॥

---

ತನ್ನ ಬಾಣಗಳಿಂದ ರಾಮನಿಗೂ, ಅವನ ಸಾರಥಿಗೂ ನೋವಾಗುವಂತೆ ಮಾಡಿದನು. ವಾಯುವೇಗವನ್ನೂ ಮೀರಿಸಿದ್ದ ಕುದುರೆಗಳಿಂದ ಓಡುತ್ತಿರುವ ತನ್ನ ರಥವನ್ನು ಮುಂದಕ್ಕೆ ತಂದು ರಾಮನ ಎದುರಾಗಿ ನಿಂತನು. ರಾಮನಾದರೋ, ಹಿಂಸೆಗೊಳಗಾಗದ ಬಲಿಷ್ಠ ಸಾರಥಿಯೊಡನೆ ಕೂಡಿ ಎದುರಾಗಿ ಬಂದ ಕಾರ್ತವೀರ್ಯಾರ್ಜುನನನ್ನು ನೋಡಿದನು. ॥೬೯-೭೦॥

ಒಡನೆಯೇ ಸಾರಥಿಯನ್ನು ಕುರಿತು ' ಸಾರಥಿಯೇ, ನನ್ನ ತಂದೆಯನ್ನು ಕೊಂದ ಈ ಪಾಪಿಯನ್ನು ಬಹುಕಾಲದಿಂದ ನೋಡಿರಲಿಲ್ಲ. ಈಗ ಕಾಣಿಸಿಕೊಂಡಿರುವನು. ಮನೋವೇಗದಲ್ಲಿ ಹೋಗುವ ಕುದುರೆಗಳನ್ನು ಮುಂದುವರಿಸಿ ರಥವನ್ನು ನಡೆಸು. ಅನೇಕ ದಿವ್ಯಾಸ್ತ್ರಗಳಿಂದ ಕೂಡಿ ಬಂದಿರುವ ಶೂರನಾದ ಇವನನ್ನು ಈಗಲೇ ಧ್ವಂಸಮಾಡಿಬಿಡುವೆನು, ಎಂದು ಹೇಳಿದ ಮಾತನ್ನು ಕೇಳುತ್ತಲೇ ಸಾರಥಿಯು ತನ್ನ ರಥವನ್ನು ವೇಗದಲ್ಲಿ ಮುಂದುವರಿಸಿದನು. ಕೂಡಲೇ ಕಾರ್ತವೀರ್ಯಾರ್ಜುನನು ಬಲಿಷ್ಠಗಳಾದ ನೂರಾರು ಬಾಣಗಳಿಂದ ಶೂರನಾದ ರಾಮನನ್ನು ಹೊಡೆದನು. ॥೭೧-೭೨-೭೩॥

ರಾಮಂ ಚಕರ್ತ ನಿಶಿತೈರ್ಭಲ್ಲೈಃ ಸೋಽಪ್ಯಸ್ತ್ರಾನ್ ಅಂತರಾ ।
ಪುನರ್ನವತ್ಯಾ ರಾಮೋಽಪಿ ಅರ್ಜುನಂ ಸಮವಾಕಿರತ್ ॥೭೪॥

ಅರ್ಜುನಂ ತಮಭೋ ರಾಮಃ ಶಿರೋ ವಕ್ಷೋರುಬಾಹುಷು ।
ವಿಶಿರಸ್ಕಾಂ ತದಾ ಕಾಂಶ್ಚಿತ್ ಚಕ್ರೇ ರಾಮೋ ಮಹಾಬಲಃ ॥೭೫॥

ಭಲ್ಲೈಶ್ಚ ವತ್ಸದಂತೈಶ್ಚ ಕ್ಷುರಪ್ರೈರ್ನಿಚಕರ್ತ ಹ ।
ತೇ ರಾಮಶರನಿರ್ಭಿನ್ನಾಃ ವ್ಯಸವಃ ಪತಿತಾಃ ಕ್ಷಿತೌ ॥೭೬॥

ವಾಜಿಭ್ಯೋಽಪಿ ಗಜೇಭ್ಯಸ್ತೇ ರಥೋಪಸ್ಥೇ ತಥಾ ಪರೇ ।
ರಥಾಶ್ವಗಜಸಂಘಾಶ್ಚ ಹಯಾಸ್ತದನುಯಾಯಿನಃ ॥೭೭॥

ವ್ಯಸವಃ ಪತಿತಾ ಭೂಮೌ ಭಿನ್ನಭಾಂಡಕುಥಾಂಕುಶಾಃ ।
ನಿರಸ್ತಜಿಹ್ವಾ ಮಾತಂಗಾ ರಥಾಶ್ಚ ಶಕಲೀಕೃತಾಃ ॥೭೮॥

ವಿಕೂಬರಯುಗಾಶ್ಚೈವ ವಿಚಕ್ರಾಃ ಶೀರ್ಣಬಂಧನಾಃ ।
ಸಿಂಧುರಾಭಿನ್ನಕುಂಭಾಶ್ಚ ನರಾಃ ಕೃತ್ತಾಸ್ಸಹಸ್ರಶಃ ॥೭೯॥

---

ಕೂಡಲೇ ಪರಶುರಾಮನು ಆ ಬಾಣಗಳನ್ನೆಲ್ಲಾ ಮಾರ್ಗಮಧ್ಯದಲ್ಲಿಯೇ ಕತ್ತರಿಸಿ ಮತ್ತೆ ತೊಂಬತ್ತು ಬಾಣಗಳಿಂದ ಅರ್ಜುನನನ್ನು ಗಾಯಗೊಳಿಸಿದನು. ಮತ್ತು ಅರ್ಜುನನಿಂದ ಮೇಲೆ ಮೇಲೆ ಬರುವ ಬಾಣಗಳನ್ನೆಲ್ಲಾ ಕತ್ತರಿಸಿ ಹಾಕುತ್ತಾ ಅವನ ಎದೆ, ತಲೆ, ತೋಳು ಮುಂತಾದ ಭಾಗಗಳಿಗೆ ಕ್ರೂರವಾದ ಬಾಣಗಳನ್ನು ಪ್ರಯೋಗಿಸುತ್ತಿದ್ದನು. ||೭೪-೭೫||

ಭಲ್ಲಾಯುಧ, ದಂತಾಯುಧ, ಹರಿತವಾದ ಈಟಿ ಮೊದಲಾದುವುಗಳನ್ನು ಹಿಡಿದು ಹೊಡೆಯಲು ಬಂದ ಕಾರ್ತವೀರ್ಯಾರ್ಜುನನ ಕಡೆಯವರೆಲ್ಲಾ ರಾಮಶರದಿಂದ ನೆಲಕ್ಕುರುಳಿ ಮೃತರಾದರು. ಹಾಗೆಯೇ ಕುದುರೆ, ಆನೆ, ರಥ ಮುಂತಾದುವುಗಳಲ್ಲಿ ಕುಳಿತು ಬಂದವರೂ, ಅಲ್ಲಲ್ಲಿಯೇ ಮೃತರಾದರು. ಅವರ ಅನುಯಾಯಿಗಳೂ ಅಲ್ಲಲ್ಲಿಯೇ ಸತ್ತುಬಿದ್ದರು. ||೭೬-೭೭||

ಕುದುರೆಗಳು ಜೀನುಗಳನ್ನು ಎಸೆದು ತಲೆಯೊಡೆದು ಕೆಳಗೆ ಬಿದ್ದುವು. ಆನೆಗಳು ನಾಲಿಗೆಯನ್ನು ಹಿರಿದುಕೊಂಡು ಸತ್ತವು. ರಥಗಳು ಚೂರುಚೂರಾಗಿ ತುದಿಯೊಂದುಕಡೆ ನೊಗವೊಂದುಕಡೆ ಹೀಗೆ ಬಿದ್ದುವು. ಆನೆಗಳ ತಲೆಬುರುಡೆಗಳು

ತಸ್ತಾರ ಶರವರ್ಷೇಣ ಸ ರಾಮಶ್ಚಾರ್ಜುನೀಂ ಚಮೂಂ ।
ದೃಷ್ಟ್ವಾ ವಿನಿಹತಾನ್ ಪುತ್ರಾನ್ ಅರ್ಜುನಃ ಕೋಪಮಾದದೇ॥೮೦॥

ಶರೈಃ ಕಿರಂಸ್ತದಾ ರಾಮಂ ಯಾಹಿ ಸೂತೇತ್ಯಚೋದಯತ್ ।
ತಂ ರಾಮಶ್ಶರವರ್ಷೇಣ ಮಹತಾ ಸಮವಾಕಿರತ್ ॥೮೧॥

ಸೋಪಿ ಚಿಚ್ಛೇದ ರಾಮಸ್ಯ ಧ್ವಜಂ ಕಾರ್ಮುಕಮೇವ ಚ ।
ತಸ್ಯಾಶ್ವಾನ್ ಸಾರಥಿಂ ಚಾಪಿ ಲಲಾಟೇ ಚ ತ್ರಿಭಿಶ್ಶರೈಃ ॥೮೨॥

ಸ ರಾಮೋಪ್ಯರ್ಜುನಂ ಸಂಖ್ಯೇ ನವತ್ಯಾ ಮರ್ಮಭೇದಿಭಿಃ ।
ಶರೈರ್ಜಘಾನ ಕವಚೇ ಧನುರ್ಮುಷ್ಟೌ ತದಾಂಬಿಕೇ ॥೮೩॥

ಚಿಚ್ಛೇದ ತದ್ಬಾಹುಜಾಲಂ ಉತ್ಪ್ಲುತ್ಯೋತ್ಪ್ಲುತ್ಯ ವೇಗತಃ ।
ಪಶ್ಯತಾಂ ದೇವಸಂಘಾನಾಂ ಸಾಧು ರಾಮೇತಿ ವಾದಿನಾಂ ॥೮೪॥

---

ಅಸಂಖ್ಯಾತವಾಗಿ ಕಂಡುಬಂದವು. ಮನುಷ್ಯರ ಅವಯವಗಳು ಚೂರುಚೂರಾಗಿ ಬಿದ್ದಿದ್ದವು. ॥೭೮-೭೯॥

ಹೀಗೆ ಪರಶುರಾಮನು ಅರ್ಜುನನ ಸೈನ್ಯವನ್ನೂ, ಅರ್ಜುನ ಪುತ್ರರನ್ನೂ ನಾಶಮಾಡಿದುದನ್ನು ನೋಡಿ, ಕಾರ್ತವೀರ್ಯನು ಅತಿಕೋಪದಿಂದ, ಸಾರಥಿಯನ್ನು ಕುರಿತು ಇನ್ನೂ ಮುಂದಕ್ಕೆ ರಥವನ್ನು ನಡೆಸು ಎಂದು ಹೇಳುತ್ತಾ ರಾಮನಿಗೆ ಎದುರಾಗಿ ನಡೆದನು. ಅವನನ್ನು ನೋಡಿ ರಾಮನೂ ಬಾಣವರ್ಷವನ್ನು ಸುರಿಸುತ್ತಿದ್ದನು. ॥೮೦-೮೧॥

ಕಾರ್ತವೀರ್ಯನೂ ಸಹ ಎದುರು ಬಾಣಗಳನ್ನು ಖಂಡಿಸುತ್ತಾ, ತಾನೂ ಬಾಣಪ್ರಯೋಗಮಾಡಿ, ರಾಮನ ಸಾರಥಿಯನ್ನೂ, ಕುದುರೆಗಳನ್ನೂ ನೋಯಿಸಿದನು. ರಾಮನಾದರೋ ಅರ್ಜುನನನ್ನು ತೊಂಬತ್ತು ಮರ್ಮಭೇದಕವಾದ ಬಾಣಗಳಿಂದ ಅವನ ಕವಚವನ್ನೂ, ಧನುಸ್ಸನ್ನೂ, ಮುಷ್ಟಿಯನ್ನೂ ನೋಯಿಸಿದನು. ॥೮೨-೮೩॥

ಒಡನೆಯೇ ರಾಮನು ತನ್ನ ಬಾಣಪರಂಪರೆಗಳಿಂದ ಕಾರ್ತವೀರ್ಯನ ತೋಳುಗಳನ್ನೆಲ್ಲಾ ಕತ್ತರಿಸುತ್ತಾ ಬಂದನು. ಅದನ್ನು ನೋಡಿ ದೇವತೆಗಳು ರಾಮನಿಗೆ ಜಯಕಾರದಿಂದ ಜಯವನ್ನು ಕೋರುತ್ತಿದ್ದರು. ಹಾಗೆಯೇ ರಾಮನೂ ಅರ್ಜುನನ

ವಸಂತೇ ಕಿಂಶುಕಸ್ಯೇವ ತದಾಽರ್ಜುನಶರಾಹತಃ ।
ರಾಮೋ ಬಭೌ ಮಹಾದೇವಿ ಸೋಽಪಿ ಖಡ್ಗೈರತಾಡಯತ್ ॥೮೫॥

ತಂ ರಾಮೋ ಲಾಘವಾದ್ದೇವಿ ಚಕಾರ ವಿಫಲಂ ತದಾ ।
ತದಾ ಪರಶುಧಾರೇಣ ಸ ಕುಂಡಲಶಿರೋಮಹತ್ ॥೮೬॥

ಅರ್ಜುನಸ್ಯಾಥ ಭೂಪೃಷ್ಠೇ ಪಾತಯಾಮಾಸ ಶಂಕರಿ ।
ವವರ್ಷುಃ ಪುಷ್ಪವರ್ಷಾಣಿ ದೇವಾಸ್ತನ್ಮೂರ್ಧ್ನಿ ಸತ್ತಮೇ ॥೮೭॥

ಪ್ರಾವಾದ್ಯಂತ ತದಾ ಭೇರೀನಿಸ್ಸಾಣಪಣವಾದಯಃ ।
ಮಾಂ ಪ್ರಣಮ್ಯ ತದಾ ರಾಮೋ ಸಂಪೂಜ್ಯ ಪರಶುಂ ಮಮ ॥೮೮॥

ತದ್ರಕ್ತೈಸ್ತರ್ಪಯಾಮಾಸ ಪಿತ್ರೂನ್ ಕ್ರೋಧವಿಮೂರ್ಛಿತಃ ।
ಏವಂ ನಿಃಕ್ಷತ್ರಿಯಾಂ ರಾಮಶ್ಚಕ್ರೇ ಪೃಥ್ವೀಂ ತದಾಂಬಿಕೇ ॥೮೯॥

ಪಿತೃಭಿಸ್ಸನ್ನಿಷಿದ್ಧಶ್ಚ ರಾಮೋ ಘೋರಪರಾಕ್ರಮಃ ।
ಸನ್ಯಸ್ತಶಸ್ತ್ರೋ ಮೇಧಾವೀ ಪರಶುಂ ತತ್ಸಮರ್ಚ್ಯ ಚ ॥೯೦॥

---

ಶರಪರಂಪರೆಯಲ್ಲಿ ಸಿಕ್ಕಿದವನಾಗಿ ವಸಂತಋತುವಿನ ಮುತ್ತುಗದ ಮರದಂತೆ ಕೆಂಪಾಗಿ ಕಂಗೊಳಿಸುತ್ತಿದ್ದನು. ಹಾಗೆಯೇ ಕತ್ತಿಯಿಂದ ಹೊಡೆಯುತ್ತಲೂ ಇದ್ದನು. ||೮೪-೮೫||

ಮತ್ತು ಅರ್ಜುನನಿಂದ ಬರುವ ಶರಾಘಾತಗಳನ್ನೂ ಅನಾಯಾಸವಾಗಿ ತಪ್ಪಿಸಿಕೊಂಡು, ಕೊನೆಗೆ ತನ್ನ ಕೊಡಲಿಯ ಅಲುಗಿನಿಂದ ಹೊಡೆದು, ಕುಂಡಲಾಲಂಕೃತವಾದ ಅರ್ಜುನನ ತಲೆಯನ್ನು ಕೆಳಕ್ಕೆ ಕೆಡವಿದನು. ಒಡನೆಯೇ ದೇವತೆಗಳೆಲ್ಲರೂ ರಾಮನ ಮೇಲೆ ಹೂವಿನ ಮಳೆಗರೆದರು. ||೮೬-೮೭||

ದೇವದುಂದುಭಿಗಳನ್ನು ಮೊಳಗಿಸಿದರು. ಅನಂತರ ಪರಶುರಾಮನು ನನಗೂ ನನ್ನ ಪರಶುವಿಗೂ ವಿಧಿವತ್ತಾಗಿ ಪೂಜೆಮಾಡಿ, ಶತ್ರುವಿನ ರಕ್ತದಿಂದ ಮೃತರಾದ ಅವನ ಪಿತೃಗಳಿಗೆ ತರ್ಪಣಮಾಡಿದನು. ಅದೇ ಕೋಪದಿಂದ ಕೂಡಿ ಭೂಮಿಯಲ್ಲಿದ್ದ ಸಕಲ ಕ್ಷತ್ರಿಯರನ್ನೂ ಧ್ವಂಸಮಾಡಿದನು. ||೮೮-೮೯||

ಘೋರ ಪರಾಕ್ರಮಿಯಾದ ಪರಶುರಾಮನು ಹಾಗೆ ಪಿತೃಗಳನ್ನು ತೃಪ್ತಿಪಡಿಸಿ, ಒಡನೆಯೇ ಪರಶುವನ್ನು ಪೂಜಿಸಿ, ಶಸ್ತ್ರಸಂನ್ಯಾಸವನ್ನು ಕೈಕೊಂಡನು. ಅಂದಿನಿಂದ

ತದಾ ಪರಶುರಾಮಾಖ್ಯಾಂ ಪ್ರಾಪ ಮತ್ಪಾದಪೂಜಕಃ ।
ಸ್ವಪಾವನಾರ್ಥಂ ದೇವೇಶಿ ಹಯಮೇಧಮುಪಾಹರತ್ ॥೯೧॥

ತುಷ್ಟ್ಯೈ ಮೇಧಪತಿಂ ಮಾಂ ಸ ಅಯಜದ್ಭೂರಿದಕ್ಷಿಣಃ ।
ಸ್ವಾದ್ವನ್ನೈಸ್ತರ್ಪಯದ್ವಿಪ್ರಾನ್ ಗೋಭಿಃ ಕನಕಪರ್ವತೈಃ ॥೯೨॥

ಕಾಶ್ಯಪೇ ಕಾಶ್ಯಪೀಂ ದತ್ವಾ ಮಾಂ ತದಾ ಪುನರಾಗತಃ ।
ತಸ್ಯಾಶ್ರಮಪದಂ ದೇವಿ ಕೃತಂ ಶೂರ್ಪಾರಕಂ ತಥಾ ॥೯೩॥

ಷಟ್‌ಶತಂ ಧನುಷೋಽಂತೇ ಮೇ ಸ್ಥಾಪಿತೋ ಲವಣಾಕರಃ ।
ತಪ್ತ್ವಾ ಮಾಂ ಸ ತದಾ ರಾಮೋ ಲೇಭೇ ಶಾಂತಿಂ ತದಾಂಬಿಕೇ ॥೯೪॥

ಗೋಕರ್ಣೇಶಂ ಸಮಾರಾಧ್ಯ ಪ್ರಾಪಾಯಂ ಚಂಡವಿಕ್ರಮಂ ।
ಕ್ಷತ್ರಿಯಾಂತಕರೋ ಘೋರಂ ಭಕ್ತೋ ರಾಮಸ್ಸದಾ ಮಯಿ ॥೯೫॥

---

ರಾಮನು ಪರಶುರಾಮನೆನಿಸಿ ನನಗೆ ಪ್ರಿಯಭಕ್ತನಾದನು. ಮತ್ತು ತಾನು ಮಾಡಿದ ವಧಕೃತ್ಯದ ದುರಿತನಿವಾರಣೆಗಾಗಿ ಅಶ್ವಮೇಧಯಾಗವೊಂದನ್ನು ಆರಂಭಿಸಿದನು. ॥೯೦-೯೧॥

ಅದರಲ್ಲಿ ಯಜ್ಞಪತಿಯಾದ ನನ್ನನ್ನು ಪವಿದ್ರ್ರವ್ಯಗಳಿಂದ ತೃಪ್ತಿಪಡಿಸಿ, ವಿಪ್ರರಿಗೆ ರುಚಿಕರವಾದ ಆಹಾರಗಳನ್ನೂ, ಗೋವು, ಸುವರ್ಣ, ಭೂರಿದಕ್ಷಿಣೆ ಇವೇ ಮೊದಲಾದುವುಗಳನ್ನೂ ದಾನಮಾಡಿದನು. ತಾನು ಯುದ್ಧಮಾಡಿ ಸಂಪಾದಿಸಿದ ಭೂಮಿಯನ್ನೆಲ್ಲಾ ಕಾಶ್ಯಪಋಷಿಗಳಿಗೆ ದಾನಮಾಡಿ ಮತ್ತೆ ಗೋಕರ್ಣಕ್ಷೇತ್ರಕ್ಕೆ ಬಂದು ಅಲ್ಲಿ ಶೂರ್ಪಾರಕ (ಕ್ಷೇತ್ರದ ಹೆಸರು) ಆಶ್ರಮವನ್ನು ಕಲ್ಪಿಸಿಕೊಂಡನು. ॥೯೨-೯೩॥

ಇಲ್ಲಿ ನನ್ನ ಸಮೀಪದಲ್ಲಿದ್ದ ಲವಣಸಮುದ್ರವನ್ನು ಆರುನೂರು ಬಿಲ್ಲಿನಷ್ಟು ದೂರಕ್ಕೆ ಕಳುಹಿಸಿ ಅಲ್ಲಿಯೇ ತನ್ನ ಆಶ್ರಮವನ್ನು ಕಲ್ಪಿಸಿಕೊಂಡು ನನ್ನನ್ನೇ ಕುರಿತು ತಪಸ್ಸುಮಾಡುತ್ತಾ ಸರ್ವದಾ ಗೋಕರ್ಣೇಶ್ವರನನ್ನೇ ಅರ್ಚಿಸುತ್ತಾ ಕ್ಷತ್ರಿಯ ನಾಶಕನಾದ ಪರಶುರಾಮನು ನನ್ನ ಪರಮಭಕ್ತನೆನಿಸಿಕೊಂಡಿರುವನು. ॥೯೪-೯೫॥

॥ ಈಶ್ವರ ಉವಾಚ ॥

ಇದಂ ತೇ ಪರಮಾಖ್ಯಾನಮುಕ್ತಂ ಮೇ ಗಿರಿಕನ್ಯಕೇ ।
ಗೋಕರ್ಣೇಶಪ್ರಸಾದೇನ ಸರ್ವಾಂ ಸಿದ್ಧಿಂ ಲಭೇನ್ನರಃ ॥೯೬॥

ಯೋ ಗೋಕರ್ಣೇಶ್ವರಂ ಭಕ್ತ್ಯಾ ಶಿವರಾತ್ರೌ ಸಮರ್ಚಯೇತ್ ।
ತಸ್ಯ ಮುಕ್ತಿಪ್ರದಂ ಜ್ಞಾನಂ ಭವಿಷ್ಯತಿ ನ ಸಂಶಯಃ ॥೯೭॥

ಮಹಾಬಲಂ ಮಹಾದೇವಂ ಗೋಕರ್ಣೇಶಂ ಮಹೇಶ್ವರಂ ।
ಸಕೃದ್ದೃಷ್ಟ್ವಾಪಿ ಮನುಜೋ ಗಾಣಾಪತ್ಯಂ ಸ ವಿಂದತಿ ॥೯೮॥

ಗೋಕರ್ಣೇ ಪರಮಾಂ ಸಿದ್ಧಿಂ ಗೋಕರ್ಣೇ ಪರಮಂ ತಪಃ ।
ಗೋಕರ್ಣೇ ಪರಮಂ ಜ್ಞಾನಂ ಸಾಧಕೋ ಲಭತೇ ಶಿವೇ ॥೯೯॥

॥ ಸೂತ ಉವಾಚ ॥

ಶ್ರೀಮದ್ಗೋಕರ್ಣಲಿಂಗಂ ಭವಶತಜನಿತಾಪಾರಪಾಪೈಕಭಂಗಂ
ಶಾಂತಂ ಸ್ವಾಂತೈಕಸಂಗಂ ಕರವರವಿಲಸದ್ಬಾಲಲೀಲಾಕುರಂಗಂ ।

---

ಎಲೌ ದೇವಿಯೇ, ಈ ಪರಶುರಾಮನ ದಿವ್ಯಕಥೆಯನ್ನೂ ಗೋಕರ್ಣೇಶ್ವರ ಮಹಿಮೆಯನ್ನೂ ನಿನಗೆ ಈಗ ವಿವರಿಸಿರುವೆನು. ಯಾರು ಭಕ್ತಿಯಿಂದ ಇದನ್ನು ಕೇಳಿ ಶಿವರಾತ್ರಿಯ ದಿನ ಗೋಕರ್ಣೇಶ್ವರನನ್ನು ಅರ್ಚಿಸುವರೋ, ಅವರಿಗೆ ಗೋಕರ್ಣೇಶ್ವರನ ಅನುಗ್ರಹದಿಂದ ಶಾಶ್ವತವಾದ ಮೋಕ್ಷವು ಲಭಿಸುವುದೆಂಬುದರಲ್ಲಿ ಸಂಶಯವಿಲ್ಲ. ॥೯೬-೯೭॥

ಗೋಕರ್ಣಕ್ಷೇತ್ರದಲ್ಲಿ ನೆಲಸಿರುವ ಮಹಾದೇವನೂ ಮಹಾಬಲನೂ ಎನಿಸಿದ ಮಹೇಶ್ವರನನ್ನು ಯಾರು ಭಕ್ತಿಯಿಂದ ಒಂದು ಸಾರಿ ದರ್ಶನಮಾಡುವರೋ ಅವರು ಪ್ರಮಥಗಣಪತಿಗಳಲ್ಲಿ ಒಬ್ಬರಾಗುವರು. ತಪಸ್ಸಿದ್ಧಿಯೂ, ಸಿದ್ಧಿಗೆ ಸದೃಶವಾದ ತಪಸ್ಸೂ, ಮುಕ್ತಿಪ್ರದವಾದ ಜ್ಞಾನವೂ ಲಭಿಸಬೇಕಾದರೆ ಸಾಧಕನು ಗೋಕರ್ಣಕ್ಷೇತ್ರದಲ್ಲಿ ಶ್ರೀ ಮಹಾಬಲೇಶ್ವರನನ್ನು ಸೇವಿಸಬೇಕು ಎಂದು ಮಹಾದೇವನು ಜಗನ್ಮಾತೆಯಾದ ಪಾರ್ವತಿಗೆ ತಿಳಿಸಿದನು. ॥೯೮-೯೯॥

ಗೋಕರ್ಣಲಿಂಗವು ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಅನಂತ ಪಾಪಗಳನ್ನೆಲ್ಲಾ ನಿವಾರಣೆಮಾಡುವುದು. ಅದು ಶಾಂತಮಯವಾದ ಮನಸ್ಸಿಗೆ ಮಾತ್ರ

ವಂದೇ ಭೂಮಾಶತಾಂಗಂ ಫಣಿಫಣವಿಲಸತ್ತುಂಗಗಂಗೋತ್ತಮಾಂಗಂ
ಲೀಲಾಕ್ಲುಪ್ತ್ಯೈ ಧೃತಾಂಗಂ ಹರಿಹರಕಲಿತಾಪಾರಸಿಂಧೂನಿಷಂಗಂ ॥೧೦೦॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಪರಶುರಾಮೇತಿಹಾಸ
ವರ್ಣನಂ ನಾಮ ಚತುರ್ವಿಂಶೋಧ್ಯಾಯಃ

---

ಗೋಚರಿಸುವುದು. ಮಹಾದೇವನಾದ ಗೋಕರ್ಣೇಶ್ವರನ ದಿವ್ಯಕರದಲ್ಲಿ ಜಿಂಕೆಯು ಮರಿಯು ವಿರಾಜಿಸುತ್ತಿರುವುದು. ಶಂಕರನು ಅತಿಶಯವಾದ ರೂಪಭೇದಗಳಿಂದ ನಾನಾರೀತಿಯಲ್ಲಿ ತೋರಿಬರುವನು. ಅವನ ಶಿರೋಭಾಗದಲ್ಲಿ ಆದಿಶೇಷನೂ, ದೇವಗಂಗೆಯೂ ಪ್ರಕಾಶಿಸುತ್ತಿರುವರು. ಸ್ವಭಾವವಾಗಿ ನಿರಾಕಾರನೂ, ನಿರ್ಗುಣನೂ ಆದ ಪರಶಿವನು ಲೀಲಾರ್ಥವಾಗಿ ವಿಧವಿಧವಾದ ಶರೀರವನ್ನು ಧರಿಸಿ, ಹರಿ, ಹರ ರೂಪಗಳಿಂದಲೂ, ಸಮುದ್ರವನ್ನೇ ಬತ್ತಳಿಕೆಯನ್ನಾಗಿ ಮಾಡಿಕೊಳ್ಳುತ್ತಲೂ, ನಾನಾ ಆಕಾರಗಳಿಂದ ಶೋಭಿಸುವನು. ಇಂತಹ ಮಹಾಮಹಿಮನಾದ ಗೋಕರ್ಣೇಶ ರೂಪಿಯಾದ ಮಹಾದೇವನಿಗೆ ವಂದಿಸುವೆನು ಎಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ಪರಶುರಾಮನ ಇತಿಹಾಸವನ್ನು ಉಪದೇಶಿಸಿದರು. ॥೧೦೦॥

ಇಲ್ಲಿಗೆ ಶ್ರೀಶಿವರಹಸ್ಯದ ಪಂಚಮಾಂಶದಲ್ಲಿ ಪರಶುರಾಮನ ಇತಿಹಾಸನಿರೂಪಣೆ
ಎಂಬ ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಪಂಚಮಾಂಶೇ

## ಪಂಚವಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ವಸಿಷ್ಠಾದ್ಯಾಶ್ಚ ಮುನಯೋ ವಾಮದೇವಾದಿಯೋಗಿನಃ ।
ವಿಶ್ವಾಮಿತ್ರೋಽಂಗಿರಾಶ್ಚೈವ ಭಾರದ್ವಾಜೋಽಥ ಗೌತಮಃ ॥೧॥

ವ್ಯಾಸಃ ಪರಾಶರೋ ಧೌಮ್ಯ ಉಚಥ್ಯೋ ಭಾರ್ಗವೋ ಮುನಿಃ ।
ಸುಮಂತುರ್ಜೈಮಿನಿಃ ಪೈಲಃ ಕಹೋಳೋ ಜಮದಗ್ನಿಜಃ ॥೨॥

ಜೈಗೀಷವ್ಯಃ ಶ್ವೇತಕೇತುರುಪಮನ್ಯುರ್ಮಹಾಮುನಿಃ ।
ದೂರ್ವಾಸೋದ್ದಾಲಕೋ ಯೋಗೀ ಸನಾತನಸನಂದನೌ ॥೩॥

ಸನತ್ಸುಜಾತಸ್ಸನಕಸ್ತಥಾ ಭೃಂಗೀ ರಿಟಿರ್ಮುನಿಃ ।
ಉದ್ದಾಲಕೋ ಹರಿತಶ್ಚ ದತ್ತಾತ್ರೇಯೋಽಥ ಕಾಶ್ಯಪಃ ॥೪॥

---

## ಇಪ್ಪತ್ತೈದನೆಯ ಅಧ್ಯಾಯ

ಪ್ರಿಯೆ ಗಿರಿಜೆ, ಪ್ರಪಂಚದಲ್ಲಿ ಅನೇಕ ಮಹಾಮುನಿಗಳಿರುವುದು ನಿನಗೆ ತಿಳಿದೇ ಇರುತ್ತದೆ. ಅವರಲ್ಲಿ ಅನೇಕರು ಮಹಾತಪಸ್ವಿಗಳೂ ತತ್ವಜ್ಞಾನಿಗಳೂ ಆಗಿರುವರು. ವಸಿಷ್ಠಮುನಿಯೂ ಮತ್ತು ಯೋಗಿಯಾದ ವಾಮದೇವನೂ ಮಹಾತ್ಮರಲ್ಲಿಯೂ ಪುಣ್ಯಾತ್ಮರಲ್ಲಿಯೂ ಅಗ್ರಗಣ್ಯರು. ಹಾಗೆಯೇ ವಿಶ್ವಾಮಿತ್ರ, ಅಂಗಿರಸ್, ಭರದ್ವಾಜ, ಗೌತಮ, ವ್ಯಾಸ, ಪರಾಶರ, ಧೌಮ್ಯ, ಉಚಥ್ಯ, ಭಾರ್ಗವ, ಸುಮಂತು, ಜೈಮಿನಿ, ಪೈಲ, ಕಹೋಳ, ಜಮದಗ್ನಿ, ಪರಶುರಾಮ, ಜೈಗೀಷವ್ಯ, ಶ್ವೇತಕೇತು, ಉಪಮನ್ಯು, ದುರ್ವಾಸ, ಉದ್ದಾಲಕ, ಸನಕಾದಿಗಳು, ಭೃಂಗಿ, ರಿಟಿ, ಹಾರೀತ,

ಮಂಕಣಶ್ಶಂಖಣೋ ದಾಲ್ಭ್ಯೋ ಶೌನಕಸ್ತಾಂಡವಃ ಕೃಶಃ ।
ಕಾಶಗೃತ್ಸ್ನಶ್ಚೌಡುಲೋಮಿಶ್ಶಿಲಾದಃ ಪೈಪ್ಪಲಾಯನಃ ॥೫॥

ಬೋಧಾಯನೋ ಮರೀಚಶ್ಚ ತಥಾಚೈವಾಶ್ವಲಾಯನಃ ।
ಏತೇ ಚಾನ್ಯೇ ಚ ಮುನಯೋ ವೇದವೇದಾಂಗಪಾರಗಾಃ ॥೬॥

ಭಾಷ್ಯಾಣಿ ಧರ್ಮಸೂತ್ರಾಣಿ ಕಲ್ಪಸೂತ್ರಾಣಿ ಸತ್ತಮೇ ।
ಕೃತ್ವಾಪಿ ಸಂಶಯಾಪನ್ನಾ ಮಾಂ ಗೋಕರ್ಣೇಶಮೀಶ್ವರಂ ॥೭॥

ಸಂಶಯೋಚ್ಛೇದನಜ್ಞಾನಂ ಮತ್ತೋ ಲಬ್ಧುಂ ಮುನೀಶ್ವರಾಃ ।
ತಪಸ್ಯಂತಿ ಮಹಾಭಾಗೇ ಶುದ್ಧ್ಯರ್ಥಂ ಮನಸಶ್ಶಿವೇ ॥೮॥

ಶುದ್ಧೇ ಮನಸಿ ಸುಜ್ಞಾನಂ ಪ್ರತಿಬಿಂಬತಿ ನಾನ್ಯಥಾ ।
ಪಂಚಾಗ್ನಿನಿರತಾಶ್ಚಾನ್ಯೇ ಕಟಿಧೂಮಾಶನಾಃ ಪರೇ ॥೯॥

---

ದತ್ತಾತ್ರೇಯ, ಕಾಶ್ಯಪ, ಮಂಕಣ, ಶಂಖಣ, ದಾಲ್ಭ್ಯ, ಶೌನಕ, ತಾಂಡವ, ಕೃಶ, ಕಾಶಗೃತ್ಸ್ನ, ಔಡುಲೋಮಿ, ಶಿಲಾದ, ಪೈಪ್ಪಲಾಯನ, ಬೋಧಾಯನ, ಮರೀಚ, ಆಶ್ವಲಾಯನ ಮುಂತಾದವರೂ ಸಹ ವೇದವೇದಾಂಗ ಪಾರಂಗತರೂ ಮಹಾತಪಸ್ವಿಗಳೂ ಆಗಿರುತ್ತಾರೆ. ॥೧-೨-೩-೪-೫-೬॥

ಈ ಋಷಿಶ್ರೇಷ್ಠರು ಅದ್ಭುತಮಹಿಮೆಯುಳ್ಳವರು. ಅದೂ ಅಲ್ಲದೇ ವೇದ ವೇದಾಂತಗಳಿಗೆ ಭಾಷ್ಯಗಳನ್ನು ಬರೆದು ಅವುಗಳ ಅರ್ಥವನ್ನು ಲೋಕದಲ್ಲಿ ಪ್ರಚಾರ ಮಾಡಿರುವರು. ಜನರ ಕಲ್ಯಾಣಕ್ಕಾಗಿ ಪ್ರವೃತ್ತಿಮಾರ್ಗವನ್ನು ಕಲ್ಪಸೂತ್ರ, ಧರ್ಮ ಸೂತ್ರಗಳಿಂದ ಬೋಧಿಸಿರುತ್ತಾರೆ. ನಿವೃತ್ತಿಮಾರ್ಗಾವಲಂಬಿಗಳಿಗೆ ಬ್ರಹ್ಮಸೂತ್ರ ಗಳನ್ನು ರಚಿಸಿ ಜ್ಞಾನವನ್ನು ಉಪದೇಶಿಸಿದ್ದಾರೆ. ಹೀಗಿದ್ದರೂ ಇಂಥ ತಪಸ್ವಿಗಳಿಗೂ ಸಹ ಒಂದೊಂದು ಸಾರಿ ತತ್ತ್ವಜ್ಞಾನದ ವಿಷಯದಲ್ಲಿ ಸಂಶಯವು ಉದ್ಭವಿಸಿರು ವುದು. ಅವರ ಮನಸ್ಸು ಆಗ ಚಂಚಲವಾಗಿ ಶಾಂತಿಯನ್ನು ಕಳೆದುಕೊಂಡಿರುತ್ತದೆ. ಆದ್ದರಿಂದ ಆ ಮುನಿಗಳು ಪುನಃ ಆ ತತ್ತ್ವಜ್ಞಾನನಿರ್ಣಯವನ್ನು ನನ್ನಿಂದಲೇ ಪಡೆಯಬೇಕೆಂಬ ಸಂಕಲ್ಪದಿಂದ ಶ್ರೀಗೋಕರ್ಣಕ್ಷೇತ್ರದಲ್ಲಿ ತಪಸ್ಸನ್ನು ಮಾಡಿರು ತ್ತಾರೆ. ಚಿತ್ತಶುದ್ಧಿಗಾಗಿ ಗೋಕರ್ಣೇಶನಾದ ನನ್ನನ್ನೇ ಧ್ಯಾನಿಸಿರುತ್ತಾರೆ. ॥೭-೮॥

ಎಲೌ ಗಿರಿಜೆಯೇ, ಪಾಪವಿನಿರ್ಮುಕ್ತವಾದ ನಿರ್ಮಲವಾದ ಚಿತ್ತದಲ್ಲಿ ಮಾತ್ರವೇ ಸುಜ್ಞಾನವು ಪ್ರತಿಫಲಿಸುವುದೆಂಬುದು ನಿನಗೆ ತಿಳಿದೇ ಇರುತ್ತದೆಯಷ್ಟೆ.

ಪರ್ಣಾಶಿನಸ್ತಥಾ ಕೇಚಿದ್ವಾಯುವಾರಿಫಲಾಶನಾಃ ।
ನಿರಾಹಾರಾಸ್ತಥಾ ಕೇಚಿತ್ಕೇಚಿತ್ಪಕ್ಷೋಪವಾಸಿನಃ ॥೧೦॥

ಕೃಚ್ಛ್ರಾಣಿ ಕೇಚಿತ್ಕುರ್ವಂತಿ ವಿವಿಧಾನಿ ಸದಾಶಿವೇ ।
ಗೃಹಸ್ಥಾ ಯತಯಃ ಕೇಚಿದ್ವಾನಪ್ರಸ್ಥಾಶ್ಚ ವರ್ಣಿನಃ ॥೧೧॥

ಜಟಾಜಿನಧರಾ ಮುಂಡಾ ಭಸ್ಮರುದ್ರಾಕ್ಷಭೂಷಣಾಃ ।
ಅಗ್ನಿರಿತ್ಯಾದಿಭಿರ್ಮಂತ್ರೈಸ್ಸರ್ವಾಂಗೋದ್ಧೂಳನೇ ರತಾಃ ॥೧೨॥

ತ್ರಿಪುಂಡ್ರರೇಖಾವಿಲಸತ್ಫಾಲಭಾಗಮನೋಹರಾಃ ।
ಕೌಪೀನಾಚ್ಛಾದನೈರ್ಹೀನಾಃ ಕೇಚಿತ್ಕೌಪೀನಧಾರಿಣಃ ॥೧೩॥

---

ಆದರೆ ಆ ಮುನಿಗಳು ಅಗಾಗ್ಯೆ ಸಾಂಸಾರಿಕವ್ಯವಹಾರದಲ್ಲಿ ಸಿಲುಕಿ ಮನಸ್ಸನ್ನು ಮಲಿನ ಪಡಿಸಿಕೊಳ್ಳುವುದರಿಂದ ಅವರ ಚಿತ್ತದಲ್ಲಿ ಜ್ಞಾನಪ್ರತಿಬಿಂಬವು ಮಾಯವಾಗುವುದು. ಅದನ್ನು ಪುನಃ ಸಂಪಾದಿಸಿಕೊಳ್ಳಲು ಅವರು ಬಹು ಶ್ರಮಪಡುವರು. ಮಹಾ ತಪಸ್ಸನ್ನಾಚರಿಸುವರು. ಕೆಲವರು ಪಂಚಾಗ್ನಿಮಧ್ಯದಲ್ಲಿ ಕುಳಿತು ತಪಸ್ಸನ್ನು ನಡೆಸುವರು. ಮತ್ತೆ ಕೆಲವರು ಧೂಮಾಶನರಾಗಿಯೂ, ಮತ್ತೆ ಹಲವರು ಪರ್ಣಾಶನರಾಗಿಯೂ, ಕೇವಲ ವಾಯುವನ್ನೇ ಸೇವಿಸುತ್ತಲೂ ಅಥವಾ ಫಲಮಾತ್ರ ಭಕ್ಷಿಗಳಾಗಿಯೂ ಕೆಲವರು ನಿರಾಹಾರಿಗಳಾಗಿಯೂ, ಮಾಸೋಪವಾಸಿ, ಪಕ್ಷೋಪ ವಾಸಿಗಳೆನಿಸಿಯೂ ಬಹು ಪ್ರಯತ್ನದಿಂದ ತಪಸ್ಸನ್ನು ಮಾಡುವರು. ॥೯-೧೦॥

ಹಾಗೆಯೇ ಅನೇಕ ಬ್ರಹ್ಮಚಾರಿಗಳೂ, ಗೃಹಸ್ಥರೂ, ವಾನಪ್ರಸ್ಥರೂ ಮತ್ತು ಸಂನ್ಯಾಸಿಗಳೂ ಚಾಂದ್ರಾಯಣವೇ ಮೊದಲಾದ ಮಹಾಕೃಚ್ಛ್ರವ್ರತಗಳನ್ನು ಕೈಗೊಂಡು ತಪಸ್ಸನ್ನು ಮಾಡುವರು. ॥೧೧॥

ಆ ಮುನಿಗಳ ತಪಸ್ಸು ಉಗ್ರವಾಗಿರುವಂತೆ ಅವರ ವ್ರತನಿಯಮಗಳೂ ಅತ್ಯಂತ ಕಠೋರಗಳಾಗಿರುವುವು. ಅವರಲ್ಲಿ ಕೆಲವರು ಶಿಖೆಯನ್ನು ಧರಿಸಿಕೊಂಡು ಜಟಾಧಾರಿಗಳಾಗಿರುವರು. ಮತ್ತೆ ಕೆಲವರು ಸರ್ವಾಂಗಗಳಲ್ಲಿಯೂ ಕ್ಷೌರಕರ್ಮ ವನ್ನು ನಡಿಸಿ ಮುಂಡಿಗಳೆನಿಸಿರುತ್ತಾರೆ. ಅವರವರ ನಿಯಮಕ್ಕೆ ಅನುಸಾರ ವಾಗಿ ಕೆಲವರು ಕೌಪೀನವನ್ನೂ, ಅಜಿನವನ್ನೂ ಧರಿಸಿರುವರು. ಕೆಲವರು ಕೌಪೀನವನ್ನೂ ಸಹ ತ್ಯಜಿಸಿ ದಿಗಂಬರರಾಗಿರುವರು. ಆದರೆ ಪ್ರತಿಯೊಬ್ಬರೂ ಅತ್ಯಂತ ನಿಯಮಪೂರ್ವಕವಾಗಿ ವಿಧ್ಯುಕ್ತರೀತಿಯಲ್ಲಿ ಭಸ್ಮರುದ್ರಾಕ್ಷಗಳನ್ನೂ

ಅಶ್ಮಕುಟ್ಟಾಸ್ತಥಾ ಕೇಚಿದ್ದಂತೋಲೂಖಲಿನಸ್ತಥಾ ।
ಗೋಚರ್ಮವಸನಾಃ ಕೇಚಿತ್ತಥಾ ವ್ಯಾಘ್ರಾಜಿನಾಂಬರಾಃ ॥೧೪॥

ಅಲಾಬುವೇಣವಾದಿನಿ ವಾರ್ಕ್ಷಾಸ್ಯಾದಿಕಪಾತ್ರಕೈಃ ।
ಪ್ರಾಣಯಾತ್ರಾಂ ಪ್ರಕುರ್ವಂತಿ ಮನ್ನೈವೇದ್ಯೈಕಭೋಜಿನಃ ॥೧೫॥

ಅಯಾಚಿತಾಸ್ತಥಾ ಕೇಚಿತ್ಸಪ್ತಾಗಾರಚರಾಃ ಪರೇ ।
ಮನ್ನಾಮನಿರತಾಸ್ಸರ್ವೇ ಮಮ ಲಿಂಗಾರ್ಚನಪ್ರಿಯಾಃ ॥೧೬॥

ಪಂಚಾಕ್ಷರಜಪಾಸಕ್ತಾಃ ಕೇಚಿತ್ಪ್ರಣವಜಾಪಕಾಃ ।
ಭಸ್ಮನಿಷ್ಠಾ ಭಸ್ಮಶಯ್ಯಾ ರುದ್ರಾಧ್ಯಾಯಜಪಾದರಾಃ ॥೧೭॥

---

ಭಸ್ಮತ್ರಿಪುಂಡ್ರವನ್ನೂ ಧರಿಸುತ್ತಾರೆ. ಮಂತ್ರವತ್ತಾಗಿ ಅಂಗಾಂಗಗಳಿಗೂ ಭಸ್ಮವನ್ನು ಲೇಪಿಸಿಕೊಂಡು ಘೋರತಪಸ್ಸನ್ನಾಚರಿಸುವರು. ॥೧೨-೧೩॥

ಆ ಋಷಿಗಳು ಅವರವರ ವ್ರತನಿಯಮಕ್ಕೆ ಅನುಗುಣವಾಗಿ ತಮ್ಮ ಆಹಾರ ಪದಾರ್ಥಗಳನ್ನು ಕಲ್ಪಿಸಿಕೊಳ್ಳುವಾಗ, ಕೆಲವರು ಒರಳು ಒನಕೆ ಇವುಗಳನ್ನು ಉಪಯೋಗಿಸಿಕೊಳ್ಳುವರು. ಮತ್ತೆ ಕೆಲವರು ಅವುಗಳನ್ನೂ ಸಹ ತ್ಯಜಿಸುವರು. ಕೇವಲ ತಮ್ಮ ಹಲ್ಲುಗಳಿಂದ ಎಷ್ಟು ಭಕ್ಷಣ ಸಾಧ್ಯವಾಗುವುದೋ ಅಷ್ಟನ್ನೇ ಬಳಸಿಕೊಂಡು ಅಂಥ ಕ್ಲುಪ್ತವಾದ ಆಹಾರವನ್ನೇ ಸ್ವೀಕರಿಸುವರು. ಲೋಹದ ಪಾತ್ರೆಗಳನ್ನು ಸಹ ಕೆಲವರು ಉಪಯೋಗಿಸಿಕೊಳ್ಳುವುದಿಲ್ಲ. ಕೇವಲ ಸೋರೆಬುರುಡೆ, ಬಿದಿರಿನ ಅಂಡೆ, ಮರದ ಮರಗೆ ಇವುಗಳಿಂದಲೇ ಜಲಪಾನ ಮುಂತಾದುವುಗಳನ್ನು ಮಾಡುವರು. ಬಟ್ಟೆಬರೆಗಳನ್ನು ತ್ಯಜಿಸಿ ಕೇವಲ ಗೋಚರ್ಮ, (ಜಿಂಕೆಯ ಚರ್ಮ) ವ್ಯಾಘ್ರ ಚರ್ಮ ಇವುಗಳನ್ನೇ ಹೊದ್ದು ಕಾಲಹರಣ ಮಾಡುತ್ತಾರೆ. ಆಹಾರಕ್ಕೆ ಶಿವನೈವೇದ್ಯ ಒಂದನ್ನೇ ಭಕ್ಷಿಸುವರಲ್ಲದೇ ಮತ್ತೇನನ್ನೂ ಮುಟ್ಟುವುದೂ ಇಲ್ಲ. ॥೧೪-೧೫॥

ಕೆಲವರು ಅಯಾಚಿತವ್ರತಸ್ಥರಾಗಿರುವರು. ಅಂದರೆ ಅವರು ಯಾರನ್ನೂ ಏನೊಂದನ್ನೂ ಯಾಚಿಸುವುದಿಲ್ಲ. ಕೆಲವರು ಏಳು ಮನೆಗಳಿಗೆ ಮಾತ್ರ ಹೋಗಿ ಭಿಕ್ಷೆಯನ್ನೆತ್ತಿಕೊಳ್ಳುತ್ತಾರೆ. ಸಾಕಷ್ಟು ದೊರೆಯದಿದ್ದರೂ ಎಂಟನೇ ಮನೆಗೆ ಹೋಗುವುದಿಲ್ಲ. ಹೀಗೆ ಪರಮನಿಯಮದಿಂದ ಅವರೆಲ್ಲರೂ ಶಿವಲಿಂಗವನ್ನೇ ಪೂಜಿಸುತ್ತಾ ನನ್ನನ್ನೇ ಭಜಿಸುವರು. ॥೧೬॥

ಮುನಿಗಳೆಲ್ಲರೂ ಭಸ್ಮವನ್ನು ಸಕಲಕ್ಕೂ ಉಪಯೋಗಿಸಿಕೊಳ್ಳುವರು. ಕೆಲವರು

ಲಿಂಗಾರ್ಚನಪರಾಃ ಕೇಚಿದ್ಬಿಲ್ವಪತ್ರಾದಿಸಾಧನೈಃ ।
ಕೇಚಿಲ್ಲಿಂಗೇ ನೀರಧಾರಾಂ ಕಲ್ಪಯಿತ್ವಾ ಚ ಸಂಸ್ಥಿತಾಃ ॥೧೮॥

ರುದ್ರಾಧ್ಯಾಯಾವರ್ತನೈಸ್ತೇ ಕಾಲಕಾಲಾರ್ಚನೇ ರತಾಃ ।
ಬಿಲ್ವಮೂಲೇಷು ಲಿಂಗಾನಿ ಪೂಜಯಂತ್ಯಥ ಕೇಚನ ॥೧೯॥

ಶಿವ ಶಂಭೋ ಮಹಾದೇವ ಪ್ರಸೀದೇತಿ ವದಂತಿ ಚ ।
ಸ್ಥಾನಾಸನಾದಿಭಿಃ ಕೇಚಿತ್ಕೇಚಿದ್ದೇವ್ಯೂರ್ಧ್ವಬಾಹವಃ ॥೨೦॥

ಗ್ರೀಷ್ಮೇ ಘರ್ಮಾಂಶುಸಂತಪ್ತಾ ವರ್ಷಾಸ್ವಾಕಾಶಗೋಚರಾಃ ।
ಶಿವಶಬ್ದಜಪಧ್ವಸ್ತಪಾಪಪಂಜರಸುಂದರಾಃ ॥೨೧॥

---

ತಮ್ಮ ಆಹಾರ ವಿಹಾರ ಶಯನಗಳಲ್ಲಿ ಸಹ ಭಸ್ಮವನ್ನೇ ಬಳಸಿಕೊಳ್ಳುತ್ತಾರೆ. ಅವರಲ್ಲಿ ಶಿವಪಂಚಾಕ್ಷರೀಮಂತ್ರವನ್ನು ಜಪಿಸುವವರು ಕೆಲವರು. ಮತ್ತೆ ಕೆಲವರು ಸದಾ ಪ್ರಣವವನ್ನೇ ಜಪಿಸುವರು. ಮತ್ತೆ ಹಲವರು ರುದ್ರಾಧ್ಯಾಯವನ್ನು ಸದಾ ಪಾರಾಯಣ ಮಾಡುವರು. ॥೧೭॥

ಕೆಲವರು ಬಿಲ್ವಪತ್ರೆಯೇ ಮೊದಲಾದ ಪೂಜಾಸಾಮಗ್ರಿಗಳನ್ನು ಹೊಂದಿಸಿಕೊಂಡು ಶಿವಲಿಂಗಗಳಿಗೆ ಅಭಿಷೇಕವನ್ನೂ, ಪೂಜೆಯನ್ನೂ ನಡೆಸುವರು. ॥೧೮॥

ಅನೇಕರು ಬಿಲ್ವವೃಕ್ಷ ಮೂಲಗಳಲ್ಲಿ ಅನೇಕ ಶಿವಲಿಂಗಗಳನ್ನು ಪ್ರತಿಷ್ಠಿಸಿ ರುದ್ರಾಧ್ಯಾಯವನ್ನು ಹೇಳುತ್ತಾ ಶಿವಾರ್ಚನೆಮಾಡುವರು. ॥೧೯॥

ಎಲೌ ಗಿರಿಜೆ, ಮತ್ತೆ ಅನೇಕರು ಆವಾಹನೆ, ಆಸನಸಮರ್ಪಣೆ ಮುಂತಾದ ಉಪಚಾರಗಳಿಂದ ಶಿವಲಿಂಗವನ್ನು ಅರ್ಚಿಸಿ ಮೇಲ್ಮುಖವಾಗಿ ಕೈಗಳನ್ನು ಮುಗಿದುಕೊಂಡು, ಓ ಶಂಭೋ, ಶಿವ, ಮಹಾದೇವ ಎಂದು ಮುಂತಾಗಿ ಉಚ್ಚಸ್ವರದಿಂದ ಭಜಿಸುವರು. ಮಹಾದೇವನೇ, ನಮ್ಮ ಮೇಲೆ ದಯೆತೋರು, ಪ್ರಸನ್ನನಾಗೆಂದು ಅಂಗಲಾಚಿ ಬೇಡಿಕೊಳ್ಳುವರು. ॥೨೦॥

ಮತ್ತೆ ಕೆಲವರು ಬೇಸಗೆಯಲ್ಲಿ ತೀಕ್ಷ್ಣವಾದ ಸೂರ್ಯನ ಬಿಸಿಲಲ್ಲಿಯೂ ಮಳೆಗಾಲದಲ್ಲಿ ಮಳೆಯಲ್ಲಿಯೇ ತೋಯುತ್ತಲೂ ನಿಂತುಕೊಂಡು ಶಿವನಾಮ ಸಂಕೀರ್ತನಮಾಡುತ್ತಾ ಇರುವರು. ಇಂಥ ಘೋರ ತಪಸ್ಸಿನಿಂದ, ತಮ್ಮನ್ನು ಬಂಧಿಸಿರುವ ಪಂಜರಸದೃಶವಾದ ಪಾಪಗಳನ್ನು ಕಳೆದುಕೊಳ್ಳುತ್ತಾರೆ. ॥೨೧॥

ಗೋಕರ್ಣನಿಲಯಂ ಮಾಂ ಧ್ಯಾಯಂತೋ ಲಿಂಗರೂಪಿಣಂ ।
ಏವಂ ಸಂವಸತಾಂ ತೇಷಾಂ ಜ್ಞಾನಂ ದಾತುಂ ಮಹೇಶ್ವರಿ ॥೨೨॥

ತೇಷಾಂ ಪುರಃ ಪ್ರಾದುರಾಸಂ ನೀಲಕಂಠೋಽಂಬಿಕಾಯುತಃ ।
ಮಾಂ ದೃಷ್ಟ್ವಾ ತೇ ಮುನಿಗಣಾಃ ಪ್ರಣಮ್ಯ ಭುವಿ ದಂಡವತ್ ॥೨೩॥

ತುಷ್ಟುವುರ್ಜಯಶಬ್ದೈಶ್ಚ ಗೋಕರ್ಣೇಶಂ ಮುನೀಶ್ವರಾಃ ॥೨೪॥

॥ ಮುನಯ ಊಚುಃ ॥

ಜಯ ದೇವ ವಿರೂಪಾಕ್ಷ ಜಯ ಭಕ್ತಾರ್ತಿಭಂಜನ ।
ಜಯಾನಂತ ಮಹಾದೇವ ಜಯ ವಿಶ್ವಾಧಿಕ ಪ್ರಭೋ ॥೨೫॥

ಜಯಾಮರೇಶ ಸರ್ವೇಶ ಜಯ ಪ್ರಮಥನಾಯಕ ।
ಜಯ ಶಾಶ್ವತ ಸರ್ವಜ್ಞ ಜಯ ಲಿಂಗಾರ್ಚಕಪ್ರಿಯ ॥೨೬॥

ಜಯ ಕಾಲಕಲಾತೀತ ಜಯ ಶಂಭೋ ಮಹೇಶ್ವರ ।
ಜಯ ಶಿಷ್ಯಜನಪ್ರೀತ ಜಯ ಶ್ರೀಕಂಠ ಶಾಶ್ವತ ॥೨೭॥

---

ಮುನಿಗಳು ತಾತ್ವಿಕವಾದ ಸುಜ್ಞಾನ ನಿರ್ಣಯವನ್ನು ಸಂಪಾದಿಸುವುದಕ್ಕಾಗಿ ಈ ಪ್ರಕಾರ ನಾನಾವಿಧವಾಗಿ ಹಿಂದೆ ಪ್ರಯತ್ನಿಸಿದರು. ಶಿವಲಿಂಗಸ್ವರೂಪನೂ ಗೋಕರ್ಣಕ್ಷೇತ್ರವಾಸಿಯೂ ಆದ ನನ್ನನ್ನೇ ಧ್ಯಾನಿಸುತ್ತಾ ಅನೇಕ ವರ್ಷಗಳ ಪರ್ಯಂತ ತಪಸ್ಸನ್ನಾಚರಿಸಿದರು. ಅವರ ಈ ಉಗ್ರವಾದ ತಪಸ್ಸಿಗೆ ನಾನೂ ಸಹ ಮೆಚ್ಚಿ ಪ್ರಸನ್ನನಾದೆನು. ॥೨೨॥

ಪಾರ್ವತೀಸಮೇತನಾಗಿ ನಾನು ಆ ಋಷಿಗಳೆದುರಿನಲ್ಲಿ ಪ್ರತ್ಯಕ್ಷನಾದೊಡನೆಯೇ ಅವರೆಲ್ಲರೂ ಕಣ್ದೆರೆದು ನನ್ನನ್ನು ನೋಡಿ ಆನಂದಭರಿತರಾದರು. ಆ ಕೂಡಲೇ ಭೂಮಿಯಲ್ಲಿ ದೀರ್ಘದಂಡ ನಮಸ್ಕಾರಮಾಡಿ ಕೈಗಳನ್ನು ಮುಗಿದುಕೊಂಡು ಗೋಕರ್ಣೇಶನೇ ನಿನಗೆ ಜಯವಾಗಲಿ, ಜಯ ಜಯ ಮಹಾದೇವ ಎಂದು ಉದ್ಘೋಷಿಸುತ್ತಾ ಸ್ತುತಿಸಲಾರಂಭಿಸಿದರು. ॥೨೩-೨೪॥

ಓ ವಿರೂಪಾಕ್ಷಸ್ವಾಮಿಯೇ, ನಿನಗೆ ಜಯವಾಗಲಿ. ಓ ದೇವದೇವನೇ ನೀನು ಭಕ್ತರ ಕಷ್ಟವನ್ನು ದೂರಮಾಡುವವನು. ಅಂತ್ಯರಹಿತನಾದ ನಿನಗೆ ಸಹಸ್ರಶಃ ಜಯಕಾರವು. ಓ ಮಹಾದೇವನೇ ನೀನು ಅಖಂಡಪ್ರಪಂಚವನ್ನೇ

ಜಯೋಗ್ರ ಕಾಮ ಕಾಮಾರೇ ಜಯ ಲಿಂಗಸ್ಥ ಶಂಕರ ।
ಜಯ ಗಂಗಾಧರ ಹರ ಜಯ ಚಂದ್ರಕಳಾಧರ ॥೨೮॥

ಜಯ ಬಿಲ್ವದಳಪ್ರೀತ ಜಯ ಭೀಮ ಪ್ರಸೀದ ನಃ ॥೨೯॥

ತ್ವಂ ಬ್ರಾಹ್ಮಣಸ್ಸರ್ವಸುರೇಷು ಶಿಷ್ಟೈಃ
ಶಿಷ್ಟೇಷ್ಟಪೂಜ್ಯೋ ಭಗವಾನ್ ಶ್ರುತಿಶ್ರುತಃ ।
ವಯಂ ಮನುಷ್ಯಪ್ರವರಾ ಹಿ ವಿಪ್ರಾಃ
ತ್ವಾಮಾಶ್ರಯಾಮೋಽಖಿಲಬಂಧಮುಕ್ತಯೇ ॥೩೦॥

ಸುಖಾಭಾಸೈರ್ಧರ್ಮೈರ್ಜನಿಮೃತಿನಿದಾನಾದಿನಿವಹೈ
ರವಿದ್ಯಾಂ ತೀರ್ತ್ವೈವ ಪ್ರತಿಭವಶತೇಷೂತ್ತಮಧಿಯಃ ।
ಅಸಾರಂ ಸಂಸಾರಂ ನಿರವಧಿಕಕಷ್ಟೈಕಜನಕಂ
ಮುಹುರ್ನಿಂದ್ಯಂ ಶಂಭೋ ವಿಧಿರಹಿತಬುದ್ಧ್ಯಾ ಗತಧಿಯಃ ॥೩೧॥

---

ಮೀರಿರುತ್ತೀಯೆ. ಅಲ್ಲದೇ ಅಖಿಲ ಬ್ರಹ್ಮಾಂಡಗಳಿಗೂ ಪ್ರಭುವಾಗಿರುವೆ. ನೀನೇ ಸಮಸ್ತ ದೇವತೆಗಳಿಗೂ ಅಧಿಪತಿಯು. ಸರ್ವೇಶ್ವರನೂ ನೀನೇ ಆಗಿರುತ್ತೀಯೆ. ಕೋಟ್ಯನುಕೋಟಿ ಪ್ರಮಥಗಣಗಳಿಗೆ ನೀನೇ ಸ್ವಾಮಿಯು. ಶಾಶ್ವತನೂ, ಸರ್ವಜ್ಞನೂ ಆದ ನಿನಗೆ ಕೋಟಿಶಃ ಜಯಶಬ್ದವನ್ನು ಉದ್ಘೋಷಿಸುವೆವು. ನೀನು ಶಿವಲಿಂಗಾರ್ಚಕಪ್ರಿಯನೂ ಕಾಲಸ್ವರೂಪನೂ ಕಾಲಾತೀತನೂ ಆಗಿರುವೆ. ಪರಮ ಮಹೇಶ್ವರನಾದ ನಿನಗೆ ಪುನಃ ಪುನಃ ಜಯವಿರಲಿ. ಓ ಚಂದ್ರಶೇಖರನೇ, ನಮ್ಮಲ್ಲಿ ಪ್ರಸನ್ನನಾಗು. ನಮ್ಮನ್ನು ಅನುಗ್ರಹಿಸು. ॥೨೫-೨೬-೨೭-೨೮-೨೯॥

ಭಗವನ್ ಶಂಕರನೇ, ನಿನ್ನನ್ನೇ ಸಮಸ್ತ ದೇವತೆಗಳೂ ಅಖಿಲ ಶಿಷ್ಟಜನರೂ ಪೂಜಿಸುವರು, ಆರಾಧಿಸುವರು. ನೀನು ಬ್ರಾಹ್ಮಣನೆಂತಲೂ ಬ್ರಾಹ್ಮಣಪ್ರಿಯ ನೆಂತಲೂ ವೇದಗಳು ಸ್ತುತಿಸುವುವು. ನಾವು ಕೇವಲ ಮನುಷ್ಯಮಾತ್ರರೂ ದೀನರೂ ಆಗಿದ್ದೇವೆ. ಬ್ರಾಹ್ಮಣಪ್ರಿಯನಾದ ನೀನೇ ಬ್ರಾಹ್ಮಣರಾದ ನಮಗೆ ಗತಿಯೆಂದು ನಿನ್ನನ್ನೇ ಮರೆಹೊಕ್ಕಿದ್ದೇವೆ. ನಮ್ಮ ಸಂಸಾರಬಂಧನವನ್ನು ತಪ್ಪಿಸಿ ನಮ್ಮನ್ನು ಸಲಹು. ॥೩೦॥

ಓ ಶಂಭೋ, ನಾವು ಹಿಂದೆ ಎಷ್ಟೋ ಬಾರಿ ಸಂಸಾರಸಾಗರದಲ್ಲಿ ಸಿಲುಕಿ ಕ್ಲೇಶಪಟ್ಟು ಬಹು ಶ್ರಮದಿಂದ ತತ್ವಜ್ಞಾನವನ್ನು ಸಾಧಿಸಿಕೊಂಡಿದ್ದೆವು. ಅನೇಕ

ಲುಠಂತೋ ಮೋಹಾಂಧಾಃ ಫಲಜನಿತಕಾಮಾಸ್ಸುಖಮಯೇ
ತಥಾ ಸ್ವರ್ಗೇ ದುಃಖೇ ನರಕಶತವೈಚಿತ್ರ್ಯನಿವಹೇ ।
ಮಹೇಶಂ ವಿಶ್ವೇಶಂ ನಿಖಿಲಹೃದಯಾಬ್ಜೈಕವಸತಿಂ
ನ ಜಾನಂತೋ ಮೋಹಾಪ್ಲವದಭಯಭಕ್ತ್ಯಾ ವಿರಹಿತಾ ॥೩೨॥

॥ ಈಶ್ವರ ಉವಾಚ ॥

ಇತ್ಥಂ ಸಂಸ್ತುತ್ಯ ತೇ ಸರ್ವೇ ಜಯಸ್ತುತ್ಯಾ ತದಾಂಬಿಕೇ ।
ಸಂಸಾರಜನಕಾಜ್ಞಾನನಿವರ್ತನಕರಂ ತದಾ ॥೩೩॥

---

ಜನ್ಮಗಳಿಂದಲೂ ಸ್ಥಿರವಾಗಿ ನಮ್ಮಲ್ಲಿ ನೆಲೆಸಿದ್ದ ಅವಿದ್ಯಾವಾಸನೆಯನ್ನು ನಾಶಪಡಿಸಿಕೊಂಡಿದ್ದೆವು. ಸಂಸಾರವು ಕೇವಲ ನಿಸ್ಸಾರವಾದದ್ದೆಂತಲೂ ದುಃಖೈಕಕಾರಣವೆಂತಲೂ ಅರಿತಿದ್ದೆವು. ಆದರೆ ಮನುಷ್ಯಮಾತ್ರರೂ ಮಂದಮತಿಗಳೂ ಆದ ನಾವು ಪುನಃ ಪುನಃ ಕೇವಲ ಸುಖಾಭಿಲಾಷೆಯಿಂದ (ಸುಖಸಾಧನವೆಂಬ ಭ್ರಾಂತಿಯಿಂದ) ಅನ್ಯಧರ್ಮಗಳ ಬಲೆಗೆ ಬಿದ್ದೆವು. ಆ ಧರ್ಮಗಳು ನಮಗೆ ಕೇವಲ ಕಷ್ಟಜನಕಗಳಾದವು. ಮತ್ತು ಪುನಃ ಜನನಮರಣರೂಪವಾದ ಸಂಸಾರದಲ್ಲೇ ಮುಳುಗಿರುವಂತೆ ಅವಿದ್ಯಾವಾಸನೆಯನ್ನು ಉದ್ಬೋಧನಗೊಳಿಸಿದವು. ತತ್ವಜ್ಞಾನನಿರ್ಣಯವನ್ನುಹೋಗಲಾಡಿಸಿ ನಮ್ಮ ಚಿತ್ತದ ಸ್ಥೈರ್ಯವನ್ನೇ ನಾಶಮಾಡಿರುವುವು. ॥೩೧॥

ಆ ಅನ್ಯಧರ್ಮಾಚರಣೆಯಿಂದ ನಮಗೆ ಸ್ವರ್ಗವೇ ಮೊದಲಾದ ಕೆಲವು ಸುಖರೂಪವಾದ ಫಲಗಳು ದೊರೆತರೂ ನಮ್ಮ ಮೋಹವು ಉದ್ರಿಕ್ತವಾಗಿ ಅಖಿಲ ಚರಾಚರ ಪೂಜ್ಯನಾದ ನಿನ್ನನ್ನು ನಾವು ಮರೆತೆವು. ಆ ಪಾಪದಿಂದ ವಿಧವಿಧವಾದ ಯಾತನೆಗಳುಳ್ಳ ನರಕದಲ್ಲಿ ಬಹುವಾಗಿ ತೊಳಲಿದೆವು. ಹೀಗೆ ಕೇವಲ ಸುಖದುಃಖಗಳ ಚಕ್ರದಲ್ಲಿ ಸಿಲುಕಿ ನಿನ್ನ ಭಕ್ತಿಯನ್ನು ಕಳೆದುಕೊಂಡೆವು. ಸರ್ವಾಂತರ್ಯಾಮಿಯಾದ ನಿನ್ನನ್ನು ಶರಣುಹೊಂದಲು ಸಹ ಮರೆತೆವು: ಆಗ ನಮ್ಮಲ್ಲಿ ನೀನು ಪ್ರಸನ್ನನಾಗಿ ಕಾಪಾಡು. ॥೩೨॥

ಎಲೌ ಗಿರಿಜೆ, ಈ ರೀತಿ ಆ ಮುನಿಗಳು ನಾನಾವಿಧವಾಗಿ ಸ್ತುತಿಸಿದರು. ಮತ್ತು ಜಯಜಯಕಾರವನ್ನು ಉದ್ಘೋಷಿಸಿದರು. ಅನಂತರ ತಮ್ಮ ಜನನಮರಣರೂಪವಾದ ಸಂಸಾರವನ್ನು ಹೋಗಲಾಡಿಸುವ ತತ್ವಜ್ಞಾನನಿರ್ಣಯವನ್ನು ನಮಗೆ

ವಿಜ್ಞಾನಂ ಮಾಂ ತದಾ ಪ್ರೋಚುರ್ದೇಹೀತಿ ಪರಮೇಶ್ವರ ॥೩೪॥

॥ ಮುನಯ ಊಚುಃ ॥

ಪಶುಪಾಶವಿಮೋಚಕೋ ಭವಾನ್
ಪಶವೋಽಜ್ಞಾನವಿಜೃಂಭಿತಾ ವಯಂ ।
ಭಗವನ್ ಶರಣಾಗತಾನಥಾಸ್ಮಾನ್
ವದ ತದ್ಗುಹ್ಯಮಪಿ ಪ್ರಭೋ ಮುದಾ ॥೩೫॥

ಭವಪಾಶವಿಮುಕ್ತಯೇ ಪರಂ
ಮನಸಃ ಪಾರಮತೀವ ಸೌಖ್ಯದಂ ।
ಯದಿ ತತ್ಕರುಣಾಕಟಾಕ್ಷಲೇಶೈಃ
ಭವದೀಯೈರಭಯಾಯ ಜಾಯತೇ ॥೩೬॥

---

ಅನುಗ್ರಹಿಸು. ನಮ್ಮ ಮೇಲೆ ದಯೆದೋರಿ ಪ್ರಸನ್ನನಾಗು ಎಂದು ಬೇಡಿಕೊಳ್ಳುತ್ತಾ ಪುನಃ ಈ ರೀತಿ ಸ್ತುತಿಸಲಾರಂಭಿಸಿದರು. ॥೩೩-೩೪॥

ಪ್ರಪಂಚದಲ್ಲಿ ಅಜ್ಞಾನದಿಂದ ಪಶುಪ್ರಾಣಿಗಳು ಬಂಧಿತವಾಗಿರುತ್ತವೆ. ದೃಢವಾದ ಪಾಶದಿಂದ ಕಟ್ಟಲ್ಪಟ್ಟಂತೆ ಯಾತನೆಗಳನ್ನು ಅನುಭವಿಸುತ್ತಿರುತ್ತವೆ. ಅಂಥ ಪಾಶಬಂಧನವನ್ನು ಹೋಗಲಾಡಿಸಿ ಕಾಪಾಡುವವನು ನೀನೊಬ್ಬನೇ. ಈಗ ನಮ್ಮ ಅಜ್ಞಾನವೂ ಅತ್ಯಂತ ಉದ್ರಿಕ್ತವಾಗಿರುವುದರಿಂದ ನಾವೂ ಸಹ ಪಶುಪ್ರಾಯರಾಗಿದ್ದೇವೆ. ಮತ್ತು ಮಹಾ ಯಾತನೆಗಳಿಗೊಳಗಾಗುವ ಹೆದರಿಕೆಯಿಂದ ನಿನ್ನನ್ನೇ ಈಗ ಶರಣುಹೊಕ್ಕಿದ್ದೇವೆ. ದಯಾಸಾಗರನಾದ ನೀನೇ ನಮ್ಮನ್ನು ಕಾಪಾಡಬೇಕು. ಓ ಪ್ರಭುವೇ, ಅಜ್ಞಾನನಾಶಕವಾದ ತತ್ವಜ್ಞಾನವನ್ನು ನಮಗೆ ಉಪದೇಶಿಸು. ಆ ಜ್ಞಾನವು ಮಹಾಗೋಪ್ಯವಾಗಿದ್ದರೂ ಈಗ ನಮಗೆ ಅದನ್ನು ಅನುಗ್ರಹಿಸು. ॥೩೫॥

ಆ ತತ್ವಜ್ಞಾನವು ನಮ್ಮ ಚಿತ್ತಕ್ಕೆ ಸಿಲುಕದಾಗಿದೆ. ಅದು ಸಂಸಾರ ಬಂಧನವನ್ನು ಕತ್ತರಿಸುವುದರಿಂದ ಪರಮಸುಖದಾಯಿಯಾಗಿರುವುದು. ಅಂಥ ತತ್ವಜ್ಞಾನವು ನಿನ್ನ ಕರುಣಾಕಟಾಕ್ಷದೊಂದಿಗೆ ನಮಗೆ ಲಭಿಸಿದರೆ ನಮಗೆ ಆಗ ಅಭಯವು ದೊರೆತೀತು. ನಾವು ಜನನಮರಣಭಯದಿಂದ ಪಾರುಗಾಣುವೆವು. ಆದುದರಿಂದ ಆ ತತ್ವಜ್ಞಾನವನ್ನು ನಮಗೆ ಅನುಗ್ರಹಿಸು. ॥೩೬॥

ಭವಸಾಗರನಾಶಕಂ ವಯಂ ತೇ
ಪದಪದ್ಮಂ ಪ್ರಥಮಂ ಸಮಾಶ್ರಿತಾಃ ।
ವದ ತನ್ನೋ ದುರವಾಪ್ಯಮಪ್ಯವಾಪ್ತುಂ
ಶ್ರುತಿವರ್ಯೈರ್ನಿಖಿಲಂ ವಿಮುಕ್ತಿದಾಯಿ ॥೩೭॥

ಅತಿತುಚ್ಛಮನೋವಿಲಾಸಿತೈಃ
ಪ್ರಥಮಾನೈರ್ಜನನಾದಿದುಃಖದೈಃ ।
ವಿಭವೈರಸುಖಾಯ ಕಲ್ಪಿತೈಃ
ಸುಖಬುದ್ಧ್ಯೈವ ಭ್ರಮಂತಿ ಪಾಮರಾಃ ॥೩೮॥

ದಾರಾಪತ್ಯಧನೈಶ್ಚ ಧಾನ್ಯನಿಕರೈಸ್ಸದ್ಧೇಮಪಟ್ಟಾಂಬರೈಃ
ಅಶ್ವೈರ್ಗೋಮಹಿಷೀ ಅಜಾವಿಕಗಣೈರ್ದಂತ್ಯುತ್ತಮೈಸ್ಸ್ಯಂದನೈಃ ।

---

ಓ ಶಂಕರನೇ, ಸಾಂಸಾರಿಕ ಯಾತನೆಗಳಿಂದ ದಿಕ್ಕುಗೆಟ್ಟ ನಾವು ಸಂಸಾರ ಭಯನಾಶಕವಾದ ನಿನ್ನ ಚರಣಕಮಲವನ್ನು ಶರಣೆಂದು ಮರೆಹೊಕ್ಕಿದ್ದೇವೆ. ಪುನಃ ಪುನಃ ನಿನ್ನನ್ನು ಅಂಗಲಾಚಿ ಬೇಡಿಕೊಳ್ಳುತ್ತೇವೆ. ಆ ತತ್ತ್ವಜ್ಞಾನವು ಎಷ್ಟೇ ದುರ್ಲಭವಾಗಿದ್ದರೂ ಅಮೂಲ್ಯವಾಗಿದ್ದರೂ ಅದನ್ನು ನಮಗೆ ಉಪದೇಶಿಸು. ಆ ತತ್ತ್ವಜ್ಞಾನದಿಂದಲೇ ನಮಗೆ ಮೋಕ್ಷವು ದೊರೆಯುವುದು. ಅನ್ಯಥಾ ನಮಗೆ ಬೇರೆ ಗತಿ ಇರುವುದಿಲ್ಲ. ವೇದವೇದಾಂತಸ್ತುತ್ಯವಾದ ಆ ತತ್ತ್ವಜ್ಞಾನವನ್ನೇ ದಯೆಯಿಟ್ಟು ನಮಗೆ ಉಪದೇಶಿಸು. ॥೩೭॥

ಪ್ರಪಂಚದಲ್ಲಿ ಅಜ್ಞಾನಿಗಳೂ ಪಾಪಿಗಳೂ ಐಹಿಕವಾದ ದಿವ್ಯವಿಭವವೇ ಹೆಚ್ಚೆಂದೂ, ಸುಖಕಾರಿ ಎಂದೂ ತಿಳಿದುಕೊಂಡು ಅದನ್ನೆ ಬಯಸುತ್ತಾರೆ. ಅದಕ್ಕಾಗಿ ಬಹು ಶ್ರಮಿಸಿ ಅದನ್ನು ಪಡೆಯುತ್ತಾರೆ. ಆದರೆ ಆ ವಿಭವವು ಕೇವಲ ದುಃಖರೂಪವಾದ ಜನನಮರಣಗಳನ್ನು ಮನುಷ್ಯನಿಗೆ ತಂದುಕೊಡುವುವೇ ವಿನಾ ನಿಜವಾದ ಸುಖವನ್ನೆಂದೂ ದೊರಕಿಸಲಾರವು. ಕೇವಲ ಅಸುಖಮಯವಾಗಿ ಕಲ್ಪಿತವಾಗಿರುವ ಆ ವಿಭವವನ್ನೇ ಅಜ್ಞಾನಿಗಳು ಮತ್ತೆ ಮತ್ತೆ ಕೋರುತ್ತಾರೆ. ಈಗ ನಮ್ಮ ಸ್ಥಿತಿಯೂ ಹಾಗೆಯೇ ಆಗಿದೆ. ಆ ಪಾಪಸಂಸರ್ಗದಿಂದ ನಾವು ಬಹುವಾಗಿ ತೊಳಲುತ್ತಿದ್ದೇವೆ. ॥೩೮॥

ಪ್ರಪಂಚದಲ್ಲಿ ತತ್ತ್ವಜ್ಞಾನಸಂಪಾದನೆಗೆ ಅನುಕೂಲವಾದ ಅಥವಾ ನಿತ್ಯಸುಖವನ್ನು ತಂದುಕೊಡುವ ಸಂದರ್ಭವೆಲ್ಲಿಯೂ ಇರುವುದಿಲ್ಲ. ಕಣ್ಣಿಗೆ ಕಾಣುವ ಮತ್ತು

ಪ್ರಾಸಾದ್ಯೈರ್ವಿವಿಧೈರ್ಮಹೋನ್ನತತಲ್ಪೈರ್ಮಂಚೈಃ ಪರಾರ್ಧ್ಯಾಸ್ತೃತೈಃ
ನಾನಾರತ್ನವರಾದಿಭೂಷಣಗಣೈರಾಜ್ಯೈರ್ವಿಮೋಹತ್ಯಹೋ ॥೩೯॥

॥ ಈಶ್ವರ ಉವಾಚ ॥

ಏವಂ ಪ್ರಾರ್ಥಯತಾಂ ತೇಷಾಂ ಮುನೀನಾಂ ಭಾವಿತಾತ್ಮನಾಂ ।
ತಾನಬ್ರವಮಹಂ ಗೌರಿ ತದಾ ಜ್ಞಾನಂ ಪರಮೇಶ್ವರಿ ॥೪೦॥

ತಲ್ಲಿಂಗದಾಕ್ಷಿಣಾದ್ವಕ್ತ್ರಾದಘೋರಾಸ್ಮೂರ್ತಿಮಾನ್ ಸ್ಥಿತಃ ।
ತಾನ್ಮುನೀನುಪದೇಷ್ಟುಂ ತದಜ್ಞಾನಂ ಪರಮಂಬಿಕೇ ॥೪೧॥

---

ನಮ್ಮನ್ನು ಸೇರುವ ಪ್ರತಿಯೊಂದು ಪದಾರ್ಥವೂ ನಮ್ಮ ಮೋಹವನ್ನೂ ಅಜ್ಞಾನವಾಸನೆಯನ್ನೂ ಕೂಡ ಮತ್ತೂ ಸ್ಥಿರವಾಗುವಂತೆ ದೃಢಪಡಿಸುವುವೇ ವಿನಾ ನಮ್ಮ ಶ್ರೇಯಸ್ಸಿಗೆ ಕಾರಣವಾಗಲಾರವು. ಲೋಕದಲ್ಲಿ ಹೆಂಡತಿ, ಮಕ್ಕಳು, ಮನೆ, ಮಠ, ನಾನಾದ್ರವ್ಯಸಮೂಹ, ವಸ್ತ್ರಭೂಷಣಗಳು, ಗೋವುಗಳು, ಅಶ್ವಗಳು, ಗಜಗಳು ರಥ, ವಿಮಾನಗಳು, ರಾಜ್ಯ, ಅರಮನೆ, ಮಂಚ, ಹಂಸತೂಲಿಕಾತಲ್ಪ ಇವೇ ಮೊದಲಾದ ಅನೇಕ ಪದಾರ್ಥಗಳು ಮನುಜನ ಸುಖಕ್ಕೆ ಉಪಕರಣಗಳೆಂದು ಭ್ರಾಂತಿಯುಂಟಾಗುವುದು. ಆದರೆ ಇವುಗಳಿಂದ ಮನುಷ್ಯನ ಅವಿದ್ಯಾವಾಸನೆಯು ದೃಢಬದ್ಧಮೂಲವಾಗುವುದು. ಮೋಹಾಂಧಕಾರವು ಅಭಿವೃದ್ಧವಾಗಿ ಮೋಕ್ಷಮಾರ್ಗವು ಮುಂದಕ್ಕೆ ತೋರಲಾರದು. ಇದರಿಂದ ಮನುಷ್ಯನು ಪದೇ ಪದೇ ಸಂಸಾರದಲ್ಲಿ ಸಿಲುಕಿ ತೊಳಲುವನು. ನಮ್ಮ ಗತಿಯೂ ಹೀಗೆಯೇ ದುಃಖಕರವಾಗಿದೆ. ನಮ್ಮಲ್ಲಿ ದಯೆತೋರಿ ಕಾಪಾಡು. ಮೋಕ್ಷಹೇತುವಾದ ತತ್ವಜ್ಞಾನವನ್ನು ನಮಗೆ ಅನುಗ್ರಹಿಸು. ॥೩೯॥

ಎಲೌ ಗಿರಿಜೆ, ಆ ಋಷಿಗಳು ಈರೀತಿ ಅತ್ಯಂತ ದೀನರಾಗಿ ಸ್ತುತಿಸಿ ಪ್ರಾರ್ಥಿಸಿಕೊಳ್ಳಲು ನನಗೆ ಅವರಮೇಲೆ ದಯೆಯುಂಟಾಯಿತು. ಆಗ ನಾನು ಅತ್ಯಂತ ಪ್ರೀತಿಯಿಂದ ಮಹಾಗೋಪ್ಯವಾಗಿದ್ದರೂ ಆ ತತ್ವಜ್ಞಾನವನ್ನು ಅವರಿಗೆ ಉಪದೇಶಿಸಲು ಸಿದ್ಧನಾದೆನು. ॥೪೦॥

ಜ್ಞಾನೋಪದೇಶಕ್ಕೆ ಅನುಕೂಲವಾಗುವಂತೆ ನಾನು ಆ ಋಷಿಗಳು ಸಂಪೂಜಿಸುತ್ತಿದ್ದ ಶಿವಲಿಂಗದಲ್ಲಿ ದಕ್ಷಿಣಾಭಿಮುಖನಾಗಿ ಅಘೋರಮೂರ್ತಿಯ

ಪಿಶಂಗಿತಜಟಾಕುಟೀನಿಧೃತಚಂದ್ರಗಂಗಾನಲೋ
ಜ್ಜ್ವಲನ್ನಿಟಿಲಲೋಚನಂ ವಟತರೋರಧಸ್ತಾತ್ ಸ್ಥಿತಾ ।
ಕಟೀತಟವ್ಯೆಗಾಜಿನಂ ಕೃತಸುಯೋಗಪಟ್ಟೋಲ್ಲಸ
ತ್ಕರಾಂಬುಜಮುಮಾಸಖಂ ಗರಲನೀಲಕಂಠಂ ಶಿವಂ ॥೪೨॥

ಅಪಸ್ಮೃತಿಶಿರಸ್ಸ್ಥಿತ ಪ್ರಕಟಪಾದ ಫುಲ್ಲಾಂಬುಜಂ
ವಿನಿದ್ರಘುಸೃಣಾರುಣೋತ್ಪಲಕರೋತ್ಥಚಿನ್ಮುದ್ರಿಕಂ ।
ಸುರಾಸುರಮುನಿವ್ರಜಭ್ರಮದಹಾರ್ದವಿಧ್ವಂಸನಂ
ತಮೋಗುಣಗಣಾರುಣಪ್ರಭವದೀಪ್ತಿವಿದ್ಯೋತಕಂ ॥೪೩॥

---

ರೂಪವನ್ನು ತಳೆದುಕೊಂಡು ಅನುಪ್ರವಿಷ್ಟನಾದೆನು. ಆಗ ನನ್ನ ಸ್ವರೂಪವು ಹೇಗಿತ್ತೆಂದರೆ, ॥೪೧॥

ಶಿರಸ್ಸಿನಲ್ಲಿ ಹೊಂಬಣ್ಣವುಳ್ಳ ಜಟೆಯು ಕಟ್ಟಲ್ಪಟ್ಟದ್ದಿತು. ಆ ಜಟೆಯಲ್ಲಿ ಚಂದ್ರನ ಕಲೆಯೂ ಮತ್ತು ದೇವಿಯಾದ ಗಂಗೆಯೂ ಇದ್ದಳು. ಫಾಲಪ್ರದೇಶದಲ್ಲಿ ಅಗ್ನಿನೇತ್ರವು ಉಜ್ವಲವಾಗಿದ್ದಿತು. ಕಂಠಪ್ರದೇಶವು ವಿಷಪಾನವನ್ನು ಮಾಡಿದ್ದುದರಿಂದ ಕಪ್ಪಾಗಿ ವಿರಾಜಿಸುತ್ತಿದ್ದಿತು. ಈರೀತಿಯಾದ ದಿವ್ಯರೂಪವನ್ನು ಧರಿಸಿ ದಕ್ಷಿಣದಿಕ್ಕಿನಲ್ಲಿ ನಾನು ದಕ್ಷಿಣಾಮೂರ್ತಿ ಎಂಬ ನಾಮವನ್ನು ತಾಳಿದೆನು. ಆಗ ನಾನು ಆಲದಮರದ ಕೆಳಭಾಗದಲ್ಲಿ (ಯೋಗಾಸನವನ್ನು) ಮೊಳಕಾಲಿಗೆ ಕೃಷ್ಣಾಜಿನದಿಂದ ಯೋಗಬಂಧವನ್ನು ಬಂಧಿಸಿಕೊಂಡು ಕೈಯ್ಯಲ್ಲಿ ಯೋಗದಂಡವನ್ನು ಧರಿಸಿದ್ದೆನು. ಆರೀತಿ ಯೋಗಾಸನಾಸೀನನಾಗಿ ದಕ್ಷಿಣಾಮೂರ್ತಿ ಎಂದೆನಿಸಿಕೊಂಡು ಪ್ರಖ್ಯಾತನಾದೆನು. ॥೪೨॥

ಅಪಸಿದ್ಧಾಂತವನ್ನು (ಅಜ್ಞಾನವನ್ನು–ಅತತ್ವಜ್ಞಾನವನ್ನು ಬೋಧಿಸುವ ಸ್ಮೃತಿಯನ್ನು ಅಥವಾ ಸಂಶಯಾತ್ಮಕವಾದ ಸ್ಮೃತಿಜ್ಞಾನವನ್ನು) ನಾನು ಪಾದಕಮಲದಿಂದ ಕೆಳಕ್ಕೆ ತುಳಿದುಕೊಂಡು ಕುಳಿತಿದ್ದೆನು. ಸ್ವಾಭಾವಿಕವಾಗಿಯೇ ಕುಂಕುಮಕೇಸರಿಯಂತೆ ಅರುಣಕಾಂತಿಯನ್ನು ಬೀರುವ ದಕ್ಷಿಣಕರಕಮಲದಲ್ಲಿ ಜ್ಞಾನಮುದ್ರೆಯನ್ನು ಪ್ರಕಟಿಸುತ್ತಿದ್ದೆನು. ಸುರಾಸುರರ ಮತ್ತು ಮುನಿಗಳ ಹೃದಯಾಂತರ್ಗತವಾದ ಭ್ರಮೆ, ಅಜ್ಞಾನ, ಮೋಹ, ಅವಿದ್ಯಾವಾಸನೆ ಇವುಗಳನ್ನು ನಾಶಮಾಡುವುದಕ್ಕಾಗಿಯೇ ಆಗ ಆ ದಿವ್ಯಸ್ವರೂಪವನ್ನು ತಳೆದುಕೊಂಡಿದ್ದೆನು.

ಮಾಂ ತಾದೃಶಂ ತದಾ ದೇವಿ ದಕ್ಷಿಣಾಮೂರ್ತಿರೂಪಿಣಂ ।
ಸ್ವಾಜ್ಞಾನವಿನಿವೃತ್ತ್ಯರ್ಥಂ ತುಷ್ಟುವುರ್ಮುನಯೋಽಮಲಾಃ ॥೪೪॥

॥ ಮುನಯ ಊಚುಃ ॥

ಕಟೀತಟಿಪರೀಲಸತ್ಕರಟಿಕೃತ್ತಿಕಾದ್ಯಂ ಶಿವಂ
ತಟಿನ್ನಿಭಜಟಾಕುಟೀವಿಧೃತಸೋಮಕೋಟಿಪ್ರಭಂ
ಸುರೋರುತಟನೀಶಿಖಂ ವಟತರೋರಧಸ್ತಾತ್ ಸ್ಥಿತಂ ।
ಸುರಾಸುರಗಣಾನತೋಜ್ಜ್ವಲಕಿರೀಟಕೋಟಿಪ್ರಭಾ
ವಿರಾಜಿತಪದಾಂಬುಜಂ ನಿಟಿಲಲೋಲನೇತ್ರಂ ನುಮಃ ॥೪೫॥

---

ತಮೋಗುಣವೆಂಬ ಕತ್ತಲೆಯನ್ನು ಪರಿಹರಿಸಲು ಅರುಣಪ್ರಭೆಯಂತೆ ಜ್ಞಾನ ಜ್ಯೋತಿಯನ್ನು ಬೆಳಗಿಸಿ ಎಲ್ಲರನ್ನೂ ಉದ್ಧರಿಸಬೇಕೆಂಬುದೇ ಆಗ ನನ್ನ ಸಂಕಲ್ಪ ವಾಗಿದ್ದಿತು. ॥೪೩॥

ಎಲೌ ಗಿರಿಜೆ, ಈರೀತಿ ಸತ್ಯಸಂಕಲ್ಪನೂ ದಿವ್ಯಸ್ವರೂಪಧಾರಿಯೂ ದಕ್ಷಿಣಾ ಮೂರ್ತಿಯೂ ಆದ ನನ್ನನ್ನು ಕಂಡು ಮುನಿಗಳು ಮತ್ತೆ ಹೀಗೆ ಸ್ತುತಿಸಲಾರಂಭಿ ಸಿದರು. ಆ ಪವಿತ್ರಾತ್ಮರು ತಮ್ಮ ಅಜ್ಞಾನವಾಸನೆಯು ಸಮೂಲವಾಗಿ ನಾಶವಾಗ ಲೆಂದೂ ಸುಜ್ಞಾನವನ್ನು ಅನುಗ್ರಹಿಸೆಂದೂ ಪುನಃ ಪ್ರಾರ್ಥಿಸಲಾರಂಭಿಸಿದರು.॥೪೪॥

"ಓ ಮಹಾದೇವನೇ, ದಿವ್ಯಸ್ವರೂಪವನ್ನು ಧರಿಸಿ ದಕ್ಷಿಣಾಮೂರ್ತಿಯ ಅವತಾರವನ್ನು ತಾಳಿದ ನಿನಗೆ ನಮಸ್ಕಾರ. ಆಹಾ, ನಿನ್ನ ಸ್ವರೂಪವು ಎಷ್ಟು ಅಮೋಘವಾಗಿರುವುದು. ಇಂಥ ನಿನ್ನ ರೂಪನ್ನು ವರ್ಣಿಸಿ ಸ್ತುತಿಸಲು ನಮ್ಮ ಅಭಿಜ್ಞತೆಯು ಎಷ್ಟಿದ್ದರೂ ಈಗ ಅಲ್ಪವೇ ಆಗಿರುವುದಲ್ಲಾ! ನೀನು ಚರ್ಮದಿಂದ ಕಟಿದೇಶ ಮತ್ತು ಮೊಳಕಾಲುಗಳ ಸುತ್ತಲೂ ಪರಿವೇಷ್ಟಿತನಾಗಿರುವೆ. ಮಿಂಚಿನಂತೆ ಮಿರಿಮಿರಿಗುಟ್ಟುವ ಉಜ್ವಲವಾದ ಜಟೆಯನ್ನು ಧರಿಸಿರುವೆ. ಅಂಥ ಜಟಾಗ್ರದಲ್ಲಿ ದೇವಗಂಗೆಯನ್ನೂ ಮತ್ತು ಚಂದ್ರಮನನ್ನೂ ಧರಿಸಿರುವೆ. ಹೀಗೆ ದಿವ್ಯ ಅವತಾರ ವನ್ನು ತಳೆದುಕೊಂಡು ವಟವೃಕ್ಷಮೂಲದಲ್ಲಿ ಯೋಗಾಸನಾಸೀನನಾದ ನಿನ್ನನ್ನು ಅಖಿಲ ದೇವಾಸುರರೂ ತಲೆಬಾಗಿ ನಮಸ್ಕರಿಸಿ ತಮ್ಮ ಶಿರೋರತ್ನಪ್ರಭೆಯಿಂದ ನಿನ್ನ ಚರಣಕಮಲಕ್ಕೆ ನೀರಾಜನ ಮಾಡುತ್ತಿರುವರು. ಓ ತ್ರಿನಯನಧಾರಿಯಾದ ಶಂಕರನೇ, ನಿನಗೆ ಅನಂತ ನಮಸ್ಕಾರಗಳಿರಲಿ. ॥೪೫॥

ಕಾಶಿಕೋಶಗತ ಕೋಶನಿಹೀನ
ಕಾಶಿಕಾಪುರನಿವಾಸ ನಾಕಾಶ್ರಯ ।
ಕಾಶಪೂಜ್ಯಪದ ವ್ಯೋಮಕೇಶ ನೋಃ
ಜ್ಞಾನಕೋಶಮಖಿಲಂ ಭವ ಮುಕ್ತ್ಯೈ ॥೪೬॥

ಮುನೀನಾಂ ವಚನಾದ್ದೇವಿ ಪ್ರಶ್ರಯಾಣಾಂ ತದಾ ಮಯಿ ।
ತುಷ್ಟಃ ಕಷ್ಟವಿನಾಶಾಯ ತದ್‌ಜ್ಞಾನಂ ಸಂವದಾಮ್ಯಹಂ ॥೪೭॥

॥ ಈಶ್ವರ ಉವಾಚ ॥

ಶೃಣ್ವಂತು ವಾಮದೇವಾದ್ಯಾ ಮುನಯೋ ಮತ್ಪ್ರಸಾದತಃ ।
ಭವತಾಂ ಜ್ಞಾನಮಮಲಂ ಭವಿಷ್ಯತಿ ನ ಸಂಶಯಃ ॥೪೮॥

---

ಓ ಶಂಕರನೇ, ನೀನು ಕಾಶೀಪಟ್ಟಣದಲ್ಲಿ ವಾಸಮಾಡುತ್ತಿರುವೆ. ಶ್ರೀಕಾಶೀ ಕ್ಷೇತ್ರವು ನಿನ್ನ ಮುಖವಾದ ಕೋಶಸ್ಥಾನದಂತಿರುವುದು. ನಿರಂಜನಸ್ವರೂಪನಾದ ನೀನು ಅನ್ನಮಯಾದಿ ಪಂಚಕೋಶಗಳಿಂದ ವರ್ಜಿತನಾಗಿರುವೆ. ಆದ್ದರಿಂದಲೇ ನಿನಗೆ ಅಜ್ಞಾನ, ವಿಪರ್ಯಯ, ಸಂಶಯ ಮುಂತಾದ ಬಂಧಕಾರಣಗಳ ಸಂಪರ್ಕ ವಿರುವುದಿಲ್ಲ. ಹೀಗೆ ಸಾಕ್ಷಾತ್ ಜ್ಞಾನಮೂರ್ತಿಯಾದ ನಿನ್ನ ಚರಣಕಮಲಗಳನ್ನೇ ಸರ್ವರೂ ಪೂಜಿಸುವರು. ಓ ವ್ಯೋಮಕೇಶನೇ, ನಾವು ನಮ್ಮ ಸಂಸಾರಬಂಧನ ವನ್ನು ಕಳೆಚಿಕೊಂಡು ಮೋಕ್ಷಮಾರ್ಗಾವಲಂಬಿಗಳಾಗುವಂತೆ ಅನುಗ್ರಹಿಸು. ಅಜ್ಞಾನಕ್ಕೆ ಕಾರಣವಾಗಿ ನಮ್ಮಲ್ಲಿರುವ ಸಮಸ್ತ ಕೋಶಗಳನ್ನೂ ಉಪಸಂಹರಿಸು." ॥೪೬॥

ಎಲೌ ಗಿರಿಜೆಯೇ, ಈ ರೀತಿ ಆ ಮುನಿಗಳು ಅತ್ಯಂತ ವಿನಮ್ರರಾಗಿ ಪ್ರಾರ್ಥಿಸಿಕೊಳ್ಳಲು ಆಗ ನಾನು ಪರಮಸಂತುಷ್ಟನಾದೆನು. ಬಳಿಕ ಆ ಅಜ್ಞಾನ ನಾಶಕವಾದ ಸುಜ್ಞಾನಸ್ವರೂಪವನ್ನು ಅವರಿಗೆ ತೋರಿಸಿದೆನು. ಅದನ್ನೇ ಈಗ ಹೇಳುವೆನು ಆಲಿಸು. ॥೪೭॥

ವಾಮದೇವನೇ ಮೊದಲಾದ ಋಷಿಗಳಿರಾ, ನಿಮ್ಮ ಮೇಲೆ ನನ್ನ ಪೂರ್ಣ ವಾದ ಅನುಗ್ರಹವಿರುವುದು. ಈ ನನ್ನ ಅನುಗ್ರಹದಿಂದಲೇ ನಿಮ್ಮೆಲ್ಲರಿಗೂ ವಿಜ್ಞಾನ ಘನಪರಿಪೂರ್ಣವೂ ಸ್ವಚ್ಛಚಿದ್ರೂಪವೂ ಆದ ಸುಜ್ಞಾನದ ಪ್ರತ್ಯಕ್ಷವಾಗುವುದು. ॥೪೮॥

ನಾತಪ್ತತಪಸೇ ದೇಯಮಿತಿ ಶ್ರುತ್ಯನುಶಾಸನಂ ।
ಭವಂತಸ್ತು ಪ್ತತಪಸಃ ಸರ್ವೇ ಮತ್ಪದಪೂಜಕಾಃ ॥೪೯॥

ದಾಸ್ಯಾಮಿ ಮತ್ಪರಂ ಜ್ಞಾನಂ ಶಕ್ತಿಪಾತಪುರಸ್ಸರಂ ।
ಏತದರ್ಥಂ ಪುರಾ ದೇವೈಃ ಪೃಷ್ಟೋಽಹಂ ಮುನಿಸತ್ತಮಾಃ ॥೫೦॥

ತಾನಬ್ರವಂ ಸುರಗಣಾನ್ ಶೃಣ್ವಂತು ಪರಮರ್ಷಯಃ ।
ಅಹಮೇಕೋಽದ್ವಿತೀಯಶ್ಚ ವ್ಯಾಪಕೋ ಲಿಂಗಮೇವ ಹಿ ॥೫೧॥

ಮತ್ತೋ ನಾನ್ಯಜ್ಜಗತ್ಕಿಂಚಿತ್ಪೃಥಗಸ್ತಿ ಮುನೀಶ್ವರಾಃ ।
ಬ್ರಹ್ಮೈವೇದಮಿದಂ ಸರ್ವಮಾತ್ಮೈವೇದಂ ನ ಸಂಶಯಃ ॥೫೨॥

---

ನೀವೆಲ್ಲರೂ ನನ್ನನ್ನೇ ಬಹುವಾಗಿ ಆರಾಧಿಸಿ ಪೂಜಿಸುತ್ತಿದ್ದುದರಿಂದ ಮಹಾ ತಪಸ್ಸನ್ನೇ ಆಚರಿಸಿರುವಿರಿ. ನೀವು ಮಹಾತಪಸ್ವಿಗಳಾದುದರಿಂದ ನಿಮಗೆ ಮತ್ಸ್ವರೂಪವೂ ಸ್ವಾತ್ಮಸ್ವರೂಪವೂ ಆದ ಸುಜ್ಞಾನವನ್ನು ಅನುಗ್ರಹಿಸುವೆನು. ಇದರಿಂದ ಐಶ್ವರವಾದ ವಿಭೂತಿಯು ನಿಮ್ಮಲ್ಲಿ ಸಂಕ್ರಾಂತವಾಗುವುದು. ಇಂಥ ಪರಮ ಗೋಪ್ಯವೂ ಅತ್ಯಂತ ಮಹತ್ತರವೂ ಆದ ಜ್ಞಾನವನ್ನು ತಪಸ್ವಿಗಳಲ್ಲದ ಸಾಮಾನ್ಯರಿಗೆ ಉಪದೇಶಿಸಕೂಡದೆಂದು ಶ್ರುತಿಯ ಆಜ್ಞೆ ಇರುವುದು. ॥೪೯॥

ಇದೇ ಸುಜ್ಞಾನವನ್ನು ತಮಗೆ ಅನುಗ್ರಹಿಸಬೇಕೆಂದು ಹಿಂದೆ ದೇವತೆಗಳು ನನ್ನನ್ನು ಪ್ರಾರ್ಥಿಸಿಕೊಂಡರು. ಆಗ ನಾನು ಅವರಿಗೆ ಸುಜ್ಞಾನಸ್ವರೂಪವನ್ನು ನಿರೂಪಿಸಿದ್ದೆನು. ಎಲೈ ಋಷಿಶ್ರೇಷ್ಠರಿರಾ, ನಿಮಗೂ ಅದನ್ನೇ ಈಗ ಉಪದೇಶಿಸುವೆನು. ಆಲಿಸಿರಿ. ॥೫೦॥

ಲಿಂಗಸ್ವರೂಪನಾದ ನಾನು ಒಬ್ಬನೇ ಸತ್ಯಸ್ವರೂಪನು. ನನ್ನ ಹೊರತು ಮತ್ತೊಂದು ವಸ್ತು ನಿಜವಾಗಿ ಇರುವುದಿಲ್ಲ. ನಾನು ಸರ್ವಾಂತರ್ಯಾಮಿಯಾಗಿರುವೆನು. ಅಣುರೇಣುತೃಣಕಾಷ್ಠಪರಿಪೂರ್ಣನಾಗಿರುವೆನು. ಪ್ರಪಂಚದಲ್ಲಿ ನನಗಿಂತಲೂ ಬೇರೆಯದಾದ ವಸ್ತು ಒಂದಿರುವುದಿಲ್ಲ. ಈ ನನ್ನ ತತ್ವವೇ ಬ್ರಹ್ಮವು. ಇದೇ ಆತ್ಮನು. ಇದೇ ಸುಜ್ಞಾನವು. ಇದರಲ್ಲಿ ಮತ್ತೆ ಸಂಶಯಗೊಳ್ಳಬೇಡಿರಿ. ಚರಾಚರಾತ್ಮಕವಾದ ಯಾವತ್ತು ಪ್ರಪಂಚವು ನನ್ನ ಸ್ವರೂಪವೇ ಆಗಿರುವುದು. ಈ ಅಖಂಡವಾದ ಸ್ವರೂಪವನ್ನೇ ಬ್ರಹ್ಮ ಎಂತಲೂ ಆತ್ಮ ಎಂತಲೂ ನಿರ್ದೇಶಿಸುವರು. ॥೫೧-೫೨॥

ನೇಹ ನಾನಾಸ್ತಿ ದೃಶ್ಯಂ ಯತ್ಸರ್ವಂ ಮಯ್ಯೇವ ಕಲ್ಪಿತಂ ।
ಯಥೋರ್ಣನಾಭಿಸ್ಸೃಜತೇ ಗ್ರಸತೇ ತಂತುಜಾಲಕಂ ॥೫೩॥

ತದ್ವಜ್ಜಗಂತಿ ಜಾತಾನಿ ಗ್ರಸಾಮಿ ವಿಸೃಜಾಮಿ ಚ ।
ಮಯ್ಯೇವೇದಂ ಸ್ಥಿತಂ ವಿಶ್ವಂ ಮಯ್ಯೇವ ಲಯಮೇಷ್ಯತಿ ॥೫೪॥

ನಿತ್ಯೋಽಹಂ ನಿರ್ವಿಕಲ್ಪೋಽಹಮಶರೀರೋಽಹಮೇವ ಹಿ ।
ಆಕಾಶಾತ್ಮಾ ವ್ಯಾಪಕೋಽಹಂ ನ ಹಿ ತದ್ಧರ್ಮಭಾಗಹಂ ॥೫೫॥

ಯತೋ ಜಾತಾನಿ ಭೂತಾನಿ ಯೇನ ಜೀವಂತಿ ತಾನ್ಯಪಿ ।
ಯಸ್ಮಿನ್ ಲೀನಾನಿ ವಿಪ್ರೇಂದ್ರಾಸ್ತದ್ಬ್ರಹ್ಮಾಹಂ ನ ಸಂಶಯಃ॥೫೬॥

---

ಪ್ರಪಂಚದಲ್ಲಿ ಕಣ್ಣಿಗೆ ತೋರುವ ಎಲ್ಲಾ ವಸ್ತುಗಳೂ ಸ್ವತಂತ್ರವಾದ ಸ್ವರೂಪವನ್ನು ಪಡೆದುಕೊಂಡಿರುವುದಿಲ್ಲ. ಅವುಗಳಿಗೆ ನಿಜವಾದ ಸತ್ತೆಯೇ ಇರುವುದಿಲ್ಲ. ಅವುಗಳೆಲ್ಲವೂ ನನ್ನಲ್ಲಿಯೇ ನನ್ನ ಅಧಿಷ್ಠಾನದಲ್ಲಿಯೇ ಕಲ್ಪಿತವಾದವುಗಳು. ಆಭಾಸಮಾನವಾದವುಗಳು. ಮಾಯೆಯಿಂದ ನಾನಾಕಾರವಾಗಿ ತೋರುವುವು. ಜೇಡರಹುಳುವು ತನ್ನಲ್ಲಿಯೇ ಇರುವ ತಂತುಗಳನ್ನು ಮೊದಲು ವಿಸ್ತಾರವಾಗಿ ಸೃಜಿಸಿ ಹರಡುವುದು. ಬಳಿಕ ಆ ಎಲ್ಲಾ ತಂತುಗಳನ್ನೂ ನುಂಗಿ ತನ್ನಲ್ಲಿಯೇ ಅಡಕಮಾಡಿಕೊಳ್ಳುವುದು. ಹಾಗೆಯೇ ಬ್ರಹ್ಮವಸ್ತುವಾದ ನಾನು ವಿಶ್ವವನ್ನು ಸೃಜಿಸುವೆನು. ಪುನಃ ಉಪಸಂಹರಿಸುವೆನು. ಆದ್ದರಿಂದ ಪ್ರಪಂಚವು ನನ್ನಲ್ಲಿಯೇ ಇರತಕ್ಕದ್ದು ಮತ್ತು ಅದಕ್ಕೆ ಲಯಸ್ಥಾನವೂ ನಾನೆಯೇ. ॥೫೩-೫೪॥

ನಾನು ನಿತ್ಯನು. ನಿರ್ವಿಕಲ್ಪಜ್ಞಾನಸ್ವರೂಪನು. ನನ್ನ ಸ್ವಾತ್ಮಸ್ವರೂಪಕ್ಕೆ ಯಾವ ಶರೀರಾಕಾರವೂ ಇರುವುದಿಲ್ಲ. ಆಕಾಶವೇ ನನ್ನ ಸ್ವರೂಪವು. ಅವಕಾಶಸ್ವರೂಪನಾಗಿರುವುದರಿಂದಲೇ ನಾನು ಸರ್ವವ್ಯಾಪಕನಾಗಿರುವೆನು. ನನ್ನಲ್ಲಿ ಯಾವ ಧರ್ಮವಾಗಲೀ ಗುಣವಾಗಲೀ ಇರುವುದಿಲ್ಲ. ಪ್ರಪಂಚದಲ್ಲಿ ತೋರುವ ಗುಣ ಮತ್ತು ಧರ್ಮಗಳೂ ನನ್ನವಲ್ಲ. ನನಗೆ ಅವುಗಳ ಸಂಪರ್ಕವಿರುವುದಿಲ್ಲ. ॥೫೫॥

ಎಲೈ ವಿಪ್ರವರ್ಯರಿರಾ, ನಾನು ಹೇಳುತ್ತಿರುವುದನ್ನು ಸರಿಯಾಗಿ ಗ್ರಹಿಸಿರಿ. ಇದರಲ್ಲಿ ಮತ್ತೇನೂ ಸಂಶಯಕ್ಕೆ ಆಸ್ಪದ ಕೊಡಬೇಡಿರಿ. ಯಾವ ವಸ್ತುವಿನಿಂದ ಈ ಪ್ರಪಂಚಕ್ಕೆ ಮೂಲಕಾರಣವಾದ ಪಂಚಭೂತಗಳು ಹುಟ್ಟಿವೆಯೋ, ಯಾವ ವಸ್ತುವಿನ ಆಧಾರದಿಂದ ಚರಾಚರಗಳಾದ ವಸ್ತುಗಳು ಮತ್ತು ಪ್ರಾಣಿಗಳು ಒಂದು

ಅಪಾಣಿಪಾದೋ ಜವನೋ ಗೃಹೀತಾ
ಪಶ್ಯಾಮ್ಯಚಕ್ಷುಸ್ಸಶೃಣೋಮ್ಯಕರ್ಣಃ ।
ಅಹಂ ವಿಜಾನಾಮಿ ಜಗದ್ಗತಂ ಹಿ
ಜನೋ ನ ಮಾಂ ವೇತ್ತಿ ಚ ಮಾಯಯಾ ವೃತಃ ॥೫೭॥

ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತಕೃದ್ವೇದವಿದೇವ ಚಾಹಂ ।
ನೈವಾಸ್ತಿ ಬಂಧೋ ನ ಮಮಾಸ್ತಿ ಮುಕ್ತಿಃ
ಅಚ್ಛೋ ನಿರಿಚ್ಛೋಽಸ್ಮಿ ಮನೋವಿವರ್ಜಿತಃ ॥೫೮॥

---

ಸ್ವರೂಪವನ್ನು ಪಡೆದು ಬಾಳುತ್ತಿವೆಯೋ ಮತ್ತು ಈ ಅಖಂಡಬ್ರಹ್ಮಾಂಡವೂ ಸಹ ಅಂತ್ಯದಲ್ಲಿ ಯಾವ ವಸ್ತುವಿನಲ್ಲಿಯೇ ಲೀನವಾಗಿ ತಮ್ಮ ಸ್ಥಿತಿಯನ್ನು ಕಳೆದು ಕೊಳ್ಳುವುವೋ ಆ ಸರ್ವಸ್ವತಂತ್ರವಾದ ವಸ್ತುವೇ ಬ್ರಹ್ಮ, ಆ ಬ್ರಹ್ಮವಸ್ತುವೇ ನಾನಾಗಿರುವೆನು. ॥೫೬॥

ನನಗೆ ಹಸ್ತವಿರುವುದಿಲ್ಲ. ಆದರೆ ನಾನೇ ಸರ್ವಸ್ವವನ್ನೂ ಹರಣ ಮಾಡುತ್ತೇನೆ. ಕಾಲುಗಳಿರುವುದಿಲ್ಲ, ಆದರೆ ಮಹಾ ಶೀಘ್ರಗಾಮಿಯಾಗಿರುವೆನು. ನನಗೆ ನೇತ್ರಗಳಿರುವುದಿಲ್ಲ, ಆದರೆ ಸರ್ವವನ್ನೂ ಸದಾ ನೋಡುತ್ತಿದ್ದೇನೆ. ಕಿವಿಗ ಳಿರುವುದಿಲ್ಲ, ಎಲ್ಲವನ್ನೂ ಸದಾ ಕೇಳುತ್ತಿರುತ್ತೇನೆ. ಈರೀತಿ ಪ್ರಪಂಚದಲ್ಲಿ ಯಾವ ಯಾವ ಕ್ಷಣದಲ್ಲಿ ಏನೇನು ವ್ಯಾಪಾರ ವ್ಯವಹಾರಗಳು ನಡೆಯುವುವೋ ಅವುಗ ಳೆಲ್ಲವೂ ನನ್ನ ತಿಳಿವಳಿಕೆಗೆ ಬಂದೇ ತೀರುವುವು. ಪ್ರಪಂಚದ ಸರ್ವಸ್ವವೂ ನನಗೆ ಗೊತ್ತು. ಆದರೆ ನನ್ನನ್ನು ಯಾವನೂ ತಿಳಿಯಲಾರ, ತಿಳಿದಿರುವುದಿಲ್ಲ. ಏಕೆಂದರೆ ನನ್ನ ಮಾಯೆಯು ಸರ್ವತ್ರ ವ್ಯಾಪಿಸಿರುವುದು. ಆ ಮಾಯೆಯ ಆವರಣವಿರು ವುದರಿಂದ ನನ್ನ ಇರವು ಯಾವನಿಗೂ ಗೋಚರಿಸಲಾರದು. ನಾನು ಯಾವನ ಅನುಭವಕ್ಕೂ ಸುಲಭವಾಗಿ ಸಿಕ್ಕಲಾರೆ. ॥೫೭॥

ಸಮಸ್ತ ವೇದರಾಶಿಯೂ ನನ್ನ ಸ್ವರೂಪವನ್ನು ತಿಳಿಸಲು ಹೊರಟಿರುವುದು. ನನ್ನನ್ನು ಗುರುತಿಸಿಕೊಡುವುದೇ ವೇದದ ಪರಮ ಲಕ್ಷ್ಯವು. ಅಖಿಲ ವೇದರಾಶಿ ಯಿಂದ ನನ್ನ ಸ್ವರೂಪವೇ ತಿಳಿಯುವುದು. ಅಂಥ ವೇದವನ್ನೂ ವೇದಾಂತವನ್ನೂ ಸಹ ಕಲ್ಪಿಸಿದವನೂ, ಪ್ರಚಾರಮಾಡಿದವನೂ ಮತ್ತು ತಿಳಿದಿರುವವನೂ ಮೂಲತಃ

ಅಗಾಧಮಸ್ಪರ್ಶಮರೂಪಭೂತಂ
ತಥಾರಸಂ ನಿತ್ಯಮಸಂಗಮೀಶಂ ।
ಭೂತೇಂದ್ರಿಯಾಣಾಮತಿರಿಕ್ತಮೀಶ್ವರಂ
ಕೋಶಾದಿಹೀನಂ ತಮಸಃ ಪರಸ್ತಾತ್ ॥೫೯॥

ಜಾಗ್ರತ್ಸ್ವಪ್ನಸುಷುಪ್ತ್ಯಾದಿಪ್ರಪಂಚಂ ರಜಸಾ ತತಂ ।
ತದ್ಬ್ರಹ್ಮಾಹಮಿತಿ ಜ್ಞಾತ್ವಾ ಸರ್ವಬಂಧವಿವರ್ಜಿತಃ ॥೬೦॥

---

ನಾನೇ. ಮತ್ತು ನನ್ನ ಸ್ವರೂಪವು ಹೇಗಿರುವುದೆಂಬುದನ್ನು ನಿರೂಪಿಸುವೆನು ಕೇಳಿರಿ. ನನಗೆ ಯಾವ ಬಂಧವೂ ಇಲ್ಲ. ಸಂಸಾರವೇ ಮೊದಲಾದ ಬಂಧನಗಳೂ ನನಗಿಲ್ಲ. ಆದುದರಿಂದ ಮುಕ್ತಿಯೂ ನನಗೆ ಸಂಭವಿಸುವುದಿಲ್ಲ. ನಾನು ಸಮಸ್ತ ಕಲ್ಮಷ ವಿವರ್ಜಿತನು. ಸ್ವಚ್ಛವಿಜ್ಞಾನ ಘನನೂ ಚಿದಾನಂದನೂ ನಾನಾಗಿರುವೆನು. ನನಗೆ ಯಾವ ಆಸೆ ಇಚ್ಛೆ ಸಂಕಲ್ಪಗಳೂ ಇರುವುದಿಲ್ಲ. ಅವುಗಳಲ್ಲಿ ಅಭಿನಿವೇಶವಿಟ್ಟುಕೊಂಡಿರುವನು ನಾನಲ್ಲ. ಏಕೆಂದರೆ ನನಗೆ ಇಂದ್ರಿಯಗಳಿರುವುದಿಲ್ಲ. ನಿರಿಂದ್ರಿಯನಾದ ನನ್ನಲ್ಲಿ ಅಭಿನಿವೇಶಾದಿಗಳಿಗೆ ಕಾರಣವಾದ ಮಾನಸೇಂದ್ರಿಯವು ನನ್ನಲ್ಲಿಲ್ಲ. ಆಕಾಶಾತ್ಮನಾದ ನನ್ನಲ್ಲಿ ಮನಸ್ಸೇಮೊದಲಾದ ಇಂದ್ರಿಯಗಳು ನಿರುಪಾಧಿಕವಾಗಿ ಸಂಭವಿಸಲಾರವು. ॥೫೮॥

ನನ್ನ ಸ್ಥಿತಿಗೆ ಆಳ ಆಳತೆ ಇಲ್ಲದಿರುವುದರಿಂದ ಬ್ರಹ್ಮವಸ್ತುವು ಅಗಾಧವೆಂದು ತಿಳಿಯಿರಿ. ಆ ಬ್ರಹ್ಮಸ್ವರೂಪನಾದ ನನಗೆ ಆಕಾರ ಅಥವಾ ರೂಪವಿಲ್ಲದಿರುವುದರಿಂದ ನನ್ನನ್ನು ಮುಟ್ಟಲಾಗುವುದಿಲ್ಲ. ಹಾಗೆಯೇ ನನಗೆ ಯಾವ ವಸ್ತುವಿನ ಸಂಯೋಗವಾಗಲೀ ಸಂಪರ್ಕವಾಗಲೀ ಇರುವುದಿಲ್ಲ. ನಾನು ಆಕಾಶಾತ್ಮನಾಗಿರುವುದರಿಂದಲೇ ರಸವಲ್ಲ. ರಸದಂತೆ ದ್ರವದ್ರವ್ಯತ್ವವು ನನ್ನಲ್ಲಿಲ್ಲ. ಪಂಚಭೂತಗಳಿಂದಲೂ ದೇಹೋಪಾಧಿಯಾದ ಇಂದ್ರಿಯಗಳಿಂದಲೂ ಬಿಡಲ್ಪಟ್ಟು ನಾನು ಸ್ವತಂತ್ರನಾಗಿ ಸಕಲಕ್ಕೂ ಈಶ್ವರನಾಗಿರುವೆನು. ಅಧಿಪತಿಯಾಗಿರುವೆನು. ದೇಹವಿಮುಕ್ತನಾಗಿರುವುದರಿಂದ ನನಗೆ ಅನ್ನಮಯ, ಪ್ರಾಣಮಯ ಮುಂತಾದ ಕೋಶಗಳ ಸಂಬಂಧವೂ ಇರುವುದಿಲ್ಲ. ತಮೋಗುಣದಿಂದ ಬಹು ದೂರದಲ್ಲಿ ನಾನಿರುವೆನು. ಮಾಯೆಯ ಧರ್ಮವಾದ ತಮೋಗುಣವು ನನ್ನದಲ್ಲ. ಅದು ನನ್ನಲ್ಲಿರುವುದಲ್ಲ. ॥೫೯॥

ಚರಾಚರಾತ್ಮಕವಾದ ಈ ಅಖಂಡ ಪ್ರಪಂಚವು ಜಾಗ್ರತ್ (ಎಚ್ಚರಿಕೆಯಿಂದಿರೋಣ) ಸ್ವಪ್ನ ಮತ್ತು ಸುಷುಪ್ತಿ (ಅತ್ಯಂತ ಗಾಢನಿದ್ರೆ, ಕಿಂಚಿತ್ತು ಜ್ಞಾನವಿಲ್ಲ

ಸತ್ಯಜ್ಞಾನಾನಂದಮಯ ಅಹಮೇವ ಮುನೀಶ್ವರಾಃ ।
ಮಾಂ ಯೋ ವೇದ ಸ ವೈ ವೇದ ಸರ್ವಮಿತ್ಯಾಹ ಹಿ ಶ್ರುತಿಃ ॥೬೧॥

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚಿಜ್ಜಗತೀಗತಂ ।
ದೇಶಕಾಲಾದ್ಯವಿಚ್ಛಿನ್ನೋ ಮಾಂ ಜ್ಞಾತ್ವಾ ಮೃತ್ಯುವರ್ಜಿತಃ ॥೬೨॥

---

ದಿರುವುದು) ಎಂಬ ಅವಸ್ಥಾತ್ರಯದಲ್ಲಿ ಅಡಕವಾಗಿದೆ. ಈ ಮೂರು ಅವಸ್ಥೆಯನ್ನು ಅತಿಕ್ರಮಿಸಿದ್ದುದು ಯಾವ ವಸ್ತುವೂ ಇರುವುದಿಲ್ಲ. ಈ ಅವಸ್ಥೆಗಳು ಪ್ರಾಪ್ತವಾಗುವುದಕ್ಕೆ ಪ್ರವೃತ್ತಿಯೇ ಕಾರಣ. ಆ ಪ್ರವೃತ್ತಿಗೆ ರಜೋಗುಣವೇ ಕಾರಣವಾಗಿರುವುದರಿಂದ ಆ ರಜೋಗುಣದ ಪರಿಣಾಮದಿಂದಲೇ ಈ ಜಗತ್ತು ವಿಶಾಲವಾಗಿ ಸೃಷ್ಟಿಸಲ್ಪಟ್ಟಿದೆ ಎಂದು ತಿಳಿಯಿರಿ. ಆದರೆ ಬ್ರಹ್ಮಸ್ವರೂಪನಾದ ನಾನು ಮಾತ್ರ ಯಾವ ಅವಸ್ಥೆಗೂ ಅಥವಾ ಬಂಧಗಳಿಗೂ ಒಳಪಡದೇ ಸ್ವತಂತ್ರನಾಗಿ ಸಾಕ್ಷಿಯಾಗಿ ಇರುವೆನೆಂದು ತಿಳಿಯಿರಿ. ॥೬೦॥

ಮೇಲೆ ಹೇಳಿದಂತೆ ರಜಸ್ತಮೋಗುಣಗಳಿಂದ ಅನಾವೃತನಾಗಿ ನಾನು ಕೇವಲ ಸತ್ವಗುಣದಿಂದ ಉಪಲಕ್ಷಿತನಾಗಿರುವೆನು. ಆ ಸತ್ವಗುಣವು ಉದ್ರಿಕ್ತವಾಗಿ ಸಂಪರ್ಕವನ್ನು ಪಡೆದರೆ ಆಗ ನನ್ನ ಚಿದಾನಂದಮಯತ್ವವು ಪ್ರಕಾಶಿಸುವುದು. ಆದುದರಿಂದ ನನ್ನ ಸ್ವರೂಪವು ಸತ್ಯವೂ ಜ್ಞಾನಮಯವೂ ಆನಂದಮಯವೂ ಆಗಿರುತ್ತದೆ. ಈರೀತಿಯಾಗಿ ಯಾವನು ತಿಳಿದುಕೊಳ್ಳುವನೋ ಅವನು ಸರ್ವಜ್ಞನೆನಿಸುವನು. ಸಮಸ್ತ ಜಗತ್ತನ್ನೂ ಆಳವಡಿಸಿಕೊಂಡ ನನ್ನನ್ನು ಅರಿತುಕೊಂಡ ಮೇಲೆ ಈ ಪ್ರಪಂಚದ ಸಮಸ್ತ ವ್ಯವಹಾರವನ್ನೂ ಅರಿತುಕೊಂಡಂತೆಯೇ ಆಗುವುದೆಂಬುದನ್ನು ಶ್ರುತಿಯು ಸಾರುತ್ತಿದೆ. ॥೬೧॥

ಈ ಜಗತ್ತಿನಲ್ಲಿ ಏನೊಂದು ವಸ್ತುವು ಇರುತ್ತದೆಯೋ ಅದು ಪ್ರತಿಯೊಂದೂ ಈಶ್ವರಾಧಿಷ್ಠಿತವಾಗಿರುವುದು. ಈಶ್ವರನು ಆವಾಸಮಾಡದ ವಸ್ತು ಒಂದೂ ಇಲ್ಲ. ಏಕೆಂದರೆ ದೇಶ ಮತ್ತು ಕಾಲಗಳಿಂದ ಈಶ್ವರನು ಪರಿಚ್ಛಿನ್ನನಾಗುವುದಿಲ್ಲ. (ಈ ದೇಶಕ್ಕೆ ಒಬ್ಬ ಈಶ್ವರ ಮತ್ತೊಂದು ದೇಶಕ್ಕೆ ಮತ್ತೊಬ್ಬ ಈಶ್ವರ ಎಂದಾಗಲಿ, ಅಥವಾ ಈ ದೇಶದಲ್ಲಿ ಈಶ್ವರ ಇದ್ದಾನೆ ಮತ್ತೊಂದರಲ್ಲಿ ಇಲ್ಲ ಎಂದಾಗಲಿ, ಅಥವಾ ಈ ಕಾಲಕ್ಕೆ ಒಬ್ಬ ಈಶ್ವರ, ಬೇರೆಕಾಲಕ್ಕೆ ಮತ್ತೊಬ್ಬ ಈಶ್ವರ ಎಂದಾಗಲಿ, ಅಥವಾ ಈ ಕಾಲದಲ್ಲಿ ಈಶ್ವರ ಇದ್ದಾನೆ ಮುಂದೆ ಅಥವಾ ಇದಕ್ಕೆ ಪೂರ್ವದಲ್ಲಿ ಇಲ್ಲ ಇತ್ಯಾದಿ ವ್ಯವಹಾರವು ಸಂಭವಿಸುವುದಿಲ್ಲ) ಈಶ್ವರನು ಅಪರಿಚ್ಛಿನ್ನನು. ನಿತ್ಯನೂ ಸರ್ವ

ಅದ್ವಿತೀಯೋಽಹಮೀಶಾನ ಏಕಮೇವಾಹಮೀಶ್ವರಃ ।
ಜ್ಞಾತ್ವಾ ಮಾಂ ನ ಬಿಭೇತ್ಯೇವ ನ ದ್ವೈತಂ ತತ್ರ ವಿದ್ಯತೇ ॥೬೩॥

ದ್ವೈತೇ ಭಯಂ ಹಿ ಭವತಿ ಈಷದ್ವಾ ದುಃಖಮಶ್ನುತೇ ।
ಸರ್ವೇಂದ್ರಿಯಗುಣಾತೀತಸ್ಸರ್ವೇಂದ್ರಿಯ ವಿವರ್ಜಿತಃ ॥೬೪॥

---

ವ್ಯಾಪಿಯೂ ಆಗಿದ್ದಾನೆ. ಅಂಥ ನನ್ನ ತತ್ವವನ್ನು ಅರಿತರೆ ಮೋಕ್ಷವು ಲಭಿಸುವುದು. ಮೃತ್ಯುಭಯವೂ ತೊಲಗುವುದು. ॥೬೨॥

ಈಶ್ವರ ವಸ್ತುವು ಒಂದೇ. ಅದಕ್ಕೆ ಪ್ರತಿಯಾಗಿಯಾಗಲೀ ಅದಕ್ಕೆ ಸರಿಸಮಾನವಾಗಿಯಾಗಲೀ ಆದರ ಜೊತೆಗೆ ಶಾಶ್ವತವಾದ ಸತ್ತೆಯನ್ನು ಪಡೆದುಕೊಂಡಿರುವುದಾಗಲೀ ಬೇರೊಂದು ವಸ್ತು ಇರುವುದಿಲ್ಲ. ಈಶ್ವರಾತಿರಿಕ್ತವಾದ ವಸ್ತುವು ಸರ್ವಥಾ ಇಲ್ಲವೇ ಇಲ್ಲ. ಆದ್ದರಿಂದಲೇ ಅದ್ವೈತತತ್ವಸಿದ್ಧಾಂತವು ಶಾಶ್ವತವಾಗಿ ಸ್ಥಾಪಿತವಾಗಿ ಈಶ್ವರನು ಅದ್ವಿತೀಯನೆಂತಲೂ ಒಬ್ಬನೇ ಈಶ್ವರನೆಂತಲೂ ಸಾರುತ್ತಿದೆ. ಎರಡು ವಸ್ತುಗಳ ಇರುವಿಕೆ ಎಂಬ ವಾದವನ್ನು ನಿರಾಕರಿಸಿ ಒಂದೇ ವಸ್ತುತತ್ವ ಎಂದು ಸ್ಥಾಪಿಸುತ್ತಿದೆ. ತಾತ್ವಿಕವಾಗಿ ಈಶ್ವರಾತಿರಿಕ್ತವಾದ ವಸ್ತು ಇರುವುದಿಲ್ಲ. ಈಶ್ವರವಸ್ತು ಒಂದೇ ಚಿದಾನಂದಮಯವಾಗಿರುವುದು ಎಂಬುದನ್ನು ಯಾವನು ಅರಿತುಕೊಳ್ಳುವನೋ ಅವನಿಗೆ ಸರ್ವವಿಧವಾದ ಭಯದಿಂದಲೂ ಬಂಧನದಿಂದಲೂ ಮುಕ್ತಿಯು ಸಿದ್ಧ. ॥೬೩॥

ಎರಡು ವಸ್ತುಗಳಿದ್ದರೆ ಒಂದಲ್ಲ ಒಂದು ಕಾಲದಲ್ಲಿ ಯಾವುದಾದರೊಂದಕ್ಕೆ ಅಪಾಯ ಒದಗುವ ಸಂಭವವಿರುತ್ತದೆ. ಆದುದರಿಂದ ಎರಡು ಪದಾರ್ಥಗಳಿದ್ದರೆ ಒಂದರಿಂದ ಮತ್ತೊಂದಕ್ಕೆ ಭಯವುಂಟಾಗುವುದು ಸಂಭಾವಿತ. ಅಥವಾ ಒಂದರಿಂದ ಮತ್ತೊಂದಕ್ಕೆ ಸ್ಪರ್ಧೆ ಬೀಳಬಹುದು. ಅಥವಾ ಸುಖಾದಿಗಳ ವಿಷಯದಲ್ಲಿ ನ್ಯೂನಾಧಿಕ ಭಾವವೂ ತತ್ಪ್ರಯುಕ್ತವಾಗಿ ನ್ಯೂನವಸ್ತುವಿಗೆ ದುಃಖವೂ ಅಧಿಕವಸ್ತುವಿಗೆ ಅಹಂಕಾರವೂ ಸಂಭವಿಸಬಹುದು. ಈರೀತಿ ಅವ್ಯವಸ್ಥೆಯು ಸಂಭವಿಸಬಹುದಾದ್ದರಿಂದ ಈ ದ್ವೈತಮತವು ನಿಲ್ಲುವುದಿಲ್ಲ. ಮೋಕ್ಷವು ನಿತ್ಯನಿರತಿಶಯ ಸುಖರೂಪ ಎಂಬ ಸಿದ್ಧಾಂತವು ಸಾಧಿತವಾಗಬೇಕಾದರೆ ಅದ್ವೈತತತ್ವವನ್ನೇ ನಿರ್ಣಯಿಸಬೇಕು. ಈರೀತಿ ಅದ್ವೈತತತ್ತ್ವದಿಂದ ಪ್ರತಿಪಾದಿತವಾಗುವ ಬ್ರಹ್ಮವಸ್ತುವು ಸಮಸ್ತ ಇಂದ್ರಿಯಗಳಿಂದಲೂ ಸಮಸ್ತ ಗುಣಗಳಿಂದಲೂ ವಿಹೀನವಾಗಿರುವುದು. ಮೇಲೆ ನಿರೂಪಿಸಿರುವಂತೆ ಆಕಾಶಾತ್ಮಕವಾದ ಬ್ರಹ್ಮವಸ್ತುವಿನಲ್ಲಿ

ಸರ್ವಸ್ಯ ಪ್ರಭುರೀಶಾನಸ್ಸರ್ವಸ್ಯ ಶರಣಂ ಸುಹೃತ್ ।
ಪ್ರಾಕ್ಪ್ರತೀಚೀಉದೀಚ್ಯೋಽಹಂ ದಕ್ಷಿಣಾವಿದಿಶಸ್ತಥಾ ॥೬೫॥

ಅಥಶ್ಚೋರ್ಧ್ವಂ ಚ ಯತ್ಕಿಂಚಿದ್ಭೂತಂ ಭಾವ್ಯಹಮೇವ ಹಿ ।
ಪೂರ್ಣಂ ಪೂರ್ಣಮದಃ ಪೂರ್ಣಂ ಸಂಪೂರ್ಣೋಽಸ್ಮಿ ನಿರಾಮಯಃ॥೬೬॥

ಅಶರೀರಶ್ಶರೀರೇಷು ಪ್ರಾಣಾಪಾನೌ ಮನೋಮನಃ ।
ದೇಹೇಂದ್ರಿಯಾಣ್ಯಥ ಪ್ರಾಣಾಃ ಮನಸಾ ಮುನಯೋಽಹ್ಯಹಂ ॥೬೭॥

---

ಇಂದ್ರಿಯ ಮತ್ತು ಗುಣಗಳು ಸಂಭವಿಸಲಾರವು. ಹಾಗೆಯೇ ನಾಮರೂಪಶೂನ್ಯವಾಗಿರುವುದರಿಂದ ಇಂದ್ರಿಯಾತೀತವಾಗಿರುವುದು. ಪ್ರತ್ಯಕ್ಷಾದಿ ಅನುಭವಕ್ಕೆ ಬ್ರಹ್ಮವಸ್ತುವು ಗೋಚರವಾಗುವುದಿಲ್ಲ. ॥೬೪॥

ಈ ಜಗತ್ತಿನಲ್ಲಿರುವ ಸರ್ವಪದಾರ್ಥಗಳಿಗೂ ಈಶ್ವರನೇ ಪ್ರಭುವು. ಈಶ್ವರನೇ ರಕ್ಷಕನು, ಅವನೇ ನಿಜವಾದ ಸಂಗಡಿಗನು. ಈಶ್ವರನು ಸರ್ವವ್ಯಾಪಕನು. ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಮತ್ತು ವಿದಿಕ್ಕು ಮುಂತಾದ ಎಲ್ಲಾ ಕಡೆಯಲ್ಲೂ ಇರುವನು. ಮೇಲುಗಡೆ, ಕೆಳಭಾಗ, ಇವುಗಳೆಲ್ಲವನ್ನೂ ವ್ಯಾಪಿಸಿಕೊಂಡಿರುವವನು. ಏನೇನು ಪೂರ್ವದಲ್ಲಿ ಸಂಭವಿಸಿ ಹೋಗಿದೆಯೋ ಅಥವಾ ಮುಂದಕ್ಕೆ ಏನೇನು ಸಂಭಾವಿತವೋ ಅವುಗಳೆಲ್ಲವೂ ಈಶ್ವರಾಧೀನವಾದದ್ದೇ. ಈಶ್ವರನಿಗೆ ಗೋಚರವಾಗದೇ ಒಂದು ತೃಣವೂ ಚಲಿಸುವುದಿಲ್ಲ. ಸರ್ವ ವಸ್ತುವಿಗೂ ಕರ್ಣಧಾರನು ಈಶ್ವರನೇ. ಆ ಈಶ್ವರನೇ ನಾನಾಗಿರುವೆನು. ॥೬೫॥

ನಾನೇ ಬ್ರಹ್ಮವಸ್ತು ಎಂಬುದನ್ನು ಪದೇ ಪದೇ ಹೇಳುತ್ತಿರುವೆನು. ಗಮನಿಸಿ ಗ್ರಹಿಸಿಕೊಳ್ಳಿರಿ. ಬ್ರಹ್ಮವಸ್ತುವಿಗೆ ಯಾವ ರೋಗರುಜಿನಗಳಿರುವುದಿಲ್ಲ. ನಾಶ ಅಥವಾ ಅಪಾಯವಿರುವುದಿಲ್ಲ. ಅದು ಪರಿಪೂರ್ಣವಾದದ್ದು. ಪ್ರಪಂಚದಲ್ಲಿ ಪ್ರತಿಯೊಂದು ಪದಾರ್ಥವೂ ಒಂದಲ್ಲ ಒಂದು ಬಗೆಯಿಂದ ನ್ಯೂನವಾಗಿರುತ್ತದೆ. ಅಪರಿಪೂರ್ಣವಾಗಿರುತ್ತದೆ.. ಆದರೆ ಈ ಬ್ರಹ್ಮವಸ್ತುವು ಸ್ವಾತ್ಮಾನಂದಪರಿಪೂರ್ಣವಾಗಿರುವುದು. ಅದಕ್ಕೆ ಯಾವವಿಧದಲ್ಲಿಯೂ ನ್ಯೂನತೆ ಇರುವುದಿಲ್ಲ. ಹೀಗೆ ಅಶರೀರವಾದ ಬ್ರಹ್ಮವಸ್ತುವು ನಾನಾಗಿದ್ದರೂ ನನ್ನ ಮಾಯೆಯ ಸಂಬಂಧದಿಂದ ಪ್ರಪಂಚವು ಆರಂಭವಾಗುವುದು. ಅಂಥ ಪ್ರಪಂಚದಲ್ಲಿನ ಸ್ಥಾವರಜಂಗಮಗಳ ಶರೀರವನ್ನೂ ಇಂದ್ರಿಯಗಳನ್ನೂ ಮನಸ್ಸನ್ನೂ ಸಹ ನಾನು ವ್ಯಾಪಿಸಿಕೊಂಡು

ಕೂರ್ಮೋಂಗಾನೀವ ಸರ್ವತ್ರ ಸೃಜಾಮಿ ವಿಸೃಜಾಮಿ ಚ ।
ವಿನಶ್ಯತ್ಸ್ವವಿನಶ್ಯಂತಂ ಮಾಂ ಯೋ ವೇದ ಸ ವೇದವಿತ್ ॥೩೮॥

ದ್ವಿತ್ವಹೀನಂ ಹಿ ಮಾಂ ಜ್ಞಾತ್ವಾ ಶೋಕಂ ತರತಿ ಸತ್ತಮಾಃ ।
ಕೋ ಮೋಹಸ್ತಸ್ಯ ಕಶ್ಶೋಕಶ್ಶಿನ್ನೈನಾಸ್ಸ ಏವ ಹಿ ॥೩೯॥

---

ಅನುಪ್ರವಿಷ್ಟನಾಗಿರುವೆನು. ವಸ್ತುತಃ ಪ್ರಪಂಚವು ಜಡವೂ ಬಲ್ಪಜವೂ ಆಗಿರುತ್ತದೆ. ಆದರೆ ನನ್ನ ಚೈತನ್ಯಸಂಪರ್ಕದಿಂದ ಲೋಕವ್ಯವಹಾರವು ವಿಚಿತ್ರವಾಗಿಯೂ ನಾನಾವಿಧವಾಗಿಯೂ ಆರಂಭವಾಗುವುದು. ॥೩೬-೩೭॥

ಆಮೆಯು ತನ್ನಲ್ಲೇ ಇರುವ ಕೈಕಾಲುಗಳನ್ನು ಆಗಾಗ ಹೇಗೆ ಹೊರಕ್ಕೆ ಚಾಚುವುದೋ, ತನ್ನ ಇಚ್ಛೆಯಂತೆ ಆಗಾಗ ಮಡಿಸಿಕೊಂಡು ಸಂಕೋಚವನ್ನು ಪಡೆದುಕೊಳ್ಳುವುದೋ ಹಾಗೆಯೇ ನಾನೂ ಸಹ ನನ್ನ ಸಂಕಲ್ಪದಲ್ಲಿ ಸ್ವತಂತ್ರನಾಗಿರುವೆನು. ಸೃಷ್ಟಿಯ ಆರಂಭದಲ್ಲಿ ಈ ಜಗತ್ತನ್ನು ಪ್ರಕಟಿಸುತ್ತೇನೆ (ಸೃಷ್ಟಿಸುತ್ತೇನೆ). ಮತ್ತೆ ಪ್ರಳಯದಲ್ಲಿ ಎಲ್ಲವನ್ನೂ ನನ್ನಲ್ಲಿಯೇ ಅಡಕಮಾಡಿಕೊಳ್ಳುತ್ತೇನೆ. ಆದುದರಿಂದ ಜಗತ್ತಿಗೆ ಹುಟ್ಟೂ ಇಲ್ಲ ನಾಶವೂ ಇಲ್ಲ. ಹುಟ್ಟು ನಾಶವೆಂಬುದು ಕೇವಲ ಭ್ರಮೆ. ಪದಾರ್ಥವು ನಾಶವಾಗುತ್ತಿರುವಂತೆ ಕಂಡರೂ ಅದರಿಂದ ನನಗೆ ಯಾವ ಅಪಾಯವೂ ಒದಗಲಾರದು. ಈ ತತ್ವವನ್ನು ಯಾವನು ಅರಿತುಕೊಳ್ಳುವನೋ ಅವನೇ ನಿಜವಾಗಿ ವೇದಾಂತತತ್ವವನ್ನು ಗ್ರಹಿಸಿದ್ದಾನೆಂದು ತಿಳಿಯಬೇಕು. ॥೩೮॥

ನಾನು ದ್ವಿತೀಯವಸ್ತುರಹಿತನೆಂದೂ ಅದ್ವೈತತತ್ವವೇ ಬ್ರಹ್ಮವಸ್ತುವೆಂದೂ ಯಾವನು ತಿಳಿಯುವನೋ ಅವನು ಸಕಲ ವಿಧವಾದ ಶೋಕವನ್ನೂ ದಾಟಿ ಮುಕ್ತಿಯನ್ನು ಪಡೆಯುವನು. ಏಕೆಂದರೆ ಅದ್ವಿತೀಯ ವಸ್ತುವಿನ ಸಂಪೂರ್ಣ ಅನುಭವವು ಬಂದ ಮೇಲೆ ಆ ಅವಸ್ಥೆಯಲ್ಲಿ ಯಾವ ಕ್ರಿಯೆಯಾಗಲೀ ವ್ಯವಹಾರವಾಗಲಿ ಇರುವುದಿಲ್ಲ. ಕ್ರಿಯಾರೂಪವಾದ ಅಪಾಯ ನಾಶಗಳು ಸಂಭವಿಸದ ಮೇಲೆ ಅಲ್ಲಿ ಶೋಕ ಮತ್ತು ಮೋಹಗಳೆಲ್ಲಿ ಸಂಭವಿಸಬಲ್ಲವು? ಅವುಗಳಿಗೆ ಯಾವುದಕ್ಕೂ ಎಡೆಯಿರುವುದಿಲ್ಲ. ಆದ್ದರಿಂದಲೇ ಬ್ರಹ್ಮಜ್ಞಾನಿಯು ಸಮಸ್ತ ಪಾಪಗಳಿಂದಲೂ ಬಿಡಲ್ಪಟ್ಟಿರುತ್ತಾನೆ. ಪಾಪವು ವಾಸನಾಸಹಿತವಾಗಿ ಕತ್ತರಿಸಿಹೋಗುವುದರಿಂದ ಮುಕ್ತಿಯ ಅವಸ್ಥೆಯಲ್ಲಿ ಮಹಾಪವಿತ್ರತ್ವವುಂಟಾಗಿ ಮುಕ್ತನು ಶುದ್ಧಪುಣ್ಯಾತ್ಮನಾಗುತ್ತಾನೆ. ॥೩೯॥

ಮಾಮಾತ್ಮಾನಂ ಪ್ರಿಯಂ ಜ್ಞಾತ್ವಾ ಆನಂದಂ ನ ಬಿಭೇತಿ ಹಿ ।
ಮತ್ತ ಏವ ಜಗಜ್ಜಾತಂ ಮಯ್ಯೇವ ಸ್ಥಿತಮೇವ ಹಿ ॥೨೦॥

ಮಯ್ಯೇವಾಂತೇ ಸಮಭ್ಯೇತಿ ನ ತದ್ಧರ್ಮೈರವಲೇಪಿತಃ ।
ವಾಚೋ ಮತ್ತೋ ನಿವರ್ತಂತೇ ಮಾನಸಂ ಮುನಿಸತ್ತಮಾಃ ॥೨೧॥

ಮಾಂ ಬ್ರಹ್ಮ ವಿದ್ವಾನ್ ಬ್ರಹ್ಮೈವ ಭವಿಷ್ಯತಿ ನ ಸಂಶಯಃ ।
ಮಯಿ ಜ್ಞಾತೇಽಖಿಲಂ ಜ್ಞಾತಂ ಪುಚ್ಛಂ ಪುರುಷ ಏವ ಹಿ ॥೨೨॥

---

ನನ್ನಿಂದಲೇ ಈ ಜಗತ್ತು ಉಂಟಾಗಿರುವುದು. ಇದು ಇರುವುದೂ ನನ್ನಲ್ಲಿಯೇ, ನಾಶವಾಗುವುದೂ ನನ್ನಲ್ಲಿಯೇ. ಹೀಗೆ ತ್ರಿಕಾಲದಲ್ಲಿಯೂ ಸಹ ಈ ಜಗತ್ತು ಅಧಿಷ್ಠಾನರೂಪನಾದ ನನ್ನಲ್ಲಿಯೇ ಇರತಕ್ಕದ್ದು. ಆದ್ದರಿಂದ ಈ ಪ್ರಪಂಚಕ್ಕೆ ಸ್ವತಂತ್ರವಾದ ಸ್ಥಿತಿ ಇಲ್ಲ. ಗುಣಧರ್ಮಗಳೂ ಇರುವುದಿಲ್ಲ. ಮಾಯೆಯಿಂದ ಎಲ್ಲವೂ ವಿಚಿತ್ರವಾಗಿ ಮಾತ್ರ ತೋರುವುವು. ಆತ್ಮಸ್ವರೂಪನಾದ ನಾನು ಮಾತ್ರ ನಿರ್ಲಿಪ್ತನಾಗಿರುವೆನು. ನನ್ನಿಂದ ಯಾವ ಪದಾರ್ಥಕ್ಕೂ ವಿಯೋಗ ಅಪಾಯಗಳು ಉಂಟಾಗಲಾರವು. ಆದ್ದರಿಂದ ನಾನು ಪ್ರಿಯನು; ದ್ವೇಷಭಾವವಿಲ್ಲದವನು, ಇದರಿಂದಲೇ ನನಗೆ ಯಾವಾಗಲೂ ಆನಂದವಿರುವುದು. ಈ ಆನಂದಸ್ವರೂಪವನ್ನೇ ಸಾಧಕನು ಭಾವನಾತನ್ಮಯತೆಯಿಂದ ಅನುಭವಿಸಿದರೆ ಭಯ, ಶೋಕ, ಮೋಹ ಮುಂತಾದುವುಗಳನ್ನು ಅವನು ದಾಟುತ್ತಾನೆ ಮತ್ತು ಮುಕ್ತನಾಗುತ್ತಾನೆ. ॥೨೦॥

ಪಟರೂಪವಸ್ತುವನ್ನು (ಬಟ್ಟೆ) ಪಟ ಎಂಬ ಶಬ್ದವು ಬೋಧಿಸುತ್ತದೆ. ಅಂದರೆ ಪಟವಸ್ತುವೂ ಪಟಶಬ್ದವೂ ವಾಚ್ಯವಾಚಕಭಾವವೆಂಬ ಸಂಬಂಧವನ್ನು ಪಡೆದು ಕೊಂಡಿರುತ್ತವೆ. ಆದ್ದರಿಂದ ಪಟ ಎಂಬ ವಾಕ್ ಉಂಟು. ಆದರೆ ಬ್ರಹ್ಮವಸ್ತುವಾದ ನನ್ನನ್ನು ಬೋಧಿಸುವ ವಾಕ್ ಇರುವುದಿಲ್ಲ. ಏಕೆಂದರೆ ನನಗೆ ಯಾವ ತರಹದ ಸಂಬಂಧವೂ ಕೂಡುವುದಿಲ್ಲ. ಸಂಬಂಧವೆಂಬುದೇ ನನ್ನಲ್ಲಿ ಇರುವುದಿಲ್ಲ. ಆದ್ದರಿಂದ ನಾನು ವಾಕ್ಕಿಗೆ ಅತೀತನು. ಅವಾಚ್ಯನು, ನನ್ನನ್ನು ಮಾತಿನಿಂದ ಆಡಿ ತೋರಿಸಲು ಶಕ್ಯವಿಲ್ಲ. ಹಾಗೆಯೇ ಮನಸ್ಸಿಗೂ ನಾನು ಗೋಚರನಾಗುವುದಿಲ್ಲ. ಮಾನಸ ಪ್ರತ್ಯಕ್ಷವಾಗಬೇಕಾದರೂ ಸಂಬಂಧ ಸಾಪೇಕ್ಷವುಂಟು. ಅದು ನನ್ನಲ್ಲಿ ಸಂಭವಿಸುವುದಿಲ್ಲವಾದ್ದರಿಂದ ಮನೋನುಭವಕ್ಕೂ ನಾನು ಸಿಕ್ಕಲಾರೆ. ॥೨೧॥

ಬ್ರಹ್ಮಸ್ವರೂಪನಾದ ನನ್ನನ್ನು ತಿಳಿದು ಕೊಂಡವನು, ಬ್ರಹ್ಮಸ್ವರೂಪನೇ ಆಗುವನು. ಇದರಲ್ಲಿ ಸಂಶಯವಿಲ್ಲ. ನನ್ನನ್ನು ತಿಳಿದುಕೊಂಡರೇ ಸಕಲವಸ್ತು

ಕಾಷ್ಠಾ ಗತಿಃ ಪರಾ ಚಾಹಂ ಮುಕ್ತೋಽಹಂ ಮೋಚಕೋಸ್ಮ್ಯಹಂ।
ಸ್ವಾವಿದ್ಯಯಾ ಸಂಸರಾಮಿ ವಿದ್ಯಯಾ ಮೋಚಕೋಸ್ಮ್ಯಹಂ ॥೭೩॥

ಅಜಿಘೃಕ್ಷೋಽಪಿಪಾಸೋಽಹಂ ದೇಹಪ್ರಾಣಮನೋಽತಿಗಃ ।
ಅಶೀರ್ಯೋಽಹಂ ಸದಾದಾಹ್ಯ ಅಸಂಗಃ ಪುರುಷಸ್ತ್ವಹಂ ॥೭೪॥

---

ಗಳನ್ನೂ ತಿಳಿದುಕೊಂಡಂತೆಯೇ. ಚರಾಚರಾತ್ಮಕವಾದ ಈ ಲೋಕಗಳಿಗೆ ನಾನೇ ಆಧಾರ ಭೂತನಾಗಿದ್ದು, ಬ್ರಹ್ಮಪುಚ್ಛನೆಂದೆನಿಸಿಕೊಂಡಿರುವೆನು. ನನ್ನಿಂದಲೇ ಈ ಸಕಲ ವಸ್ತುಗಳೂ ಪೂರ್ಣವಾಗಿರುವುವು. ॥೭೨॥

ಬಾಹ್ಯವಾದ ಶರೀರೇಂದ್ರಿಯ ವಿಷಯಗಳಿಂದ ಮೊದಲುಗೊಂಡು, ಅತ್ಯಂತ ಆಂತರತಮವೂ ವ್ಯಾಪಕವೂ ಆಗಿರುವ ಮಾಯಾ ಶಕ್ತಿಯವರೆಗೂ ಇರುವ ಸಕಲ ಪದಾರ್ಥಗಳಿಗೂ, ನಾನೇ ಅವಧಿಯಾಗಿರುವೆನು. ಅವು ನನ್ನನ್ನೇ ಆಶ್ರಯಿಸಿರುವುವು. ನನಗಿಂತಲೂ, ವ್ಯಾಪಕವೂ ಆಂತರಮವೂ ಆದ ಇನ್ನೊಂದು ವಸ್ತುವು ಕಾಣುವುದಿಲ್ಲ. ಅವಿದ್ಯಾ ಬಂಧದಿಂದ ಬಿಡಲ್ಪಟ್ಟ, ಶುದ್ಧ ಬ್ರಹ್ಮ ಸ್ವರೂಪನಾದ ನಾನು ನಿತ್ಯ ಮುಕ್ತನಾಗಿರುವೆನು. ಮತ್ತು ಸಂಸಾರಿಗಳಾದ ಜೀವರಿಗೆ ದಿವ್ಯವಾದ ಬ್ರಹ್ಮಜ್ಞಾನವನ್ನು ದಯಪಾಲಿಸಿ ಅವರನ್ನು ಮುಕ್ತರಾಗುವಂತೆ ಮಾಡುವೆನು. ಹೀಗಿದ್ದರೂ ನಾನು ನನಗೆ ಅಧೀನವಾಗಿರುವ, ಮಾಯೆಯ ಮಹಿಮೆಯಿಂದಲೇ ಜೀವಭಾವವನ್ನು ಹೊಂದಿ ಸಂಸಾರಿಯಾಗಿ ಬಳಿಕ ಆ ಮಾಯೆಯನ್ನು ಧ್ವಂಸಗೊಳಿಸುವ ಶಕ್ತಿಯುಳ್ಳ ದಿವ್ಯವಾದ ಆತ್ಮಜ್ಞಾನವೆಂಬ ಸಾಧನೆಯಿಂದ ನನ್ನನ್ನು ನಾನೇ ಬಂಧದಿಂದ ಮುಕ್ತನಾಗುವನಂತೆ ಮಾಡಿಕೊಳ್ಳುವೆನು. ಇದು ನನ್ನ ಲೀಲಾಕೈವಲ್ಯ. ॥೭೩॥

ಸ್ಥೂಲವಾದ ಈ ಶರೀರಕ್ಕಿಂತಲೂ, ಅಭ್ಯಂತರವಾಗಿರುವ ಪ್ರಾಣ, ಮನಸ್ಸು ಇವುಗಳಿಗಿಂತಲೂ, ಅತಿರಿಕ್ತನಾಗಿ ಸಾಕ್ಷಿರೂಪದಿಂದ ಪ್ರಕಾಶಮಾನನಾಗುವ ನನಗೆ ಹಸಿವು ಬಾಯಾರಿಕೆಗಳಿರುವುದಿಲ್ಲ. ನಿರಾಕಾರನಾದ ನನ್ನನ್ನು ಹರಿತವಾದ ಶಸ್ತ್ರಗಳೂ ಸಹ ಕತ್ತರಿಸಲಾರವು. ಅಗ್ನಿಯು ನನ್ನನ್ನು ಸುಡಲಾರದು. ನನಗಿಂತಲೂ ಇತರವಾದ ಯಾವ ವಸ್ತುಗಳ ಸಂಬಂಧವೂ ನನಗಿರುವುದಿಲ್ಲ. ಅಂತಹ ನಾನು ಯೋಗಿಗಳ ಹೃದಯಪುಂಡರೀಕದಲ್ಲಿ ಮಾತ್ರ ಪ್ರಕಾಶಿಸುವೆನು. ॥೭೪॥

ಮದ್ರಸಂ ಪರಮಂ ಜ್ಞಾತ್ವಾ ನಂದಿತೋ ಭವತಿ ದ್ವಿಜಾಃ ।
ನೈವ ಜೀವೋ ನ ಚಾಜ್ಞಾನಂ ಸ್ವೇ ಮಹಿಮ್ನ್ಯಹಮಾಸ್ಥಿತಃ ॥೭೫॥

ಪುರುಷಸ್ತ್ವೌಪನಿಷದೋ ಜ್ಞಾತುಂ ಶಕ್ಯೋ ನ ಕರ್ಮಣಾ ।
ಭೀತ್ಯಾನಲಾನಿಲೇಂದ್ರಾದ್ಯಾ ಭಾಂತಿ ವಾಂತಿ ಸೃಜಂತ್ಯಪಿ ॥೭೬॥

ಸತ್ಯಕಾಮೋಽಸ್ಮ್ಯಸಂಕಲ್ಪಃ ಷಡೂರ್ಮಿರಹಿತಸ್ತ್ವಹಂ ।
ನ ಜಾಯತೇ ವಾ ಮ್ರಿಯತೇ ನಾಯಂ ಜಾತೋ ನ ಜುಷ್ಯತಿ ॥೭೭॥

ಪ್ರಾತಿಭಾಸಿಕಮೇವೇದಂ ಜಗದ್ಧ್ಯೇತಸ್ಮಾನೀಶ್ವರಾಃ ।
ತದ್ಧರ್ಮೈರ್ನೈವ ಲಿಪ್ತಶ್ಚ ಸ ಬಂಧೋ ಮೋಕ್ಷ ಏವ ಚ ॥೭೮॥

---

ಮುನಿವರ್ಯರೇ, ಜ್ಞಾನಿಗಳು ಸಚ್ಚಿದಾನಂದಸ್ವರೂಪನಾದ ನನ್ನ ಅಖಂಡವಾದ ಆನಂದದ ಸವಿಯನ್ನು ಅನುಭವಿಸಿ ನಿತ್ಯಸುಖವನ್ನು ಹೊಂದುವರು. ನಾನು ಇತರರಿಗೆ ಅಧೀನನಾಗಿರದೆ ಸ್ವತಂತ್ರನಾಗಿ ನೈಜವಾದ ಅಖಂಡಾನಂದವನ್ನು ಅನುಭವಿಸುತ್ತಿರುವೆನು. ಜೀವನಾಗಲಿ ಅಥವಾ ನನಗೆ ಅಧೀನವಾದ ಅಜ್ಞಾನವಾಗಲಿ ನನ್ನಂತೆ ಸ್ವತಂತ್ರವಾಗಿರುವುದಿಲ್ಲ. ॥೭೫॥

ನಾನು ವೇದಾಂತವೇದ್ಯನಾಗಿರುವೆನು. ಕರ್ಮಾನುಷ್ಠಾನಗಳಿಂದ ನನ್ನನ್ನು ತಿಳಿದುಕೊಳ್ಳುವುದು ಅಸಾಧ್ಯ. ನನ್ನ ಭಯದಿಂದಲೇ ಅಗ್ನಿಯು ಪ್ರಕಾಶಿಸುವನು, ವಾಯುವು ಬೀಸುವನು ಮತ್ತು ಇಂದ್ರಾದಿದೇವತೆಗಳು ಸೃಷ್ಟಿಯೇ ಮುಂತಾದ ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗಿರುವರು. ॥೭೬॥

ಸತ್ಯಕಾಮನಾದ ನಾನು ಯಾವ ಪ್ರಯತ್ನವೂ ಇಲ್ಲದೇ ಲೋಕಗಳನ್ನು ಸೃಷ್ಟಿಸುವೆನು. ಶೋಕ, ಮೋಹ, ಜರಾ, ಮೃತ್ಯು, ಕ್ಷುತ್, ಪಿಪಾಸಗಳೆಂಬ ಈ ಆರು ಭೂತವಿಕ್ರಿಯೆಗಳು ನನಗಿರುವುದಿಲ್ಲ. ನಾನು ಈಗ ಹುಟ್ಟುತ್ತಿಲ್ಲ. ಮುಂದೆ ಹುಟ್ಟುವುದಿಲ್ಲ. ಹಿಂದೆ ಹುಟ್ಟಿರುವುದಿಲ್ಲ. ಆದುದರಿಂದಲೇ ನನಗೆ ಮರಣವೂ ಇರುವುದಿಲ್ಲ. ॥೭೭॥

ಎಲೈ ಮುನಿಶ್ರೇಷ್ಠರೇ, ನಿಮ್ಮ ಮುಂದೆ ಕಾಣಿಸುತ್ತಲಿರುವ ಈ ವಸ್ತುಜಾತವು ಶುಕ್ತಿರೌಪ್ಯ, ರಜ್ಜುಸರ್ಪ, ಮರುಮರೀಚಿಕಾ ಇವುಗಳಂತೆ ಪ್ರತಿಭಾಸಕಾಲದಲ್ಲಿ ಮಾತ್ರ ತೋರ್ಪಡುವುದು. ಪರಮಾರ್ಥದೃಷ್ಟಿಯಿಂದ ವಿಚಾರಿಸಿದರೆ ನಾನು ಈ ವಸ್ತುಗಳಿಗಿರುವ ಜನನಮರಣಾದಿ ಯಾವ ಧರ್ಮಗಳಿಂದಲೂ

ನೈವ ಜಾತಂ ಜಗತ್ಕಿಂಚಿನ್ನಾಸ್ಯಾಂತಃ ಪರಮಾರ್ಥತಃ ।
ಮೃಗತೃಷ್ಣಾನಿಭಂ ವಿಪ್ರಾಃ ಸ್ವಾಜ್ಞಾನಪರಿಕಲ್ಪಿತಂ ॥೭೯॥

ಮೃಗಾಣಾಂ ಮೃಗತೃಷ್ಣಾಬುದ್ಧಿ ಯಥಾ ಸತ್ಯತ್ವಕಲ್ಪನಾ ।
ತದ್ವದ್ದೇಹಾಭಿಮಾನೇನ ಜಗತ್ಸತ್ಯತ್ವಕಲ್ಪನಾ ॥೮೦॥

ನರಾಣಾಂ ಜ್ಞಾನಿನಾಂ ವಿಪ್ರಾ ಮೃಗತೃಷ್ಣೇತಿ ತದ್ವಿದಾಂ ।
ಕಥಂ ಪಿಪಾಸಾ ಭವತಿ ಅಜ್ಞಾನಾಂ ತದ್ವದೇವ ಹಿ ॥೮೧॥

---

ಸಂಬದ್ಧನಾಗಿರುವುದಿಲ್ಲ. ಬಂಧವೂ ಮತ್ತು ಮೋಕ್ಷವೂ ಇವೆರಡು ಪರಮಾರ್ಥ ದೃಷ್ಟಿಯಿಂದ ನನ್ನಲ್ಲಿ ಇರುವುದೇ ಇಲ್ಲ. ॥೭೮॥

ದ್ವಿಜರೇ, ಪರಮಾರ್ಥದೃಷ್ಟಿಯಿಂದ ವಿಚಾರಿಸಿದರೆ ಈ ಜಗತ್ತು ಹುಟ್ಟಲೇ ಇಲ್ಲ. ಅಥವಾ ಇದಕ್ಕೆ ಅಂತ್ಯವೂ ಇರುವುದಿಲ್ಲ. ಮತ್ತೇನೆಂದರೆ ಮರುಮರೀಚಿಕೆ ಯಂತೆ ಪ್ರಾತಿಭಾಸಿಕವಾಗಿರುವ ಈ ಪ್ರಪಂಚವು ಕೇವಲ ನಮ್ಮ ಅಜ್ಞಾನದಿಂದಲೇ ಕಲ್ಪಿತವಾದುದು. ॥೭೯॥

ಬಿಸಿಲುಕಾಲದಲ್ಲಿ ದೂರದಲ್ಲಿ ಸಮುದ್ರದಂತೆ ಕಾಣಿಸುತ್ತಿರುವ ಮರುಮರೀ ಚಿಕೆಯಲ್ಲಿ (ಬಿಸಿಲ್ಗುದುರೆ) ನೀರಿರುವಂತೆ ತೋರಿಬರುವುದು. ಆದರೆ ಅಲ್ಲಿ ನಿಜವಾಗಿಯೂ ನೀರಿರುವುದಿಲ್ಲ. ಹಾಗಿದ್ದರೂ ಬಾಯಾರಿಕೆಯಿಂದ ಬಳಲಿದ ಮೃಗಗಳು ಅದನ್ನು ನಿಜವಾದ ನೀರೆಂದೇ ಹೇಗೆ ಭಾವಿಸುವುವೋ ಅದರಂತೆ ಸ್ಥೂಲವಾದ ಈ ದೇಹದಲ್ಲಿರುವ ಮಮತೆಯಿಂದ ಈ ಜಗತ್ತು ಸತ್ಯವಾದುದೆಂದು ಮನುಷ್ಯನು ಭಾವಿಸುವನು. ॥೮೦॥

ಎಲೈ ವಿಪ್ರರೇ, ಜ್ಞಾನಿಗಳಾದವರು ಈ ಮರುಮರೀಚಿಕೆಯು ಅಸತ್ಯಲ್ಪ ವಾಗಿರುವುದು ಎಂದು ತಿಳಿಯುವರು. ಆದುದರಿಂದಲೇ ಅವರಿಗೆ ಆ ಉದಕವನ್ನು ಪಾನಮಾಡುವ ಇಚ್ಛೆಯು ಉಂಟಾಗುವುದಿಲ್ಲ. ಆದರೆ ಅಜ್ಞಾನಿಗಳಿಗೆ ಹಾಗಿರುವುದಿಲ್ಲ. ಅವರು ತಮ್ಮ ಅನಾದಿಸಿದ್ಧವಾದ ಅಜ್ಞಾನಕ್ಕೆ ಅಧೀನರಾಗಿ ಮರುಮರೀಚಿಕೆಯಂತೆ ಅಸತ್ತಾಗಿ ತೋರಿಬರುವ ಈ ವಸ್ತುಗಳಲ್ಲಿ ನನ್ನದೆಂಬ ಅಭಿಮಾನವನ್ನು ತಾಳುವರು. ॥೮೧॥

ಸ್ವಮಾತ್ಮಾನಂ ಪರಂ ದೃಷ್ಟ್ವಾ ದೇಹಾದಿರಹಿತಂ ಶಿವಂ ।
ಸದ್ಯ ಏವ ವಿಲೀಯೇತ ಸ್ವಾಜ್ಞಾನೋತ್ಥಜಗದ್ಗಣಃ ॥೮೨॥

ಅಹಂ ಭೂಮಾಖಿಲಾನಂದೋ ರಸೋಽಹಂ ಶಾಶ್ವತಃ ಪ್ರಭುಃ ।
ವಿಭುರ್ದೇಹೇಂದ್ರಿಯಾಖ್ಯಾಂ ವೈ ಗಮಿತೋ ಮೂಢಕಲ್ಪನಾತ್ ॥೮೩॥

ಏಕೋಽಹಮೇವ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ ।
ದೇಹೋದಯವಿನಾಶೇಷು ಅವಿನಾಶ್ಯಹಮೇವ ಹಿ ॥೮೪॥

ಯಥಾಂಧಕಾರೇ ಪುರುಷಃ ಸಂವೃತೋ ನೀಲವಾಸಸಾ ।
ನ ಜಾನಂತಿ ಯಥಾನ್ಯೇ ವೈ ಸ್ವಾತ್ಮಾನಂ ಜಾನತೇ ಸ್ವಯಂ ॥೮೫॥

---

ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳಿಂದ ರಹಿತನಾದ ಶಾಂತಮೂರ್ತಿಯಾದ ತನ್ನ ಆತ್ಮನನ್ನು ಸಾಕ್ಷಾತ್ಕರಿಸಿ, ಜ್ಞಾನಿಯಾದವನು ಶೀಘ್ರದಲ್ಲಿಯೇ ಮುಕ್ತಿಯನ್ನು ಹೊಂದುವನು. ಅವನ ಅಜ್ಞಾನದಿಂದ ಕಲ್ಪಿತ ವಾದ ಸಕಲ ಚರಾಚರಾತ್ಮಕವಾದ ವಸ್ತುಜಾತವೂ ಕೊನೆಯಲ್ಲಿ ಪರಬ್ರಹ್ಮನಲ್ಲಿ ಲೀನವಾಗುವುದು. ॥೮೨॥

ನಾನು, ಅಣುರೇಣುತೃಣಕಾಷ್ಠಗಳಲ್ಲಿ ಸದಾ ಇರುವವನೂ ಅಖಂಡಾ ನಂದರೂಪನೂ, ನಿತ್ಯನೂ, ಜಗದ್ರಕ್ಷಕನೂ ದೇಹೇಂದ್ರಿಯಗಳಿಂದ ವ್ಯತಿರಿಕ್ತನೂ ಆಗಿರುವೆನು. ಅಜ್ಞಾನಿಗಳಾದ ಜನರು, ತಮ್ಮ ಅಜ್ಞಾನದಿಂದ ನನ್ನನ್ನು ಅರಿಯದೇ ಇರುವರು. ಅವರಲ್ಲಿ, ಕೆಲವರು ನಾನು ಸ್ಥೂಲಶರೀರಸ್ವರೂಪನಾಗಿರುವೆನೆಂದೂ, ಕೆಲವರು, ಇಂದ್ರಿಯ ಸ್ವರೂಪನಾಗಿರುವೆನೆಂದೂ ಭಾವಿಸಿರುವರು. ॥೮೩॥

ನಾನೊಬ್ಬನೇ ಸಕಲ ಪ್ರಾಣಿಗಳ ಶರೀರದಲ್ಲಿಯೂ ನೆಲಸಿ, ಆಯಾ ಶರೀರ ದಲ್ಲಿರುವ ಅಂತಃಕರಣವೆಂಬ, ಉಪಾಧಿಯ ದೆಸೆಯಿಂದ, ಶರೀರಾಭಿಮಾನಿಯಾದ ಜೀವನೆಂದೆನಿಸಿಕೊಂಡಿರುವೆನು. ಶರೀರೇಂದ್ರಿಯಗಳಿಗೆ ಉತ್ಪತ್ತಿ ವಿನಾಶಗಳು ಸಂಭವಿಸಿದರೂ, ದೇಹದಲ್ಲಿ ಸಾಕ್ಷಿರೂಪದಿಂದ ನೆಲಸಿರುವ ನನಗೆ ತ್ರಿಕಾಲಗಳಲ್ಲಿಯೂ ಉತ್ಪತ್ತಿ ವಿನಾಶಗಳಿರುವುದಿಲ್ಲ. ॥೮೪॥

ಗಾಢಾಂಧಕಾರದಲ್ಲಿ, ಕಪ್ಪಾದ ಬಟ್ಟೆಗಳನ್ನು ಹೊದ್ದುಕೊಂಡು, ನಿಂತಿರುವ ಒಬ್ಬ ಪುರುಷನನನ್ನು ಇನ್ನೊಬ್ಬ ಪುರುಷನು ಹೇಗೆ ಅರಿಯಲಾರನೋ, ಅದರಂತೆ, ಜೀವನು ಅವಿದ್ಯೆ ಮತ್ತು ಬಾಹ್ಯವಾದ ಶರೀರೇಂದ್ರಿಯಾದಿಗಳು ಅವುಗಳಿಂದ ಆವೃತ

ತಥಾ ಸರ್ವೇಂದ್ರಿಯಾಣಾಂ ಹಿ ಪ್ರತಿಷ್ಠಾಹಂ ಗತಾಗತೌ ।
ಪುರುಷಃ ಷೋಡಶಾತ್ಮಾಹಂ ವಿವಿಧೇಂದ್ರಿಯಕಲ್ಪಕಃ ॥೮೬॥

ವಕ್ತಾ ಶ್ರೋತಾ ತಥಾ ದ್ರಷ್ಟಾ ಮಂತಾ ಬೋದ್ಧಾಹಮೇವ ಹಿ ।
ಏಷ ಬ್ರಹ್ಮೈವ ಸರ್ವಂ ಹಿ ನಾನ್ಯಥಾ ಶ್ರುತಿರಾಹ ಹಿ ॥೮೭॥

ಅಯಮಾತ್ಮಾ ತಥಾ ಬ್ರಹ್ಮಾ ಬ್ರಹ್ಮೈವಾಹಂ ತಥಾ ದ್ವಿಜಾಃ ।
ತತ್ತ್ವಮಸ್ಯಾದಿ ವಾಕ್ಯಾನಿ ಬೋಧಾರ್ಥಂ ಜ್ಞಾನಿನಾಂ ತಥಾ ॥೮೮॥

ಅಭೋಕ್ತಾರಮಕರ್ತಾರಮಸಂಗಮವಿನಾಶಕಂ ।
ಜೀವಶ್ಚಾತ್ಮೇತಿ ಹಿತ್ತ್ವೈಷಾ ನ ಶ್ರುತಿರ್ವದತಿ ಸ್ವಯಂ ॥೮೯॥

---

ನಾದ್ದರಿಂದ, ಜನರು, ತಮ್ಮ ನೈಜವಾದ ಸ್ವಭಾವವನ್ನು ಅರಿಯಲಾರದೆ ಇರುವರು. ಸಕಲ ಇಂದ್ರಿಯಗಳ ಉತ್ಪತ್ತಿಲಯಗಳಿಗೂ ನಾನೇ ಆಧಾರನಾಗಿರುವೆನು. ಪ್ರಾಣ, ಮನಸ್ಸು, ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆವಿಕ, ಎಂಬಿವೇ ಮೊದಲಾದ ಹದಿನಾರು ಕಲೆಗಳಿಂದ, ವ್ಯವಸ್ಥನಾಗಿ, ನಾನೇ, ಈ ಸಕಲ ಶರೀರೇಂದ್ರಿಯಗಳ ಉತ್ಪತ್ತಿಗೆ ಕಾರಣನಾಗಿರುವೆನು. ಅದನ್ನು ನಾನು ಮಾತ್ರ ತಿಳಿಯುವೆನು. ॥೮೫॥

ನಾನೇ ಸ್ಥೂಲವಾದ ಈ ಶರೀರದಲ್ಲಿ, ನೆಲಸಿ, ವಾಗಾದೀಂದ್ರಿಯಗಳ ಪ್ರವೃತ್ತಿಗಳಿಗೆ ಸಾಕ್ಷಿಭೂತನಾಗಿ ಮಾಡುವವನಂತೆಯೂ, ಶಬ್ದಾದಿವಿಷಯಗಳನ್ನು ಶೋತ್ರೇಂದ್ರಿಯದ ಮೂಲಕ ಗ್ರಹಿಸುವನಂತೆಯೂ, ಚಕ್ಷುರಿಂದ್ರಿಯದ ಮೂಲಕ ವಿಷಯಗಳನ್ನು ನೋಡುವವನಂತೆಯೂ, ಸಂಕಲ್ಪವಿಕಲ್ಪಾತ್ಮಕವಾದ ಅಂತಃಕರಣದ ಮೂಲಕ ಮನನ, ನಿದಿಧ್ಯಾಸಗಳನ್ನು ಮಾಡುವವನಂತೆಯೂ ತೋರ್ಪಡಿಸಿಕೊಳ್ಳುವೆನು. ಸಾಕ್ಷಿರೂಪನಾದ ಈ ಜೀವನೇ ಶುದ್ಧಬ್ರಹ್ಮಸ್ವರೂಪನಾಗಿರುವನು. ಇವನೇ ಸಕಲ ವಸ್ತುಗಳ ಸ್ವರೂಪನೂ ಆಗಿರುವನು. ವೇದವೂ ಸಹ ಹೀಗೆಯೇ ಹೇಳುವುದು. ॥೮೬-೮೭॥

ಎಲೈ ಬ್ರಾಹ್ಮಣೋತ್ತಮರೇ, ಸ್ಥೂಲಶರೀರಾಭಿಮಾನಿಯಾದ ಈ ಜೀವನೇ ಬ್ರಹ್ಮನಾಗಿರುವನು. ಆ ಬ್ರಹ್ಮನೇ ನಾನಾಗಿರುವೆನು. "ತತ್ತ್ವಮಸಿ" ಎಂಬಿವೇ ಮುಂತಾದ ವಾಕ್ಯಗಳು ಜ್ಞಾನಿಗಳಾಗಬೇಕೆಂದು ಬಯಸುವ ಜನರಿಗೆ ಇದೇ ಜ್ಞಾನೋಪದೇಶವನ್ನು ಮಾಡುವುದಕ್ಕೋಸ್ಕರವೇ ಪ್ರವೃತ್ತವಾಗಿರುವುವು. ॥೮೮॥

ಜೀವನು, ಅಭೋಕ್ತೃವೂ, ಅಕರ್ತೃವೂ, ಅಸಂಗನೂ, ನಾಶರಹಿತನೂ ಆದ

ಅಜ್ಞಾನಾನ್ಮೈಕ್ಯವಿಜ್ಞಾನದಾನಾರ್ಥಂ ಮುನಿಸತ್ತಮಾಃ ।
ದ್ವಾಸುಪರ್ಣಾದಿವಾಕ್ಯಾನಾಂ ಕಲ್ಪಿತದ್ವೈತಕಲ್ಪನೇ ॥೯೦॥

ತತ್ತ್ವಮಸ್ಯಾದಿವಾಕ್ಯಾನಾಂ ಬೋಧನಾತ್ಸರ್ವಮೇವ ಹಿ ।
ಅಸತ್ಯೇ ಸತ್ಯಮಾರೋಪ್ಯ ಮೂಢಾನಾಂ ಬೋಧದಾಯಿನೀ ॥೯೧॥

---

ಪರಮಾತ್ಮನ ಸ್ವರೂಪನೇ ಆಗಿರುವನು. ಈ ಅಂಶವನ್ನು ಬಿಟ್ಟು ಇನ್ನಾವ ವಿಷಯವನ್ನೂ "ತತ್ತ್ವಮಸಿ" ಎಂಬಿವೇ ಮೊದಲಾದ ಶ್ರುತಿಗಳು ತಿಳಿಸುವುದಿಲ್ಲ. ॥೮೯॥

ಈಶ್ವರಾಧೀನವಾದ ಮಾಯೆಯಿಂದ ಮೋಹಗೊಂಡು ಜೀವೇಶ್ವರರಿಗೆ ಪರಸ್ಪರ ಭೇದವನ್ನು ಕಲ್ಪಿಸಿರುವ ಅಜ್ಞಾನಿಗಳಿಗೆ ಜೀವೇಶ್ವರಾಭೇದವನ್ನು ತಿಳಿಯಪಡಿಸುವದಕ್ಕೋಸ್ಕರ "ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯನ್ನಭಿಚಾಕಶೀತಿ" ಎಂಬಿವೇ ಮುಂತಾದ ಮಂತ್ರಗಳು ಪ್ರವೃತ್ತವಾಗಿರುವುವು. ಈ ಶ್ರುತಿಗಳು ಜೀವೇಶ್ವರರಿಗೆ ಕಲ್ಪಿತವಾದ ಭೇದವೇ ಇರುವುದಲ್ಲದೇ ಪರಮಾರ್ಥದೃಷ್ಟಿಯಿಂದ ಅವರೀರ್ವರಲ್ಲಿ ಸ್ವಲ್ಪವೂ ಭೇದವಿರುವುದಿಲ್ಲವೆಂದು ತಿಳಿಯಪಡಿಸುವುವು. ॥೯೦॥

ಜೀವೇಶ್ವರರಿಗೆ ಭೇದವನ್ನು ಪ್ರತಿಪಾದಿಸುವ ಸಕಲ ವೇದವಾಕ್ಯಗಳೂ ಸಹ ಮೊಟ್ಟಮೊದಲು ಅಸತ್ಯವಾದ ಭೇದದಲ್ಲಿ ಸತ್ಯತ್ವವನ್ನು ಆರೋಪಿಸಿ ಸ್ಥೂಲರೂಪದಿಂದ ಜೀವೇಶ್ವರರ ಸ್ವರೂಪವನ್ನು ತಿಳಿಯಪಡಿಸುವುವು. ಬಳಿಕ "ತತ್ತ್ವಮಸಿ" ಎಂಬಿವೇ ಮೊದಲಾದ ಜೀವೇಶ್ವರರಿಗೆ ಅಭೇದವನ್ನು ಪ್ರತಿಪಾದಿಸುವ ವಾಕ್ಯಗಳು ಜೀವೇಶ್ವರಭೇದವು ಅಸತ್ಯವಾದುದೆಂದೂ, ಪರಮಾರ್ಥದೃಷ್ಟಿಯಿಂದ ಅವರಿಗೆ ಭೇದವಿರುವುದಿಲ್ಲವೆಂದೂ ಮತ್ತು ಅಭೇದವೇ ನಿಜವಾದುದೆಂದೂ ತಿಳಿಯಪಡಿಸಿ ಅಜ್ಞಾನಿಗಳಿಗೆ ಅಭೇದಜ್ಞಾನವನ್ನು ಕೊನೆಯಲ್ಲಿ ಉಂಟುಮಾಡುವುವು.

ಎಲೈ ಬ್ರಾಹ್ಮಣೋತ್ತಮರೇ, "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾ ನಾಶಕೇನ" ಎಂಬಿವೇ ಮುಂತಾದ ವೇದವಾಕ್ಯಗಳು ನಿತ್ಯನೈಮಿತ್ತಿಕಕರ್ಮಗಳಿಂದಲೂ ಮತ್ತು ಅರ್ಥವಾದದಿಂದ ಬೋಧಿಸಲ್ಪಟ್ಟ ಅವಾಂತರಫಲವುಳ್ಳ ಉಪಾಸನಾಮಾರ್ಗದಿಂದಲೂ, ಚಿತ್ತಶುದ್ಧಿಯ ಮೂಲಕ ಬ್ರಹ್ಮಜ್ಞಾನವುಂಟಾಗುವುದೆಂದು ಸಾರಿ ಸಾರಿ ಹೇಳುವುವು. ಈರೀತಿಯಲ್ಲಿ ವೇದವು ಶಾಖಾಚಂದ್ರನ್ಯಾಯದಂತೆ ಅಂದರೆ ಕೊಂಬೆಯ ಗುರಿಯಿಂದ ದೂರಸ್ಥನಾದ

ಅರ್ಥವಾದೋಪಾಸನಾಭಿಃ ಕರ್ಮಭಿಃ ಶ್ರುತಿರಾಹ ಹಿ ।
ಶಾಖಾಚಂದ್ರಾಂಗವಾರ್ತಾಭಿಃ ಕಲ್ಪಯಿಷ್ಯತಿ ಸತ್ತಮಾಃ ॥೯೨॥

ಕರೋತಿ ತಾರತಮ್ಯೇನ ಸ್ವಾಧಿಕಾರಾನುರೂಪತಃ ।
ರತ್ನಕಾಂತಿರ್ಯಥಾ ರತ್ನೇ ದೃಶ್ಯತೇ ಚಲಿತೇವ ಸಾ ॥೯೩॥

ಆತ್ಮಾನನ್ಯತಯಾ ಭಾತಿ ತಥಾ ಮಯಿ ಜಗದ್ಗತಂ ।
ನೇತ್ರಮಾಲಿನ್ಯತೋ ಭಾತಿ ಚಂದ್ರದ್ವಿತ್ವಂ ಜಲೇ ರವಿಃ ॥೯೪॥

---

ಚಂದ್ರನ ಸ್ಥಾನವನ್ನು ಸೂಚಿಸುವಂತೆ, ಅಜ್ಞಾನಿಗಳಿಗೆ ಅತಿದೂರವಿರುವಂತೆ ತೋರ್ಪಡುತ್ತಿರುವ ಆ ಬ್ರಹ್ಮನ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕೆ ಉಪಯುಕ್ತವಾದ ಮಾರ್ಗವನ್ನು ಸೂಚಿಸುವುದು. ॥೯೧॥

ಈ ರೀತಿಯಾಗಿ ಪರಮಕಾರುಣಿಕವಾದ ವೇದವು ಉತ್ತಮ, ಮಧ್ಯಮ ಮತ್ತು ಮಂದಾಧಿಕಾರಿಗಳಿಗನುಗುಣವಾಗಿ ಅವರವರಿಗೆ ಯೋಗ್ಯವಾದ ಮಾರ್ಗವನ್ನು ತೋರ್ಪಡಿಸುವುದು. ಲೋಕದಲ್ಲಿ ರತ್ನದ ಕಾಂತಿಯು ರತ್ನಕ್ಕಿಂತಲೂ ಬೇರೆಯಾಗಿರುವುದಿಲ್ಲ. ಆದರೂ ಅದು ರತ್ನಕ್ಕಿಂತ ಬೇರೆಯಾಗಿದ್ದು ರತ್ನದಲ್ಲಿ ಚಲಿಸುವಂತೆ ತೋರಿಬರುವುದು. ಅದರಂತೆಯೇ ನಿಮ್ಮ ಮುಂದೆ ಕಾಣಿಸುತ್ತಿರುವ ಈ ಪ್ರಪಂಚವು ನನ್ನಿಂದ ಬೇರ್ಪಟ್ಟಿರುವುದಿಲ್ಲ. ಆದರೂ ಅಜ್ಞಾನಿಗಳು ಅಜ್ಞಾನದ ವಿಕ್ಷೇಪಶಕ್ತಿಗೆ ಅಧೀನರಾಗಿ ನನಗಿಂತಲೂ ಬೇರ್ಪಟ್ಟಿರುವ ಪ್ರಪಂಚವು ಬೇರೆ ಇರುವುದೆಂದು ತಿಳಿಯುವರು. ಅದು ಹೇಗೆಂದರೆ ಆಕಾಶದಲ್ಲಿ ವಿರಾಜಮಾನನಾಗಿರುವ ಚಂದ್ರನು ಒಬ್ಬನೇ ಆಗಿದ್ದರೂ ಮೂಗಿನ ನೇರಕ್ಕೆ ಅಡ್ಡಲಾಗಿ ಹೆಬ್ಬೆಟ್ಟನ್ನಿರಿಸಿ ಚಂದ್ರನ ಕಡೆಗೆ ನೋಡಿದರೆ, ಹೆಬ್ಬೆರಳೆಂಬ ಉಪಾಧಿಯನಿಮಿತ್ತ ಇಬ್ಬರು ಚಂದ್ರರು ಕಾಣಿಸಿಕೊಳ್ಳುವರು. ಇದರಂತೆಯೇ ಸೂರ್ಯನು ಒಬ್ಬನಾಗಿದ್ದರೂ ನೀರಿನಿಂದ ಅನೇಕ ಪಾತ್ರೆಗಳಲ್ಲಿ ಅನೇಕ ಪ್ರತಿಬಿಂಬಗಳ ರೂಪದಿಂದ ಕಾಣಿಸಿಕೊಳ್ಳುವನು. ವಸ್ತುತಃ ಸೂರ್ಯನು ಒಬ್ಬನೇ. ಆದರೂ ನೀರಿನ ಪಾತ್ರೆಗಳೆಂಬ ಉಪಾಧಿಗಳ ಸಂಬಂಧದಿಂದ ಅವನು ಅನೇಕ ರೂಪಗಳಿಂದ ಕಾಣಿಸಿಕೊಳ್ಳುವನು. ಅದರಂತೆಯೇ ಜಗತ್ತಿಗೆ ಆಧಾರಸ್ತಂಭನೂ ಸಚ್ಚಿದಾನಂದಸ್ವರೂಪನೂ ಆದ ನಾನು ಒಬ್ಬನೇ ಆಗಿದ್ದರೂ ಅಜ್ಞಾನಿಗಳು ಅಜ್ಞಾನವೆಂಬ ಉಪಾಧಿಯಿಂದ ಅದ್ವಿತೀಯನಾದ ನನ್ನಲ್ಲಿ ಅನೇಕ ರೂಪದಿಂದ ವ್ಯವಸ್ಥಿತವಾಗಿರುವ ಈ ಪ್ರಪಂಚವನ್ನು ಕಲ್ಪಿಸಿ ನನ್ನ ನಿಜವಾದ ಅದ್ವಿತೀಯ ಸ್ವರೂಪವನ್ನು ಅರಿಯಲಾರದವರಾಗಿರುವರು. ॥೯೩-೯೪॥

ಅಭ್ರೈರ್ಗಚ್ಛದಿವಾಭಾತಿ ಸ್ವೇ ಮಹಿಮ್ನ್ಯುಪಮಾಸ್ಥಿತಃ ॥೯೫॥

॥ ಈಶ್ವರ ಉವಾಚ ॥

ಏತದೇವ ಪರಂ ಜ್ಞಾನಂ ನಾನಾಶ್ರುತಿಶಿರೋಗತಂ ।
ಅಹಂ ಬ್ರಹ್ಮೇತಿ ವಿಜ್ಞಾನಾನ್ಮುಚ್ಯತೇ ನಾನ್ಯಥಾ ದ್ವಿಜಾಃ ॥೯೬॥

ಜ್ಞಾನೇ ಚಾಸ್ತಮಿತೇ ವಿಪ್ರಾಃ ವೇದನಾದಿವಿವರ್ಜಿತಃ ।
ಅಹಮೇವಾಸ್ಮಿ ತದ್ಬ್ರಹ್ಮ ವಾಚಾರಂಭಣಮಿತ್ಯಪಿ ॥೯೭॥

---

ವರ್ಷಕಾಲದಲ್ಲಿ ಮೇಘಗಳು ಸಂಚರಿಸುತ್ತಿದ್ದರೆ ಅಂತರಿಕ್ಷದಲ್ಲಿರುವ ಚಂದ್ರನು ಸಂಚರಿಸುವಂತೆ ಕಂಡುಬರುವುದು. ಪರಮಾರ್ಥದೃಷ್ಟಿಯಿಂದ ಪರಿಶೀಲಿಸಿದರೆ ಚಂದ್ರನು ಆ ವೇಗದಲ್ಲಿ ಚಲಿಸುವುದಿಲ್ಲ. ಮತ್ತೇನೆಂದರೆ ಮೇಘವೆಂಬ ಉಪಾಧಿಯ ಸಂಬಂಧದಿಂದ ಅವನು ಚಲಿಸಿದಂತೆ ಕಂಡುಬರುವನು. ಅದರಂತೆ ಈ ಶರೀರವು ಹುಟ್ಟಲು ಅಥವಾ ನಾಶವನ್ನು ಹೊಂದಲು ಅದಕ್ಕೆ ಸಾಕ್ಷಿಭೂತನಾಗಿರುವ ನಾನು ಉತ್ಪನ್ನವಾದಂತೆಯೂ, ನಾಶವನ್ನು ಹೊಂದಿದಂತೆಯೂ ತೋರ್ಪಡುವೆನು ಆದರೆ ನನ್ನ ಆ ಜನನಮರಣಾದಿವಿಕ್ರಿಯೆಗಳು ಶರೀರವೆಂಬ ಉಪಾಧಿಯ ಮೂಲಕ ಆಗಿರು ವುವೇ ಹೊರತು ವಸ್ತುತಃ ನನಗೆ ಯಾವ ವಿಕ್ರಿಯೆಗಳೂ ಇರುವುದಿಲ್ಲ. ನಾನು ಸಚ್ಚಿದಾನಂದಸ್ವರೂಪನಾಗಿದ್ದು ಅಖಂಡವಾದ ಆನಂದಾನುಭವದಲ್ಲಿ ಲೀನನಾಗಿರು ವೆನು.'' ॥೯೫॥

ಎಲೈ, ಮುನಿಶ್ರೇಷ್ಠರೇ! ಈ ಆತ್ಮಜ್ಞಾನವೇ ಜ್ಞಾನಗಳಲ್ಲೆಲ್ಲಾ ಅತ್ಯಂತ ಉತ್ಕೃಷ್ಟವಾದುದು. ಪ್ರತಿಯೊಂದು ವೇದಶಾಖೆಯ ಉಪನಿಷತ್ತುಗಳೂ ಈ ಜ್ಞಾನ ವನ್ನೇ ಉಪದೇಶಿಸುತ್ತೀವೆ. "ಅಹಂ ಬ್ರಹ್ಮಾಸ್ಮಿ" ಎಂಬ ಶ್ರುತಿಯ ಜೀವೇಶ್ವರರ ಅಭೇದಾನುಸಂಧಾನದಿಂದಲೇ ಮೋಕ್ಷವು ಲಭಿಸುವುದು. ಇದರಲ್ಲಿ ಸಂಶಯವಿರುವು ದಿಲ್ಲ. ಮೋಕ್ಷವನ್ನು ಪಡೆಯಲು ಆತ್ಮಜ್ಞಾನವಲ್ಲದೇ ಮತ್ತಾವ ಉಪಾಯವೂ ನಿಜವಾಗಿಯೂ ಇರುವುದಿಲ್ಲ. ॥೯೬॥

ಎಲೈ, ದ್ವಿಜೋತ್ತಮರೇ! ಮೋಕ್ಷಕ್ಕೆ ಸಾಕ್ಷಾತ್ಸಾಧನವಾದ ಬ್ರಹ್ಮಾಕಾರವಾದ ಅಖಂಡ ಮಾನಸಿಕ ವೃತ್ತಿಯು ಉತ್ಪನ್ನವಾಗಿ ಅದು ನಾಶವನ್ನು ಹೊಂದುವುದು. ಆ ವೃತ್ತಿಯಲ್ಲಿ ಪ್ರತಿಫಲಿಸಿದ ಚೈತನ್ಯವೇ ಬ್ರಹ್ಮನು. ಅವನೇ ನಾನಾಗಿರುವೆನು. ಅಂತಃ ಕರಣವೃತ್ತಿಯು ನಾಶವಾಗಲು, ಜ್ಞಾತೃ, ಜ್ಞೇಯ, ಎಂಬೀ ಎರಡು ಪದಾರ್ಥಗಳ

ಅರ್ಥವಾದೋಪಾಸನಾಭಿಃ ಕರ್ಮಭಿಃ ಶ್ರುತಿರಾಹ ಹಿ ।
ಶಾಖಾಚಂದ್ರಾಂಗವಾರ್ತಾಭಿಃ ಕಲ್ಪಯಿಷ್ಯತಿ ಸತ್ತಮಾಃ ॥೯೨॥

ಕರೋತಿ ತಾರತಮ್ಯೇನ ಸ್ವಾಧಿಕಾರಾನುರೂಪತಃ ।
ರತ್ನಕಾಂತಿರ್ಯಥಾ ರತ್ನೇ ದೃಶ್ಯತೇ ಚಲಿತೇವ ಸಾ ॥೯೩॥

ಆತ್ಮಾನನ್ಯತಯಾ ಭಾತಿ ತಥಾ ಮಯಿ ಜಗದ್ಗತಂ ।
ನೇತ್ರಮಾಲಿನ್ಯತೋ ಭಾತಿ ಚಂದ್ರದ್ವಿತ್ವಂ ಜಲೇ ರವಿಃ ॥೯೪॥

---

ಚಂದ್ರನ ಸ್ಥಾನವನ್ನು ಸೂಚಿಸುವಂತೆ, ಅಜ್ಞಾನಿಗಳಿಗೆ ಅತಿದೂರವಿರುವಂತೆ ತೋರ್ಪಡುತ್ತಿರುವ ಆ ಬ್ರಹ್ಮನ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕೆ ಉಪಯುಕ್ತವಾದ ಮಾರ್ಗವನ್ನು ಸೂಚಿಸುವುದು. ॥೯೧॥

ಈ ರೀತಿಯಾಗಿ ಪರಮಕಾರುಣಿಕವಾದ ವೇದವು ಉತ್ತಮ, ಮಧ್ಯಮ ಮತ್ತು ಮಂದಾಧಿಕಾರಿಗಳಿಗನುಗುಣವಾಗಿ ಅವರವರಿಗೆ ಯೋಗ್ಯವಾದ ಮಾರ್ಗವನ್ನು ತೋರ್ಪಡಿಸುವುದು. ಲೋಕದಲ್ಲಿ ರತ್ನದ ಕಾಂತಿಯು ರತ್ನಕ್ಕಿಂತಲೂ ಬೇರೆಯಾಗಿರುವುದಿಲ್ಲ. ಆದರೂ ಅದು ರತ್ನಕ್ಕಿಂತ ಬೇರೆಯಾಗಿದ್ದು ರತ್ನದಲ್ಲಿ ಚಲಿಸುವಂತೆ ತೋರಿಬರುವುದು. ಅದರಂತೆಯೇ ನಿಮ್ಮ ಮುಂದೆ ಕಾಣಿಸುತ್ತಿರುವ ಈ ಪ್ರಪಂಚವು ನನ್ನಿಂದ ಬೇರ್ಪಟ್ಟಿರುವುದಿಲ್ಲ. ಆದರೂ ಅಜ್ಞಾನಿಗಳು ಅಜ್ಞಾನದ ವಿಕ್ಷೇಪಶಕ್ತಿಗೆ ಅಧೀನರಾಗಿ ನನಗಿಂತಲೂ ಬೇರ್ಪಟ್ಟಿರುವ ಪ್ರಪಂಚವು ಬೇರೆ ಇರುವುದೆಂದು ತಿಳಿಯುವರು. ಅದು ಹೇಗೆಂದರೆ ಆಕಾಶದಲ್ಲಿ ವಿರಾಜಮಾನನಾಗಿರುವ ಚಂದ್ರನು ಒಬ್ಬನೇ ಆಗಿದ್ದರೂ ಮೂಗಿನ ನೇರಕ್ಕೆ ಅಡ್ಡಲಾಗಿ ಹೆಬ್ಬೆಟ್ಟನ್ನಿರಿಸಿ ಚಂದ್ರನ ಕಡೆಗೆ ನೋಡಿದರೆ, ಹೆಬ್ಬೆರಳೆಂಬ ಉಪಾಧಿಯುನಿಮಿತ್ತ ಇಬ್ಬರು ಚಂದ್ರರು ಕಾಣಿಸಿಕೊಳ್ಳುವರು. ಇದರಂತೆಯೇ ಸೂರ್ಯನು ಒಬ್ಬನಾಗಿದ್ದರೂ ನೀರಿನಿಂದ ಅನೇಕ ಪಾತ್ರೆಗಳಲ್ಲಿ ಅನೇಕ ಪ್ರತಿಬಿಂಬಗಳ ರೂಪದಿಂದ ಕಾಣಿಸಿಕೊಳ್ಳುವನು. ವಸ್ತುತಃ ಸೂರ್ಯನು ಒಬ್ಬನೇ. ಆದರೂ ನೀರಿನ ಪಾತ್ರೆಗಳೆಂಬ ಉಪಾಧಿಗಳ ಸಂಬಂಧದಿಂದ ಅವನು ಅನೇಕ ರೂಪಗಳಿಂದ ಕಾಣಿಸಿಕೊಳ್ಳುವನು. ಅದರಂತೆಯೇ ಜಗತ್ತಿಗೆ ಆಧಾರಸ್ತಂಭನೂ ಸಚ್ಚಿದಾನಂದಸ್ವರೂಪನೂ ಆದ ನಾನು ಒಬ್ಬನೇ ಆಗಿದ್ದರೂ ಅಜ್ಞಾನಿಗಳು ಅಜ್ಞಾನವೆಂಬ ಉಪಾಧಿಯಿಂದ ಅದ್ವಿತೀಯನಾದ ನನ್ನಲ್ಲಿ ಅನೇಕ ರೂಪದಿಂದ ವ್ಯವಸ್ಥಿತವಾಗಿರುವ ಈ ಪ್ರಪಂಚವನ್ನು ಕಲ್ಪಿಸಿ ನನ್ನ ನಿಜವಾದ ಅದ್ವಿತೀಯ ಸ್ವರೂಪವನ್ನು ಅರಿಯಲಾರದವರಾಗಿರುವರು. ॥೯೩-೯೪॥

ಅಭ್ರೈರ್ಗಚ್ಛದಿವಾಭಾತಿ ಸ್ವೇ ಮಹಿಮ್ನ್ಯುಪಸ್ಥಿತಃ ॥೯೫॥

॥ ಈಶ್ವರ ಉವಾಚ ॥

ಏತದೇವ ಪರಂ ಜ್ಞಾನಂ ನಾನಾಶ್ರುತಿಶಿರೋಗತಂ ।
ಅಹಂ ಬ್ರಹ್ಮೇತಿ ವಿಜ್ಞಾನಾನ್ಮುಚ್ಯತೇ ನಾನ್ಯಥಾ ದ್ವಿಜಾಃ ॥೯೬॥

ಜ್ಞಾನೇ ಚಾಸ್ತಮಿತೇ ವಿಪ್ರಾಃ ವೇದನಾದಿವಿವರ್ಜಿತಃ ।
ಅಹಮೇವಾಸ್ಮಿ ತದ್ಬ್ರಹ್ಮ ವಾಚಾರಂಭಣಮಿತ್ಯಪಿ ॥೯೭॥

---

ವರ್ಷಕಾಲದಲ್ಲಿ ಮೇಘಗಳು ಸಂಚರಿಸುತ್ತಿದ್ದರೆ ಅಂತರಿಕ್ಷದಲ್ಲಿರುವ ಚಂದ್ರನು ಸಂಚರಿಸುವಂತೆ ಕಂಡುಬರುವುದು. ಪರಮಾರ್ಥದೃಷ್ಟಿಯಿಂದ ಪರಿಶೀಲಿಸಿದರೆ ಚಂದ್ರನು ಆ ವೇಗದಲ್ಲಿ ಚಲಿಸುವುದಿಲ್ಲ. ಮತ್ತೇನೆಂದರೆ ಮೇಘವೆಂಬ ಉಪಾಧಿಯ ಸಂಬಂಧದಿಂದ ಅವನು ಚಲಿಸಿದಂತೆ ಕಂಡುಬರುವನು. ಅದರಂತೆ ಈ ಶರೀರವು ಹುಟ್ಟಲು ಅಥವಾ ನಾಶವನ್ನು ಹೊಂದಲು ಅದಕ್ಕೆ ಸಾಕ್ಷಿಭೂತನಾಗಿರುವ ನಾನು ಉತ್ಪನ್ನವಾದಂತೆಯೂ, ನಾಶವನ್ನು ಹೊಂದಿದಂತೆಯೂ ತೋರ್ಪಡುವೆನು ಆದರೆ ನನ್ನ ಆ ಜನನಮರಣಾದಿವಿಕ್ರಿಯೆಗಳು ಶರೀರವೆಂಬ ಉಪಾಧಿಯ ಮೂಲಕ ಆಗಿರು ವುವೇ ಹೊರತು ವಸ್ತುತಃ ನನಗೆ ಯಾವ ವಿಕ್ರಿಯೆಗಳೂ ಇರುವುದಿಲ್ಲ. ನಾನು ಸಚ್ಚಿದಾನಂದಸ್ವರೂಪನಾಗಿದ್ದು ಅಖಂಡವಾದ ಆನಂದಾನುಭವದಲ್ಲಿ ಲೀನನಾಗಿರು ವೆನು.'' ॥೯೫॥

ಎಲೈ, ಮುನಿಶ್ರೇಷ್ಠರೇ! ಈ ಆತ್ಮಜ್ಞಾನವೇ ಜ್ಞಾನಗಳಲ್ಲೆಲ್ಲಾ ಅತ್ಯಂತ ಉತ್ಕೃಷ್ಟವಾದುದು. ಪ್ರತಿಯೊಂದು ವೇದಶಾಖೆಯ ಉಪನಿಷತ್ತುಗಳೂ ಈ ಜ್ಞಾನ ವನ್ನೇ ಉಪದೇಶಿಸುತ್ತೇವೆ. "ಅಹಂ ಬ್ರಹ್ಮಾಸ್ಮಿ" ಎಂಬ ಶ್ರುತಿಯ ಜೀವೇಶ್ವರರ ಅಭೇದಾನುಸಂಧಾನದಿಂದಲೇ ಮೋಕ್ಷವು ಲಭಿಸುವುದು. ಇದರಲ್ಲಿ ಸಂಶಯವಿರುವು ದಿಲ್ಲ. ಮೋಕ್ಷವನ್ನು ಪಡೆಯಲು ಆತ್ಮಜ್ಞಾನವಲ್ಲದೇ ಮತ್ತಾವ ಉಪಾಯವೂ ನಿಜವಾಗಿಯೂ ಇರುವುದಿಲ್ಲ. ॥೯೬॥

ಎಲೈ, ದ್ವಿಜೋತ್ತಮರೇ! ಮೋಕ್ಷಕ್ಕೆ ಸಾಕ್ಷಾತ್ಸಾಧನವಾದ ಬ್ರಹ್ಮಾಕಾರವಾದ ಅಖಂಡ ಮಾನಸಿಕ ವೃತ್ತಿಯು ಉತ್ಪನ್ನವಾಗಿ ಅದು ನಾಶವನ್ನು ಹೊಂದುವುದು. ಆ ವೃತ್ತಿಯಲ್ಲಿ ಪ್ರತಿಫಲಿಸಿದ ಚೈತನ್ಯವೇ ಬ್ರಹ್ಮನು. ಅವನೇ ನಾನಾಗಿರುವೆನು. ಅಂತಃ ಕರಣವೃತ್ತಿಯು ನಾಶವಾಗಲು, ಜ್ಞಾತೃ, ಜ್ಞೇಯ, ಎಂಬೀ ಎರಡು ಪದಾರ್ಥಗಳ

ನೈವ ವಾಚಾ ನ ಮನಸಾ ಶಕ್ಯೋಽಹಂ ಜ್ಞಾತುಮೇವ ಹಿ ।
ತಮೇಕಂ ಜಾನತಾತ್ಮಾನಮನ್ಯಃ ಪಂಥಾಯನಾಯ ಹಿ ॥೯೮॥

ಜ್ಞಾನೇನೈವ ಪರಾ ಮುಕ್ತಿರ್ಭವತ್ಯೇವ ನ ಚಾನ್ಯಥಾ ।
ಅಹಂ ಬ್ರಹ್ಮೇತಿ ವಿಜ್ಞಾನಂ ತದ್ದ್ವಿಜಾಃ ಪರಮಾರ್ಥತಃ ॥೯೯॥

ಶಾಬ್ದಂ ಜ್ಞಾನಮಹೋ ವಿಪ್ರಾಃ ನ ಮುಕ್ತ್ಯೈ ಭವತಿ ಧ್ರುವಂ ।
ಶ್ರವಣಾದಪಿ ಯೋ ವಿಪ್ರಾಃ ನ ಲಭ್ಯಃ ಪರಮೇಶ್ವರಃ ॥೧೦೦॥

ಶೃಣ್ವಂತೋಽಪಿ ಮಹಾದೇವಂ ನ ವಿದುರ್ಯಂ ಪಿನಾಕಿನಂ ।
ಭಕ್ತ್ಯಾ ಹ್ಯನನ್ಯಯಾ ಲಭ್ಯೋ ದುರ್ಲಭೋಽಯಂ ಮುನೀಶ್ವರಾಃ ॥೧೦೧॥

---

ಮೂಲಕ ಉಂಟಾಗುವ ಅನುಭವವು ಇರಲಾರದು. ಬಳಿಕ ಶುದ್ಧ ಬ್ರಹ್ಮಸ್ವರೂಪ ನಾದ ನಾನು ಸಚ್ಚಿದಾನಂದರೂಪದಿಂದ ಇರುವೆನು. ವಾಚಾರಂಭಣನ್ಯಾಯದಂತೆ ಈ ಪ್ರಪಂಚವು ನನಗಿಂತಲೂ ವ್ಯತಿರಿಕ್ತವಾಗಿರುವುದಿಲ್ಲ. ॥೯೭॥

ವಾಗಿಂದ್ರಿಯದ ಮೂಲಕವಾಗಲಿ ಮನಸ್ಸಿನಿಂದಲಾಗಲಿ ನನ್ನನ್ನು ತಿಳಿಯುವುದು ಅಸಾಧ್ಯ. ಪರಬ್ರಹ್ಮವಿಷಯಕವಾದ ಅಭೇದಾನುಸಂಧಾನದಿಂದಲೇ ಬ್ರಹ್ಮಸ್ವರೂಪವನ್ನು ತಿಳಿದುಕೊಳ್ಳಬೇಕಲ್ಲದೇ ಮೋಕ್ಷವನ್ನು ಹೊಂದಲು ಇನ್ನಾವ ಮಾರ್ಗವೂ ಇರುವುದಿಲ್ಲ. ॥೯೮॥

ಎಲೈ, ಮುನಿಗಳೇ ! ಜ್ಞಾನದಿಂದಲೇ ನಿತ್ಯವಾದ ಮುಕ್ತಿಯು ಉಂಟಾಗುವುದಲ್ಲದೇ ಇನ್ನಾವ ಸಾಧನದಿಂದಲೂ ಅದು ಸಾಧ್ಯವಾಗಲಾರದು. ಆ ಜ್ಞಾನವೇ " ಅಹಂ ಬ್ರಹ್ಮಾಸ್ಮಿ " ಎಂಬ ವಾಕ್ಯಾನುಸಂಧಾನದಿಂದ ಉಂಟಾಗಿರುವ ನಿರ್ಮಲವಾದ ಆತ್ಮಜ್ಞಾನವು. ॥೯೯॥

ಎಲೈ, ಬ್ರಾಹ್ಮಣರೇ ! ಉಪನಿಷದ್ವಾಕ್ಯಗಳಿಂದುಂಟಾದ ಪರೋಕ್ಷಜ್ಞಾನದಿಂದ ಎಂದಿಗೂ ಮೋಕ್ಷವು ಲಭಿಸುವುದಿಲ್ಲ. ಕೇವಲ ಶ್ರವಣದಿಂದ ಪರಮೇಶ್ವರನು ಅಲಭ್ಯನಾಗಿರುವನು. ॥೧೦೦॥

ಗುರುಮುಖದಿಂದ ಆ ಪರಮೇಶ್ವರನ ಸ್ವರೂಪವನ್ನು ಕೇಳಿದರೂ ಅದನ್ನು ಮನನದಿಂದ ತಿಳಿದುಕೊಳ್ಳುವವರು ವಿರಳ. ಆದುದರಿಂದ ಶ್ರವಣ ಮನನಗಳಿಂದಲೂ ದುರ್ಲಭನಾಗಿರುವ ಶಿವನು, ಚಿತ್ತೈಕಾಗ್ರ್ಯದಿಂದ ಮಾತ್ರ ಸಾಧ್ಯವಾದ ಭಕ್ತಿಯಿಂದಲೇ (ನಿಧಿಧ್ಯಾಸನದಿಂದಲೇ) ಲಭ್ಯನು. ॥೧೦೧॥

ಭಾವಗ್ರಾಹ್ಯಮನೀಡಾಖ್ಯಮಿತ್ಯಾಹ ಶ್ರುತಿರಾದರಾತ್ ।
ಸರ್ವಮನ್ಯತ್ಪರಿತ್ಯಜ್ಯ ಧ್ಯೇಯೋಽಹಂ ಪರಮೇಶ್ವರಃ ॥೧೦೨॥

ಚತುರ್ಥೋಽಹಂ ಸದಾ ವಿಪ್ರಾಸ್ತುರೀಯಃ ಶಿವ ಏವ ಹಿ ।
ಅಹಮಾತ್ಮಾ ಮುನಿಶ್ರೇಷ್ಠಾಃ ಸತ್ಯಂ ಸತ್ಯಂ ಮುನೀಶ್ವರಾಃ ॥೧೦೩॥

ಬ್ರಹ್ಮಣಶ್ಚಾಪಿ ವಿಷ್ಣೋಶ್ಚ ತಥಾನ್ಯೇಷಾಂ ದಿವೌಕಸಾಂ ।
ಜನಿತಾಹಂ ಮಹಾದೇವಃ ಪರಮಾತ್ಮಾ ಶ್ರುತಿಶ್ರುತಃ ॥೧೦೪॥

ನ ಕರ್ಮಣಾ ನ ಪ್ರಜಯಾ ನ ಧನೇನೇಜ್ಯಯಾ ದ್ವಿಜಾಃ ।
ನಾನ್ಯಃ ಪಂಥಾ ದ್ವಿಜಶ್ರೇಷ್ಠಾಃ ಮದ್ಜ್ಞಾನೇ ಪರಮಾರ್ಥತಃ ॥೧೦೫॥

---

ನನ್ನಲ್ಲಿ ಕಲ್ಪಿತವಾದ ಸಕಲದ್ವೈತ ಪ್ರಪಂಚಕ್ಕೂ ನಾನೇ ಆಶ್ರಯನಾಗಿರುವೆನು. ನನಗೆ ಆಶ್ರಯಭೂತವಾದ ಇನ್ನೊಂದು ವಸ್ತುವಿರುವುದಿಲ್ಲ. ಅಂತಹ ನನ್ನನ್ನು ನಿದಿಧ್ಯಾಸನದಿಂದ ಸಾಕ್ಷಾತ್ಕರಿಸುವುದು ಸುಲಭವೆಂದು, ಶ್ರುತಿಯು ಹೇಳುತ್ತಿರುವುದು. ಆದುದರಿಂದ ಇತರ ಬಾಹ್ಯವ್ಯಾಪಾರಗಳನ್ನು ತೊರೆದು ಸರ್ವದಾ ಪರಮೇಶ್ವರನಾದ ನನ್ನನ್ನೇ ಧ್ಯಾನಿಸಬೇಕು. ಅದರಿಂದ ಮೋಕ್ಷವು ಲಭಿಸುವುದು. ॥೧೦೨॥

ಎಲೈ ಮುನಿಶ್ರೇಷ್ಠರೇ, ನನಗೆ ವಿಶ್ವ, ತೈಜಸ, ಪ್ರಾಜ್ಞಗಳೆಂಬ ಆಧ್ಯಾತ್ಮಿಕವಾದ ಮೂರು ಸ್ವರೂಪಗಳೂ, ವಿರಾಟ್, ಹಿರಣ್ಯಗರ್ಭ ಮತ್ತು ಈಶ್ವರ (ಅವ್ಯಾಕೃತ) ನೆಂಬ ಆಧಿದೈವಿಕವಾದ ಮೂರು ಸ್ವರೂಪಗಳೂ ಇರುವುವು. ಆಧ್ಯಾತ್ಮಿಕ ಮತ್ತು ಆಧಿದೈವಿಕವಾದ ಈ ಮೂರು ಸ್ವರೂಪಗಳು ನನ್ನಲ್ಲಿ ಕಲ್ಪಿತವಾದ ಸ್ವರೂಪಗಳಾಗಿರುವುವು. ಈ ಮೂರು ಸ್ವರೂಪಗಳಿಗೆ, ಆಧಾರ ಭೂತನಾದ ನಾನೇ ತುರೀಯನೆಂಬ ನಾಲ್ಕನೆಯ ಸ್ವರೂಪನಾಗಿರುವೆನು. ಆ ತುರೀಯ ಚೈತನ್ಯ ಸ್ವರೂಪವೇ ಸಚ್ಚಿದಾನಂದ ಸ್ವರೂಪನಾದ ಶುದ್ಧಬ್ರಹ್ಮವಸ್ತುವು. ಈ ಜೀವನು ಅಶುದ್ಧ ಬ್ರಹ್ಮನೇ ಆಗಿರುವನು. ಇದು ನಿಜವು. ॥೧೦೩॥

ವೇದಾಂತವೇದ್ಯನೂ ನಿತ್ಯ ಚೈತನ್ಯ ಸ್ವರೂಪನೂ ಆದ ನಾನೇ, ಬ್ರಹ್ಮ, ವಿಷ್ಣು, ಇಂದ್ರಾದಿದೇವತೆಗಳು ಇವರ ಉತ್ಪತ್ತಿಗೆ ಕಾರಣನಾಗಿರುವೆನು. ॥೧೦೪॥

ಎಲೈ, ಬ್ರಾಹ್ಮಣೋತ್ತಮರೇ! ನಿತ್ಯ ನೈಮಿತ್ತಿಕ ಕರ್ಮಗಳಾಗಲಿ, ಯಾಗಾದಿ ಶ್ರೌತಕರ್ಮಗಳಾಗಲಿ, ಅಥವಾ, ಪುತ್ರಾದಿಗಳಾಗಲಿ, ದ್ರವ್ಯವಿತ್ತವಾಗಲಿ, ಇವಾವುವೂ

ಯಸ್ಯೈವ ವೃಣುತೇ ಸ್ವಾತ್ಮಾ ತೇನ ಲಭ್ಯಮಿದಂ ದ್ವಿಜಾಃ ।
ಯದಾಕಾಶಂ ಚರ್ಮವೇಷ್ಟಂ ವೇಷ್ಟಯೇಯುರ್ದ್ವಿಜೋತ್ತಮಾಃ ॥೧೦೬॥

ಸದಾಶಿವಂ ಮಾಂ ವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ।
ಇಂದ್ರಾಗ್ನೀ ಮಿತ್ರಂ ವರುಣಂ ವಿಷ್ಣುಂ ಬ್ರಹ್ಮಾಣಮೇವ ಚ ॥೧೦೭॥

---

ನನ್ನ ಪ್ರಾಪ್ತಿಗೆ ಸಾಧನವಾಗಿರುವುದಿಲ್ಲ. ಮತ್ತೇನೆಂದರೆ, ನನ್ನನ್ನು ಸಾಕ್ಷಾತ್ಕರಿಸ ಬೇಕಾದರೆ, ಪುತ್ರೈಷಣಾ, ವಿತ್ತೈಷಣಾ, ಲೋಕೈಷಣಾ, ಎಂಬೀ ಈಷಣಾತ್ರಯ ಗಳನ್ನು ಪರಿತ್ಯಜಿಸಿ, ಸತತವೂ ನನ್ನನ್ನೇ ಚಿಂತಿಸಬೇಕು. ಬ್ರಹ್ಮಾತ್ಮೈಕ್ಯ ಚಿಂತ ನವೇ, ಲೋಕಕ್ಕೆ ಕಾರಣವಾಗಿರುವುದಲ್ಲದೇ ಇನ್ನಾವ ಮಾರ್ಗವೂ, ಮೋಕ್ಷಕ್ಕೆ ಸಾಧನವೆನಿಸುವುದಿಲ್ಲ. ॥೧೦೫॥

ಎಲೈ ಬ್ರಾಹ್ಮಣೋತ್ತಮರೇ, ಯಾವನು "ಅಹಂಬ್ರಹ್ಮಾಸ್ಮಿ" ಎಂಬ ವಾಕ್ಯದಿಂದ ಪ್ರತಿಪಾದಿತವಾಗಿರುವ ಜೀವೇಶ್ವರರ ಐಕ್ಯವನ್ನೇ ಸತತವೂ ಅನುಸಂಧಾನ ಮಾಡುವನೋ ಅವನೇ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದುವನು. ಮತ್ತಾರೂ ಬ್ರಹ್ಮಸ್ವರೂಪವನ್ನು ಪಡೆಯಲಾರರು. ಯಾರು ಬ್ರಹ್ಮಾತ್ಮೈಕ್ಯದ ಅನುಸಂಧಾನವನ್ನು ಕೈಗೊಳ್ಳದೇ ವ್ಯಾಪಾರಾಂತರದಲ್ಲಿ ನಿರತರಾಗಿ ಅದರಿಂದಲೇ ಬ್ರಹ್ಮಾತ್ಮೈಕ್ಯರೂಪ ವಾದ ಮೋಕ್ಷವನ್ನು ಸಂಪಾದಿಸುವುವೆಂದು ಪ್ರಯತ್ನಿಸುವರೋ ಅವರು ಚರ್ಮ ದಿಂದ ನೀರೂಪವಾದ ಮತ್ತು ನಿರಾಕಾರವಾದ ಆಕಾಶವನ್ನೂ ಸಹ ಸುತ್ತಲು ಪ್ರಯತ್ನಿಸುವರು. ಎಂದರೆ ಯಾರು ಚರ್ಮದಿಂದ ಆಕಾಶವನ್ನೂ ಸಹ ಸುತ್ತುವೆ ವೆಂದು ಉದ್ಯುಕ್ತರಾಗುವರೋ ಅವರು ಲೋಕದಲ್ಲಿ ಅಪಹಾಸ್ಯಕ್ಕೆ ಗುರಿಯಾಗುವರು. ಅದರಂತೆ ಬ್ರಹ್ಮಾತ್ಮೈಕ್ಯಾನುಸಂಧಾನವನ್ನು ತೊರೆದು ವ್ಯಾಪಾರಾಂತರದಲ್ಲಿ ಆಸಕ್ತರಾಗಿ ಅದರಿಂದಲೇ ಮೋಕ್ಷವನ್ನು ಪಡೆಯುವೆವೆಂದು ಯತ್ನಿಸುವವರ ಪ್ರಯತ್ನವು ವಿಫಲವೇ ಆಗುವುದಲ್ಲದೇ ಅವರಿಗೆ ಎಂದಿಗೂ ಇಷ್ಟಫಲವು ದೊರಕ ಲಾರದು. ॥೧೦೬॥

ನಿತ್ಯಶಾಂತಸ್ವರೂಪನಾದ ನನ್ನ ಸ್ವರೂಪವನ್ನು ತಿಳಿದುಕೊಂಡರೆ ಸಂಸಾರ ದುಃಖಗಳು ನಾಶವನ್ನು ಹೊಂದುವುವು. ಜಗತ್ಪ್ರಭವವೂ ಸ್ವಸಜಾತೀಯ ವಿಜಾತೀಯ ಸ್ವಗತಭೇದರಹಿತನಾದ ನಾನು ಒಬ್ಬನೇ ಇರುವೆನಾದರೂ ಜನರು ನನ್ನನ್ನು ಇಂದ್ರ, ಅಗ್ನಿ, ಮಿತ್ರ, ವರುಣ, ಬ್ರಹ್ಮ ಮುಂತಾದ ಅನೇಕ ರೂಪಗಳನ್ನು ನನ್ನಲ್ಲಿ ಕಲ್ಪಿಸಿ

ಏಕಮೇವ ಮಹಾದೇವಂ ಬಹುಧಾ ಕಲ್ಪಯಂತಿ ಹಿ ।
ಮಾಮವಿಜ್ಞಾಯ ವಿಪ್ರೇಂದ್ರಾ ಕಿಮೃಚಾ ಸ ಕರಿಷ್ಯತಿ ॥೧೦೮॥

ಯೋ ಮಾಂ ವೇದ ಸ ವೈ ಮುಕ್ತ್ರಮಮೀ ಲೋಕಾಃ ಸಮಾಸತೇ ।
ಕಿಂ ಪ್ರೋಽದ್ಯ ಬಹುನೋಕ್ತೇನ ಶ್ರದ್ಧದ್ಧ್ವಂ ಮುನಿಸತ್ತಮಾಃ॥೧೦೯॥

ಸಾಧನಾನ್ಯಧುನಾ ವಕ್ಷ್ಯೇ ಜ್ಞಾನೋತ್ಪತ್ತ್ಯರ್ಥಮೇವ ಹಿ ।
ಜ್ಞಾತೇ ಚಾಪ್ಯರ್ಥವಿಜ್ಞಾನದಾರ್ಢ್ಯಾರ್ಥಂ ಮುನಿಸತ್ತಮಾಃ ॥೧೧೦॥

ಭಸ್ಮನೋದ್ಧೂಲನಂ ಪುಣ್ಯಂ ತ್ರಿಪುಂಡ್ರಸ್ಯ ಚ ಧಾರಣಂ ।
ವ್ರತಮೇತತ್ಪಾಶುಪತಮಾಮನಂತಿ ಮುನೀಶ್ವರಾಃ ॥೧೧೧॥

---

ಆರಾಧಿಸುವರು. ಎಲೈ ಬ್ರಾಹ್ಮಣೋತ್ತಮರೇ, ಯಾವನು ನನ್ನ ಸ್ವರೂಪವನ್ನು ತಿಳಿಯದೇ ವೇದಾಧ್ಯಯನಗಳಲ್ಲಿ ನಿರತನಾಗುವನೋ ಅವನು ಯಾವ ಫಲವನ್ನೂ ಸಾಧಿಸಲಾರನು. ॥೧೦೭-೧೦೮॥

ಯಾವನು ನನ್ನ ನಿಜಸ್ವರೂಪವನ್ನು ತಿಳಿದುಕೊಳ್ಳುವನೋ, ಅವನು ಮೋಕ್ಷವನ್ನು ಹೊಂದುವನು. ಅವನಿಗೋಸ್ಕರ ಶಾಶ್ವತವಾದ ಈ ಬ್ರಹ್ಮಲೋಕಗಳು ಸಿದ್ಧವಾಗಿರುವುವು ಎಲೈ ದ್ವಿಜಶ್ರೇಷ್ಠರೇ, ನಿಮಗೆ ಈ ವಿಷಯವನ್ನು ವಿಸ್ತರಿಸಿ ಹೇಳುವುದರಿಂದೇನು ? ನನ್ನ ಈ ವಚನಗಳು ಸತ್ಯವಾಗಿರುವುವೆಂದು ದೃಢವಾಗಿ ನಂಬಿರಿ. ॥೧೦೯॥

ಎಲೈ ಬ್ರಾಹ್ಮಣೋತ್ತಮರೇ, ಇದೀಗ ನಿಮಗೆ ಬ್ರಹ್ಮಜ್ಞಾನದ ಸಾಧನಗಳನ್ನು ಹೇಳುವೆನು ಕೇಳಿರಿ. ಜ್ಞಾನದ ಆವೃತ್ತಿಗಳಿಂದ ವಿಷಯವು ತಿಳಿದರೂ ಸಹ ತಿಳಿದ ವಿಷಯವನ್ನು ದೃಢಪಡಿಸುವದಕ್ಕೋಸ್ಕರ ಜ್ಞಾನಸಾಧನಗಳ ಅಪೇಕ್ಷೆಯು ಬೇಕು. ॥೧೧೦॥

ಸರ್ವಾಂಗಗಳಿಗೂ ಭಸ್ಮವನ್ನು ಲೇಪಿಸುವುದು ಮತ್ತು ತ್ರಿಪುಂಡ್ರಗಳನ್ನು ಧರಿಸುವುದು ಇವು ಜ್ಞಾನದ ಬಹಿರಂಗಸಾಧನಗಳು. ಇದನ್ನು ಪಾಶುಪತವ್ರತವೆಂದು ಜ್ಞಾನಿಗಳು ಹೇಳುವರು. ॥೧೧೧॥

ಶಿರೋವ್ರತಮಿದಂ ಪುಣ್ಯಂ ಜ್ಞಾನಸಾಧನಮೇವ ಹಿ ।
ರುದ್ರಾಕ್ಷಧಾರಣಂ ಪುಣ್ಯಂ ರುದ್ರಾಧ್ಯಾಯಾನುವರ್ತನಂ ॥೧೧೨॥

ರುದ್ರಲಿಂಗಾರ್ಚನಂ ಭಕ್ತ್ಯಾ ಬಿಲ್ವಪತ್ರಾದಿಸಾಧನೈಃ ।
ಪಂಚಾಕ್ಷರಜಪಶ್ಚೈವ ಭಕ್ತಾನಾಮನ್ನಭೋಜನಂ ॥೧೧೩॥

ಶಿವಕ್ಷೇತ್ರನಿವಾಸಶ್ಚ ನಿತ್ಯಾನಿತ್ಯಾರ್ಥಚಿಂತನಂ ।
ಶಿವ ಶಂಭೋ ಮಹೇಶೇತಿ ಅನಿಶಂ ಶಿವಚಿಂತನಂ ॥೧೧೪॥

ಮೈತ್ರೀ ಭೂತೇಷು ಕರುಣಾ ಶಾಂತಿದಾಂತ್ಯಾದಯೋ ಗುಣಾಃ ।
ಯಮಶ್ಚ ನಿಯಮಶ್ಚೈವ ಜಿಹ್ಮಮಾಯಾದಿವರ್ಜನಂ ॥೧೧೫॥

ವೇದವೇದಾಂತವಾಕ್ಯಾನಾಂ ವಿಚಾರೋ ಗುರುವಾಕ್ಯತಃ ।
ಲೋಕಾನುದರ್ಶನಂ ಚೈವ ವೈರಾಗ್ಯಾರ್ಥಂ ಮುನೀಶ್ವರಾಃ ॥೧೧೬॥

ದುಃಖಿತಾನಾಂ ಜರಾಣಾಂ ಚ ವಿನಷ್ಟಾನಾಂ ಮುನೀಶ್ವರಾಃ ।
ಸರ್ವಂ ಜಹಾತಿ ವಿಜ್ಞಾನಂ ನೇತಿ ನೇತ್ಯಾದಿವಾಕ್ಯತಃ ॥೧೧೭॥

---

ವ್ರತಗಳಲ್ಲೆಲ್ಲಾ ಉತ್ಕೃಷ್ಟವಾದ ಮತ್ತು ಪುಣ್ಯಕರವಾದ ಈ ಪಾಶುಪತ ವ್ರತವು ಜ್ಞಾನಕ್ಕೆ ಸಾಧನವಾಗಿರುವುದು. ರುದ್ರಾಕ್ಷಧಾರಣೆ, ರುದ್ರಾಧ್ಯಾಯವನ್ನು ಆವರ್ತಿಸುವುದು, ಇವೂ ಜ್ಞಾನಸಾಧನಗಳು. ॥೧೧೨॥

ಶಿವಪಂಚಾಕ್ಷರೀಮಂತ್ರವನ್ನು ಜಪಿಸುತ್ತಾ, ಬಿಲ್ವಪತ್ರೆಯೇ ಮುಂತಾದ ಪೂಜಾಸಾಮಗ್ರಿಗಳಿಂದ ಭಕ್ತಿಪೂರ್ವಕವಾಗಿ ಶಿವನನ್ನು ಅರ್ಚಿಸುವುದು, ಈಶ್ವರ ಭಕ್ತರಿಗೆ ಭೋಜನವನ್ನು ಮಾಡಿಸುವುದು, ಶಿವಕ್ಷೇತ್ರವಾಸ, ನಿತ್ಯಾನಿತ್ಯವಸ್ತು ವಿವೇಕ, ಶಿವ, ಶಂಭೋ, ಮಹೇಶ ಎಂದು ಹಗಲಿರುಳು ಶಿವನಾಮವನ್ನುಚ್ಚರಿಸುತ್ತಿರುವುದು, ಸಕಲ ಪ್ರಾಣಿಗಳಲ್ಲಿಯೂ ಸ್ನೇಹಭಾವದಿಂದಿರುವುದು, ಪ್ರಾಣಿದಯೆ, ಶಮದಮಾದಿಗಳು, ಗುರುಮುಖದಿಂದ ವೇದವೇದಾಂತವಾಕ್ಯಗಳನ್ನು ತಿಳಿಯುವುದು, ಅವನ್ನು ಚಿಂತಿಸುವುದು, ಮತ್ತು ಶಿಷ್ಟರಾದ ಜನರ ಆಚಾರ ನಡೆ, ನುಡಿ, ನೀತಿಗಳನ್ನು ಅನುಸರಿಸುವುದು, ಇವೆಲ್ಲವೂ ವೈರಾಗ್ಯಕ್ಕೆ ಸಾಧನವಾದವುಗಳು. ॥೧೧೩-೧೧೪-೧೧೫-೧೧೬॥

" ಅಥಾತ ಆದೇಶೋ ನೇತಿ ನೇತಿ '' ಎಂಬೀ ವೇದಾಂತವಾಕ್ಯದಿಂದ

ಗುರೌ ಶಿವೇಽವಿನಾಭಾವಂ ಮನ್ಮೂರ್ತೌ ಚಿಂತನಂ ತಥಾ ।
ಉಮಾಸಹಾಯಂ ದೇವೇಶಂ ನೀಲಕಂಠಂ ಪ್ರಶಾಂತಕಂ ॥೧೧೮॥

॥ ಈಶ್ವರ ಉವಾಚ ॥

ಏತದ್ವಃ ಸಂಗ್ರಹೇಣೈವ ಪ್ರೋಕ್ತಂ ಜ್ಞಾನಂ ಮುನೀಶ್ವರಾಃ ।
ಉದ್ದಾಲಕಶ್ರುತಾರ್ಥಸ್ಯ ಚಿಂತನಂ ಕುರುತೋತ್ತಮಾಃ ॥೧೧೯॥

ಮನನಂ ಶ್ರವಣಂ ಭಕ್ತ್ಯಾ ನಿದಿಧ್ಯಾಸನಮೇವ ಚ ।
ಆಸುಪ್ತೇರಾಮೃತೇರ್ವಿಪ್ರಾಃ ಕುರುಧ್ವಂ ಭಕ್ತಿಭಾವನಾಃ ॥೧೨೦॥

ಏತದೇವ ಮುನಿಶ್ರೇಷ್ಠಾಃ ಮಮ ಜ್ಞಾನಾಂಗಮುಚ್ಯತೇ ।
ಅನ್ಯದೇವ ಸ್ಮೃತಿಶ್ಚಾಪಿ ಭಸ್ಮಪುಂಡ್ರಸ್ಯ ಧಾರಣಂ ॥೧೨೧॥

---

ಉಂಟಾದ ಜ್ಞಾನದಿಂದ ದುಃಖಿತರು, ವೃದ್ಧರು, ಮರಣಾವಸ್ಥೆಯನ್ನು ಹೊಂದಿದವರು ಮುಂತಾದವರೆಲ್ಲರ ಯಾವ ದುಃಖಗಳೂ ಆವರಿಸಲಾರವು. ॥೧೧೭॥

ಜ್ಞಾನೋಪದೇಶಕನಾದ ಗುರುವೂ ಮತ್ತು ಶಿವನೂ ಇವರಿಬ್ಬರೂ ಒಬ್ಬನೇ ಆಗಿರುವನೆಂದು ಭಾವಿಸಿ, ಗಿರಿಜಾಕಾಂತನೂ, ದೇವೇಶನೂ, ನೀಲಕಂಠನೂ, ಶಾಂತನೂ ಆದ ಶಿವನನ್ನು ಶಿವಲಿಂಗದಲ್ಲಿ ಧ್ಯಾನಿಸುವುದು ಜ್ಞಾನಕ್ಕೆ ಸಾಧನವಾದುದು. ಎಂದು ಜ್ಞಾನಸಾಧನವನ್ನು ವಿವರಿಸಿ, ॥೧೧೮॥

ಬಳಿಕ ಈಶ್ವರನು ಮುನಿಗಳನ್ನು ಕುರಿತು ಹೀಗೆಂದನು. ಎಲೈ ಮುನಿಪುಂಗವರೇ, ನಿಮಗೆ ಈ ಜ್ಞಾನದ ಸ್ವರೂಪವನ್ನು ಸಂಗ್ರಹಿಸಿ ಹೇಳಿರುವೆನು. ಶ್ವೇತಕೇತುವು ಉದ್ದಾಲಕನ ದೆಸೆಯಿಂದ ಕೇಳಿ ತಿಳಿದುಕೊಂಡ ಆ ಬ್ರಹ್ಮವಸ್ತುಸ್ವರೂಪವನ್ನು ನೀವು ನಿರಂತರವೂ ಚಿಂತಿಸಿರಿ. (ಕಠೋಪನಿಷತ್ತು) ॥೧೧೯॥

ಜಾಗ್ರದವಸ್ಥೆಯ ಪ್ರಾರಂಭದಿಂದ ಮೊದಲುಗೊಂಡು, ನಿದ್ರಾವಸ್ಥೆಯವರೆಗೂ ಬ್ರಹ್ಮಚಿಂತನವನ್ನು ಕೈಗೊಳ್ಳಬೇಕು. ಈ ರೀತಿಯಲ್ಲಿ ಮರಣಪರ್ಯಂತವೂ ಬ್ರಹ್ಮಜ್ಞಾನಕ್ಕೆ ಉಪಯುಕ್ತವಾದ ಶ್ರವಣಮನನನಿದಿಧ್ಯಾಸನಗಳನ್ನು ಕೈಗೊಳ್ಳಿರಿ. ॥೧೨೦॥

ಈ ಶ್ರವಣಮನನನಿಧಿಧ್ಯಾಸನಗಳೂ ಜ್ಞಾನಕ್ಕೆ ಅಂಗ. ಇದಲ್ಲದೇ ಶಿವನಾಮಸ್ಮರಣ ಮತ್ತು ಭಸ್ಮತ್ರಿಪುಂಡ್ರಧಾರಣೆ ಇವುಗಳನ್ನೂ ಆಚರಿಸಬೇಕು. ॥೧೨೧॥

ಸ ಏವ ತಮಸಾವಿಷ್ಟೋ ನೈವೇದಂ ಪ್ರಾಪ್ನುಯಾತ್ಕ್ವಚಿತ್ ।
ಮತ್ಪ್ರಸಾದೇನ ವಿಜ್ಞಾನಂ ಮತ್ಪ್ರಸಾದೇನ ಮುಕ್ತಯಃ ॥೧೨೨॥

ಮತ್ಪ್ರಸಾದೇನ ಮುನಯಃ ಸರ್ವಂ ಪ್ರಾಪ್ಸ್ಯತ ಏವ ಹಿ ।
ಯಸ್ಯ ಕಸ್ಯ ಚ ನೋ ದೇಯಂ ಜ್ಞಾನಮೇತತ್ಸುದುರ್ಲಭಂ ॥೧೨೩॥

ನಾವೇದವಿದುಷೇ ದೇಯಂ ಗೋಪ್ಯಮೇತತ್ಪ್ರಯತ್ನತಃ ।
ನೋ ಚೇನ್ನರಕಮಾಪ್ನೋತಿ ಸಹ ಪೂರ್ವೈಃ ಪಿತಾಮಹೈಃ ॥೧೨೪॥

ಇತ್ಥಂ ಮತ್ತೋ ಮಹಾದೇವಿ ಜ್ಞಾನಂ ಪ್ರಾಪ್ಯ ಮುನೀಶ್ವರಾಃ ।
ಪ್ರಣಮ್ಯ ಮುನಯಃ ಸರ್ವೇ ಮಾಮಾಹುರ್ವಿಗತಕಲ್ಮಷಾಃ ॥೧೨೫॥

॥ ಮುನಯ ಊಚುಃ ॥

ನ ಜಾನಂತಿ ಬೋಧಂ ನ ವಾನಂದಸಿದ್ಧಿಂ
ಭವದ್ಭಕ್ತಿಲೇಶಾದ್ವಿಹೀನಾತಿಹೀನಾಃ ।

---

ಯಾವನು ಈ ಜ್ಞಾನಸಾಧನಗಳನ್ನು ಪಡೆಯುವುದಿಲ್ಲವೋ ಅವನೇ ಅಜ್ಞಾನಿಯೆನಿಸಿಕೊಳ್ಳುವನು. ನನ್ನ ಅನುಗ್ರಹದಿಂದಲೇ ಎಲ್ಲರಿಗೂ ಜ್ಞಾನವು ಲಭಿಸಿ ಅದರ ಮೂಲಕ ಮೋಕ್ಷವು ಸಿದ್ಧಿಸುವುದು. ॥೧೨೨॥

ಎಲೈ ಮುನಿಗಳೇ, ನನ್ನ ಅನುಗ್ರಹದಿಂದಲೇ ಈ ಹಿಂದೆ ಹೇಳಿದ ಸಕಲ ಜ್ಞಾನಸಾಧನಗಳೂ ಲಭಿಸುವುವು. ಇತರರಿಗೆ ದುರ್ಲಭವೂ, ಪವಿತ್ರವೂ ಆದ ಈ ಜ್ಞಾನವನ್ನು ಇನ್ನಾರಿಗೂ ಉಪದೇಶಿಸಬಾರದು. ॥೧೨೩॥

ಪವಿತ್ರವಾದ ಈ ಜ್ಞಾನವನ್ನು ವೇದಬಾಹಿರನಾದವನಿಗೆ ಉಪದೇಶಿಸದೆ ಗುಪ್ತವಾಗಿರಿಸಬೇಕು. ಅದಲ್ಲದೇ ವೇದಬಾಹಿರನಿಗೆ ಇದನ್ನು ಉಪದೇಶಿಸಿದವನು ತನ್ನ ಪೂರ್ವಿಕರಾದ ಪಿತೃಪಿತಾಮಹಾದಿಗಳೊಂದಿಗೆ ನರಕವನ್ನು ಹೊಂದುವನು. ॥೧೨೪॥

ಎಲೌ ದೇವಿಯೇ, ಈ ಪ್ರಕಾರವಾಗಿ ಆ ಮುನಿಪುಂಗವರು ನನ್ನ ದೆಸೆಯಿಂದ ಪವಿತ್ರವಾದ ಬ್ರಹ್ಮಜ್ಞಾನವನ್ನು ತಿಳಿದು ನಿರ್ಮಲಾಂತಃಕರಣರಾಗಿ ನನಗೆ ನಮಸ್ಕರಿಸಿ ಹೀಗೆಂದರು. ॥೧೨೫॥

'ಓ ಮಹೇಶನೆ, ನಿನ್ನಲ್ಲಿ ಭಕ್ತಿಯಿಲ್ಲದವರು ಬ್ರಹ್ಮಜ್ಞಾನವನ್ನಾಗಲಿ ಅದರಿಂದ ಸಿದ್ಧಿಸುವ ಅಖಂಡಾನಂದವನ್ನಾಗಲಿ ಪಡೆಯಲಾರರು. ಓ ಶಂಭುವೇ, ಗುರೂಪದೇಶ

ಶ್ರುತೇರ್ವಾಕ್ಯತಃ ಸಿದ್ಧಿರ್ನಿಾಯುಸ್ತುರೀಯಾಂ
ಮಹೇಶಾನ ಶಂಭೋ ಗುರೋರ್ವಾ ಲಭೇತ ॥೧೨೬॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ವಸಿಷ್ಠಾದಿ
ಮಹರ್ಷೀಣಾಂ ಜ್ಞಾನೋಪದೇಶನಿರೂಪಣಂ ನಾಮ
ಪಂಚವಿಂಶೋಽಧ್ಯಾಯಃ

---

ದಿಂದಾಗಲಿ ಅಥವಾ ವೇದಾಂತವಾಕ್ಯಗಳ ಅನುಚಿಂತನೆಯಿಂದಲಾಗಲಿ ಜ್ಞಾನಿಗಳು ಶಾಶ್ವತವಾದ ಮೋಕ್ಷವನ್ನು ಪಡೆಯುವರು. ಇದು ನಿಜವು, ಎಂದು ಮುನಿಗಳೆಲ್ಲರೂ ಪರಮೇಶ್ವರನನ್ನು (ನನ್ನನ್ನು) ಸ್ತುತಿಸಿದರು. ಎಂದು ಶಂಕರನು ಪಾರ್ವತಿಯೊಡನೆ ಮಾತನಾಡಿದನು. ॥೧೨೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಐದನೆಯ ಅಂಶದಲ್ಲಿ ವಸಿಷ್ಠಾದಿಋಷಿಗಳಿಗೆ ಈಶ್ವರನು ಮಾಡಿದ ಜ್ಞಾನೋಪದೇಶವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

ಭರ್ಗಾಖ್ಯೇ

ಪಂಚಷಷ್ಠಾಂಶೇ

## ಷಡ್ವಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ತಜ್ಜ್ಞಾನಂ ಪರಮಂ ಪ್ರಾಪ್ಯ ಮುನೀನಾಮಪಿ ಶೃಣ್ವತಾಂ ।
ವಾಮದೇವೋ ಮುದಾ ನೃತ್ಯನ್ಮತ್ತೋ ಲಬ್ಧ್ವಾ ಸುನಿರ್ವೃತಃ ॥೧॥

ಜ್ಞಾನಾನಂದೇನ ಮಹತಾ ವಿವಶೋ ಮುನಿಸತ್ತಮಃ ।
ಗೋಕರ್ಣೇಶಂ ತದಾ ಪಶ್ಯನ್ಮುನಿಮಧ್ಯೇ ಮುನಿಸ್ತದಾ ॥೨॥

ಇದಂ ಪ್ರಾಹಾತ್ಮವಿಜ್ಞಾನಂ ಮಾಂ ಸ್ತುವನ್ಜಗದಂಬಿಕೇ ॥೩॥

---

## ಇಪ್ಪತ್ತಾರನೆಯ ಅಧ್ಯಾಯ

ಮಹರ್ಷಿಗಳ ಸಭೆಯಲ್ಲಿ ಜ್ಞಾನೋಪದೇಶವನ್ನು ಸಾವಧಾನದಿಂದ ಕೇಳುತ್ತಿದ್ದ ಮುನಿಗಳ ನಡುವೆ ವಾಮದೇವನು ನಿರ್ಮಲವಾದ ಜ್ಞಾನವನ್ನು ಪಡೆದು, ಅದರಿಂದುಂಟಾದ ಅಖಂಡಾನಂದವನ್ನು ಸವಿಯುತ್ತಾ, ಹುಚ್ಚನಂತೆ ಸಂತೋಷದಿಂದ ಕುಣಿಯುತ್ತಾ ಆನಂದಾಬ್ಧಿಯಲ್ಲಿ ಮುಳುಗಿದನು. ॥೧॥

ಎಲೌ ಜಗನ್ಮಾತೆಯೇ, ಅನಿರ್ವಚನೀಯವಾದ ಜ್ಞಾನಾನಂದದ ಅನುಭವದಿಂದ ಮೈಮರೆತ ಆ ಮುನಿಶ್ರೇಷ್ಠನು ನನ್ನನ್ನು ಪರಿಪರಿಯಿಂದ ಸ್ತುತಿಸುತ್ತಾ, ಆಗ ಆ ಮುನಿಗಳ ನಡುವೆ ಇದ್ದ ಗೋಕರ್ಣೇಶನನ್ನು ಕುರಿತು ಹೀಗೆ ಸ್ತುತಿಸಿದನು. ॥೨-೩॥

ಅಹಂ ವಿಶ್ವಾಧೀಶೋ ಮನುರಹಮಹೋ ಸೂರ್ಯ ಇತಿ ವೈ
ಅಹಂ ವಿಶ್ವಂ ಸರ್ವಂ ಭುವನಮಖಿಲಂ ತ್ವಚ್ಛ್ರುತಿಬಲಾತ್।
ಉತಾಹೋಽಸ್ಮಿಚ್ಛಂಭೋ ನಿಖಿಲಮರುತಾಂ ನಾಯಕ ವಿಭೋ
ಭವತ್ಪಾದಾಂಭೋಜೋದ್ಭವಭಜನಪುಣ್ಯಾಕರಮತಿಃ ॥೪॥

ಪೂರ್ಣಂ ಪೂರ್ಣಮದಸ್ತ್ವದೀಯಮಹಸಾ ಸಂಪೂರ್ಣಮೇತಜ್ಜಗ
ತ್ತ್ವಾಂ ತೂರ್ಣಂ ಸಮುಪೈತಿ ತೂರ್ಣಮಥ ವೈ ಸಂಪೂರ್ಣಕಾಮಾಧುನಾ।
ಪೂರ್ಣಾತ್ಪೂರ್ಣಮಹಾರ್ಣವಪ್ರತಿನಿಧಿಂ ತೂರ್ಣಂ ಹೃದಾಕಾಶಗಂ
ತ್ವಾಂ ಮತ್ವಾ ಜಗದೇವ ತಸ್ಯ ಹೃದಯೇ ಸಂಪೂರ್ಣಮಾತಿಷ್ಠತೇ ॥೫॥

---

ವಾಮದೇವನು ನನ್ನನ್ನು ಸ್ತುತಿಸಿದ ಕ್ರಮವಿದು—ಓ ಜಗನ್ನಾಥನೇ, "ಅಹಂ ಮನುರಭವಂ ಸೂರ್ಯಶ್ಚ" ಎಂಬ ಇವೇ ಮೊದಲಾದ ವೇದವಾಕ್ಯಗಳು, ಬ್ರಹ್ಮಜ್ಞಾನಿಯಾದವನು ಜ್ಞಾನೋದಯವಾದೊಡನೆಯೇ ತಾನೇ ಜಗತ್ಪ್ರಭುವು ತಾನೇ ಮನುವು, ತಾನೇ ಸೂರ್ಯನು ಎಂದು ಹೇಳುತ್ತಾ ಮೈಮೇಲಿನ ಪರಿವೆ ಯಿಲ್ಲದೇ ಉನ್ಮತ್ತನಂತೆ ವ್ಯವಹರಿಸುವನು ಎಂದು ಹೇಳುವುದು. ನನಗಾದರೋ ಪವಿತ್ರವಾದ ಬ್ರಹ್ಮಜ್ಞಾನವು ಉದಯಿಸಿರುವುದರಿಂದ ಇದೀಗ ನಾನೇ ಜಗತ್ಪ್ರಭುವು, ನಾನೇ ಮನುವು, ನಾನೇ ಸೂರ್ಯನೂ ಆಗಿರುವೆನು ; ಜಗತ್ಸ್ವರೂಪನೂ ನಾನೇ ಎನ್ನುವನು. ಓ ಶಿವನೇ, ಮರುತ್ತುಗಳ ನಾಯಕನೇ, ಜಗತ್ಪ್ರಭುವೇ, ಇದೀಗ ನಾನು ನಿನ್ನ ಪವಿತ್ರವಾದ ಅಡಿದಾವರೆಗಳಿಂದ ಉಂಟಾದ ನಿರ್ಮಲವಾದ ಜ್ಞಾನಸುಖವನ್ನು ಅನುಭವಿಸುತ್ತಿರುವೆನು. ॥೪॥

ದೇವ, ಆಕಾಶದಂತೆ ವ್ಯಾಪಕನೂ ಸ್ವಪ್ರಕಾಶಸ್ವರೂಪನೂ ಆದ ನೀನು ನಿನ್ನ ವಿಭೂತಿಯಿಂದ ಚರಾಚರಾತ್ಮಕವಾಗಿರುವ ಈ ಜಗತ್ತಿನಲ್ಲಿ ಎಲ್ಲೆಡೆಯಲ್ಲಿಯೂ ವ್ಯಾಪಿಸಿ, ನಿನ್ನಿಂದಲೇ ಈ ಜಗತ್ತು ಪೂರ್ಣವಾಗಿರುವಂತೆ ಮಾಡಿರುವೆ. ಇಂತಹ ನಿನ್ನನ್ನು ಆಪ್ತಕಾಮರಾದ ಜ್ಞಾನಿಗಳು, ತಮ್ಮ ಜ್ಞಾನಾಗ್ನಿಯಿಂದ ಅಜ್ಞಾನವೆಂಬ ಭಯಂಕರವಾದ ಅರಣ್ಯವನ್ನು ಭಸ್ಮಾವಶೇಷವನ್ನಾಗಗೊಳಿಸಿ, ನಿನ್ನ ಸಾರೂಪ್ಯ ವನ್ನು ಹೊಂದುವರು. ವ್ಯಾಪಕನೂ, ಆಕಾಶಾದಿಪದಾರ್ಥಗಳಿಗಿಂತಲೂ ನಿರತಿಶಯ ವಾದ ಮಹತ್ತ್ವವುಳ್ಳ ನೀನು ಎಲ್ಲೆಯಿಲ್ಲದಿರುವ ಸಮುದ್ರದಂತೆ ಇದ್ದು ಸಕಲ ಪ್ರಾಣಿಗಳ ಹೃದಯಪುಂಡರೀಕದಲ್ಲಿ ಅಭಿವ್ಯಕ್ತನಾಗುವೆ. ಅಂತಹ ನಿನ್ನ ಸ್ವರೂಪ

ಈಶಾವಾಸ್ಯಮಿದಂ ಚ ಸರ್ವಮಧುನಾ ತ್ವದ್ಭಾನಭಾತಂ ಸತಾ
ನೇಕಂ ದ್ವಂದ್ವವಿಹೀನಮುದ್ಭುತಮಹೋ ನೇಹಾಸ್ತಿ ನಾನಾ ಜಗತ್ ।
ಆತ್ಮೈವೇದಮಯಂ ಉಮಾದ್ವಯಮಿದಂ ಬ್ರಹ್ಮೇದಮಾಲೋಕ್ಯತಾಂ
ವೇದಾಂತೈರ್ಗುರುವಾಕ್ಯಬೋಧಜನಿತಾನಂದೈಸ್ತ್ವಮಾತ್ಮಾ ವಿಭುಃ ॥೬॥

---

ವನ್ನು ತಿಳಿದುಕೊಂಡು ಜ್ಞಾನಿಗಳು ಜಗದಾಧಾರನಾದ ನಿನ್ನ ಅನುಗ್ರಹವನ್ನು ಸಂಪಾದಿಸಿ ಈ ಜಗತ್ತೇ ತಮ್ಮ ಹೃದಯದಲ್ಲಿ ನೆಲಸಿರುವುದೆಂದು ತಿಳಿಯುವರು. ಇದಲ್ಲವೇ ನಿನ್ನ ಮಹಿಮಾತಿಶಯವು. ॥೫॥

ದೇವ, ಸಕಲ ಚರಾಚರವಸ್ತುಗಳಿಂದ ಕೂಡಿರುವ ಈ ಪ್ರಪಂಚವು ನಿನ್ನಿಂದಲೇ ಪ್ರಕಾಶಿಸುವುದಲ್ಲದೆ ಅನ್ಯಥಾ ಪ್ರಕಾಶಿಸಲಾರದು. ಪರಮಾರ್ಥ ಸದ್ರೂಪನಾದ ನಿನ್ನ ಸಂಬಂಧದಿಂದಲೇ ಈ ಜಗತ್ತೂ ಸಹ ಪಾರಮಾರ್ಥಿಕ ವಾಗಿರುವಂತೆ ತೋರುವುದು. ಆದರೆ ಶ್ರುತಿಯುಕ್ತಿಗಳಿಂದ ವಿಚಾರಿಸಿದರೆ ಜಗತ್ತಿನಲ್ಲಿ ತೋರುವ ಈ ಪಾರಮಾರ್ಥಿಕ ಸತ್ತೆಯು ನಿನ್ನ ಅಧೀನವಾದುದೆಂದೂ, ಈ ಜಗತ್ತು ನಿನ್ನಲ್ಲಿಯೇ ಅಧ್ಯಸ್ತವಾಗಿರುವುದೆಂದೂ ತಿಳಿದುಬರುವುದು. ಆದುದರಿಂದಲೇ ಚರಾಚರಾತ್ಮಕವಾದ ಈ ಪ್ರಪಂಚವನ್ನು ಪರಮಾತ್ಮಬುದ್ಧಿಯಿಂದ ಆಚ್ಛಾದಿಸಬೇಕು. ಎಂದರೆ ಚಂದನ, ಅಗುರು ಮುಂತಾದ ಸುಗಂಧದ್ರವ್ಯಗಳು ಕಲ್ಮಷದಿಂದ ತಮ್ಮ ಗಂಧವನ್ನು ವ್ಯಕ್ತಪಡಿಸದಿರಲು ಅವುಗಳನ್ನು ಜಲದಿಂದ ಶುದ್ಧಿಗೊಳಿಸಿ ಅದರ ಗಂಧವನ್ನು ವ್ಯಕ್ತಗೊಳಿಸುವಂತೆ ಈ ಆತ್ಮನಲ್ಲಿ ಅವಿದ್ಯೆಯಿಂದ ಅಧ್ಯಸ್ತವಾದ ಕರ್ತೃತ್ವ ಭೋಕ್ತೃತ್ವವೆಂಬ ದ್ವೈತಭಾವವನ್ನು ಪರಮಾತ್ಮಜ್ಞಾನದಿಂದ ಹೋಗಲಾಡಿಸಿ, ಬ್ರಹ್ಮವಸ್ತುವನ್ನೊಂದನ್ನು ಬಿಟ್ಟು ಶಾಶ್ವತವಾದ ಒಂದು ಪದಾರ್ಥವೂ ಈ ಪ್ರಪಂಚದಲ್ಲಿರುವುದಿಲ್ಲ; ಮತ್ತು ಸಕಲವೂ ಬ್ರಹ್ಮಸ್ವರೂಪದಿಂದಲೇ ವ್ಯವಸ್ಥಿತ ವಾಗಿರುವುದೆಂದು ಭಾವಿಸಬೇಕು ಎಂದು ಶ್ರುತಿಯು ಮುಮುಕ್ಷುಗಳಾದ ಜನರಿಗೆ ಉಪದೇಶಿಸುವುದು. ಬ್ರಹ್ಮಸ್ವರೂಪನಾದ ನೀನು ಅದ್ವಿತೀಯನೂ, ಸ್ವಸಜಾತೀಯ ವಿಜಾತೀಯ ಸ್ವಗತಭೇದರಹಿತನೂ ಆಗಿರುವೆ. ಈ ಪ್ರಪಂಚದಲ್ಲಿ ನಾನಾಬಗೆಯಿಂದ ಪಾರಮಾರ್ಥಿಕವಾದ ದ್ವೈತಜಾತವು ಯಾವುದೂ ಇರುವುದೇ ಇಲ್ಲ. ಈ ಪ್ರಪಂಚವು ಆತ್ಮರೂಪವಾಗಿಯೇ ವ್ಯವಸ್ಥಿತವಾಗಿದ್ದು, ಆದಿಶಕ್ತಿಯೂ ಅನಾದ್ಯವಿದ್ಯೆಯೂ ಆದ ಉಮಾದೇವಿಯ ಆವರಣವಿಕ್ಷೇಪಶಕ್ತಿಗಳೆಂಬ ಶಕ್ತಿದ್ವಯಗಳಿಂದ ನಾನಾಬಗೆಯಾಗಿ ಕಾಣಿಸುವುದು. ಹೀಗಿರುತ್ತಿರಲು ವೇದಾಂತವಾಕ್ಯಗಳಿಂದಲೂ ಮತ್ತು ಗುರೂಪ

ಲೋಕದ್ವಾರಮಪಾವೃತಂ ಮುನಿಗಣಪ್ರಾಪ್ಯಂ ದುರಾಪಂ ಸದಾ
ದುಷ್ಟಾನಾಂ ತು ಹಿರಣ್ಮಪಾತ್ರಪಿಹಿತಂ ಸತ್ಯಸ್ಯ ತದ್ವೈ ಮುಖಂ ।
ತತ್ಪಶ್ಯೇಮ ಭವತ್ಕಟಾಕ್ಷಲಹರೀಪಾಥೇಯಪಂಥಾಃ ಸದಾ
ಸಮ್ರಾಡಾದಿಚತುರ್ಥಲೋಕಗತಯಃ ಶಂಭೋ ತ್ವದೀಯಾರ್ಚನಾತ್ ॥೭॥

ಏಷ ಬ್ರಹ್ಮೈಷ ಶಕ್ರಃ ಶ್ರುತಿರಿಯಮಧುನಾ ಸರ್ವಮೇತದ್ವಿಚಿತ್ರಂ
ಪ್ರಜ್ಞಾನೇತ್ರನಿತೀರಯತ್ಯಪಿ ವಿಭೋ ಬ್ರಹ್ಮೇದಮಾತ್ಮೇತ್ಯಪಿ ।
ಶಾರೀರಾದಿಷಡೂರ್ಮಿಕೃತ್ಯರಹಿತೋ ದೇವಸ್ತ್ವಮೀಶಾನದೃ
ಗ್ದೃಶ್ಯಂ ಭೂತಭವದ್ಭವಿಷ್ಯಮಖಿಲಂ ತ್ವಯ್ಯೇವ ವಿದ್ಯೋತತೇ ॥೮॥

---

ದೇಶದಿಂದಲೂ ನಿರ್ಮಲವಾದ ಜ್ಞಾನವು ಉದಯಿಸಲು ಆಗ ನೀನು ಸಚ್ಚಿದಾನಂದ ಸ್ವರೂಪನೂ, ವ್ಯಾಪಕನೂ, ಅದ್ವಿತೀಯನೂ ಎಂಬ ಅಂಶವು ನಮಗೆ ತಿಳಿದುಬರುವುದು. ॥೬॥

ಶಂಭೋ, ಅಪಾರವಾದ ಮಹಿಮೆಯುಳ್ಳ ನೀನು ಹಿರಣ್ಯಗರ್ಭನ ರೂಪದಿಂದ ವ್ಯವಸ್ಥಿತನಾಗಿ, ಸೂರ್ಯಮಂಡಲದ ಒಳಗೆ ಅಭಿವ್ಯಕ್ತನಾಗಿ, ಮಂಡಲಾಂತರ್ವರ್ತಿಯಾದ ಮಂಡಲಾಭಿಮಾನಿ ದೇವತೆಯಾಗಿರುವೆ. ಅಂತಹ ಮಂಡಲಾಂತರ್ವರ್ತಿಯಾದ ನಿನ್ನ ಮುಖವು ಸೂರ್ಯಮಂಡಲವೆಂಬ ಸುವರ್ಣಮಯವಾದ ಪಾತ್ರೆಯಿಂದ ಮುಚ್ಚಲ್ಪಟ್ಟಿರುವುದು. ಆದುದರಿಂದಲೇ ಅನಂತ ಕಲ್ಯಾಣಗುಣಗಳಿಂದ ಶೋಭಿಸುವ ನಿನ್ನ ಸಗುಣವಾದ ಆ ರೂಪವನ್ನು ಅಜ್ಞಾನಿಗಳು ಎಂದಿಗೂ ಸಾಕ್ಷಾತ್ಕರಿಸಲಾರರು. ಆದರೆ ನಾವು ನಿನ್ನ ಕಟಾಕ್ಷವೀಕ್ಷಣವೆಂಬ ಪಾಥೇಯವನ್ನು ಪಡೆದರೆ ಆಗ ಸೂರ್ಯಮಂಡಲದ ಆ ಮಾರ್ಗವನ್ನು ಅತಿಕ್ರಮಿಸಿ ಸತ್ಯರೂಪನಾದ ನಿನ್ನನ್ನು ಸಾಕ್ಷಾತ್ಕರಿಸಬಲ್ಲೆವು. ಓ ಶಿವನೇ, ಸಂರಾಜವೇ ಮೊದಲಾದ ನಾಲ್ಕು ಲೋಕಗಳ ಗಮನಗಳೂ ಸಹ ನಿನ್ನ ಆರಾಧನೆಯಿಂದಲೇ ಸಂಭವಿಸಬಹುದಲ್ಲದೇ ಅನ್ಯಥಾ ದೊರಕಲಾರವು. ॥೭॥

ದೇವ, ಶ್ರುತಿಯು, ನೀನೇ ಬ್ರಹ್ಮನೂ, ನೀನೇ ಇಂದ್ರನೂ, ನೀನೇ ಸಾಕ್ಷಿರೂಪದಿಂದ ಸಕಲ ಪ್ರಾಣಿಗಳ ಅಂತಃಕರಣದಲ್ಲಿ ಅಭಿವ್ಯಕ್ತನಾಗಿ ಜ್ಞಾನವೆಂಬ ನೇತ್ರದಿಂದ ಅವುಗಳ ಧರ್ಮಾಧರ್ಮಗಳನ್ನು ನಿರೀಕ್ಷಿಸುವವನು, ನೀನೇ ಬ್ರಹ್ಮನು ನೀನೇ ಜೀವನು, ಸಕಲ ಪ್ರಪಂಚಸ್ವರೂಪನೂ ನೀನೇ ಆಗಿರುವೆ ಎಂದು ಹೇಳುವುದು. ಪಾರಮಾರ್ಥಿಕದೃಷ್ಟಿಯಿಂದ ಯೋಚಿಸಿದರೆ, ಸ್ವಪ್ರಕಾಶಸ್ವರೂಪನಾದ ನೀನು

ತ್ವಾಮಾನಂದನಿಧಿಂ ತ್ವದೀಯಸಹಜಾನಂದೋತ್ಥಸಚ್ಛೀಕರಾಃ
ಬ್ರಹ್ಮಾದ್ಯಾ ಮುನಯಃಸ್ತಥಾಮಿತಗಣಾ ಜೀವಂತಿ ನೋ ಮಾಯಯಾ ।
ಆಕಾಶಾದಿಶರೀರಮದ್ವಯಘನಂ ಬುದ್ಧ್ಯಾದಿಬೋಧಪ್ರದಂ
ಬ್ರಹ್ಮಾಪ್ನೋತಿ ಪರಂ ತ್ವದೀಯಕೃಪಯಾ ಜಾನಾತಿ ತಂ ತ್ವಾ ಮನುಂ ॥೯॥

ಭೀಷ್ಯೈವೋದೇತಿ ಭಾನುಃ ಸಕಲಗ್ರಹಗಣೈಃ ಸಪ್ತವಿಪ್ರೈಶ್ಚ ಋಕ್ಷೈ
ರ್ವಹ್ನೀಂದ್ರಾವಪಿ ಸೂರಸೂನುರಥ ವೈ ಶಂಭೋ ತ್ವದೀಯಾಜ್ಞಯಾ ।
ನಿಶ್ವಾಸೋ ಹಿ ಭವತ್ಕೃತೋಽಪಿ ಭಗವನ್ಸಾಮ್ನಾಮೃಚಾಂಯಾಜುಷಾಂ
ಅಥರ್ವಾಣಗಣಾಸ್ತ್ವದಂಗಮಖಿಲಂ ತ್ವತ್ತೋ ವಿಭೋ ನಿಃಸೃತಂ ॥೧೦॥

---

ಶರೀರಸಂಬಂಧಿಯಾದ ಕ್ಷುತ್ಪಿಪಾಸ, ಶೋಕಮೋಹ, ಜರಾಮರಣಗಳೆಂಬ ಷಡೂರ್ಮಿಗಳಿಂದ ಬಿಡಲ್ಪಟ್ಟವನಾಗಿರುವೆಯಲ್ಲದೇ ವರ್ತಮಾನ, ಭೂತ, ಭವಿಷ್ಯಕಾಲಗಳಲ್ಲಿ ಉತ್ಪನ್ನವಾಗುವ ಸಕಲ ಜ್ಞಾನ ಜ್ಞೇಯಗಳಿಗೂ ನೀನೇ ಆಧಾರನಾಗಿರುವೆ. ॥೮॥

ಓ ಪರಬ್ರಹ್ಮನೇ, ಆನಂದದ ಖನಿಯಾಗಿರುವ ನಿನ್ನನ್ನು ಬ್ರಹ್ಮಾದಿದೇವತೆಗಳು, ಮುನಿಗಳು ಮತ್ತು ಪ್ರಮಥಗಳು ನಿರಂತರವೂ ಧ್ಯಾನಿಸುತ್ತಾ ನಿನ್ನ ಅನುಗ್ರಹದಿಂದುಂಟಾದ ಆನಂದಾಮೃತವನ್ನು ಪಾನಮಾಡುತ್ತಾ ಕಾಲವನ್ನು ಕಳೆಯುತ್ತಿರುವರು. ಜ್ಞಾನಿಯು ಔಪಾಧಿಕವಾದ ಆಕಾಶಾದಿ ಶರೀರಗಳಿಂದ ಕೂಡಿರುವ ಅದ್ವಿತೀಯನೂ, ಸದ್ರೂಪನೂ ಆಗಿ ಮತ್ತು ಜ್ಞಾನಿಗಳ ಬುದ್ಧಿಯೆಂಬ ಗುಹೆಯಲ್ಲಿ ವಾಸವಾಗಿದ್ದು ಅವರಿಗೆ ನಿರ್ಮಲವಾದ ಜ್ಞಾನವನ್ನು ದಯಪಾಲಿಸುವ ನಿನ್ನನ್ನು ಧ್ಯಾನಿಸಿ ನಿನ್ನ ಅನುಗ್ರಹದಿಂದ ತಮ್ಮ ನಿಜಸ್ವರೂಪವನ್ನು ಸಾಕ್ಷಾತ್ಕರಿಸುವನು.॥೯॥

ದೇವ, ಸೂರ್ಯನು ನಿನ್ನ ಹೆದರಿಕೆಯಿಂದಲೇ ಪ್ರತಿದಿನವೂ ತನ್ನ ಸಪ್ತಾಶ್ವಗಳಿಂದಲೂ, ರಾಹು ಕೇತುವೇ ಮುಂತಾದ ಗ್ರಹಗಳಿಂದಲೂ ಮತ್ತು ನಕ್ಷತ್ರಗಳಿಂದಲೂ ಸಹಿತನಾಗಿ ಉದಯಿಸುವನು. ಅಲ್ಲದೇ ಅಗ್ನಿ, ಇಂದ್ರ, ಯಮ ಮುಂತಾದ ದೇವತೆಗಳೂ ಸಹ ನಿನ್ನ ಆಜ್ಞೆಯಿಂದಲೇ ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗಿರುವರು. ನಾನಾ ಶಾಖೆಗಳಿಂದ ಭಿನ್ನಭಿನ್ನವಾಗಿರುವ ಋಗ್ವೇದ ಯಜುರ್ವೇದ, ಸಾಮವೇದ, ಅಥರ್ವಣವೇದಗಳೆಂಬ ನಾಲ್ಕು ವೇದಗಳೂ ನಿನ್ನ ಅವಯವಗಳಾಗಿಯೇ ಇದ್ದು, ನಿಶ್ವಾಸರೂಪದಿಂದ ಅಭಿವ್ಯಕ್ತವಾಗಿರುವುವು. ॥೧೦॥

ಯತೋ ವಾಚಾಗುಂಫಃ ಸಹ ಪರಿಕರೈರಸ್ತಮಯತೇ ।
ಮನೋ ವಾಕ್ಪ್ರಂಭೋ ತಜ್ಜಡಮಖಿಲಚಾಪಲ್ಯಜನಕಂ
ಅಸ್ಥೂಲೋಽಪ್ಯನಣುಸ್ತಥಾಪ್ಯವಿದುಷಾಮಂಗುಷ್ಠಮಾತ್ರೋತ್ತರಾ ।
ನೀವಾರೋದ್ಭವಶೂಕಸಂಮಿತವಿಭೋ ಪೀತಾಕೃತಿರ್ಭಾಸಿ ವೈ ॥೧೧॥

ತ್ವಮಾಕಾಶಕೋಶಸ್ಯ ಚೈತನ್ಯದಾತಾ
ಮಹಾಕಾಶಮೇತಜ್ಜಗದ್ವ್ಯಾಪ್ಯ ತಿಷ್ಠೇತ್ ।
ಕುತೋ ಜಾತಮಾಕಾಶಮಪ್ರಾಣಮಿತ್ಥಂ
ನ ಚಾನಂದಲೇಶಂ ಸಮಾಪ್ನೋತಿ ಕಶ್ಚಿತ್ ॥೧೨॥

---

ಪರಮೇಶ್ವರನೇ, ನೀನು ಕೇವಲ ಶ್ರುತಿವಚನಗಳಿಂದ ತಿಳಿಯಲ್ಪಡುವವನು. ಇಂತಹ ನಿನ್ನಿಂದಲೇ ಸಮಸ್ತ ಚಾಪಲ್ಯಹೇತುವಾದ ರೂಪಾತ್ಮಕ ಪ್ರಪಂಚವು ಪ್ರತಿಫಲಿಸುವುದು. ಹಾಗೆ ಅದಕ್ಕೆ ವಾಚಕವಾಗಿರುವ ನಾಮಾತ್ಮಕ ಪ್ರಪಂಚ, ಅದರ ಅಭಿವ್ಯಕ್ತಿಕಾರಣಗಳಾದ ವಾಗಾದೀಂದ್ರಿಯ ಮೊದಲಾದ ಸಲಕರಣೆಗಳು, ಇವುಗಳಿಂದ ಸಹಿತವಾಗಿ ಮನಸ್ಸೂ ನಿನ್ನಿಂದಲೇ ಲಯವಾಗುವುವು. ಅಂತಹ ನೀನು ಸ್ಥೂಲನೂ ಅಣುವೂ ಅಲ್ಲದಿದ್ದರೂ (1)ಅಜ್ಞಾನಿಗಳಿಗೆ ಅಂಗುಷ್ಠಮಾತ್ರ ಪರಿಮಾಣಕನಾಗಿಯೂ ನೀವಾರವೆಂಬ (ನವಣೆ) ಧಾನ್ಯದ ಒಳಗಿರುವ ಶೂಕವೆಂಬ ಬಿಳಿ ಎಸಳಿಗೆ ಹೋಲಿಸಲ್ಪಟ್ಟವನಾಗಿ ಪೀತವರ್ಣದವನಾಗಿಯೂ ಅಪರೋಕ್ಷನಾಗುವೆ. ॥೧೧॥

ನೀನು ಆಕಾಶಕ್ಕೆ ಚೈತನ್ಯಕೊಟ್ಟವನು. (ಆತ್ಮನ ಆಕಾಶಃ ಸಂಭೂತಃ ॥ ಎಂದು ಶ್ರುತಿಯು ಆಕಾಶವು ಪರಮಾತ್ಮನಿಂದ ಹುಟ್ಟಿತೆಂದು ಹೇಳುತ್ತದೆ.) ಚೈತನ್ಯಸ್ವರೂಪನಾದ ಆತ್ಮನಿಂದ ಹುಟ್ಟಿದ ಆಕಾಶದಲ್ಲಿಯೂ ಕಾರಣವಾದ ಚೈತನ್ಯ, ಅಂದರೆ, ಭಾನ (ಪ್ರಕಾಶವು) ಕಾಣುವುದು. ಸರ್ವವ್ಯಾಪಿಯಾದ ನಿನ್ನಿಂದ ಜನಿಸಿದ ಈ ಮಹಾಕಾಶವು ಜಗದ್ವ್ಯಾಪಕವಾಗಿದೆ. ಆಕಾಶಾದಿಗಳಿಗೆ ಜನಕನಾಗಿಯೂ ಪ್ರಾಣಾದಿ ಸಂಬಂಧವಿಲ್ಲದಿರುವನಾಗಿಯೂ ಇರುವ ಆಕಾಶಶಬ್ದದಿಂದ ಹೇಳಲ್ಪಡುವ ಪರ

---

(1) ವಿ. ಸೂ.—ಇಲ್ಲಿ ಅಜ್ಞಾನಿಗಳೆಂದರೆ ಉಪಾಸಕರು. ಅವರು ನಿರಾಕಾರನಾದ ಪರಮಾತ್ಮನಿಗೆ ಅಂಗುಷ್ಠ, ಪ್ರಾದೇಶ ಇತ್ಯಾದಿ ಪರಿಮಾಣಕೊಟ್ಟು, ಸಾಕಾರವಾಗಿ ಧ್ಯಾನಿಸುತ್ತಾರೆ. ಆ ಭಕ್ತರಿಗಾಗಿ ಈಶ್ವರನು ಆರೂಪದಿಂದ ಅಪರೋಕ್ಷನಾಗುವನು. ಎಂದು ಬ್ರಹ್ಮಸೂತ್ರ ಅ. ೧ ಪಾ. ೨. ಸೂ. ೨೭ ರಲ್ಲಿ ಹೇಳಿದೆ. " ಅಭಿವ್ಯಜ್ಯತೇ ಕಿಲ ಪ್ರಾದೇಶಮಾತ್ರ ಪರಿಮಿತಃ ಉಪಾಸಕಾನಾಂಕೃತೇ " ಎಂದು ಶ್ರೀಶಾಂಕರಭಾಷ್ಯದಲ್ಲಿಯೂ ಉಕ್ತವಾಗಿದೆ.

ತ್ವಮಾತ್ಮಾ ವಿಯದ್ವಾಯುವಹ್ನಿರ್ಜಲಂ ಕ್ಷ್ಮಾ
ತತೌಷಧ್ಯಜಾಲಂ ತದನ್ನಂತು ವರ್ಷಃ ।
ಪ್ರಮೋದೋಽಥ ಮೋದಸ್ತಥೈವಾಸ್ಯಪಕ್ಷೌ
ತ್ವಮೀಶಾನ ಆನಂದ ಆತ್ಮಾ ತುರೀಯಃ ॥೧೩॥

---

ಮಾತ್ಮನು ಯಾರಿಂದ ಹುಟ್ಟಿದನು? ಅಂದರೆ, ಅವನಿಗೆ ಬೇರೆ ಜನಕನಿಲ್ಲ. (ಆಕಾಶ ಶಬ್ದಕ್ಕೆ ಪರಮಾತ್ಮನೆಂದರ್ಥವಿದೆ. ಆಕಾಶಪರ್ಯಾಯವ್ಯೋಮಾದಿಶಬ್ದಗಳನ್ನೂ ಪರಮಾತ್ಮನಲ್ಲಿ ಶ್ರುತಿಯು ಉಪಯೋಗಿಸಿದೆ. ಸೂತ್ರ-ಭಾಷ್ಯ. ೧೧-೨೨). ಇಂತಹ ಆನಂದಸ್ವರೂಪನಾದ ಪರಮಾತ್ಮನನ್ನೇ ಅಪಲಾಪಮಾಡಿದರೆ, ಲೋಕದಲ್ಲಿ ಒಂದು ಪ್ರಾಣಿಗೂ, ಆನಂದಲೇಶಾನುಭವವೂ ಇಲ್ಲದಂತಾಗುವುದು. ಸಂಸಾರಿಗಳಿಗಿರುವ ಆನಂದಲೇಶವು ಅಪರಿಚ್ಛಿನ್ನ ಬ್ರಹ್ಮಾನಂದದ ಕಣಗಳು. "ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಮಾತ್ರಾ ಮುಪಜೀವಂತಿ" "ಕೋಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನಸ್ಯಾತ್" ಇತ್ಯಾದಿ ಶ್ರುತ್ಯರ್ಥವು ಇಲ್ಲಿ ವರ್ಣಿತವಾಗಿದೆ. ॥೧೨॥

ನೀನು ಸತ್ತಾಸ್ಫುರಣರೂಪಗಳಿಂದ ಎಲ್ಲ ವಸ್ತುವನ್ನು ವ್ಯಾಪಿಸಿರುವೆ. ಮತ್ತು ಆಕಾಶ, ಗಾಳಿ, ಬೆಂಕಿ, ನೀರು, ಭೂಮಿ ಎಂಬ ಪಂಚಭೂತಗಳು, ಭೂಮಿಯಲ್ಲಿ ಹುಟ್ಟುವ ಔಷಧಿ (ವ್ರೀಹ್ಯಾದಿ) ಸಮೂಹ, ಅದರಿಂದ ಜನಿಸುವ ಅನ್ನ, ಅನ್ನಕ್ಕೆ ಕಾರಣವಾದ ವೃಷ್ಟಿ ಇವೆಲ್ಲವೂ ನೀನೇ. ಅಂದರೆ ಆಕಾಶಾದಿ ವೃಷ್ಟ್ಯಂತವಾದ ಕಾರ್ಯಗಳಿಗೆ ಪರಮೇಶ್ವರನು ವಿವರ್ತೋಪಾದಾನಕಾರಣ ನಾದುದರಿಂದ ಕಾರ್ಯಕ್ಕೆ ಕಾರಣಸತ್ತೆಯೇ ಸತ್ತೆ, ಪೃಥಕ್‌ಸತ್ವವಿಲ್ಲದ್ದರಿಂದ ಪರಮಾತ್ಮನೇ ಆ ವಿಯದಾದಿಗಳು ಎಂದು ಹೇಳಿದೆ. ಹಗ್ಗದಲ್ಲಿ ಕಲ್ಪಿತವಾದ ಸರ್ಪ, ಜಲಧಾರೆ ಮೊದಲಾದವುಗಳನ್ನು ಹಗ್ಗವೇ ಎಂದಂತೆ, ಮೋದ, (ಅಂದರೆ ಪ್ರಿಯವಸ್ತು ಲಾಭದಿಂದಾಗುವ ಹರ್ಷ,) ಪ್ರಮೋದ, (ಅಂದರೆ ಪ್ರಿಯವಸ್ತುವಿನ ಉಪಭೋಗ ದಿಂದಾಗುವ ಅತ್ಯಾನಂದ) ಈ ಮೋದ ಪ್ರಮೋದಗಳು ಆನಂದಮಯಾತ್ಮನಿಗೆ ದಕ್ಷಿಣೋತ್ತರಪಕ್ಷಗಳು, ಇವುಗಳೂ ನೀನೇ. ಮತ್ತು ನೀನು ನಿಯಾಮಕನು. ಹಾಗೆ ಮೋದಪ್ರಮೋದಾದಿ ಸುಖವಿಶೇಷಗಳ ಸಾಮಾನ್ಯ ಸ್ವರೂಪವಾದ ಆನಂದಸ್ವರೂಪ ಬ್ರಹ್ಮವೂ ನೀನೇ. ಜಾಗ್ರದಾದಿ ಅವಸ್ಥಾತ್ರಯಗಳಿಗೆ ಅಭಿಮಾನಿಗಳಾದ ವಿಶ್ವ, ತೈಜಸ, ಪ್ರಾಜ್ಞ ಇವಕ್ಕಿಂತ ಮೇಲಾದ ತುರೀಯಾತ್ಮನೂ ನೀನೇ. ॥೧೩॥

ತ್ವಾಂ ಸರ್ವಾಂತರಗಂ ತಥಾಪಿ ವಿವಶಾ ಮೋಹಾದಿಯಂ ವೈ ಶ್ರುತಿ
ಶ್ವಾತ್ಮನ್ಯಾವಸಥಾದಿಕಲ್ಪನಮಿದಂ ದ್ವಾ ವಾ ಸುಪರ್ಣೇತ್ಯಪಿ ।
ಏಕಸ್ತತ್ಫಲಮತ್ತಿ ಸಾಕ್ಷಿಗತಿಕೋ ದ್ವಿತ್ವಂ ಕಥಂ ತ್ವದ್ಗತಂ
ಏಕಂ ತ್ವಾ ತಮಸಃ ಪರಂ ಸುಕೃತಿನೋ ಜಾನಂತಿ ಬೋಧೈರ್ಹೃದಾ ॥೧೮॥

ಅಸ್ತಂ ದ್ವಿತ್ವನಿವೃತ್ತಭಾವಭವುಕೇ ಸ್ವಾತ್ಮನ್ಯಖಂಡಾತ್ಮಕೇ
ನಾನಾಕಾರಮಬುದ್ಧಬುದ್ಧಿಜನಕಭ್ರಾಂತ್ಯಾ ಭಯಂ ಜಾಯತೇ ।
ಜ್ಞಾತೇ ರಜ್ಜುನಿ ಸರ್ಪಪೂತ್ಕೃತಿಭಯಂ ತ್ಯಕ್ತ್ವಾ ಜನೋ ಮೋದತೇ
ತದ್ವತ್ತ್ವಯ್ಯಖಿಲಾತ್ಮಕೇ ಶಿವತರೇ ಜ್ಞಾತೇ ಭಯಂ ನಾಸ್ತಿ ಹಿ ॥೧೯॥

---

ನೀನು ಸರ್ವತ್ರ ವ್ಯಾಪ್ತನಾಗಿರುವೆ. ಆದರೂ ಈ ಶ್ರುತಿಯು, ಮೋಹಪರವಶತೆಯಿಂದ ಆತ್ಮ (ಜೀವ)ನಾದ ನಿನ್ನಲ್ಲಿ "ತಸ್ಯ ತತ್ರ ಆವಸಥಾಸ್ತ್ರಯಃ" ಇತ್ಯಾದಿ ವಾಕ್ಯಗಳಿಂದ ಜಾಗ್ರದಾದಿ ಮೂರು ಆವಸಥಗಳನ್ನು ಕಲ್ಪಿಸಿದೆ. ಮತ್ತು "ದ್ವಾ ಸುಪರ್ಣಾ ಸಯುಜಾಸಖಾಯಾ" ಇತ್ಯಾದಿ ಶ್ರುತಿಯಲ್ಲಿ ಆತ್ಮನಿಗೆ ಜೀವೇಶ್ವರರೆಂದು ಭೇದವನ್ನು ಕಲ್ಪಿಸಿ ಅವರನ್ನು ಪಕ್ಷಿಗಳೆಂದು ರೂಪಿಸಿ, ಶರೀರವೆಂಬ ವೃಕ್ಷದಲ್ಲಿ ಅವು ಪಕ್ಷಿಗಳೆಂದೂ ಶರೀರವೆಂಬ ವೃಕ್ಷವನ್ನು ಆಶ್ರಯಿಸಿದ ಆ ಪಕ್ಷಿಗಳಲ್ಲಿ ಜೀವನೆಂಬವನು ಕರ್ಮಫಲೋಪಭೋಗಿಯು, ಮತ್ತೊಬ್ಬನಾದ ಈಶ್ವರನು ಜೀವನ ಕರ್ಮಗಳಿಗೆ ಸಾಕ್ಷಿಮಾತ್ರನು ಎಂದೂ ಹೇಳಿದೆ. ಆದರೆ ಅದ್ವಿತೀಯನಾದ ಆತ್ಮನಲ್ಲಿ ದ್ವಿತ್ವವು ಎಲ್ಲಿಂದ ಬರುವುದು? ಪರಮಾರ್ಥತಃ ನೀನು ಏಕನು. (ಅದ್ವಿತೀಯನು) ತಮಸ್ಸೆಂಬ ಮಾಯೆಯನ್ನು ಅತಿಕ್ರಮಿಸಿದವನು. ಪುಣ್ಯಶಾಲಿಗಳು ಸಂಸ್ಕೃತವಾದ ತಮ್ಮ ಅಂತಃಕರಣದಲ್ಲಿ ಹುಟ್ಟಿದ ಮಹಾವಾಕ್ಯಾರ್ಥಬೋಧಗಳಿಂದ ಮೇಲೆ ಹೇಳಿದಂತೆ ನಿನ್ನನ್ನು ಅದ್ವೈತನನ್ನಾಗಿಯೂ ಮಾಯಾಸ್ಪೃಷ್ಟನನ್ನಾಗಿಯೂ ಜ್ಞಾನಿಗಳು ಅರಿತುಕೊಳ್ಳುವರು. ॥೧೮॥

ಎರಡನೆಯ ವಸ್ತು ಸಂಬಂಧವಿಲ್ಲದೆ ಅದ್ವಿತೀಯಾಖಂಡಚಿದೇಕರಸನಾದ ಸ್ವಾತ್ಮನಲ್ಲಿ, ಅಜ್ಞಾನಿಗಳು ಅನಾದ್ಯಜ್ಞಾನದಿಂದ ಹುಟ್ಟಿದ ತಪ್ಪುತಿಳಿವಳಿಕೆಯಿಂದ ದ್ವೈತವನ್ನು ಕಲ್ಪಿಸಿಕೊಂಡದ್ದರಿಂದ ಅವರಿಗೆ ಅನೇಕವಿಧವಾಗಿ ಭಯಸಂಶಯಗಳು

---

ವಿ. ಸೂ.—"ತಸ್ಯ ತತ್ರ ಆವಸಥಾಸ್ತ್ರಯಃ" ಐತರೇಯ ಅ. ೧, ಖಂಡ ೩ ದ್ವಾ ಸುಪರ್ಣಾ ಸ ಯುಜಾ ಸ ಖಾಯಾ ಸಮಾನಂವೃಕ್ಷಂ ಪರಿಷಸ್ವಜಾತೇ। ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯನ್ನಭಿಚಾಕಶೀತಿ ಎಂಬ ಶ್ರುತ್ಯರ್ಥ ಇಲ್ಲಿ ಸಂಗ್ರಹಿಸಲ್ಪಟ್ಟಿದೆ.

ಆಧಾರಮಾನಂದಮಖಂಡಬೋಧಂ
ಯಸ್ಮಿನ್ ಲಯಂ ಯಾತಿ ಪುರತ್ರಯಂ ಪ್ರಭೋ ।
ತಸ್ಮಿನ್ಮನಃಪ್ರಾಣಗತೀಂದ್ರಿಯಾಣಿ
ಭೂತಾನಿ ಪಂಚಾಪಿ ಚ ತ್ವಾಂ ನ ವಿದ್ಯುಃ ॥೧೬॥

ಯತ್ರ ತ್ವಮಾತ್ಮಾ ಭಗವನ್ ಶ್ರುತಿಶ್ರುತಃ
ತತ್ಕೇನ ಕಿಂಪಶ್ಯ ಮಹೋ ಗುಣಾರ್ಥಾನ್ ।
ನದ್ಯೋ ಯಥಾ ಸರಮಾಣಾಃ ಸಮುದ್ರೇ
ತಥೇಂದ್ರಿಯಾರ್ಥಸ್ತ್ವಯಿ ನಾಶಮೇತಿ ॥೧೭॥

---

ಉತ್ಪನ್ನವಾಗುವುವು. ಸ್ವಲ್ಪ ಮಬ್ಬಿನಲ್ಲಿದ್ದ ಹಗ್ಗದಲ್ಲಿ ಅಜ್ಞಾನದಿಂದ ಸರ್ಪವನ್ನು ಕಲ್ಪಿಸಿಕೊಂಡು, ಆ ಕಲ್ಪಿತಸರ್ಪದ ಫೂತ್ಕಾರ ವಿಷಾದಿಗಳಿಗೆ ಭಯಪಡುವವನು, ಸರ್ಪಕಲ್ಪನೆಗೆ ಆಧಾರವಾದ ಹಗ್ಗವನ್ನು ಹಗ್ಗವೆಂದು ಅರಿತುಕೊಂಡ ಮೇಲೆ ಆ ತೋರಿಕೆಯ ಸರ್ಪದ ಫೂತ್ಕಾರಾದಿಭಯವನ್ನು ಬಿಟ್ಟು ಸಂತುಷ್ಟನಾಗುವನು. ನಿರತಿಶಯ ಆನಂದಸ್ವರೂಪನಾಗಿಯೂ, ಕಲ್ಪಿತಪ್ರಪಂಚಕ್ಕೆ ವಿವರ್ತೋಪಾದಾನನಾದುದರಿಂದ ಹಗ್ಗದಂತೆ ಕಲ್ಪಿತಗಳ ಬಾಧೆಗೆ ಅವಧಿಯಾಗಿ ಅದ್ವಿತೀಯನಾಗಿಯೂ ಇರುವ ನಿನ್ನನ್ನು ಅರಿತುಕೊಂಡಮೇಲೆ ಯಾವ ರೀತಿಯ ಭಯವೂ ಇರುವುದಿಲ್ಲ. (ಇಲ್ಲಿ ಅಹಂ ಬ್ರಹ್ಮಾಸ್ಮಿ ಎಂಬ ಬ್ರಹ್ಮಾತ್ಮೈಕ್ಯಸಾಕ್ಷಾತ್ಕಾರವಾದ ಮೇಲೆ, ಹೆದರಿಕೆಗೆ ಕಾರಣವಾದ ದ್ವಿತೀಯವಸ್ತುವಿನ ಅರಿವು ಇಲ್ಲದ್ದರಿಂದ ಭಯಕ್ಕೆ ಅವಕಾಶವಿಲ್ಲವೆಂದು ಹೇಳಿದೆ. "ದ್ವಿತೀಯಾದ್ವೈ ಭಯಂ ಭವತಿ" ಇತ್ಯಾದಿ ಶ್ರುತ್ಯರ್ಥಗಳನ್ನು ಇಲ್ಲಿ ಜ್ಞಾಪಿಸಲಾಗಿದೆ.) ॥೧೫॥

ಪ್ರಭುವೇ, ನಿನ್ನಲ್ಲಿ ಕಾರಣಶರೀರ (ಅಜ್ಞಾನ) ಲಿಂಗಶರೀರ, ಸ್ಥೂಲಶರೀರವೆಂಬ ಶರೀರತ್ರಯವು ಲಯಹೊಂದುವುದಲ್ಲದೇ ಮನಸ್ಸು, ಪ್ರಾಣ, ಕರ್ಮೇಂದ್ರಿಯಗಳು, ಪಂಚಭೂತಗಳು ಇವೂ ಲಯವಾಗುವುವು. ಅಂತಹ ಸಮಸ್ತ ಪ್ರಪಂಚ ಲಯಾಧಾರವಾಗಿ ನಿರತಿಶಯಾನಂದ ಮತ್ತು ಅಖಂಡಬೋಧ ಇವುಗಳ ಸ್ವರೂಪದಿಂದಿರುವ ನಿನ್ನನ್ನು ಯಾರೂ ಸುಲಭವಾಗಿ ಅರಿಯಲಾರರು. ॥೧೬॥

ಭಗವಂತನೇ, ವಿದ್ಯಾವಸ್ಥೆಯಲ್ಲಿ ವಿದ್ವಾಂಸನಿಗೆ ಎಲ್ಲ ನಾಮರೂಪಾತ್ಮಕ ಪ್ರಪಂಚವು ಆತ್ಮನಲ್ಲಿ ಪ್ರವಿಲಾಪನೆಮಾಡಿದಂತಾಗುವುದು. ಆಗ ಜಗತ್ತು ಆತ್ಮವ್ಯತಿರೇಕವಾಗಿರದೇ ಆತ್ಮಮಾತ್ರವಾಗಿ ಕಾಣುವುದು. ಆಗ ಯಾವ ಕಾರಣದಿಂದಲೂ ಯಾವ ಗುಣವಿಕಾರಾತ್ಮಕವಿಷಯವನ್ನೂ ಅವನು ನೋಡಲಾರನು. ಎಂದು

ಜ್ಞಾತೇ ತಥಾತ್ಮನ್ಯಖಿಲಂ ಸನಿಂದಚ್ಛ್ರುತಿ
ರ್ನವಾಭ್ಯಾಸಪರಾವದತ್ಪದಾರ್ಥಂ ।
ವಾಚಾ ಸಮಾರಂಭಣಮೇವ ಯುಕ್ತ್ಯಾ
ಏಕೇನ ಮೃತ್ಪಿಂಡಮಯೇನ ಸರ್ವಂ ॥೧೮॥

---

ಶ್ರುತಿಯಲ್ಲಿ ಹೇಳಿದೆ. ಅಂದರೆ ಕ್ರಿಯಾಕಾರಕ ಫಲಾತ್ಮಕ ಪ್ರಪಂಚವು ಆಗ ಬಾಧಿತ ವಾಗುವುದು ಎಂದು ಭಾವ. ಗಂಗಾದಿ ನದಿಗಳು ಹರಿದು ಸಮುದ್ರಕ್ಕೆ ಸೇರಿ ಅಲ್ಲಿ ಐಕ್ಯಹೊಂದುವಂತೆ ಇಂದ್ರಿಯಾರ್ಥವಾದ ಶಬ್ದಾದಿ ಪ್ರಪಂಚವು ನಿನ್ನಲ್ಲಿ ಲಯವಾಗು ವುದು. (ಇಲ್ಲಿ " ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್ " ಎಂಬ ಬೃಹದಾರಣ್ಯಕ ವಾಕ್ಯವನ್ನೂ, " ಯಥಾನದ್ಯಃ ಸ್ಯಂದಮಾನಾಃ ಸಮು ದ್ರೇಸ್ತಂ ಗಚ್ಛಂತಿ ನಾಮರೂಪೇ ವಿಹಾಯ " ಎಂಬ ಪ್ರಶ್ನವಾಕ್ಯವನ್ನೂ ಗಮನಿಸ ಬೇಕು.) ॥೧೭॥

ಒಬ್ಬ ಆತ್ಮನನ್ನು ತಿಳಿದದ್ದರಿಂದ ಎಲ್ಲವನ್ನೂ ತತ್ವತಃ ತಿಳಿದಂತಾಗುವುದು ಎಂದು " ಯೇನಾಶ್ರುತಂ ಶ್ರುತಂ ಭವತಿ " ಇತ್ಯಾದಿವಚನಗಳಲ್ಲಿ ಹೇಳಿರುವುದು. ಪ್ರತಿಜ್ಞೆಯನ್ನು ಉಪಪಾದಿಸುವುದಕ್ಕಾಗಿ ಶ್ರುತಿಯು ಒಂದೇ ಅದ್ವೈತಾತ್ಮಪದಾರ್ಥವು ಸತ್ಯ, ಪ್ರಪಂಚವು ಆ ವಸ್ತುವಿನಲ್ಲಿ ಕಲ್ಪಿತವಾದ್ದರಿಂದ ಅದಕ್ಕೆ ಪೃಥಕ್‌ಸತ್ವವಿಲ್ಲ, ಜೀವನೂ ಆ ಪರಮಾತ್ಮನಿಗಿಂತ ಬೇರೆಯಲ್ಲ, " ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ವಮಸಿ ಶ್ವೇತಕೇತೋ " ಎಂದು ಒಂಬತ್ತುಸಲ ಹೇಳಿದೆ. " ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ " ಎಂಬ ವಾಕ್ಯದಲ್ಲೂ ವಿಕಾರವು (ಕಾರ್ಯಪ್ರಪಂಚ) ಕೇವಲ ವಾಙ್ಮಾತ್ರವು. ಅದು ಸತ್ಯವಲ್ಲ ಎಂದೂ, ಮಿಥ್ಯಾತ್ವರೂಪಯುಕ್ತಿಯಿಂದ ಕಾರ್ಯವನ್ನು ಅರಿತುಕೊಳ್ಳುವುದಕ್ಕೆ ಬೇರೆ ಪ್ರಯತ್ನ ಮಾಡಬೇಕಿಲ್ಲ, ಅದು ಮಿಥ್ಯೆಯಾದ್ದರಿಂದ ಆದಕ್ಕೆ ಕಾರಣ ಸತ್ವವೇ ಸತ್ವ, ಆದ್ದರಿಂದ ಸರ್ವಕಾರಣನಾದ ಆತ್ಮನನ್ನರಿತರೆ ಎಲ್ಲವನ್ನೂ ಅರಿತಂತಾಗು ವುದು, ಎಂದೂ ಹಿಂದಿನ ಪ್ರತಿಜ್ಞೆಯನ್ನು ಸಮರ್ಥಿಸಿರುವರು. ಇದಕ್ಕೆ " ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ " ಎಂದು ಉದಾಹರಣೆಯನ್ನೂ ಕೊಟ್ಟು ಸಮರ್ಥಿಸಲಾಗಿದೆ. ಅಂದರೆ ಮಡಕೆ, ಕುಡಿಕೆ, ಗಡಿಗೆ ಮೊದಲಾದ ಮಣ್ಣಿನ ಪಾತ್ರೆಗಳಿಗೆ ಮಣ್ಣೇ ತತ್ವ, ಆದ್ದರಿಂದ ಆ ಕಾರ್ಯ ಗಳಿಗೆ ಕಾರಣವಾದ ಮಣ್ಣಿನ ಹೆಂಟೆಯನ್ನು ತಿಳಿದದ್ದರಿಂದ ಆ ಕಾರ್ಯಗಳೆಲ್ಲವೂ ತತ್ವತಃ ತಿಳಿದಂತಾಗುವಂತೆ ಪ್ರಪಂಚಕಾರಣನಾದ ಆತ್ಮನನ್ನರಿತರೆ ತತ್ಕಾರ್ಯವೆಲ್ಲ ತತ್ವತಃ ಅರಿತಂತಾಗುವುದು. ॥೧೮॥

ಭೂಮಾತ್ವೇ ಚ ಸುಖಂ ತ್ವದೀಯಕೃಪಯಾ ನಾಲ್ಪೇ ಸುಖಂ ಸಂಸೃತೌ
ನಾನ್ಯದ್ಯತ್ರ ವಿಪಶ್ಯತಿ ಪ್ರಿಯತರಂ ನಾನ್ಯದ್ವಿಜಾನಾತ್ಯಪಿ ।
ಭೂಮ್ಯಂತರ್ಗತಮೇವ ಹಾಟಕನಿಧಿಂ ನೈವಾಪ್ನುವಂತೇ ಜನಾ
ಊರ್ಧ್ವಂ ಸಂಚರತೋಽಪ್ಯಹೋ ಸ್ಮರಹರಹಸ್ತ್ವಾಮೀಶ ಮೋಹಾತ್ಸದಾ ॥೧೯॥

ಆದಿತ್ಯಸೋಮದಹನೇಷು ತಥೈವ ವಾಚಿ
ಅನ್ಯೋನ್ಯನಾಶಮುಪಲಭ್ಯ ಜಯಾದಿಕೇಷು ।

---

ಪರಮೇಶ್ವರ, ನಿನ್ನ ಪ್ರಸಾದದಿಂದ ಮಾನವನು ಪೂರ್ಣ ಸುಖಸ್ವರೂಪವಾಗಿಯೂ, ನಿರ್ವಿಶೇಷಾತ್ಮಕವಾಗಿಯೂ, ಇರುವ ಭೂಮಬ್ರಹ್ಮನಲ್ಲಿ ಪ್ರತಿಷ್ಠಿತನಾಗುವನು. ಯಾವ ಭೂಮಸ್ವರೂಪದಲ್ಲಿ ಇನ್ನೊಂದು ಪ್ರಿಯವಾದ ವಸ್ತುವನ್ನು ನೋಡುವುದು, ಹಾಗೆ ಅರಿತು ನಿಶ್ಚಯಿಸುವುದು, ಈ ತರಹವಾದ ಸರ್ವವ್ಯವಹಾರವೂ ಇರುವುದಿಲ್ಲ. ಅದು ವ್ಯವಹಾರಾತೀತವಾದದ್ದು. ಆ ಭೂಬ್ರಹ್ಮವೇ ಸುಖರೂಪವು. ಸಾಂಸಾರಿಕವಾದ ಈ ಅಲ್ಪ (ಪರಿಚ್ಛಿನ್ನ) ವಸ್ತುವಿನಲ್ಲಿ ಸುಖವಿಲ್ಲ. ಅಲ್ಪವು ಅಧಿಕ ತೃಷ್ಣೆಯನ್ನು ಹುಟ್ಟಿಸುವುದರ ಮೂಲಕ ದುಃಖದಾಯಕವಾಗಿದೆ. ಹೀಗೆ ನಿರತಿಶಯಾನಂದ ಸ್ವರೂಪನಾದ ಪರಮಾತ್ಮನನ್ನು ಪ್ರತಿದಿನವೂ ಸುಷುಪ್ತಿಕಾಲದಲ್ಲಿ ಪಡೆದರೂ ಜನರು ಅಜ್ಞಾನಾವರಣದಿಂದ ಆ ಸುಖವನ್ನು ಹೊಂದಲಾರರಾಗಿ ಮೋಸ ಹೊಂದುತ್ತಾರೆ ಎಂಬುದು ಬಲು ಆಶ್ಚರ್ಯವನ್ನೂ ವ್ಯಸನವನ್ನೂ ಹುಟ್ಟಿಸುತ್ತದೆ. ಇದಕ್ಕೆ ಒಂದು ಉದಾಹರಣೆ—ಹಿರಣ್ಯ ನಿಧಿಗರ್ಭಿತವಾದ ನೆಲದ ಮೇಲೆ ಪ್ರತಿನಿತ್ಯವೂ ಓಡಾಡುತ್ತಿದ್ದರೂ, ಭೂಶಾಸ್ತ್ರ ಪರಿಜ್ಞಾನವಿಲ್ಲದ್ದರಿಂದ ಜನರು ತಮಗೆ ಅತಿ ಸನ್ನಿಹಿತವಾದ ನಿಧಿಯನ್ನು ಹೊಂದದಿರುವಂತೇ, ಜನರು ಅಜ್ಞಾನ ವ್ಯವಧಾನದಿಂದ ಆತ್ಮಸುಖವನ್ನರಿಯದವರಾಗಿದ್ದಾರೆ. (ಇಲ್ಲಿ 'ಯೋವೈ ಭೂಮಾ ತತ್ಸುಖಂ, ನಾಲ್ಪೇಸುಖಮಸ್ತಿ, ಯತ್ರ ನಾನ್ಯತ್ಪಶ್ಯತಿ ನಾನ್ಯದ್ವಿಜಾನಾತಿ,' 'ತಥಾಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರಂತೋ ನವಿಂದೇಯುಃ ಏವಮೇವೇಮಾ, ಸರ್ವಾಃ ಪ್ರಜಾಃ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನವಿಂದಂತ್ಯಾನೃತೇನಹಿಪ್ರತ್ಯೂಢಾಃ ಇತ್ಯಾದಿ ಛಾಂದೋಗ್ಯಶ್ರುತ್ಯರ್ಥವು ಸಂಗ್ರಹಿಸಲ್ಪಟ್ಟಿದೆ.) ॥೧೯॥

ಈಶ್ವರನೇ, ಲೋಕದಲ್ಲಿ ಈ ಕಾರ್ಯಕಾರಣ ಸಂಘಾತಾತ್ಮಕ ಪುರುಷನ ವ್ಯಾಪಾರವು ಸೂರ್ಯನೇ ಮೊದಲಾದ ಬಾಹ್ಯಜಡ ಜ್ಯೋತಿರ್ನಿಮಿತ್ತಕವಾಗಿ ನಡೆಯು

ತ್ವಂ ಜ್ಯೋತಿಷಾಂ ಜ್ಯೋತಿರನುತ್ತಮೋಸಿ
ಆತ್ಮಾಸಿ ವಿಶ್ವಮಖಿಲಂ ತ್ವಯಿ ಸನ್ನಿಧತ್ತೇ ॥೨೦॥

ಅಂತರ್ಯಾಮಿತಯಾ ತ್ವಮೇವ ಭಗವನ್ ಜಾಡ್ಯಂ ಜಗತ್ಸರ್ವಗಂ
ಚಾರಿತ್ವಂ ಪೃಥಿವೀಂದ್ರಿಯಾಣಿ ಚ ಮನಃ ಸರ್ವಂ ನಿಯಮ್ಯಾಖಿಲಂ ।
ತ್ವಾಮೇತೇ ನ ವಿದಂತಿ ಬಾಹ್ಯಮತಯೋ ಸೂಕ್ಷ್ಮಾತ್ಮವಿದೃಶ್ಯಂ ಶಿವಂ
ತಂ ತ್ವಾಮಂತಿಕಸಂಸ್ಥಿತಂ ಮುಹುರಹೋ ದೇವಾಪಿ ಮುಹ್ಯಂತಿ ವೈ ॥೨೧॥

---

ತ್ತಿದೆ ಎಂಬ ಭ್ರಾಂತಿ ಇದೆ. ಆದರೆ, ಆದಿತ್ಯನಿಗೆ ಅಸ್ತಮಯವಿದೆ, ಆಗ ಸಂಘಾತ ವ್ಯಾಪಾರವು ಚಂದ್ರನಿಂದ ಆಗುವುದೆನ್ನಬೇಕು. ಅವನಿಗೂ, ಅಸ್ತವಿದೆ. ಆಗ ಅಗ್ನಿಯಿಂದ ವ್ಯವಹಾರ ನಡೆಯುವುದೆನ್ನಬೇಕು. ಅಗ್ನಿಯು ಇಲ್ಲದ ಕಾಲದಲ್ಲಿ ವಾಗಿಂದ್ರಿಯದಿಂದ ಪುರುಷನ ವ್ಯಾಪಾರ ನಡೆಯುವುದು. ಹೇಗೆಂದರೆ, ಕತ್ತಲಲ್ಲಿ ಪ್ರಯಾಣ ಮಾಡುವವನು ಇತರರ ಶಬ್ದವನ್ನು ಕೇಳಿ ವ್ಯವಹಾರ ನಡೆಸುವನು. ನಾಯಿ ಮೊದಲಾದ ಪ್ರಾಣಿಗಳ ಕೂಗುಕೇಳಿ ಸಮೀಪದಲ್ಲಿ ಗ್ರಾಮವಿದೆ ಎಂದು ಅರಿತುಕೊಳ್ಳುತ್ತಾನೆ. ಆದರೆ, ಈ ವಾಕ್ಕೂ ಸ್ವಪ್ನಕಾಲದಲ್ಲಿ ಅಡಗುವುದು, ಆಗಲೂ ಸ್ವಾಪ್ನಿಕ ದೇಹದಿಂದ ಪುರುಷ ವ್ಯವಹಾರವು ನಡೆಯುತ್ತದೆ. ಆಗಿನ ವ್ಯವಹಾರಕ್ಕೆ, ಸೂರ್ಯ, ಚಂದ್ರ, ಅಗ್ನಿ, ವಾಕ್ಕು, ಇಷ್ಟರ ಪ್ರಕಾಶವೂ ನೆರವಾಗುವುದಿಲ್ಲ, ಏಕೆಂದರೆ, ಅವುಗಳು ಸ್ವಪ್ನಕಾಲದಲ್ಲಿರುವುದಿಲ್ಲ. ಆಗ ನಡೆಯುವ ವ್ಯವಹಾರವು ಆತ್ಮಜ್ಯೋತಿ ಸ್ಸತ್ತಾನಿಮಿತ್ತಿಕವೆಂದೇ ಹೇಳಬೇಕು. ಇದರಿಂದ ಪರಮಾತ್ಮ ಸ್ವರೂಪನಾದ ನೀನು ಆದಿತ್ಯಾದಿ ಜ್ಯೋತಿಸ್ಸುಗಳಿಗೂ, ಜ್ಯೋತಿಸ್ಸೆನಿಸಿರುವೆ. ನಿನಗೂ ಉತ್ತಮ ವಾದ ಜ್ಯೋತಿಯು ಮತ್ತೊಂದು ಇರುವುದಿಲ್ಲ. ಭಾನಸ್ವರೂಪದಿಂದ ನೀನು ಜಡವಸ್ತುವಿನಲ್ಲಿ ಅನುಗತನಾಗಿದ್ದೀಯೆ. ಸಕಲ ಪ್ರಪಂಚವೂ ಉಪಾದಾನ ಕಾರಣ ನಾದ ನಿನ್ನಲ್ಲಿ ಆಶ್ರಿತವಾಗಿದೆ. ॥೨೦॥

ಓ ಭಗವಂತನೇ, ಅಂತರ್ಯಾಮಿಸ್ವರೂಪದಿಂದ ಜಡಾತ್ಮಕವಾದ ಈ ಸಮಸ್ತ ಪ್ರಪಂಚದಲ್ಲಿ ಒಳಹೊಕ್ಕು ಸಂಚರಿಸುತ್ತಾ, ಪೃಥಿವ್ಯಾದಿ ಭೂತಗಳು ಇಂದ್ರಿಯ,

---

(ಇಲ್ಲಿ ಬೃಹದಾರಣ್ಯಕೋಪನಿಷತ್ತಿನ ನಾಲ್ಕನೇ ಅಧ್ಯಾಯದಲ್ಲಿರುವ ಆತ್ಮಸ್ವಯಂಜ್ಯೋತಿಷ್ಟ್ವಸಾಧನ ಶ್ರುತ್ಯರ್ಥವು ಸಂಗ್ರಹವಾಗಿ ತಿಳಿಸಲ್ಪಟ್ಟಿದೆ.)

ತ್ವಾಂ ದೃಷ್ಟ್ವಾ ಹೃದಯಾಬ್ಜಗಂ ಮುನಿಗಣಾಃ ಶೋಕಂ ತರಂತೇಽಖಿಲಂ
ತೇಷಾಂ ತ್ವಂ ತಮಸೋ ಗಣಂ ಹೃದಿಗತಂ ಭಿದ್ಯಂತಿ ಚ ಗ್ರಂಥಯಃ ।
ಸರ್ವಾಕ್ಷಿಶ್ರುತಿಹಸ್ತಪಾದವದನಃ ಸರ್ವೇಷು ಭೂತಾಶ್ರಯಃ
ಸರ್ವಂ ವಿಶ್ವಮಿದಂ ವಿಚಿತ್ರಜನಕಂ ಚಾವೃತ್ಯ ಸಂತಿಷ್ಠಸೇ ॥೨೨॥

---

ಮನಸ್ಸು, ಇವೆಲ್ಲವನ್ನೂ ನಿಯಮಿಸುತ್ತಿರುವೆ. ಈ ರೀತಿ ಸರ್ವಾಂತರ್ಯಾಮಿಯಾಗಿರುವುದರಿಂದಲೇ ಸರ್ವರಿಗೂ ಅತಿಸನ್ನಿಹಿತನಾಗಿದ್ದರೂ ಸೂಕ್ಷ್ಮ ಮತ್ತು ಅದೃಶ್ಯನಾಗಿರುವ ನಿನ್ನನ್ನು ಬಾಹ್ಯಶಬ್ದಾದಿ ವಿಷಯಗಳಲ್ಲಿಯೇ ಬುದ್ಧಿ ಇಟ್ಟಿರುವ ಅಜ್ಞಾನಿಗಳು ಅರಿಯದವರಾಗಿದ್ದಾರೆ. ಮಾನವರ ವಿಷಯ ಹಾಗಿರಲಿ, ಸ್ವಾತ್ಮಸ್ವರೂಪನೇ ಆಗಿರುವುದರಿಂದ ಅತಿ ಸನ್ನಿಹಿತನಾಗಿರುವ ನಿನ್ನಲ್ಲಿ ದೇವತೆಗಳೂ ಮೋಸ ಹೊಂದಿರುತ್ತಾರೆ. ಅಂದರೆ ಅವರೂ ಸಹ ಪರಮೇಶ್ವರನ ತತ್ವವನ್ನು ಅರಿಯದವರಾಗಿದ್ದಾರೆ. ॥೨೧॥

ಮುನಿಗಳು ತಮ್ಮ ಹೃದಯಕಮಲದಲ್ಲಿ ಸನ್ನಿಹಿತನಾಗಿರುವ ನಿನ್ನ ಅಪರೋಕ್ಷವನ್ನು ಪಡೆದು ಸಮಸ್ತ ಶೋಕ ಮುಕ್ತರಾಗುತ್ತಾರೆ. ಅಂತಹ ಭಕ್ತರಾದ ಮುನಿವೃಂದಗಳ ಮನಸ್ಸಿನಲ್ಲಿರುವ ಅಜ್ಞಾನಾಂಧಕಾರವನ್ನು ನೀನು ನಾಶಮಾಡುವೆ. ನಿನ್ನನ್ನು ಸಾಕ್ಷಾತ್ಕರಿಸಿಕೊಂಡಿದ್ದರಿಂದ ಅವರ ಹೃದಯಗ್ರಂಥಿಯು (ಅಹಂಕಾರ ಆತ್ಮರಿಗಿರುವ ಅಧ್ಯಾಸ. ಇದು ಗ್ರಂಥಿಯಂತೆ ದುರ್ಭೇದ್ಯವಾದ್ದರಿಂದ ಗ್ರಂಥಿಶಬ್ದವನ್ನು ಉಪಯೋಗಿಸಿದ್ದಾರೆ. "ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ" ಈ ಮುಂಡಕೋಪನಿಷದ್ಭಾಷ್ಯ ನೋಡಿ) ಮೂಲವಿಲ್ಲದ್ದಾಗುವುದು. ಮತ್ತು ನೀನು ಸರ್ವಭೂತಾಶ್ರಯನಾಗಿದ್ದುಕೊಂಡು ಸರ್ವಭೂತಗಳ (ಪ್ರಾಣಿ) ಎಲ್ಲ ಚಕ್ಷುಸ್ಸು, ಶ್ರೋತ್ರ, ಹಸ್ತ, ಪಾದ, ಮುಖ ಇವುಗಳುಳ್ಳವನಾಗಿದ್ದೀಯೆ. (ಸರ್ವಭೂತಗಳ ಚಕ್ಷುರಾದೀಂದ್ರಿಯಗಳಿಗೆ ಈಶ್ವರನೇ ಜೀವಸ್ವರೂಪದಿಂದ ಪ್ರೇರಕನಾದ್ದರಿಂದ ಪ್ರಾಣಿಗಳ ಇಂದ್ರಿಯಗಳನ್ನು ಈಶ್ವರನಿಗೆ ಸಂಬಂಧಿಸಿದ್ದೆಂದು ಇಲ್ಲಿ ಹೇಳಿದೆ.) ಮತ್ತು ನೀನು ಆಶ್ಚರ್ಯಜನಕವಾದ ಈ ವಿಚಿತ್ರಪ್ರಪಂಚವನ್ನು (ಒಂದು ಪಾದದಿಂದ) ಆವರಿಸಿರುವೆ. ("ವಿಷ್ಟಭ್ಯಾಹಮಿದಂಕೃತ್ಯ ಮೇಕಾಂಶೇನಸ್ಥಿತೋಜಗತ್" ಗೀತೆ. "ಪಾದೋಽಸ್ಯವಿಶ್ವಾಭೂತಾನಿ" ಎಂದು ಶ್ರುತಿ ಇವು ಈ ವಿಷಯದಲ್ಲಿ ಉದಾಹರಿಸತಕ್ಕವುಗಳು.) ॥೨೨॥

ತ್ವಂ ಚಕ್ಷುಷಾಂ ಚಕ್ಷುರಸಿ ಶ್ರುತೀಡ್ಯಃ
ಶ್ರುತೇ ಶ್ರುತಿಃ ಪ್ರಾಣಿಗಳಸ್ಯ ಪ್ರಾಣಃ ।
ತ್ವಂ ವೈ ಮನಸ್ಯಾಪಿ ಮನೋ ಮಹೇಶ
ಸಂಗಿಷ್ವಸಂಗಸ್ತ್ವಶರೀರಕೋಽಸಿ ॥೨೩॥

[1] ಅಪಾಣಿಪಾದೋ ಮನಸೋ ದವೀಯಃ
ಪಶ್ಯಸ್ಯಚಕ್ಷುಃ ಸ ಶ್ರುಣೋಷ್ಯಕರ್ಣಃ ।
ತ್ವಂ ವೇತ್ಸಿ ಸರ್ವಂ ನ ವಿದಂತಿ ತ್ವಾಂ
ಹಿತೇ ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ ॥೨೪॥

---

ಓ ಮಹೇಶ್ವರ, ಚಕ್ಷುಸ್ಸುಗಳಿಗೆ ಚಕ್ಷುಸ್ಸು ಅಂದರೆ ದರ್ಶನಸಾಮರ್ಥ್ಯವು ನಿನ್ನಿಂದಲೇ ಬಂದದ್ದರಿಂದ ನೀನು ಚಕ್ಷುಸ್ಸಿಗೂ ಚಕ್ಷುಸ್ಸಾಗಿರುವೆ.( ಕಣ್ಣುಗಳಿಗೆ ದರ್ಶನಸಾಮರ್ಥ್ಯಪ್ರದನೇ ನೀನು ಎಂದು ಭಾವವು.) ಇದೇ ರೀತಿ ಮುಂದೆಯೂ ಶ್ರುತಿಗಳಲ್ಲಿ ಹೊಗಳಲ್ಪಡುವ ನೀನು ಶ್ರೋತ್ರೇಂದ್ರಿಯನು. ಶ್ರೋತ್ರಕ್ಕೆ ಶ್ರವಣಸಾಮರ್ಥ್ಯಪ್ರದನು. ಪ್ರಾಣಿಸಮೂಹಕ್ಕೆ ಪ್ರಾಣನು. ಮನಸ್ಸಿಗೂ ಮನಸ್ಸು. ಆದರೆ ಸಂಗಯೋಗ್ಯಗಳಾದ ಕಾರ್ಯಪ್ರಪಂಚಗಳಲ್ಲಿ ಅಸಂಗನಾಗಿರುವೆ. ಆದ್ದರಿಂದಲೇ ಅಶರೀರನಾಗಿರುವೆ. ("ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯತ್ ವಾಚೋಽಹವಾಚಂ ಸ ಉ ಪ್ರಾಣಸ್ಸಪ್ರಾಣಃ । ಚಕ್ಷುಷಶ್ಚಕ್ಷುಃ" ಇತ್ಯಾದಿ ಕೇನೋಪನಿಷದ್ಭಾಷ್ಯದ ಅರ್ಥವು ಇಲ್ಲಿ ಉಕ್ತವಾಗಿದೆ.) ॥೨೩॥

ಪರಮೇಶ್ವರ, ನೀನು ಕೈಕಾಲಿಲ್ಲದವನು. ಆದರೂ ಮನಸ್ಸಿಗಿಂತಲೂ ಶೀಘ್ರವಾಗಿ ಓಡುವವನು. ಅಥವಾ ಮನಸ್ಸಿಗೂ ದೂರವಾಗಿರುವವನು. ಅಂದರೆ ಮನಸ್ಸಿಗೆ ಅಗೋಚರನು. ಕಣ್ಣಿಲ್ಲದೆ ನೋಡುವೆ, ಕಿವಿ ಇಲ್ಲದೆ ಶ್ರವಣಮಾಡುವೆ. ನೀನು ಎಲ್ಲವನ್ನೂ ಅರಿತಿರುವೆ. ಆದರೆ ಮೂಢರು ಮಾತ್ರ ನಿನ್ನನ್ನರಿಯರು. ಜ್ಞಾನಿಗಳು ನಿನ್ನನ್ನು ಪುರುಷೋತ್ತಮನೆಂದೂ, ಅನಾದಿ ಎಂದೂ ಹೇಳುವರು. ॥೨೪॥

---

1 ವಿ. ಸೂ.—ಇಲ್ಲಿ ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ । ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಂ" ಎಂಬ ಶ್ವೇತಾಶ್ವತರೋಪನಿಷದ್ವಾಕ್ಯಾರ್ಥವು ಹೇಳಲ್ಪಟ್ಟಿದೆ.

ಮನಃಪರೋಽಸಿ ಪ್ರಕೃತೇಃ ಪರೋಽಸಿ
ಬುದ್ಧೇಃ ಪರೋಽಸಿ ಮಹತಃ ಪರೋಽಸಿ ।
ಅವ್ಯಕ್ತವ್ಯಕ್ತಾತ್ತತ್ಪುರುಷಾತ್ಪರೋಽಸಿ
ಕಾಷ್ಠಾಗತಿರ್ಬ್ರಹ್ಮಪುಚ್ಛಂ ತ್ವಮೀಶ ॥೨೫॥

ಅಶರೀರಸ್ತ್ವಮಸಿ ಪ್ರಸಿದ್ಧಕರ್ಮಾ
ಶರೀರಿಣಾಂ ನಾಶಗತಿಕ್ರಿಯಾಸು ।
ತಸ್ಮಾದವಸ್ಥಾರಹಿತಂ ಚ ಶಂಭುಂ
ತ್ವಾಂ ಯೋ ವಿಜಾನಾತಿ ನ ಶೋಚತೇ ಪುನಃ ॥೨೬॥

---

ಓ ಈಶ್ವರನೇ, ನೀನು ಮನಸ್ಸಿಗೂಪರನು. ಪ್ರಕೃತಿಗೂಪರನು. ಇಲ್ಲಿ ಪರವೆಂದರೆ, ಸೂಕ್ಷ್ಮತ್ವ, ವ್ಯಾಪಕತ್ವ, ಅಂತರತ್ವಾದಿಗಳಿಂದ ಉತ್ಕೃಷ್ಟನೆಂದು ತಾತ್ಪರ್ಯ, ಬುದ್ಧಿಗೂ ಮಹತ್ವಕ್ಕೂ ಪರನಾದವನು. (ಹಿಂದೆ ಬುದ್ಧಿ ಶಬ್ದದಿಂದ ವ್ಯಷ್ಟಿಬುದ್ಧಿಯನ್ನು ಹೇಳಿದರು. ಇಲ್ಲಿ ಮಹಚ್ಛಬ್ದದಿಂದ ಹಿರಣ್ಯಗರ್ಭನ ಸಮಷ್ಟಿಬುದ್ಧಿಯೆಂದು ಅರ್ಥಮಾಡಬೇಕು.) ವ್ಯಕ್ತಾವ್ಯಕ್ತಗಳೆಂದರೆ ಕ್ಷರಾಕ್ಷರಪುರುಷರು. ಆ ಕ್ಷರಾಕ್ಷರಪುರುಷರಿಂದಲೂ ನೀನು ಪರನು. ಈ ರೀತಿ ನೀನು ಪರತ್ವಕ್ಕೆ ಅವಸಾನಭೂಮಿಯಾಗಿರುವೆ. ನಿನಗೂ ಪರವಾದ ವಸ್ತ್ವಂತರವಿಲ್ಲದೆ, ಪ್ರಾಣಿಮಾತ್ರಕ್ಕೆ ಪ್ರಾಪ್ಯನಾಗಿರುವೆ. ಅನ್ನಮಯಾದ್ಯಾನಂದಮಯಾಂತಕೋಶಗಳಿಗೆ ಆಧಾರವಾದ ಪ್ರತಿಷ್ಠಾರೂಪಬ್ರಹ್ಮನೇ ನೀನಾಗಿರುವೆ. ॥೨೫॥

ಪರಮೇಶ್ವರ, ನೀನು ಧರ್ಮದ್ವೇಷಿಗಳಾದ ತ್ರಿಪುರರೇ ಮೊದಲಾದ ಶರೀರಿಗಳನ್ನು ನಾಶಮಾಡುವುದೆಂಬ ಕೆಲಸಗಳಲ್ಲಿ ತೊಡಗಿದೆ. ಅಂದರೆ ಅಂತಹ ದುಷ್ಟನಿಗ್ರಹ ಕರ್ಮಗಳಿಂದ ನೀನು ಲೋಕಪ್ರಸಿದ್ಧ ಕರ್ಮವುಳ್ಳವನಾಗಿದ್ದರೂ, ನಿಜವಾಗಿ ನೀನು ಅಶರೀರನಾಗಿರುವೆ. (ಶರೀರವಿಲ್ಲದೇ ಇಂತಹ ಮಹತ್ಕರ್ಮಮಾಡುವುದು ಆಶ್ಚರ್ಯ.) ಹೀಗೆ ಸಂಬಂಧವಿಲ್ಲದ್ದರಿಂದ ಈಶ್ವರನಿಗೆ ಶರೀರಾಶ್ರಿತವಾದ ಜಾಗ್ರದಾದ್ಯವಸ್ಥೆಗಳು ಸಂಭವಿಸುವುದಿಲ್ಲ. ಅಂತಹ ಅವಸ್ಥಾತ್ರಯವಿನಿರ್ಮುಕ್ತನಾದ ಪರಮೇಶ್ವರನ ಸಾಕ್ಷಾತ್ಕಾರವನ್ನು ಯಾವನು ಪಡೆಯುವನೋ ಅವನು ಪುನಃ ಶೋಕಹೊಂದಲಾರನು.

---

ವಿ. ಸೂ.— "ಮನಸಃ ಪರಮವ್ಯಕ್ತಂ, ಅವ್ಯಕ್ತಾತ್ತುಪುರುಷಃ ಪರಃ । ಪುರುಷಾನ್ನಪರಂ ಕಿಂಚಿತ್ಸಾಕಾಷ್ಠಾ ಸಾಪರಾಗತಿಃ ॥" ಇತ್ಯಾದಿ ಶ್ರುತ್ಯರ್ಥ ತಿಳಿಸಲ್ಪಟ್ಟಿದೆ.

ಸೃಷ್ಟಾನಿ ಖಾನಿ ಪರಮೇಶ ವಿಮೋಹನಾಯ
ತ್ವಯ್ಯೇವ ದೇವಜಗತೀಷ್ವಥ ಏಕ ಏವ ।
ತಸ್ಮಾತ್ಪರಂ ಪಶ್ಯತಿ ವಿಶ್ವಮೂರ್ತೇ
ನಾತ್ಮಾನಮಿಚ್ಛಂತಿ ಬಹಿರ್ಮುಖಾ ಜನಾಃ ॥೨೭॥

ವಿಶ್ವಂ ದೃಶ್ಯಮಿದಂ ವಿಭಾತಿ ಸಕಲೇ ತ್ವಯ್ಯೇವ ವಿದ್ಯೋತತೇ
ಜಾಗ್ರತ್ಸ್ವಪ್ನಸುಷುಪ್ತಿಷು ಪ್ರಳಯಕೃತ್ ಕೋಶಾದಿಹೀನಃ ಸದಾ।
ತ್ವಾಮಾತ್ಮಾನಮಖಂಡಮಿಂದ್ರಿಯಗಣೈರಪ್ರಾಪ್ಯಮಾಶಾಮುಖಂ
ನಿತ್ಯಂ ವಾಂಛತಿ ಬ್ರಹ್ಮ ತದ್ಧೃದಿ ಸದಾ ಚಾನಂದಲುಬ್ಧಃ ಸುಖಂ ॥೨೮॥

---

ಅಂದರೆ, ಆತ್ಮಪರೋಕ್ಷದಿಂದ ಸಂಸಾರನಿವೃತ್ತಿಯಾಗುವುದೆಂದು ತಿಳಿಯಬೇಕು. ಈ ವಿಷಯಕ್ಕೆ "ತರತಿಶೋಕಮಾತ್ಮವಿತ್" ಎಂಬ ಛಾಂದೋಗ್ಯಶ್ರುತಿಯೇ ಪ್ರಮಾಣವು. ॥೨೬॥

ಓ ಪರಮೇಶ್ವರನೇ, ಜಗತ್ತಿನಲ್ಲಿ ಅದ್ವಿತೀಯನಾಗಿ ನೀನೊಬ್ಬನೇ ಇರುವೆ. ಓ ದೇವನೇ, ಅಂತಹ ನಿನ್ನಲ್ಲಿ ಕಲ್ಪಿತರಾದ ಜೀವರಿಗೆ ಮೋಹಹುಟ್ಟಿಸುವುದಕ್ಕಾಗಿ ಜೀವಸ್ವರೂಪದಿಂದಿರುವ ನಿನ್ನಲ್ಲೇ ಚಕ್ಷುರಾದೀಂದ್ರಿಯಗಳನ್ನು ನೀನು ಸೃಷ್ಟಿಸಿರುವೆ. (ಮೋಹವೆಂದರೆ ಚಕ್ಷುರಾದೀಂದ್ರಿಯಗಳ ಮೂಲಕ ಬಾಹ್ಯವಿಷಯಗಳಲ್ಲಿ ಹುಟ್ಟುವ ಭ್ರಾಂತಿ.) ವಿಶ್ವಮೂರ್ತಿಯೇ, ಆದ್ದರಿಂದಲೆ ಬಹಿರ್ಮುಖರಾದ ಅಂದರೆ ಬಾಹ್ಯ ವಿಷಯಗಳನ್ನು ಅರಿತುಕೊಳ್ಳುವ ಸ್ವಭಾವವುಳ್ಳ ಜನರು ಪರವೆಂದರೆ ಪರಾಗ್ವಸ್ತು ಗಳೆನಿಸಿದ ಬಾಹ್ಯಶಬ್ದಾದಿವಿಷಯಗಳನ್ನೇ ಅರಿತುಕೊಳ್ಳುವರು. ಆದ್ದರಿಂದಲೇ ಆತ್ಮ ಸ್ವರೂಪವನ್ನು ಅರಿತುಕೊಳ್ಳಬೇಕೆಂಬ ಅಭಿಲಾಷೆಯು ಅವರಿಗೆ ಹುಟ್ಟುವುದಿಲ್ಲ. ॥೨೭॥

ಈ ದೃಶ್ಯ ಪ್ರಪಂಚವು ಜಗದುಪಾದಾನನಾಗಿರುವ ಮತ್ತು ಸಕಲ ಜಗತ್ಸ್ವ ರೂಪನಾಗಿರುವ ನಿನ್ನಲ್ಲೇ ಕಲ್ಪಿತವಾಗಿ ಹೊಳೆಯುತ್ತಿದೆ. ಕಲ್ಪಿತ ಜಗತ್ತಿಗೆ ಕಾರಣ ವಾದ ಆತ್ಮನ ಭಾನವೇ ಒಂದು ಪ್ರಕಾಶ, ಪೃಥಕ್ ಭಾನವಿಲ್ಲ. ಮತ್ತು ದೃಶ್ಯ ಪ್ರಪಂಚವು ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಅವಸ್ಥಾತ್ರಯಗಳಲ್ಲೂ ನಿನ್ನಲ್ಲೇ ನಿಂತಿದೆ.

---

ವಿ. ಸೂ.— "ಪರಾಂಚಿ ಖಾನಿವ್ಯತೃಣತ್ಸ್ವಯಂಭೂಸ್ತಸ್ಮಾತ್ಪರಾಙ್ ಪಶ್ಯತಿ ನಾಂತ ರಾತ್ಮನ್" ಎಂಬ ಕಾಠಕ ಮಂತ್ರಾರ್ಥವು ಇಲ್ಲಿ, ಸೂಚಿತವಾಗಿದೆ.

ಚತುರ್ಥಸ್ತುರೀಯಃ ಶಿವಾದ್ವೈತ ಆತ್ಮಾ
ಮಹಾಭೂತದೇಹೇಷ್ವಸಂಗಃ ಪುರಾಣಃ ।
ನ ಸತ್ಯೇನ ತನ್ನಾಮರೂಪೈರ್ಗುಣೈರ್ವಾ
ಶಿವಃ ಕೇವಲಃ ಪೂರುಷಃ ಕೋಶಹೀನಃ ॥೨೯॥

ಅಭೇದ್ಯೋಽಸ್ಯದಾಹ್ಯಸ್ತಥಾಚ್ಛೇದ್ಯಹೀನ
ಸ್ತವಾದ್ಯಾಸ್ತಿ ವಾಕ್‌ಪಾಣಿದೇಹಾದಿಬಂಧಃ ।
ಸ್ವತಂತ್ರೋ ವಿಭುರ್ನಿತ್ಯಶುದ್ಧೋ ವಿಭಾಸತ್ಸ್ವ
ಭಾಸಾ ಜಗಜ್ಜಾಲಮೇತದ್ವಿಭಾತಿ ॥೩೦॥

---

ಪ್ರಪಂಚ ಸ್ಥಿತಿಹೇತುವೂ ನೀನೇ ಎಂದು ತಾತ್ಪರ್ಯವು. ಅದರ ಪ್ರಳಯ ಕರ್ತೃವೂ ನೀನೆ. ಆದರೂ ನೀನು ಪರಮಾರ್ಥತಃ ಯಾವಾಗಲೂ ಅನ್ನಮಯಾದಿ ಪಂಚ ಕೋಶ ಸಂಬಂಧರಹಿತನಾಗಿರುವೆ. ಅಂತಹ ವ್ಯಾಪಕನಾಗಿಯೂ, ಅಖಂಡಚಿತ್ಸ್ವ ರೂಪನಾಗಿಯೂ, ಇಂದ್ರಿಯಗಳಿಗೆ ಅಭೇದ್ಯನಾಗಿಯೂ, ವಿಶ್ವತೋಮುಖನಾಗಿಯೂ ಇರುವ ಬ್ರಹ್ಮವನ್ನು, ಆನಂದ ಹೊಂದಬೇಕೆಂಬ ಆಸೆಯುಳ್ಳ ಅಂದರೆ ಮುಮುಕ್ಷ ವಾದ ಯತಿಯು ಸದಾ ಆ ಸುಖಸ್ವರೂಪ ಬ್ರಹ್ಮ ಸುಖವನ್ನು ತನ್ನ ಹೃತ್ಕಮಲ ದಲ್ಲಿ ಕಾಣುತ್ತಿರುವನು. ॥೨೮॥

ಪರಮಾತ್ಮನು ಅಧಿದೈವಂ ಎಂದರೆ ವಿರಾಟ್, ಹಿರಣ್ಯಗರ್ಭ, ಈಶ್ವರ, ಇವರಿಗೆ ನಾಲ್ಕನೆಯವನು. ಹೀಗೆ ಅಧ್ಯಾತ್ಮದಲ್ಲೂ ವಿಶ್ವ, ತೈಜಸ, ಪ್ರಾಜ್ಞರಿಗೆ, ನಾಲ್ಕನೆಯವನು. ಆದ್ದರಿಂದಲೇ ಮಾಂಡೂಕ್ಯಾದಿಗಳಲ್ಲಿ ಪರಮಾತ್ಮನನ್ನು ತುರೀಯ ಎಂದು ಹೇಳಿರುತ್ತಾರೆ. ಅವನೇ ಮಂಗಳಸ್ವರೂಪನು, ಅದ್ವೈತಾತ್ಮನು, ಪಂಚಮಹಾ ಭೂತಗಳಿಂದಾದ ಶರೀರಗಳ ಸಂಬಂಧವಿಲ್ಲದವನು, ಅನಾದಿಯಾದ್ದರಿಂದ ಪರಮಾರ್ಥ ವಾಗಿ ಸ್ಥೂಲನಾಮರೂಪ ಸಂಬಂಧವೂ, ಆ ನಾಮರೂಪ ಕಾರಣಗಳಾದ ಸತ್ವಾದಿ ಗುಣತ್ರಯಗಳ ಸಂಬಂಧವೂ, ಅವನಿಗಿಲ್ಲ. ಆದ್ದರಿಂದ ಪರಮಾತ್ಮನು ಕೇವಲ ಮಂಗಳಸ್ವರೂಪನೂ ಅದ್ವಿತೀಯನೂ ಪರಿಪೂರ್ಣನೂ ಕೋಶಪಂಚಕರಹಿತನೂ ಎನಿಸಿದ್ದಾನೆ. ಅಂತಹ ಪರಮಾತ್ಮನೇ ನೀನು. ॥೨೯॥

ನೀನು ಶಸ್ತ್ರಾದಿಗಳಿಂದ ಭೇದ್ಯನಲ್ಲ. ಹಾಗೆ ಅಗ್ನಿಯಿಂದ ನಿನ್ನನ್ನು ಸುಡಲಾಗುವುದಿಲ್ಲ, ಮತ್ತು ನಿನ್ನನ್ನು ಕತ್ತರಿಸಿ ಸೀಳುಮಾಡುವುದಕ್ಕೆ ಬರುವವನಲ್ಲ.

ಯತೋ ವಾ ಮಹಾಭೂತಸಂಘಾನಿ ಜಾತಾ
ನ್ಯಸಂಖ್ಯೇಯಕರ್ಮಾಣಿ ಭಿನ್ನಾನಿ ನಿತ್ಯಂ ।
ಯೇನೈವ ಜೀವಂತಿ ವಿಭಾಂತಿ ದೇಹೈ
ರ್ವಿದೇಹಾನಿ ನಾನ್ಯತ್ರ ಸಂತಿಷ್ಠತೇಽಂತೇ ॥೩೧॥

ತದೇತತ್ತ್ರಿನೇತ್ರಂ ವಿಚಿತ್ರಂ ಪವಿತ್ರಂ
ಉಮಾಶ್ಲಿಷ್ಟಗಾತ್ರಾರ್ಧಚಂದ್ರಾರ್ಧಚೂಡಂ ।
ವಿಜಿಜ್ಞಾಸ್ಯತದ್ಬ್ರಹ್ಮ ನೀರೂಪರೂಪಂ
ಮಹಾರೂಪಮೇಕಂ ಜಗತ್ಪಾಲನಾಯ ॥೩೨॥

---

ವಾಕ್‌ಪಾಣಿ ದೇಹಾದಿರೂಪ ಬಂಧ ಮತ್ತು ಸಂಬಂಧ ನಿನಗಿಲ್ಲ. ಸ್ವತಂತ್ರನಾಗಿಯೂ ವ್ಯಾಪಕನಾಗಿಯೂ, ಯಾವಾಗಲೂ ಅವಿದ್ಯಾದಿ ದೋಷ ರಹಿತನಾಗಿಯೂ ನಿತ್ಯ ಶುದ್ಧನಾಗಿಯೂ, ಸ್ವಪ್ರಕಾಶದಿಂದ ಈ ದೃಶ್ಯ ಜಡಜಗತ್ತನ್ನು ಪ್ರಕಾಶ ಪಡಿಸುವವ ನಾಗಿಯೂ ಹೊಳೆಯುತ್ತಿರುವೆ. ॥೩೦॥

ಈ ಪಂಚಮಹಾಭೂತಸಮುದಾಯಗಳು ಮತ್ತು ಪರಸ್ಪರಭಿನ್ನಗಳಾದ ನಿತ್ಯನೈಮಿತ್ತಿಕಾದಿ ಅಸಂಖ್ಯಕರ್ಮಗಳು, ಯಾವ ಪರಮೇಶ್ವರನಿಂದಲೇ ಹುಟ್ಟಿ ದುವೋ, ಯಾವನಿಂದಲೆ ಜನಿಸಿದ ವಸ್ತುಗಳು ಬದುಕುವವೋ, ಯಾವನ ಹೊಳಪಿ ನಿಂದಲೇ ಸಶರೀರಗಳಾಗಿ ಹೊಳೆಯುವವೋ, ಆ ಎಲ್ಲ ಕಾರ್ಯಪ್ರಪಂಚವು (ಪ್ರಾಣಿ ಗಳು) ಪ್ರಳಯಕಾಲದಲ್ಲಿ ಸ್ವಸ್ವಶರೀರನಾಶವಾದಾಗ ಆ ಪರಮಾತ್ಮನಲ್ಲೇ ನೆಲೆಯಾಗಿ ನಿಲ್ಲುವುವು. ಇನ್ನೊಂದರಲ್ಲಿ ಅವಕ್ಕೆ ಸ್ಥಳವೇ ಇರುವುದಿಲ್ಲ. ಅಂದರೆ ಪರಮಾತ್ಮನು ಪ್ರಳಯಕಾಲದಲ್ಲಿ ಕಾರ್ಯಪ್ರಪಂಚಲಯಾಧಾರನಾಗಿರುತ್ತಾನೆ. ॥೩೧॥

ಅಂತಹ ಈ ಪರಮೇಶ್ವರನು ಮೂರು ಕಣ್ಣುಳ್ಳವನಾಗಿ ವಿಚಿತ್ರನೆನಿಸಿಯೂ, ಭಕ್ತರ ಪಾಪಾದಿಗಳನ್ನು ನಾಶಮಾಡುವುದರಿಂದ ಪಾವನನೆಂದೂ, ಉಮೆಯಿಂದ ಆಲಿಂಗಿಸಲ್ಪಟ್ಟ ಶರೀರಾರ್ಧ ಉಳ್ಳವನಾಗಿ ಅರ್ಧನಾರೀಶ್ವರನೆಂದೂ, ಅರ್ಧಚಂದ್ರ ನನ್ನು ತಲೆಯಲ್ಲಿ ಧರಿಸಿ ಚಂದ್ರಮೌಳಿಯೆಂದೂ ಸ್ತುತಿಸಲ್ಪಡುವನು. ಇವನೇ ಯಾವ ಬಣ್ಣವೂ ಇಲ್ಲದೇ ನೀರೂಪಸ್ವರೂಪನಾಗಿ ಯೋಗಿಗಳಿಗೆ ಜಿಜ್ಞಾಸ್ಯನಾಗಿರುವ ಬ್ರಹ್ಮ ಸ್ವರೂಪನು. ಹೀಗೆ ನೀರೂಪನಾದರೂ ಜಗತ್ಪರಿಪಾಲನಾರೂಪಕಾರ್ಯಕ್ಕಾಗಿ ಅಸಾಧಾ ರಣವಾದ ಮತ್ತುಮಾಯಿಕವಾದ ಒಂದು ರೂಪವನ್ನು ಆಗಾಗ ಧರಿಸಿರುತ್ತಾನೆ.॥೩೨॥

ತ್ವಮಾತ್ಮಾ ತ್ವಂ ಬ್ರಹ್ಮಾ ತ್ವಮಸಿ ಭಗವನ್ ಲೋಕಮಖಿಲಂ
ತ್ವಯಾ ಭೇದಂ ಜ್ಞಾನಾತ್ಯವಿಕಲಧಿಯಾ ಯಸ್ತು ಯಮಿರಾಟ್ ।
ಅಜಾನನ್ ಯಶ್ಚೇತ್ಥಂ ತ್ವಮಸಿ ಚ ಪರಾದಾತ್ಸತಮನು
ಏಕೇ ತ್ವಯ್ಯದ್ವಿತೀಯೇ ಜಗದಿದಮಖಿಲಂ ನೇಹ ನಾನಾಸ್ತಿ ಕಿಂಚಿತ್॥೩೩॥

ಶ್ರುತ್ಯಾ ಯುಕ್ತ್ಯಾ ಗುರೂಕ್ತ್ಯಾ ಮನನಯುತಧಿಯಾ ತತ್ವವಾಕ್ಯಾತ್ತ್ರವೋಕ್ತ್ಯಾ
ದ್ವಿತ್ವೇಭೀತಿರ್ಮಹೇಶ ತ್ವಯಿ ಭಯ ಜನನೀ ದ್ವಾಸುಪರ್ಣಾದಿವಾಕ್ಯೈಃ
ಮಂದಾನ್ ಸಂಬೋಧಯತ್ಯಾ ಶ್ರುತಿರಿಯಮಧುನಾ ಸಾಕ್ಷಿಣಂ ತ್ವತ್ ಫಲಾದಂ ॥೩೪॥

---

ಪೂಜ್ಯನೇ, ನೀನೇ ಪ್ರತ್ಯಗಾತ್ಮನು. ನೀನು ಬ್ರಹ್ಮಸ್ವರೂಪನು. ಅಖಿಲ ಪ್ರಪಂಚವೂ ನೀನೇ. ನಿನ್ನನ್ನು ಬಿಟ್ಟು ಪ್ರಪಂಚವು ಬೇರೆ ಇಲ್ಲವೆಂದು ತಿಳಿಯಬೇಕು. ಯಾವನು ಜಿತೇಂದ್ರಿಯನಾದ ಯತೀಶ್ವರನಿರುವನೋ ಅವನು "ತ್ವಮಸಿ" ಇತ್ಯಾದಿ ಮಹಾವಾಕ್ಯಗಳಿಂದ ಹುಟ್ಟುವ ಅಖಂಡಾಕಾರಚರಮವೃತ್ತಿಗಳ ಮೂಲಕ ತನಗೂ ಆ ಬ್ರಹ್ಮಸ್ವರೂಪಕ್ಕೂ ಅಭೇದವನ್ನು ಅರಿತುಕೊಳ್ಳುವನು. ಈ ರೀತಿ ಶ್ರಿಪ್ರತ್ಯಕ್ ಬ್ರಹ್ಮೈಕ್ಯವನ್ನು ಅರಿತುಕೊಳ್ಳದೇ, ತನ್ನಿಂದ ಬ್ರಹ್ಮಬೇರೆಯಾಗಿದೆ ಎಂದು ದ್ವೈತವನ್ನು ಕಾಣುವ ಅಜ್ಞಾನಿಯನ್ನು ಕುರಿತು ನೀನೇ ಬ್ರಹ್ಮವಸ್ತು ಎಂದರೆ ಅವನಿಗೆ ಸ್ವಸ್ವರೂಪ ಅರಿಯದಂತೆ ಮಾಡುವೆ. "ಬ್ರಹ್ಮತಂಪರಾದಾತ್ ಯೋಽನ್ಯತ್ರಾತ್ಮನೋಬ್ರಹ್ಮವೇದ" ಇತ್ಯಾದಿ ವಾಕ್ಯಗಳಿಂದ ಸಜಾತೀಯ ವಿಜಾತೀಯ ಸ್ವಗತಭೇದರಹಿತನಾದ ನಿನ್ನಲ್ಲಿ ಈ ಜಗತ್ತು ಎಲ್ಲವೂ ಕಲ್ಪಿತವಾಗಿದೆ. ಕಲ್ಪಿತವಾದ ವಸ್ತು ಮಿಥ್ಯೆಯಾದ್ದರಿಂದಲೂ ಅಧಿಷ್ಠಾನದಲ್ಲಿ ಅದು ಪರಮಾರ್ಥವಲ್ಲದ್ದರಿಂದಲೂ ಕಲ್ಪನಾಧಿಷ್ಠಾನನಾದ ಪರಮಾತ್ಮನಲ್ಲಿ ಪರಮಾರ್ಥವಾದ ಯಾವುದೊಂದು ಭೇದ ಪ್ರಪಂಚವೂ ಇರುವುದಿಲ್ಲ. ॥೩೩॥

ಪರಮೇಶ್ವರ, "ತತ್ತ್ವಮಸಿ" ಇತ್ಯಾದಿ ಶ್ರುತಿಗಳ ಮೂಲಕ ಗುರೂಪದೇಶ, ಗುರೂಪದಿಷ್ಟ ಅದ್ವೈತಾರ್ಥಮನನ, ಇವನ್ನು ಪಡೆದು, ಕೃಷ್ಣಸ್ವರೂಪದಿಂದ ನೀನೇ ಅರ್ಜುನನ ಮೂಲಕ ಜನರಿಗೆ ಉಪದೇಶಿಸಿದ ಮಾತು, ಇವುಗಳಿಂದ ನಿನ್ನಲ್ಲಿ ದ್ವೈತ ಕಲ್ಪನೆಮಾಡಿ ದ್ವೈತವನ್ನು ಕಾಣುವುದರಿಂದ ಭಯಪ್ರಾಪ್ತಿ ಇದೆ. ದ್ವೈತದರ್ಶನವು ಭಯಜನಕವೆಂದು ತಿಳಿಯಬೇಕು. ("ದ್ವಿತೀಯಾದ್ವೈಭಯಂಭವತಿ" ಅಭಯಂ

ಏಷೋಽಂತರಾದಿತ್ಯಗತೋ ಮಹೇಶೋ ಹಿರಣ್ಮಯರೂಪಃ ಸಹಿರಣ್ಯಕೇಶಃ ।
ಹಿರಣ್ಯರೇತಾಶ್ಚ ತಥಾಂಬಿಕಾಪತಿಃ ಧ್ಯಾನೈಕಗಮ್ಯಸ್ತಮಸಃಪರಸ್ತಾತ್॥೩೫॥

ಏಷೋಽಂತರ್ಯಾಮ್ಯಮೃತಃ ಪುರಾಣಃ
ಕವಿಸ್ತಥಾ ಪ್ರಾಣಭೃತ್ಪ್ರಾಣಹೇತುಃ ।
ತ್ವಾಂ ಬ್ರಹ್ಮಮನ್ವಾನ ಉಪಾಸತೇ ಚಿರಂ
ಮುಕ್ತ್ಯೈ ಧೃತಾತ್ಮಾನ ಉತೋ ಮಹೇಶಂ ॥೩೬॥

---

ವೈ ಜನಕ ಪ್ರಾಪ್ತೋಽಸಿ ಯದಾತ್ಮಾನ ಮೇವಾವೇದಯಾಹಂ ಬ್ರಹ್ಮಾಸ್ಮಿ ಇತಿ ಇತ್ಯಾದಿ ಶ್ರುತಿಯಲ್ಲಿ ಅದ್ವೈತದರ್ಶನವು ಅಭಯಪ್ರಾಪ್ತಿಕಾರಣವೆಂದು ಹೇಳಿದೆ) ಹಾಗಾದರೆ "ದ್ವಾ ಸುಪರ್ಣಾ ಸಯುಜಾಸಖಾಯಾ" ಇತ್ಯಾದಿ ಶ್ರುತಿಗಳಲ್ಲಿ ಎರಡು ಆತ್ಮರೆಂದು ದ್ವೈತವನ್ನು ಹೇಳಿದೆಯಲ್ಲವೆ! ಎಂದು ಆಕ್ಷೇಪಿಸಬಹುದು. ಆ ದ್ವಾಸು ಪರ್ಣಾ ಇತ್ಯಾದಿ ವಾಕ್ಯಗಳಿಂದ ಶ್ರುತಿಯು ಮಂದಪ್ರಜ್ಞರಿಗೆ ಸುಲಭವಾಗಿ ಆತ್ಮಜ್ಞಾನ ಬರುವುದಕ್ಕಾಗಿ, ಮಂದರಿಗೆ ಬೋಧಿಸುವ ಸಲುವಾಗಿ, ನೀನು ಕೊಡುವ ಫಲವನ್ನು ಭೋಗಿಸುತ್ತಿರುವ ಜೀವಾತ್ಮನು, ಹಾಗೆ ಅದಕ್ಕೆ ಸಾಕ್ಷಿಯಾಗಿ ಅಕರ್ತೃ, ಅಭೋಕ್ತೃ ಸ್ವರೂಪನಾದ ಪರಮಾತ್ಮನು ಎಂದು ಎರಡು ಆತ್ಮರನ್ನು ಹೇಳಿದೆ. ಆ ಶ್ರುತಿಗೆ ದ್ವೈತ ದಲ್ಲಿ ತಾತ್ಪರ್ಯವಿಲ್ಲ. ಉಪಾಧಿವಿಶಿಷ್ಟನಾಗಿ ಭೋಕ್ತೃವೆನಿಸಿಕೊಂಡ ಜೀವನನ್ನು ಅನುವಾದಮಾಡಿ ಅವನಿಗೆ ಅಭೋಕ್ತೃಸಾಕ್ಷಿರೂಪತ್ವಬೋಧಿಸುವುದರಲ್ಲೇ ತಾತ್ಪರ್ಯ ವೆಂದು ಅರಿಯಬೇಕು. ॥೩೪॥

ಈ ಪರಮೇಶ್ವರನೇ, ನೀನು ಉತ್ಕೃಷ್ಟೋಽಪಾಧಿಯಾದ ಆದಿತ್ಯ ಮಂಡಲ ದಲ್ಲಿದ್ದು ಹಿರಣ್ಯದಂತೆ ಪ್ರಕಾಶಸ್ವರೂಪವುಳ್ಳವನಾಗಿಯೂ, ಹಿರಣ್ಯವರ್ಣಕೇಶವುಳ್ಳ ವನಾಗಿಯೂ, ಹಿರಣ್ಯರೇತಸ್ಸನಾಗಿಯೂ, ಹಾಗೆ ಅಂಬಿಕೆಗೆ ಪತಿಯಾಗಿಯೂ ಯೋಗಿ ಗಳಿಂದ ಕೇವಲ ಧ್ಯಾನಗಮ್ಯನಾಗಿಯೂ, ಮಾಯಾಸ್ಪೃಷ್ಟನಾಗಿಯೂ ಇರುವವನು. (ಇಲ್ಲಿ "ಯ ಏಷೋಽಂತರಾದಿತ್ಯೇ ಹಿರಣ್ಮಯ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ" ಇತ್ಯಾದಿ ಛಾಂದೋಗ್ಯದ ಉಪಾಸನಾಪ್ರಕರಣಸ್ಥ ಶ್ರುತ್ಯರ್ಥವು ಹೇಳಲ್ಪಟ್ಟಿದೆ.)॥೩೫॥

---

ವಿ. ಸೂ — ಇವಕ್ಕೆ "ಸ್ಥಿತ್ಯದನಾಭ್ಯಾಂ ಚ" ಸೂತ್ರ ಅ. ೧. ಪಾ. ೩. ಸೂತ್ರ ೭. ಶ್ರೀಶಂಕರಭಾಷ್ಯ. ಇದು ಆಧಾರವಾಗಿದೆ.

ತ್ವಂ ಷೋಡಶಾತ್ಮಾ ಪುರುಷಃ ಪುರೀಶಯೋ
ನ ಲೋಕದುಃಖೈಸ್ತ್ವಮಸಂಗ ಏಕಃ ।
ನ ಸಜ್ಜನೇ ತದ್ಗುಣಭಾವವೃತ್ತಿಷು
ಸ್ಥಿತೋಽಸ್ಯದೂರೇ ಚ ತದಂತಿಕೇ ಚ ॥೩೭॥

ಅಪಾಣಿಪಾದೋ ಗುಣಕರ್ಮಹೀನೋ
ಗುಹಾಹಿತೋ ನಿಷ್ಕಲಸ್ತ್ವಂ ತುರೀಯಃ ।
ಸತ್ಯಂ ತಥಾನಂದಮಯಸ್ತ್ವಮಾತ್ಮಾ
ಜ್ಞಾನಂ ಸುಖಂ ಸಂವಿದಿತಿ ಕ್ರಮೇಣ ॥೩೮॥

---

ಈ ಪರಮೇಶ್ವರನು ಚರಾಚರಾತ್ಮಕಪ್ರಪಂಚದಲ್ಲಿ ಈಶ್ವರರೂಪದಿಂದ ಒಳಗಿದ್ದು ನಿಯಮಿಸುವವನು. ಅವನು ಮರಣವಿಲ್ಲದವನು ಮತ್ತು ಅನಾದಿಯು. ಅತಿಕ್ರಾಂತವಾದ ವಸ್ತುದರ್ಶನವುಳ್ಳವನು, ಜೀವಸ್ವರೂಪದಿಂದ ಪ್ರಾಣಭೃತ್ತೆನಿಸಿ ಕೊಳ್ಳುವನು. ಪ್ರಾಣಗಳಿಗೆ ಕಾರಣನು. ಮೋಕ್ಷಹೊಂದಬೇಕೆಂದು ದೃಢಸಂಕಲ್ಪ ವಿರುವ ಬ್ರಹ್ಮಜ್ಞಾನಿಗಳು (ಶ್ರವಣ ಮನನಾನಂತರದಲ್ಲಿ) ಬಹುಕಾಲ ನಿನ್ನನ್ನು ಧ್ಯಾನಿಸು (ನಿದಿಧ್ಯಾಸನೆ)ವರು. ಇತರ ಮಧ್ಯಮಾಧಿಕಾರಿಗಳು ಸಗುಣವಾದ ಪರಮೇಶ್ವರಸ್ವರೂಪವನ್ನು ಉಪಾಸನೆಮಾಡುವರು. (ಈ ಉಪಾಸನೆಗೆ ಕ್ರಮಮುಕ್ತಿ ಫಲವಾಗುವುದು). ॥೩೬॥

ನೀನು ಷೋಡಶಕಲಾಪುರುಷನು (ಪ್ರಾಣಾದಿಷೋಡಶಕಲೆಗಳು ಪ್ರಶ್ನೋಪ ನಿಷತ್ತಿನ ಆರನೆಯ ಪ್ರಶ್ನೆಯಲ್ಲಿ ಹೇಳಿದೆ.) ಸುಷುಪ್ತಿಕಾಲದಲ್ಲಿ ನೀನು ಪುರೀತನ್ನಾಡೀ ದ್ವಾರಾ ಸುಷುಪ್ತಿಗೆ ಹೋಗುವುದರಿಂದ ಪುರೀಶಯನೆನ್ನಲ್ಪಡುವೆ. ಅಸಂಗಾದ್ವಿ ತೀಯನಾದ ನೀನು ಸಂಸಾರಿಗಳಂತಾಗಿ ಸಂಸಾರಿಗಳ ಸಾಂಸಾರಿಕ ದುಃಖಗಳಿಂದ ದುಃಖಿಯಾಗುವುದಿಲ್ಲ. ಸಂಘಾತಗಳ ವ್ಯಾಪಾರವಾದ ವೃತ್ತಿಗಳಲ್ಲಿ ನೀನು ಆಸಕ್ತ ನಾಗುವುದಿಲ್ಲ. ಆವೃತ್ತಿಗಳಲ್ಲಿ ಆಸಕ್ತನಾದ ಸಂಸಾರ್ಯಾತ್ಮನಿಗೆ ನೀನು ದೂರದಲ್ಲೂ ಇರುವೆ. ಆದರಿಂದಲೇ, ಅಜ್ಞರು ಕೋಟಿವರ್ಷವಾದರೂ ನಿನ್ನನ್ನು ಹೊಂದುವುದಿಲ್ಲ. ನೀನು ಹತ್ತಿರದಲ್ಲೂ ಇರುವೆ, ಹೇಗೆಂದರೆ, ಜ್ಞಾನಿಗಳಿಗೆ ಸ್ವಸ್ವರೂಪನಾದುದರಿಂದ ಅತಿ ಸನ್ನಿಹಿತನು. ॥೩೭॥

ತದಾ ತಮಸ್ತ್ವಂ ನ ದಿವಾ ನಿಶಾಪಿ ವಾ
ನ ಸಚ್ಚ ನಾಸಚ್ಚಿವ ಏವ ಕೇವಲಃ ।
ತ್ವಮಕ್ಷರಂ ತತ್ಸವಿತುರ್ವರೇಣ್ಯಂ
ಪ್ರಜ್ಞಾ ತ್ವದಾಜ್ಞಾವಶತೋ ವಿನಿಃಸೃತಾ ॥೩೯॥

ಕೋಶಾತೀತಮಖಂಡಮೇಕಮನಲಂ ಗಂಧಾದಿಹೀನಂ ಸದಾ
ನಶ್ಯದ್ದೇಹಕದಂಬಕೇಷು ನಿತರಾಂ ನಾಶಾದಿಹೀನಂ ವಿಭುಂ ।
ಸ್ವಾತ್ಮಾನಂ ಪ್ರಿಯದೇಹಜಾಲರಹಿತಂ ತತ್ಸಾಕ್ಷಿಣಂ ಸರ್ವದಾ
ದೃಶ್ಯಂ ದರ್ಶನದಿಗ್ಭ್ರಮಾದಿರಹಿತಂ ಜಾನನ್ ಜನೋ ಮುಚ್ಯತೇ ॥೪೦॥

ಕ್ವಚಿಜ್ಜಾತಂ ವಿಶ್ವಂ ಕ್ವಚಿದಪಿ ವಿಲೀನಂ ಸುರಗಣೈಃ
ಕ್ವಚಿತ್ ಸ್ತಬ್ಧಂ ದೀನಂ ಕ್ವಚಿದಪಿ ಚ ನಾದ್ಯೈಕವಿವಶಂ ।

---

ನೀನು ಪಾಣಿಪಾದರಹಿತನು. ಕರಣಗಳಿಂದ ನಡೆಯುವಕರ್ಮಸಂಬಂಧ ವಿಲ್ಲದವನು. ಯೋಗಿಗಳ ಹೃದಯ ಗುಹೆಯಲ್ಲಿ ಧ್ಯಾನಿಸಲ್ಪಡುವವನು. (ಅಥವಾ, ಬುದ್ಧಿಯಲ್ಲಿ ಪ್ರತಿಬಿಂಬಿತನು) ನಿರವಯವನು, ಮತ್ತು ನೀನು ವಿಶ್ವಾದಿ ಮೂರು ಆತ್ಮರಿಗೆ ನಾಲ್ಕನೆಯವನು, ಮತ್ತು ಅತ್ಯಂತಾಬಾಧ್ಯನಾದುದರಿಂದ ಪಾರಮಾರ್ಥಿಕನು ಮತ್ತು ಆನಂದ ಸ್ವರೂಪನಾಗಿರುವೆ. ॥೩೮॥

ಸೃಷ್ಟಿಗೆ ಮೊದಲು ತಮಸ್ಸೆಂಬ ಅನಾದಿ ಮಾಯಾವೃತನಾಗಿ ಅದ್ವೈತ ಸ್ವರೂಪನಾದ ನೀನೊಬ್ಬನೇ ಇರುವೆ. ಆಗ ಅಹೋರಾತ್ರಿಗಳಾಗಲಿ ಸದಸದ್ವಸ್ತುಗಳಾಗಲಿ ಇರುವುದಿಲ್ಲ. ನೀನಾದರೋ ನಾಶರಹಿತನು. ಉಪಾಸಕರಿಗೆ ಭಜನೀಯವಾದ ಸವಿತೃ ಮಂಡಲಾಂತರ್ವರ್ತಿ ಉತ್ಕೃಷ್ಟ ತೇಜೋ ರೂಪನು. ಅನಂತರ ಸೃಷ್ಟ್ಯಾದಿಯಲ್ಲಿ ನಿನ್ನ ಆಜ್ಞಾನುಸಾರವಾಗಿಯೇ ಚೇತನರಾದ ಸಂಸಾರಿ ಜೀವರು ನಿನ್ನಿಂದಲೇ ಹೊರಟಿರುವರು. (ಸಾಕ್ಷಾತ್ ಜೀವಿಯ ಜ್ಞಾನಕ್ಕೆ ಪರಮಾತ್ಮನಿಂದ ನಿಸ್ಸರಣವು ಪದ್ಯದಲ್ಲಿ ಹೇಳಿದೆ. ಅದಕ್ಕೆ ತಾತ್ಪರ್ಯವು ಮೇಲೆ ಹೇಳಿದಂತೆ) ॥೩೯॥

ಪಂಚಕೋಶರಹಿತನಾಗಿಯೂ, ಅಖಂಡಚೈತನ್ಯಸ್ವರೂಪನಾಗಿಯೂ, ಅದ್ವಿತೀಯನಾಗಿಯೂ, ಸದೃಶವಸ್ತ್ವಂತರರಹಿತನಾಗಿಯೂ, ಗಂಧಾದಿಗುಣರಹಿತನಾ

---

ವಿ. ಸೂ.—ಇಲ್ಲಿ "ನಾಸದಾಸೀನ್ನೋಸದಾಸೀತ್ತದಾನೀಂ" ಇತ್ಯಾದಿ ಋಕ್ ಮಂತ್ರಾರ್ಥವು ಹೇಳಲ್ಪಟ್ಟಿದೆ.

ಷಡೂರ್ಮಿಪ್ರಾವಿದ್ಧಂ ತ್ವಯಿ ತು ಭಗವನ್ನಬ್ಧಿಶತಶೋ
ತರಂಗಾ ಡ್ಯೋತಂತೇ ನ ಹಿ ತು ಭಗವಾಂತದ್ಧತಗುಣಃ ॥೪೧॥

ಆತ್ಮಾನಮಾನಂದಮಖಂಡಬೋಧಂ
ಈಶಾನಮಾದ್ಯಂ ಜಗತಸ್ತ್ರಸ್ಥುಷಶ್ಚ ।
ಸರ್ವೇಂದ್ರಿಯಾನಂತಗುಣೈರ್ವಿಹೀನಂ
ತತ್ಸತ್ಯಮಾನಂದಮಜಂ ಮಹೇಶ್ವರಂ ॥೪೨॥

---

ಗಿಯೂ ಇರುವೆ. ಶರೀರವು ಸದಾ ನಾಶಸ್ವಭಾವವುಳ್ಳದ್ದಾಗಿದ್ದರೂ ಆ ಶರೀರನಾಶದಿಂದ ನಾಶವಿಲ್ಲದವನಾಗಿಯೂ, ವ್ಯಾಪಕನಾಗಿಯೂ, ಸ್ವಾತ್ಮಾಭಿನ್ನನಾಗಿಯೂ, ತೋರಿಕೆಗೆ ಪ್ರಿಯವೆಂದು ಕಾಣಿಸುವ ದೇಹಜಾಲರಹಿತನಾಗಿಯೂ, ಆ ದೇಹಾದಿದೃಶ್ಯಗಳಿಗೆ ಸದಾ ಸಾಕ್ಷಿಯಾಗಿಯೂ, ದಿಗ್ಭ್ರಮಾದಿರಹಿತನಾಗಿಯೂ ಇರುವವನು ಪರಮೇಶ್ವರನೆಂದು ಅರಿತುಕೊಂಡವನು ನಿಜವಾಗಿಯೂ ಮುಕ್ತನಾಗುವನು. ॥೪೦॥

ಓ ಪೂಜ್ಯನೇ, ಅಖಂಡವಾದ ನಿನ್ನ ಸ್ವರೂಪದಲ್ಲಿ ಕೆಲವೆಡೆ ಪ್ರಪಂಚ ಹುಟ್ಟಿದೆ. ಇತರ ಕಡೆ ಲಯವಾಗಿದೆ. ಬೇರೆ ಕಡೆಯಲ್ಲಿ ದೀನರಾದ ಜನರು ಇದ್ದಾರೆ. ಅನೇಕ ಕಡೆಗಳಲ್ಲಿ ಕ್ಷುತ್ಪಿಪಾಸ, ಶೋಕಮೋಹ, ಜರಾಮರಣಗಳೆಂಬ, ಷಡೂರ್ಮಿಗಳಿಂದ ಹೊಡೆಯಲ್ಪಟ್ಟ ಪ್ರಾಣಿವರ್ಗವು ನಿನ್ನಲ್ಲಿ ಗೋಳಾಡುತ್ತಿರುವುದು. ಹೀಗೆ ಸಮುದ್ರದಲ್ಲಿ ನೂರಾರು ಅಲೆಗಳು ಮೇಲ್ಮೇಲೆ ಬಂದಡಗುತ್ತಿರುವಂತೆ ನಿನ್ನಲ್ಲಿ ಪ್ರಪಂಚವು ಕಾಣುತ್ತಿರುವುದು. ಆದರೆ ಭಗವಂತನಾದ ನೀನು ಈ ಪ್ರಪಂಚ ಸಂಬಂಧದಿಂದ ಸ್ವಸ್ವರೂಪವನ್ನು ಕಳೆದುಕೊಳ್ಳಲಿಲ್ಲ. ಕಲ್ಪಿತಪದಾರ್ಥಗಳಿಂದ ಅಧಿಷ್ಠಾನಕ್ಕೆ ಯಾವ ಸ್ವರೂಪ ಬದಲಾವಣೆಯೂ ಆಗುವುದಿಲ್ಲ. ಹೇಗೆಂದರೆ, ಕಲ್ಪಿತಜಲದಿಂದ ಮರುಭೂಮಿಗೆ ಪಂಕಿಲತ್ವ (ಕೆಸರುಳ್ಳತನ)ವು ಸಂಭವಿಸುವುದಿಲ್ಲ ಎಂದು ತಿಳಿಯಬೇಕು. ॥೪೧॥

ಆನಂದಸ್ವರೂಪನಾಗಿಯೂ ಅಖಂಡಬೋಧಸ್ವರೂಪನಾಗಿಯೂ, ಓರ್ವ ನಿಯಾಮಕನಾಗಿಯೂ, ಚರಾಚರಪ್ರಾಣಿವರ್ಗಕ್ಕೆ ಕಾರಣನಾಗಿಯೂ ಇರುವ ಪರಮೇಶ್ವರನು ಸಮಸ್ತ ಇಂದ್ರಿಯಗಳಿಂದಲೂ ಅನಂತಗುಣಗಳಿಂದಲೂ ರಹಿತನಾಗಿ ಪಾರಮಾರ್ಥಿಕನಾಗಿಯೂ ಉತ್ಪತ್ತಿರಹಿತನಾಗಿಯೂ ಇರುವನು. ॥೪೨॥

ತ್ವಯ್ಯೇವಾಂತಃಪ್ರವಿಶತಿ ಜಗನ್ನಾಮರೂಪೈರ್ವಿಚಿತ್ರಂ
ಗತೋಪಾಧಿದ್ವಂದ್ವೇ ಪವನರಹಿತಾಬ್ಧಿಪ್ರತಿನಿಭೇ ।
ಯಥಾ ನದ್ಯಃ ಸರ್ವಾಃ ಶರಣಗತಯಾ ಸಾಗರಮಹೋ ತಥಾ
ನಾಮ್ನಾ ರೂಪೈಃ ಪರಮಪುರುಷೇ ತ್ವಯ್ಯಖಿಲದೇ ॥೪೩॥

ಯಥೋರ್ಣನಾಭಿಃ ಸೃಜತೇ ತಂತುಜಾಲಂ
ಜಗದ್ವಿಚಿತ್ರಂ ಸೃಜಸಿ ತ್ವಮಿಶ ।
ಅಣೋರಣುಸ್ತ್ವಂ ಮಹತೋ ಮಹೀಯಾನ್
ಅಥಾಸಿ ಚ ಕ್ಷತ್ರ ಮಥೋನದಂತೇ ॥೪೪॥

ವೇದಾಹಮೇತಂ ಪುರುಷಂ ಮಹಾಂತಂ
ಮಾದಿತ್ಯವರ್ಣಂ ತಮಸಃ ಪರಂ ತ್ವಾಂ ।

---

ಎಲ್ಲ ನದಿಗಳೂ ಗಂಭೀರವಾದ ಸಾಗರವನ್ನು ಹೋಗಿ ಸೇರುವಂತೆ ನಿರುಪಾಧಿಕನಾಗಿಯೂ, ಉಪಾಧಿಸಂಬಂಧದಿಂದ ಬರುವ ಶೀತೋಷ್ಣ, ಸುಖದುಃಖ ಮೊದಲಾದ ದ್ವಂದ್ವರಹಿತನಾಗಿಯೂ, ಗಾಳಿ ಇಲ್ಲದ ಸಮುದ್ರದಂತೇ ನಿಶ್ಚಲವಾಗಿ ಗಂಭೀರವಾಗಿ ಇರುವ ಪರಮಪುರುಷನಾದ ನಿನ್ನಲ್ಲೇ ಈ ವಿಚಿತ್ರನಾಮರೂಪಾತ್ಮಕ ಜಗತ್ತು, ನಾಮರೂಪಗಳೆಂಬ ಸ್ಥೂಲರೂಪದಿಂದ ಪ್ರವೇಶಿಸಿ ಲಯವಾಗುವುವು. ಪುನಃ ಸೃಷ್ಟ್ಯಾದಿಯಲ್ಲಿ ಪ್ರಾಣಿಭೋಗಸಾಧನವಾದ ನಾಮರೂಪಾತ್ಮಕ ಪ್ರಪಂಚವನ್ನು ಸೃಷ್ಟಿಸಿಕೊಡುವವನೂ ನೀನೇ. ॥೪೩॥

ಪರಮೇಶ್ವರನೇ, ಜೇಡರಹುಳವು ಸ್ವಶರೀರದಿಂದಲೇ ಬೇರೆ ಸಹಾಯಾಪೇಕ್ಷೆ ಇಲ್ಲದೆ ನೂಲುಗಳನ್ನು ಸೃಷ್ಟಿಸಿದಂತೆ ನೀನು ಯಾವ ಬಾಹ್ಯಸಹಾಯಾಪೇಕ್ಷೆಯೂ ಇಲ್ಲದೇ ಈ ವಿಚಿತ್ರ ಪ್ರಪಂಚವನ್ನು ಸೃಷ್ಟಿಸುವೆ. ಅಲ್ಲದೆ ನೀನು ಅಣುವಾದ ಶ್ಯಾಮಾಕಾದಿಗಳಿಗೂ (ಧಾನ್ಯವಿಶೇಷ) ಅಣುವು. ಮಹತ್ತಾದ ಪರ್ವತಾದಿಗಳಿಗೂ ಮಹತ್ತಾದವನು. (ಹೀಗೆ ವಿರುದ್ಧಧರ್ಮಕನಾಗಿ ಕಾಣುವುದರಿಂದ ದುರ್ವಿಜ್ಞೇಯನೆಂದು ಭಾವ) ಮತ್ತು ಜಗತ್ಪರಿಪಾಲನದಲ್ಲಿ ನಿಯುಕ್ತವಾಗಿರುವ ಕ್ಷತ್ರಿಯಜಾತಿಯೂ ನೀನೇ. ಹಾಗೆ ಶಬ್ದಮಾಡುವ ಸಮಸ್ತ ಪ್ರಾಣಿವರ್ಗವೂ ನಿನ್ನ ಹೊರತಾಗಿ ಬೇರೆ ಇಲ್ಲ. ॥೪೪॥

ಓ ಪರಮೇಶ್ವರ! ನಾನು ನಿನ್ನನ್ನು ಪ್ರತ್ಯಗಭಿನ್ನನನ್ನಾಗಿಯೂ, ವ್ಯಾಪಕನನ್ನಾಗಿಯೂ, ಆದಿತ್ಯನಂತೆ ನಿತ್ಯಪ್ರಕಾಶಸ್ವರೂಪನನ್ನಾಗಿಯೂ, ಮಾಯಾತೀತ

ಋತಂ ಸತ್ಯಂ ಪರಂ ಬ್ರಹ್ಮ
ಧಾಮ ಜ್ಞಾನಾನ್ನಾನ್ಯದಸ್ತೀಹ ಪಂಥಾಃ ॥೪೫॥
ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ನಮಾಮ್ಯಹಂ ॥೪೬॥

ಯೇ ತ್ವಾ ಜಗಜ್ಜಗತ್ಯಾಹಿತಂ ಪದ್ಯಂ ಯದೇತದ್ವಿದುರಮೃತಾಸ್ತೇ ಭವಂತಿ
ತ್ವದಜ್ಞಾನಾದಿಹಜಾತ್ಯಾದಿಧರ್ಮೈರ್ನಿಬಧ್ನತೇ ಜನಾ ದುಃಖಿತಾಃ ಸದಾ ॥೪೭॥

ಋಚೋ ಅಕ್ಷರೇ ಪರಮೇ ತ್ವಾ
ಮಹೇಶಮಲಿಂಗಮಾಕಾಶಸಧರ್ಮಕಂ ವಿಭುಂ ।
ತ್ವಾಂ ಯೋ ನ ವೇದ ಕಿಮೃಚಾ ಕರಿಷ್ಯತಿ
ಸಾಮ್ನಾಥವಾ ಯಜುಷಾಥರ್ವಣೈರ್ವಾ ॥೪೮॥

---

ನನ್ನಾಗಿಯೂ, ಸತ್ಯಸ್ವರೂಪನೆಂದೂ, ಪರಬ್ರಹ್ಮಸ್ವರೂಪನೆಂದೂ ಮುಮುಕ್ಷು ಪ್ರಾಪ್ಯಸ್ಥಾನನೆಂದೂ ಅರಿತುಕೊಂಡಿದ್ದೇನೆ. ಏತಕ್ಕೆಂದರೆ, ಮೋಕ್ಷಪ್ರಾಪ್ತಿಗೆ ಜ್ಞಾನವನ್ನು ಬಿಟ್ಟರೆ ಬೇರೆ ದಾರಿ (ಉಪಾಯ) ಇಲ್ಲ. ಆದ್ದರಿಂದಲೇ ನಿನ್ನ ಸ್ವರೂಪಜ್ಞಾನ ಸಂಪಾದನೆಗೆ ನಾನು ಪ್ರಯತ್ನಿಸುವೆನು. ॥೪೫॥

ಪರಶಿವನೇ, ನೀನು ಋತಸತ್ಯಸ್ವರೂಪನೂ ಪರಬ್ರಹ್ಮರೂಪನೂ ಪರಿಪೂರ್ಣನೂ, ಪುರುಷರೂಪದಿಂದ ಕೃಷ್ಣವರ್ಣನಾಗಿಯೂ,ಉಮಾರೂಪದಿಂದ ಪಿಂಗಳವರ್ಣದವನಾಗಿಯೂ ಇರುವೆ. ಊರ್ಧ್ವರೇತಸ್ಕನೂ ವಿರೂಪಾಕ್ಷನೂ ನೀನೇ. ವಿಶ್ವರೂಪನೆನಿಸಿದ ಶ್ರೀಪರಮೇಶ್ವರರೂಪಿಯಾದ ನಿನ್ನನ್ನೇ ನಾನು ಸದಾ ವಂದಿಸುವೆನು. ॥೪೬॥

ಈ ಜಗತ್ತಿನಲ್ಲಿ ಸರ್ವರಿಗೂ ಪ್ರಾಪ್ಯನಾಗಿರುವ ನಿನ್ನನ್ನು ಯಾರು ಅರಿತುಕೊಳ್ಳುವರೂ ಅವರು ಮುಕ್ತರಾಗುತ್ತಾರೆ. ನಿನ್ನನ್ನರಿಯದಿರುವುದರಿಂದ ಆ ಅಜ್ಞಾನಿಗಳಾದ ಜನರು ಹುಟ್ಟು ಮೊದಲಾದ ಸಂಸಾರಧರ್ಮಗಳಿಂದ ಬದ್ಧರಾಗುತ್ತಾರೆ. ಆದರಿಂದ ಈ ಸಂಸಾರದಲ್ಲಿ ಅವರು ಯಾವಾಗಲೂ ದುಃಖಿತರಾಗಿರುವುದು ಸಹಜವೇ ಅಲ್ಲವೇ! ॥೬೭॥

ಋಕ್ಕುಗಳೆಲ್ಲ ಅಕ್ಷರ ಪರಮಾತ್ಮನಲ್ಲಿ ಪ್ರತಿಷ್ಠಿತಗಳು ಅಂದರೆ, ಪರಮಾತ್ಮಪ್ರತಿಪಾದನದಲ್ಲಿ ತಾತ್ಪರ್ಯವುಳ್ಳವುಗಳು. ಹೀಗೆ ವೇದಪ್ರತಿಪಾದ್ಯನಾಗಿ ಪರಮೇಶ

ಹೃದಾ ಪಶ್ಯಂತಿ ಮನಸಾ ಮನೀಷಿಣೋ
ಜಾನಂತಿ ಚ ತ್ವಾಂ ಪ್ರಥಮಂ ಕವೀನಾಂ ।
ಬ್ರಹ್ಮೈವ ತದ್ಬ್ರಹ್ಮಣ ಉಜ್ಜಹಾರ ।
ಸ್ತ್ವಾವಿದ್ಯಯಾ ಸಂಹರಸೇ ಚ ಮುಚ್ಯಸೇ ॥೪೯॥

ಶುದ್ಧಂ ಬುದ್ಧಮಬುದ್ಧಿಬೋಧಜನಕಂ ಬದ್ಧೈಕಮೋಕ್ಷಪ್ರದಂ
ಸಿದ್ಧಂ ಸಾಧ್ಯಗಣಾಖ್ಯವಿದ್ಧಶರಕಂ ಆತ್ಮೈಕ್ಯಬೋಧೇರತಂ ।
ಓಂಕಾರಾತ್ಮಕಕಾರ್ಮುಕಂ ನಿಜಸುಖಾಮೋದೈಕಪುಷ್ಟಿಂ ಧ್ರುವಂ
ತದ್ಬ್ರಹ್ಮಾಖಿಲಕೋಶಕಾಶಮನಿಶಂ ಶಂಭುಂ ಹರಂ ಧೀಮಹಿ ॥೫೦॥

---

ರನಾಗಿಯೂ, ಅನುಮೇಯವಹ್ನ್ಯಾದಿಗಳಂತೆ ಅನುಮಾಪಕಲಿಂಗಶೂನ್ಯನಾಗಿಯೂ, ಆಕಾಶದಂತೆ ವ್ಯಾಪಕನಾಗಿಯೂ ಇರುವ ನಿನ್ನನ್ನು ಯಾವನು ಶ್ರುತಿಗಳಿಂದ ಅರಿತುಕೊಳ್ಳುವುದಿಲ್ಲವೋ, ಅವನು ಋಗ್ವೇದದಿಂದಾಗಲಿ, ಸಾಮವೇದ, ಯಜುರ್ವೇದ ಅಥರ್ವಣವೇದ ಇವುಗಳಿಂದಲೂ ಏನೂಮಾಡಲಾರನು. ಅಂದರೆ, ವೇದಗಳ ಅಧ್ಯಯನಕ್ಕೆ ತದರ್ಥವಾದ ಈಶ್ವರಸ್ವರೂಪಜ್ಞಾನಮಾಡಿಕೊಳ್ಳುವುದೇ ಮುಖ್ಯ ಪ್ರಯೋಜನ. ಅದು ಲಭಿಸದಿರುವವನಿಗೆ ವೇದಗಳೆಂಬ ಭಾರವನ್ನು ಹೊತ್ತು ಏನು ಪ್ರಯೋಜನ? ಎಂದು ಭಾವ. ॥೪೮॥

ಜ್ಞಾನಿಗಳು ಹೃದಯಾಕಾಶದಲ್ಲಿರುವ ತಮ್ಮ ಮನಸ್ಸಿನಲ್ಲಿ ಈ ಪರಮಾತ್ಮನ ಅಪರೋಕ್ಷವನ್ನು ಸಾಧಿಸಿಕೊಳ್ಳುವರು. ಮತ್ತು ಅವರು ಕವಿಗಳಿಗೆ ಅಂದರೆ ಕ್ರಾಂತದರ್ಶಿಗಳಿಗೆ, (ಜ್ಞಾನಿಗಳಿಗೆ)ನೀನು ಪ್ರಥಮನು ಎಂದು ತಿಳಿದುಕೊಳ್ಳುವರು. ನಿನ್ನನ್ನು ಸರ್ವಜ್ಞನೆಂದರಿಯುವರು. ಈ ಸಂಸಾರಿಯಾಗಿ ತೋರುವ ಜೀವರು ಪರಮಾರ್ಥತಃ ಬ್ರಹ್ಮಸ್ವರೂಪರೇ. ಆದರೂ ಅವಿದ್ಯೆಯಿಂದ (ಉಪಾಧಿ) ಬ್ರಹ್ಮದಿಂದ ಬೇರ್ಪಟ್ಟಂತೆ ಕಾಣುತ್ತಾರೆ. ವಸ್ತುತಃ ಬ್ರಹ್ಮಸ್ವರೂಪನಾದ ನೀನೇ ನಿನ್ನ ಅವಿದ್ಯೆಯೆಂಬ ಉಪಾಧಿಯಿಂದ ಸಂಸಾರಿಯಾಗಿರುವೆ. ಆಮೇಲೆ ಸ್ವಾತ್ಮ ತತ್ವಜ್ಞಾನದಿಂದ ಅವಿದ್ಯೆಯನ್ನು ನಾಶಮಾಡಿ ಅವಿದ್ಯಾಕಲ್ಪಿತವಾದ ಸಂಸಾರದಿಂದ ಮುಕ್ತನಾಗುವೆ. ॥೪೯॥

ಅವಿದ್ಯಾಮಲರಹಿತನಾಗಿಯೂ, ಅಜಡಸ್ವರೂಪನಾಗಿಯೂ ಅಜ್ಞಾನಿಗಳಿಗೆ ಜ್ಞಾನದಾತೃವಾಗಿಯೂ, ಸಂಸಾರಪಾಶಬದ್ಧರಿಗೆ ಮುಕ್ತಿಕೊಡುವವನಾಗಿಯೂ,

---

ವಿ. ಸೂ.—ಇಲ್ಲಿ "ಪ್ರಣವೋ ಧನುಶ್ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ । ಅಪ್ರಮತ್ತೇನವೇದ್ಧವ್ಯಂ" ಎಂಬ ಮುಂಡಕವಾಕ್ಯದ ಛಾಯೆಯಿದೆ.

ಶ್ರದ್ದಧ್ಯಾನ್ನ ಸ ಜಾತು ಧೀರಹೃದಯೋ ಮಾಮಂತಕೋ ಮಾರಯೇ
ಚ್ಛಿ್ರತ್ಯುಕ್ತ್ಯಾ ಗುರುವಾಕ್ಯಬೋಧಜನಿತಾನಂದೋಜ್ಝಿತಾಹಂಕೃತಿಃ ।
ಆತ್ಮಾನಂ ತಮಸಃ ಪರಂ ಮೃಗಯತಾಂ ಶೀರ್ಣೇಽಪ್ಯಶೀರ್ಣಂ ಸದಾ
ದೇಹಾಕ್ಷಾದಿಷು ಭೂತಭವ್ಯಗಣನಾಕಾಲೇಽಪಿ ದೃಶ್ಯೇಽಪಿ ಚ ॥೫೧॥

ಉದ್ಗೀಥಪ್ರಾಣನಾಮ್ನೈರ್ಮಧುದಹರಪರ್ಯಂಕತಪನೈ
ಸ್ತಥಾ ವಹ್ನೀಂದ್ರಾದ್ಯೈಃ ಶ್ರುತಿಶಿಖರವಿದ್ಯೋತ್ಥಸುಪಥಾ ।

---

ಸ್ವಪ್ರಕಾಶಸ್ವರೂಪನಾಗಿಯೂ ಯೋಗಿಗಳೆಂಬ ಬಾಣದಿಂದ ವಿದ್ಧನಾಗಿಯೂ, ಪ್ರತ್ಯಗ್‌ಬ್ರಹ್ಮೈಕ್ಯಬೋಧನದಲ್ಲಿ ಆಸಕ್ತನಾಗಿಯೂ, ಓಂಕಾರವೆಂಬ ಧನುಸ್ಸುಳ್ಳವನಾಗಿಯೂ, ಸ್ವಸ್ವರೂಪಾನಂದವೆಂಬ ಪುಷ್ಟಿಯುಳ್ಳವನಾಗಿಯೂ, ಅಚಲನಾಗಿಯೂ, ಅಪರಿಚ್ಛಿನ್ನಬ್ರಹ್ಮಸ್ವರೂಪನಾಗಿಯೂ, ಅನ್ನಮಯಾದಿ ಎಲ್ಲ ಕೋಶಗಳಿಗೂ ಪ್ರಕಾಶಕನಾಗಿಯೂ ಇರುವ ಆ ಪರಮೇಶ್ವರನನ್ನು ಧ್ಯಾನಿಸುವೆವು. ॥೫೦॥

ಗುರುವು ಬೋಧಿಸಿದ ಶ್ರುತ್ಯುಕ್ತ ತತ್ತ್ವಮಸಿ ಇತ್ಯಾದಿ ಮಹಾವಾಕ್ಯಾರ್ಥಾನುಭವದಿಂದ ಪರಿಪೂರ್ಣ ಆನಂದಸ್ವರೂಪಬ್ರಹ್ಮನಾಗಿ ಅಹಂಕರ್ತಾ ಎಂಬ ಅಧ್ಯಾಸವನ್ನು ಬಿಟ್ಟು ಧೀರಚಿತ್ತನಾದ ವಿದ್ವಾಂಸನು, ನನ್ನನ್ನು ಯಮನು ಕೊಲ್ಲುತ್ತಾನೆ ಎಂಬ ವಿಷಯವನ್ನು ಯಾವ ಕಾಲದಲ್ಲೂ ನಂಬಲಾರನು. ಏತಕ್ಕೆಂದರೆ ಇಂತಹ ಜ್ಞಾನಿಗಳು, ಆತ್ಮೋಪಾಧಿಗಳಾದ ದೇಹೇಂದ್ರಿಯಾದಿಗಳು ಹಾಳಾದರೂ ಸದಾ ನಶಿಸದೇ ಒಂದೇ ರೀತಿ ಇರುವವನಾಗಿಯೂ, ಮಾಯಾಸ್ಪೃಷ್ಟನಾಗಿಯೂ ಇರುವ ಆತ್ಮನನ್ನು ಭೂತಭವಿಷ್ಯಗಳ ಗಣನೆಯಲ್ಲಧಿಕೃತನಾದ ಕಾಲನಲ್ಲೂ, ಇತರ ದೃಶ್ಯ ಪ್ರಪಂಚದಲ್ಲಿಯೂ ಕಾಣುವರು. ಅಂದರೆ ಅವರಿಗೆ ಸರ್ವತ್ರ ಸಮದರ್ಶನವಿರುತ್ತದೆ. ಸರ್ವತ್ರಸಮವಾದ ಬ್ರಹ್ಮಕ್ಕಿಂತ ಬೇರೆಯಾದ ವಸ್ತ್ವಂತರವನ್ನು ಅವರು ಕಾಣರು. ಆದ್ದರಿಂದ ಅಂತಕನಿಂದ ತಮಗೆ ಮರಣವೆಂಬ ವಿಷಯವನ್ನು ಅವರು ಎಂದೂ ನಂಬಲಾರರು. ॥೫೧॥

ವೇದಾಂತವಾಕ್ಯಗಳಿಂದ ತಿಳಿಯುವ ಸನ್ಮಾರ್ಗವೆಂದೆನಿಸಿಕೊಂಡ ಉಪಾಸನಾ ಮಾರ್ಗಕ್ಕೆ ಸಾಕ್ಷಾತ್ ಪರಶಿವನು ಗೋಚರನಲ್ಲ. ಅಂತಹ ಉಪಾಸನೆಗಳು ಉದ್ಗೀಥೋಪಾಸನೆ, ಪ್ರಾಣೋಪಾಸನೆ, ನಾಮೋಪಾಸನೆ (ನಾಮಬ್ರಹ್ಮೇತ್ಯುಪಾಸೀತ

---

ವಿ. ಸೂ.—“ ತದೇವಬ್ರಹ್ಮತ್ವಂವಿದ್ಧಿನೇದಂ ಯದಿದಮುಪಾಸತೇ ” ಎಂಬ ಕೇನ ವಾಕ್ಯವನ್ನು ನೋಡಿ.

ಅತಃ ಸಾರಂಪರ್ಯಕ್ರಮಮನುಕೃತವಾಕ್ಯೈರ್ವಿಧಿಯುತೈ
ರ್ಮಹೇಶಾಂಗಾಬದ್ಧೈರ್ನ ಭವತಿ ಹಿ ಸಾಕ್ಷಾತ್ಪರಶಿವಃ ॥೫೨॥

ಚತುರ್ಜಾಲಂ ಕೋಶಂ ತವ ಚ ವಿಹಿತಂ ಮೃತ್ಯುರಹಿತಂ
ಶಿರೋಧರ್ಮಸ್ತ್ರೇದ್ಧ್ಯ ಪ್ರತಿಸುರಶರೀರೋ ವಿಧಿಹನುಃ ।
ತವ ಬ್ರಹ್ಮ ಕ್ಷತ್ರಂ ಭವತಿ ಭಗವನ್ನೋದನಮಿದಂ
ಯಮಸ್ತೂಪಾದಂಶಃ ಕ ಇಹ ವೇತ್ತಾ ಗುಣಗಣಂ ॥೫೩॥

---

ಎಂಬ ವಾಕ್ಯವಿಹಿತ ಮಧುವಿದ್ಯಾ, ದಹರವಿದ್ಯೆ, ಪರ್ಯಂಕವಿದ್ಯೆ, ಸೂರ್ಯೋಪಾಸನೆ, ಅಗ್ನ್ಯುಪಾಸನೆ, ಇಂದ್ರಾದ್ಯುಪಾಸನೆ ಇವೇ ಮೊದಲಾದವುಗಳು ಈ ಉಪಾಸನೆಗಳು.) ಅಕೃತಕವಾಕ್ಯ ಅಂದರೆ ಅಪೌರುಷೇಯವೇದವಾಕ್ಯಗಳಿಂದ ಅವು ಲಿಙಾದಿ ವಿಧಿವಿಭಕ್ತಿಯುತಗಳಾಗಿವೆ. ಇಂತಹ ವಿಧಿವಾಕ್ಯಗಳಿಂದ ವಿಧಿಸಲ್ಪಟ್ಟ ಗುರುಪಾರಂಪರ್ಯಕ್ರಮದಿಂದ ಅನುಷ್ಠಾನಕ್ರಮದಲ್ಲಿರುವ ಹಿಂದೆ ತಿಳಿಸಿದ ಉಪಾಸನೆಗಳಿಗೆ ಪರಶಿವನು ಸಾಕ್ಷಾದ್ವಿಷಯನಲ್ಲ. ॥೫೨॥

ಪರಮೇಶ್ವರನೇ, ನಿನಗೆ ಮೃತ್ಯುರಹಿತವಾದ ನಾಲ್ಕು ಅಂತರಗಳಿಂದ ಸಹಿತವಾದ ಒಂದು ಕೋಶವು ನಿರ್ಮಿತವಾಗಿದೆ. ಪ್ರತಿ ದೇವಶರೀರವೂ ನಿನ್ನ ಶರೀರವೇ. ಬ್ರಹ್ಮನು ನಿನ್ನ ಹನು (ದವಡೆ) ಸ್ಥಾನೀಯನು. ಓ ಭಗವಂತ, ಬ್ರಾಹ್ಮಣ ಕ್ಷತ್ರಿಯರು ನಿನಗೆ ಆಹಾರಸ್ಥಾನೀಯರು. (ಪ್ರಾಧಾನ್ಯದಿಂದ ಬ್ರಾಹ್ಮಣ ಕ್ಷತ್ರಿಯಮಾತ್ರಗ್ರಹಣ, ಅದು ಚರಾಚರಾತ್ಮಕ ಪ್ರಾಣಿಸಾಮಾನ್ಯಕ್ಕೆ ಉಪಲಕ್ಷಕ. ಚರಾಚರಸಂಹರ್ತೃ ನೀನಾಗಿರುವೆ ಎಂದು ಭಾವ) ಬ್ರಹ್ಮಕ್ಷತ್ರರೂಪವಾದ ಓದನಭಕ್ಷಣದಲ್ಲಿ ನಿನಗೆ ಯಮನು ಉಪದಂಶ (ಚಟ್ನಿ, ಉಪ್ಪಿನಕಾಯಿ ಮೊದಲಾದ ಭೋಜನಸಾಧನದ್ರವ್ಯ) ಸ್ಥಾನೀಯನು. ಓದನದ ಜೊತೆಯಲ್ಲಿ ಉಪದಂಶವೂ ಭಕ್ಷಿತವಾಗುವುದು ಲೋಕಪ್ರಸಿದ್ಧ. ಯಮನಿಗೆ ಉಪದಂಶತ್ವರೂಪಣಮಾಡಿದ್ದರಿಂದ ಆ ಪರಮೇಶ್ವರನು ಸಮೃತ್ಯುಕವಾದ ಚರಾಚರ ಪ್ರಪಂಚಸಂಹರ್ತೃ ಎಂದು ತಿಳಿಯುತ್ತದೆ. ಇಂತಹ ನಿನ್ನ ಗುಣಗಣಗಳನ್ನು ಈ ಸಂಸಾರದಲ್ಲಿ ಅರಿತುಕೊಂಡವನು ಯಾವಾತನು? ಆದರಿಂದಲೇ ನೀನು ದುರ್ವಿಜ್ಞೇಯನು. ॥೫೩॥

---

ವಿ. ಸೂ —" ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ । ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥ ಈ ಕಠವಾಕ್ಯಾರ್ಥವು ಇಲ್ಲಿ ಹೇಳಿದೆ. ಸೂತ್ರಭಾಷ್ಯ "ಅತ್ತಾ ಚರಾಚರಗ್ರಹಣಾತ್" ಅ ಪಾ ೨ ಸೂ. ೯.

ಆಯುರ್ದಾತಾ ತ್ವಮೇವ ಶ್ರುತಿಶಿಖರಗತಾಪಾರಮಾಹಾತ್ಮ್ಯಜಾಲಃ
ಏಕಸ್ತ್ವತ್ತೋಽಭಿಜಾತೋ ಜಗದಿದಮಖಿಲಂ ಪ್ರಷ್ಟುಕಾಮೋ ವಿಧಿಶ್ಚ ।
ವಿಶ್ವಂ ಚಾಪ್ಯೇತಿ ಚಾಂತೇ ತ್ವಯಿ ತು ಭಗವನ್ನಾಯುಷೇಽಹಂ ಪ್ರಪದ್ಯೇ
ಮೃತ್ಯೋರ್ಭೀತಂ ಸದಾ ತ್ವಾಂ ಘೃತಮಧುಕೃತಯಾ ಧಾರಯಾ ತರ್ಪ
ಯಾಮಿ ॥೫೪॥

ನಾಂತಃ ಪ್ರಜ್ಞಮಿದಂ ತಥಾ ಚ ನ ಬಹಿಃ ಪ್ರಜ್ಞಂ ನ ಚೈವೋಭಯಂ
ನ ಪ್ರಜ್ಞಾನಘನಂ ವಿಶೇಷಜನಕಂ ಚಾನಂದಬೋಧಾತ್ಮಕಂ ।
ಅದೃಶ್ಯಂ ನ ಗ್ರಾಹ್ಯಂ ಶಿವಮಭಯಭಾವಾದಿರಹಿತಂ
ಅಸಾರಂ ಸಾರಂ ತಜ್ಜನಿತಭವಭಾವಾದಿಕರಣಂ ॥೫೫॥

---

ಓ ಪೂಜ್ಯನೇ, ಪ್ರಾಣಿಗಳಿಗೆ ಆಯುರ್ದಾತನೂ ನೀನೇ. ವೇದಾಂತಗಳಲ್ಲಿ ಅಪಾರ ಮಾಹಾತ್ಮ್ಯಸಮುದಾಯವುಳ್ಳವನೆಂದೂ ನೀನು ಹೇಳಲ್ಪಡುವೆ. ಮತ್ತು ಅದ್ವಿತೀಯನಾಗಿರುವೆ. ಈ ಸಕಲ ಜಗತ್ತನ್ನೂ ಸೃಷ್ಟಿಮಾಡಲಿಚ್ಛಿಸುವ ಚತುರ್ಮುಖ ಬ್ರಹ್ಮನೂ ನಿನ್ನಿಂದಲೇ ಹುಟ್ಟಿದವನು. ಕೊನೆಯದಾದ ಪ್ರಳಯಕಾಲದಲ್ಲಿ ಈ ಪ್ರಪಂಚವು ನಿನ್ನಲ್ಲೇ ಲಯವಾಗುವುದು. ನಾನು ಮರಣಕ್ಕೆ ಅಂಜಿದವನಾಗಿ ದೀರ್ಘಾಯುಃಪ್ರಾಪ್ತಿಗಾಗಿ ನಿನ್ನನ್ನು ಶರಣುಹೊಂದುವೆನು. ಆದಕ್ಕಾಗಿ ಯಾವಾಗಲೂ ಘೃತ ಮತ್ತು ಮಧುಗಳ ಸಂತತಧಾರೆಯಿಂದ ನಿನಗೆ ಅಭಿಷೇಕಮಾಡಿ ತೃಪ್ತಿಪಡಿಸುತ್ತೇನೆ. ॥೫೪॥

ಈ ತುರೀಯಬ್ರಹ್ಮಸ್ವರೂಪವು ಅಂತಃ ಪ್ರಜ್ಞನಾದ ತೈಜಸವಲ್ಲ. ಸ್ವಪ್ನಾಭಿಮಾನಿ ತೈಜಸನು. ಬಾಹ್ಯೇಂದ್ರಿಯಾಪೇಕ್ಷಯಾ ಪ್ರತ್ಯೇಕವಾಗಿರುವ ಮನಸ್ಸಿನ ವಾಸನಾರೂಪಪ್ರಜ್ಞೆಯುಳ್ಳವನು. ನಾಂತಃ ಪ್ರಜ್ಞಂ ಎಂಬುದರಿಂದ ತೈಜಸ ಪ್ರತಿಷೇಧಮಾಡಿದರೂ ಜಾಗ್ರದಭಿಮಾನಿವಿಶ್ವನು. ಬಾಹ್ಯ ಸ್ಥೂಲ ವಿಷಯಕ ಪ್ರಜ್ಞೆಯುಳ್ಳವನು. ನ ಬಹಿಃ ಪ್ರಜ್ಞಂ ಎಂಬುದರಿಂದ ವಿಶ್ವರೂಪತ್ವವು ಪ್ರತಿಷಿದ್ಧವಾಯಿತು. ನ ಚೈವೋಭಯಂ ಎನ್ನುವುದರಿಂದ ಜಾಗ್ರತ್ಸ್ವಪ್ನಗಳ ಅಂತರಾಳಾವಸ್ಥಾಪ್ರತಿಷೇಧಮಾಡಿದಂತಾಯಿತು. ನ ಪ್ರಜ್ಞಾನಘನಂ ಎಂದು ಸುಷುಪ್ತಾವಸ್ಥಾ

---

ವಿ. ಸೂ.—ಇಲ್ಲಿ "ನಾಂತಃ ಪ್ರಜ್ಞಂ ನ ಬಹಿಃ ಪ್ರಜ್ಞಂ ನೋಭಯತಃ ಪ್ರಜ್ಞಂ" ಇತ್ಯಾದಿ ಮಾಂಡೂಕ್ಯದ ತುರೀಯ ಸ್ವರೂಪನಿರೂಪಣ ಶ್ರುತ್ಯರ್ಥವು ಹೇಳಿದೆ.

ಉತ್ಫುಲ್ಲಾಮಲರಕ್ತಪದ್ಮಸಮಿತಂ ಕೋಶಾಪನೋತ್ಥಪ್ರಭಂ
ಜ್ಯೋಕ್ ಪಶ್ಯೇಮ ವಿಚಿತ್ರವರ್ಣಮಧುನಾ ಸೌವರ್ಣಮತ್ಯಾದರಾತ್ ।
ಉದ್ಯಂತಂ ಭಗವಂತಮಾಶು ತಮಸಾಂ ನಾಶೈಕಕಾಂತಿಂ ಸದಾ
ಜೀವೇಮ ಪ್ರತಿವಾಸರೇ ಪ್ರವಿಣದಂ ತ್ವಾಮಾಶ್ರಿತಾಃ ಸರ್ವಥಾ ॥೫೬॥

ಯತೋ ಬ್ರಹ್ಮವಿಷ್ಣ್ವೀಶರುದ್ರೇಂದ್ರಪೂರ್ವಾ
ಜಗತ್ಯಾಪಿನಿತ್ಯಂ ವಿಭೋಃ ಸಂಪ್ರಸೂತಾಃ ।
ಅಹೋ ಧ್ಯಾಯೀತೇಶೇನ ಮಧ್ಯೇ
ಹೃದಂತರ್ಮಹಾಪದ್ಮಸದ್ಮೇ ಭವದ್ಭ್ಯೋಮಗಃ ಶಂಭುರೀಶಃ॥೫೭॥

---

ಪ್ರತಿಷೇಧ ವಿಶೇಷವಾದ ಕಾರ್ಯವಸ್ತುಗಳಿಗೆ ಆ ತುರೀಯಸ್ವರೂಪವು ಜನಕವು. ಮತ್ತು ಅದು ಆನಂದಬೋಧಸ್ವರೂಪವು. ಅದು ಜ್ಞಾನೇಂದ್ರಿಯಕ್ಕೆ ಗೋಚರವಲ್ಲ. ಕರ್ಮೇಂದ್ರಿಯಕ್ಕೂ ಅಗೋಚರ. ಮಂಗಳಕರವಾದುದು. ನಿರ್ಭಯಸ್ವರೂಪ, ಮತ್ತು ನಿಷ್ಪ್ರಪಂಚ, ಅಸಾರಪದಾರ್ಥಗಳಿಗೂ ಸಾರಭೂತವೆನಿಸಿದೆ. ಸಾಂಸಾರಿಕ ಸಕಲ ಪದಾರ್ಥ ಕಾರಣಸ್ವರೂಪವೇ ಅದು. ॥೫೫॥

ಅರಳಿದ ನಿರ್ದುಷ್ಟರಕ್ತಕಮಲಕ್ಕೆ ಸಮಾನವಾದ ಪ್ರಭೆಯುಳ್ಳವನಾಗಿಯೂ ವಿಚಿತ್ರವರ್ಣವುಳ್ಳವನಾಗಿಯೂ ಇರುವ ನಿನ್ನನ್ನು ಈಗ ನಾವು ಬಂಗಾರವನ್ನು ಕಂಡಂತೆ ಅತ್ಯಾದರದಿಂದ ಕಾಣುವೆವು. ಮತ್ತು ನೀನು ತಮೋನಾಶಕವಾದ ಪ್ರಕಾಶವುಳ್ಳ ಉದ್ಯದಾದಿತ್ಯನಂತೆ ಅಜ್ಞಾನತಮೋನಾಶಕವಾದ ಜ್ಞಾನರೂಪ ಪ್ರಕಾಶವುಳ್ಳವನಾಗಿರುವೆ. ಅಂತಹ ಪ್ರತಿದಿನದಲ್ಲೂ ಧನವನ್ನು ಯಥೇಚ್ಛವಾಗಿ ಕೊಡುವ ನಿನ್ನನ್ನು ಆಶ್ರಯಿಸಿ ನಾವು ಯಾವಾಗಲೂ ಬದುಕುವೆವು. ॥೫೬॥

ಯಾವ ಸ್ವಾಮಿಯಾದ ಪರಮೇಶ್ವರನಿಂದ ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರನೇ ಮೊದಲಾದವರು, ಮತ್ತು ಪ್ರಪಂಚವೂ ಜನಿಸಿದುವೋ, ಅಂತಹ ಶ್ರೀ ಶಂಭುವನ್ನು ಹಾರ್ದಾಕಾಶದಲ್ಲಿರುವ ಹೃತ್ಕಮಲದ ಮಧ್ಯೇ ಸದಾ ಸರ್ವರೂ ಧ್ಯಾನಿಸಬೇಕು. ॥೫೭॥

ತಮೇವಂ ವಿಜಾನೀಯಮಾತ್ಮಾನಮೇಕಂ
ಕಿಮನ್ಯಾಭಿರ್ವಾರ್ತಾಭಿರ್ದುಸ್ತರ್ಕಜಾಲೈಃ ।
ನಿಸರ್ಗಾಂ ವಿಸರ್ಗಾಂ ವಿಭೋ ದುಃಖವಾರ್ತಾಂ
ವಿಮುಂಚಂತು ದುಃಖೌಘತಾಪಂ ಪ್ರಕೋಪಂ ॥೫೮॥

ಧ್ಯೇಯೋ ಮಹೇಶಃ ಶ್ರುತಿಜಾತಕೀರ್ತಿಃ
ವಿಶಿಷ್ಟಃ ಶಿವಃ ಶಂಕರಶ್ಶಾದಿಕರ್ಣಃ ।
ಸಮಾಪ್ತಂ ಶಿಖಾಯಾಸ್ತಥಾ ವಾಕ್ಯಜಾಲಂ
ಕಿಮನ್ಯತ್ರ ವಾಕ್ಯಾದಿಶಂಕಾವಕಾಶಃ ॥೫೯॥

ನ ತತ್ರ ಸೂರ್ಯಃ ಪ್ರತಿಭಾತಿ ಸೋಮೋ
ವಹ್ನಿರ್ನ ಋಕ್ಷಾಣಿ ತಥಾ ಹಿ ವಿದ್ಯುತ್ ।

---

(ಮಾನವನು) ಆ ಅದ್ವಿತೀಯನಾದ ಆತ್ಮನೊಬ್ಬನನ್ನೇ ಈ ಹಿಂದೆ ತಿಳಿಸಿದಂತೆ ಅರಿತುಕೊಳ್ಳಬೇಕು. ಇತರ ಲೌಕಿಕವಾರ್ತೆಗಳಿಂದಲೂ, ಶ್ರುತಿಸಂವಾದವಿಲ್ಲದ ಶುಷ್ಕತರ್ಕಜಾಲದಿಂದಲೂ ಏನು ಪ್ರಯೋಜನ? ಓ ಸ್ವಾಮಿ, ಜನರು ಈ ನಿನ್ನ ಅಪರೋಕ್ಷದಿಂದ ಸ್ವಾಭಾವಿಕವಾಗಿ ಅನಾದಿಯಾಗಿ ಬಂದಿರುವ ಜನನಮರಣ ಪ್ರವಾಹರೂಪಸಂಸಾರವನ್ನೂ, ದುಃಖವಾರ್ತೆಯನ್ನೂ, ತ್ರ್ಯಲ್ಪಣಗಳಾದ ಆಧ್ಯಾತ್ಮಿಕಾದಿ ತಾಪತ್ರಯಗಳನ್ನೂ ದೂರಮಾಡಿಬಿಡಲಿ. ॥೫೮॥

ಶ್ರುತಿವಾಕ್ಯಗಳಲ್ಲಿ ಹೊಗಳಲ್ಪಟ್ಟು ಕೀರ್ತಿಶಾಲಿಯಾಗಿಯೂ ವಿಶಿಷ್ಟ ಗುಣಪರಿಪೂರ್ಣನಾಗಿಯೂ, ಲೋಕಕ್ಕೆ ಮಂಗಳಕರನಾಗಿಯೂ, ದುಃಖತಾರಕನಾಗಿಯೂ ಇರುವ ಶ್ರೀ ಪರಮೇಶ್ವರನನ್ನೇ ಧ್ಯಾನಿಸಬೇಕು. ಶಿಖೆ ಎಂದರೆ ಶ್ರುತಿಶಿಖೆ ಉಪನಿಷತ್ತುಗಳು. ಆ ಉಪನಿಷದ್ವಾಕ್ಯಸಮುದಾಯವೆಲ್ಲ ಈಶ್ವರನು ಧ್ಯೇಯನೆಂದು ಪ್ರತಿಪಾದಿಸುವುದರಲ್ಲಿ ಪರಿಸಮಾಪ್ತಗಳಾಗಿವೆ. ಪರಮೇಶ್ವರನನ್ನು ಬಿಟ್ಟು ಅನ್ಯತ್ರ ವೇದಾಂತ (ಉಪನಿಷತ್) ವಾಕ್ಯಗಳಿಗೆ ತಾತ್ಪರ್ಯವಿದೆ ಎಂದು ಶಂಕಿಸುವುದಕ್ಕೂ ಅವಕಾಶವಿಲ್ಲ. ಈಶ್ವರಸ್ವರೂಪಪ್ರತಿಪಾದನೆಯಲ್ಲಿಯೇ ವೇದಾಂತಗಳೆಲ್ಲ ಪರಿಸಮಾಪ್ತಗಳಾಗುವುವು ಎಂದು ಅರಿಯಬೇಕು. ॥೫೯॥

ಆ ಪರಮಾತ್ಮನನ್ನು ಸರ್ವಾವಯವಭಾಸಕನಾದ ಸೂರ್ಯನೂ ಪ್ರಕಾಶಪಡಿಸುವುದಿಲ್ಲ. ಹಾಗೆ ಚಂದ್ರನು, ಅಗ್ನಿಯು, ನಕ್ಷತ್ರಗಳು ಮತ್ತು ಮಿಂಚು ಇವು

ತ್ವದ್ಭಾಸನಾ[1] ದ್ಭಾತಿ ವಿಚಿತ್ರಮೇತತ್ತ್ವಂ
ಜ್ಯೋತಿಷಾಂ ಜ್ಯೋತಿರಸಿ ಪ್ರಸಿದ್ಧಃ ॥೬೦॥

ವಿಶ್ವಂ ಭೂತಂ ಭುವನಂ ವಿಚಿತ್ರಂ
ಅನೇಕಧಾ ಜಾತಮಹೋ ದಿಗೀಶ್ವರೈಃ ।
ನ ಜಾಯಮಾನಂ ವಿಧಿಭಿರ್ಮಹೇಶ
ರುದ್ರಸ್ತ್ವಮಾತ್ಮನ್ ಭಗವನ್ ಪ್ರಸೀದ ॥೬೧॥

ಈಶಾನಮಾಹುರಮೃತಸ್ಯ ವಿಶಾಂಪತಿಸ್ತ್ವಂ
ತೇಜಸಃ ಪಾದಮಿದಂ ಜಗದ್ಗತಂ ।
ಯತೋ ವಿಷ್ಣೋರ್ಮಹಿಮಾ ಸಂಬಭೂವ
ತತೋ ವಿರಾಟ್‌ಪುರುಷಶ್ಚ ಕ್ರಮೇಣ ॥೬೨॥

---

ಗಳೂ ಆ ಪರಮಾತ್ಮನನ್ನು ಪ್ರಕಾಶಪಡಿಸಲಾರವು. ಆ ಪರಮಾತ್ಮನ ಪ್ರಕಾಶದಿಂದಲೇ ಈ ಆದಿತ್ಯಾದಿಗಳೂ ಎಲ್ಲ ಈ ವಿಚಿತ್ರಪ್ರಪಂಚವೂ ಪ್ರಕಾಶಿತವಾಗಿದೆ. ಆದ್ದರಿಂದ ನೀನು (ಶ್ರುತಿಸ್ಮೃತಿಗಳಲ್ಲಿ) ಜ್ಯೋತಿಷಾಂ ಜ್ಯೋತಿಃ ಅಂದರೆ ಪ್ರಕಾಶಕರಾದ ಆದಿತ್ಯಾದಿಗಳಿಗೂ ಪ್ರಕಾಶಕ ಎಂದು ಪ್ರಸಿದ್ಧನಾಗಿರುವೆ. ॥೬೦॥

ಮಹೇಶ್ವರ, ಸಮಸ್ತ ಭೂತಗಳಿಂದಲೂ ಅಷ್ಟದಿಗಧಿಪತಿಗಳಿಂದಲೂ ಕೂಡಿದ ಈ ವಿಚಿತ್ರ ಪ್ರಪಂಚವು ವಸ್ತುತಃ ಪರ್ಯಾಲೋಚಿಸಿದರೆ ಉತ್ಪತ್ತಿಗೆ ಯೋಗ್ಯವಲ್ಲದ್ದರಿಂದ ಅದು ಹುಟ್ಟದಿದ್ದರೂ ಅನೇಕ ವಿಧವಾಗಿ ಆದಂತೆ ಕಾಣುತ್ತದೆ. ಇದು ಆಶ್ಚರ್ಯ. ಓ ವ್ಯಾಪಕನಾದ ಭಗವಂತನೇ, ಪ್ರಸನ್ನನಾಗು. (ಈ ತೋರಿಕೆಯ ಪ್ರಪಂಚದಿಂದ ನನ್ನನ್ನು ಬಂಧಿಸಬೇಡ ಎಂದು ಭಾವ) ॥೬೧॥

ಪಂಡಿತರು ಪರಮೇಶ್ವರನನ್ನು ಮೋಕ್ಷಕ್ಕೆ ನಿಯಾಮಕ ಅಂದರೆ ದಾತೃ ಎಂದು ಹೇಳುತ್ತಾರೆ. ಮತ್ತು ಪ್ರಜಾಧಿಪತಿತ್ವವನ್ನೂ ಈ ಜಗತ್ತಿನ ತೇಜಸ್ಸು ಅವನ

---

1 ವಿ. ಸೂ.—"ನ ತತ್ರ ಸೂರ್ಯೋಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಯಮಗ್ನಿಃ । ತಮೇವಭಾಂತಮನುಭಾತಿ ಸರ್ವಂ ತಸ್ಯ ಭಾಸಾಸರ್ವಮಿದಂ ವಿಭಾತಿ" ಎಂಬ ಮುಂಡಕ, ಕಠವಾಕ್ಯಾರ್ಥವು ಇಲ್ಲಿ ಸ್ಪಷ್ಟವಾಗಿದೆ. ಪ್ರಕೃತಪದ್ಯದಲ್ಲೂ ಶ್ರುತಿಯಲ್ಲೂ ಇರುವ "ಭಾತಿ" ಎಂಬ ಪದಕ್ಕೆ "ಭಾಸಯತಿ" ಎಂದು ಅರ್ಥಮಾಡಬೇಕು. "ಅನುಕೃತೇಸ್ತಸ್ಯ ಚ" ವ್ಯಾ. ಸೂ. ಅ ೧, ಪಾ. ೩, ಸೂ ೨೨ ಮತ್ತು "ನ ತದ್ಭಾಸಯತೇ ಸೂರ್ಯಃ . . . . ವಿದ್ಧಿಮಾಮಕಂ" ಎಂಬ ೧೫ ನೇ ಅಧ್ಯಾಯ ಗೀತೆಯೂ ಈ ವಿಷಯದಲ್ಲಿ ಪ್ರಮಾಣವಾಗಿವೆ

ನ ಕರ್ಮಣಾ ನ ಪ್ರಜಯಾ ಧನೇನ
ನ ವಿದ್ಯಯಾ ತಪಸಾ ವಾಪಿ ಶಂಭೋ ।
ಚಿತ್ತಸ್ಯ ಸಂಕಲ್ಪವಿಕಲ್ಪಜಾಲತ್ಯಾಗೇನ
ತ್ವಾಂ ಸಂಶ್ರಯಂತ್ಯೇವ ಧೀರಾಃ ॥೬೩॥

ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ
ಸಂನ್ಯಾಸಯೋಗಾದ್ಯತಯಃ ಭಕ್ತಿಭಾವಾಃ ।
ತೇ ಬ್ರಹ್ಮಣೋ ಲೋಕಮವಾಪ್ಯ ಧೀರಾ
ಸ್ತಸ್ಯಾಂತಕಾಲೇ ಪ್ರವಿಶಂತಿ ಚ ತ್ವಾಂ ॥೬೪॥

---

ಪ್ರಕಾಶದ ಪಾದಾಂಶವು ಎಂಬುದನ್ನೂ ಹೇಳುತ್ತಾರೆ. ಯಾವ ಪರಮೇಶ್ವರನಿಂದ ವಿಷ್ಣು ಎಂಬ ಮಹಾಮಹಿಮೆಯ ವ್ಯಕ್ತಿಯು ಹುಟ್ಟಿತೋ ಅವನಿಂದಲೇ ಕ್ರಮೇಣ ವಿರಾಟ್‌ಪುರುಷನೂ ಜನಿಸಿದನು ಎಂಬುದಾಗಿ ತಿಳಿಯಬೇಕು. ॥೬೨॥

ಪರಮೇಶ್ವರ, ಪಂಡಿತರು ನಿನ್ನನ್ನು ಕರ್ಮಾನುಷ್ಠಾನ ಮೂಲಕವಾಗಲಿ, ಪ್ರಜೋತ್ಪಾದನ ಮೂಲಕವಾಗಲಿ, ದೈವವಿತ್ತವೆಂಬ ಉಪಾಸನೆಯಿಂದಾಗಲಿ, ವಿದ್ಯೆಯಿಂದಾಗಲಿ, ತಪಸ್ಸಿನಿಂದಾಗಲಿ ಸೇವಿಸುವುದಿಲ್ಲ. ಅಂತಃಕರಣದಲ್ಲಿ ಹುಟ್ಟುವ ಸಂಕಲ್ಪ ವಿಕಲ್ಪಗಳೆಂಬ ವೃತ್ತಿಗಳನ್ನು ಅಡಗಿಸುವುದರ ಮೂಲಕವಾಗಿ ನಿನ್ನನ್ನು ಸೇರುವರು, ಅಂದರೆ ಮನಸ್ಸಿನ ಸಂಕಲ್ಪ ವಿಕಲ್ಪಗಳೆಂಬ ಬಾಹ್ಯವಿಷಯಕ ವೃತ್ತಿಗಳು ಹುಟ್ಟದೇ ಅಡಗಿದರೆ ಮನಸ್ಸು ಆತ್ಮಾಭಿಮುಖವಾಗುವುದು; ಅದರಿಂದ ಪರಮಾನಂದ ಸ್ವರೂಪವಾದ ಮೋಕ್ಷಪ್ರಾಪ್ತಿಯಾಗುವುದು. ॥೬೩॥

ಸರ್ವಕರ್ಮಸಂನ್ಯಾಸರೂಪ ಯೋಗದಿಂದ ಪ್ರಯತ್ನಮಾಡುವ ಸ್ವಭಾವವುಳ್ಳವರಾಗಿಯೂ, ಈಶ್ವರಭಕ್ತಿಯುತ ಭಾವನೆಯುಳ್ಳವರಾಗಿಯೂ, ವೇದಾಂತಾರ್ಥವಾದ ಪರಮಾತ್ಮವಿಷಯಕ ನಿಶ್ಚಯಜ್ಞಾನವುಳ್ಳವರಾಗಿಯೂ ಇರುವ ಜ್ಞಾನಿಗಳು ದೇಹಾವಸಾನದಲ್ಲಿ ಹಿರಣ್ಯಗರ್ಭಲೋಕವನ್ನು (ಕಾರ್ಯಬ್ರಹ್ಮಲೋಕವನ್ನು) ಪಡೆದು ಆ ಹಿರಣ್ಯಗರ್ಭನ ಅಂತಕಾಲ, ಅಧಿಕಾರಾವಸಾನದಲ್ಲಿ ಅವನು ಹೊಂದುವ ವಿದೇಹಕೈವಲ್ಯದ ಸಮಯದಲ್ಲಿ, ಈ ಹಿರಣ್ಯಗರ್ಭನ ಲೋಕಕ್ಕೆ ಹೋದ ಮೇಲೆ ಹೇಳಿದ ಉಪಾಸಕರಾದ ಜ್ಞಾನಿಗಳೂ ಅವನ ಜತೆಯಲ್ಲೇ ತ್ವತ್‌ಪ್ರಾಪ್ತಿರೂಪ ಮೋಕ್ಷವನ್ನು ಪಡೆಯುತ್ತಾರೆ. ಇದರಲ್ಲಿ "ಬ್ರಹ್ಮಣಾ ಸಹತೇ ಸರ್ವೇ ಸಂಪ್ರಾಪ್ತೇ

ಯಸ್ಮಿನ್ನಿದಂ ಸಂಚವಿಚೈತಿ ಸರ್ವಂ
ಯಸ್ಮಿನ್ ದೇವಾ ಅಧಿವಿಶ್ವೇ ನಿಷೇದುಃ ।
ತದೇವ ಭೂತಂ ತದುಭವ್ಯಮಾಹು
ಸ್ತದಕ್ಷರಂ ತ್ವಾಂ ಶ್ರುತಯೋ ವದಂತಿ ॥೬೫॥

ತ್ವಯಾವೃತಂ ಖಂ ಚ ದಿವಂ ಮಹೀಂ ಚ
ತ್ವಯಾದಿತ್ಯಸ್ತಪತಿ ತೇಜಸೇದ್ಧಃ ।
ಅಂತಃ ಸಮುದ್ರೇ ಕವಯೋ ನಿಚಿಕ್ಯುಃ
ತ್ವಾಂ ದುರ್ದರ್ಶಂ ಗೂಢಮನುಪ್ರವಿಷ್ಟಂ ॥೬೬॥

---

ಪ್ರತಿಸಂಚರೇ ಪರಸ್ಯಾಂತೇಕೃತಾತ್ಮಾನಃ ಪ್ರವಿಶಂತಿಪರಂಪದಂ" ಇತ್ಯಾದಿ ಪುರಾಣ ವಚನವು ಪ್ರಮಾಣವಾಗಿದೆ. ॥೬೪॥

ಯಾವ ಪರಮಾತ್ಮನಲ್ಲಿ ಇವೆಲ್ಲ ಕಲ್ಪಿತವೋ, ಯಾವನಲ್ಲಿ ಸಮಸ್ತ ದೇವತೆಗಳೂ ಆಶ್ರಿತರಾಗಿರುವರೋ ಅವನನ್ನೇ ಭೂತಭವಿಷ್ಯದ್ವರ್ತಮಾನ ಕಾಲಗಳಿಗೆ ಅಪರಿಚ್ಛೇದ್ಯವಾದ ಅಕ್ಷರ (ನಾಶವಿಲ್ಲದ) ಬ್ರಹ್ಮಸ್ವರೂಪವೆಂದು ವೇದಾಂತವಾಕ್ಯಗಳು ಹೇಳುವುವು. ಅಂತಹ ಅಕ್ಷರ ವಸ್ತುವು ನೀನಲ್ಲದೇ ಬೇರೆ ಮತ್ತಾರು ? ॥೬೫॥

ಓ ಪರಮೇಶ್ವರ, ನೀನು ಆವರಿಸಿದ ಅಂತರಿಕ್ಷ ಮತ್ತು ಪೃಥಿವೀಲೋಕಗಳನ್ನು ನಿನ್ನ ತೇಜೋವ್ಯಾಪ್ತನಾಗಿಯೇ ಸೂರ್ಯನು ನಿನ್ನ ಸಹಾಯದಿಂದಲೇ ಬೆಳಗಿಸುವನು. "ಯದಾದಿತ್ಯಗತಂ ತೇಜೋಜಗದ್ಭಾಸಯತೇಖಿಲಂ" ಇತ್ಯಾದಿ ಗೀತೆಯೂ, "ಯೇನ .ಸೂರ್ಯಸ್ತಪತಿತೇಜಸೇದ್ಧಃ" ಇತ್ಯಾದಿ ಶ್ರುತಿಯೂ ಈ ವಿಷಯವನ್ನೇ ತಿಳಿಸುತ್ತದೆ. ನೀನು ಪರಮಸೂಕ್ಷ್ಮ ಆಕಾಶಾದಿಗಳಿಗೂ ಕಾರಣನಾದುದರಿಂದ ಅತಿ ಸೂಕ್ಷ್ಮನು. ಮತ್ತು ದುರ್ದರ್ಶನನು ನೀನು. ಮತ್ತು ಪ್ರಾಕೃತ ಶಬ್ದಾದಿ ವಿಷಯವಿಜ್ಞಾನಗಳಿಂದ ಆಚ್ಛಾದಿತನು. ಅಂತಹ ನಿನ್ನನ್ನು ಬಾಹ್ಯವಿಷಯಗಳಿಂದ ಇಂದ್ರಿಯೋಪಸಂಹಾರಮಾಡಿಕೊಂಡ ಜಿತೇಂದ್ರಿಯರಾದ ಜ್ಞಾನಿಗಳೂ ತಮ್ಮ ಅಂತಃಕರಣದಲ್ಲಿಯೇ ಹುಡುಕಿ ತಿಳಿದುಕೊಳ್ಳುತ್ತಾರೆ. (ಸ್ವಚ್ಛಾಂತಃಕರಣದಲ್ಲೇ ಆತ್ಮನಿಗೆ ಉಪಲಬ್ಧಿ ಅನ್ಯತ್ರ ಇರುವುದಿಲ್ಲ.) ॥೬೬॥

ದೃಷ್ಟ್ವಾಽಂಬಿಕೋತ್ಸಂಗಗತಂ ಚ ಬಾಲಂ
ಶೂಲೀ ಭವಲ್ಲೋಲವಿಲೋಚನಾಂತೈಃ ।
ಸ ವಜ್ರಜಂಭಾರಿಕರಂ ಮಹೇಶ
ಸಂಸ್ತಂಭಯದ್ಯೋ ಭುವನಾನಿ ಸಪ್ತ ॥೩೭॥

ದಹನಪವನಶಕ್ರಾ ಯಕ್ಷರೂಪಂ ಮಹೇಶಂ
ತೃಣಮಪಿ ಚ ತದಗ್ರೇ ದಗ್ಧುಮಾದಾತುಮೈಚ್ಛನ್ ।
ನಿವೃತ್ತಭಾವಾ ಭಗವಂತಮಾರಾತ್
ಉಮಾಪ್ರಸಾದೇನ ವಿದಗ್ಧನೋಹಾಃ ॥೩೮॥

---

ಓ ಮಹೇಶ್ವರ, ತ್ರಿಶೂಲಧಾರಿಯಾದ ನೀನು ಪಾರ್ವತಿಯ ತೊಡೆಯ ಮೇಲೆ ಕುಳಿತಿರುವ ಮಗುವನ್ನು ಚಂಚಲವಾದ ಕಡೆಗಣ್ಣನೋಟದಿಂದ ನೋಡಿ, ಸಪ್ತಭುವನವನ್ನೂ ಅಲುಗಾಡದೇ ಸ್ತಬ್ಧವನ್ನಾಗಿ ಮಾಡಿರುವೆ. ಅದಂತಿರಲಿ. ವಜ್ರಾಯುಧ ಸಹಿತವಾಗಿ ನಿನ್ನ ಮೇಲೆ ಯುದ್ಧಕ್ಕೆ ಬಂದ ಇಂದ್ರನ ಕರವನ್ನು ದಕ್ಷಯಜ್ಞದಲ್ಲಿ ನಿಶ್ಚಲವನ್ನಾಗಿ ಮಾಡಿದೆ. ॥೬೭॥

ಶಿವನೇ, ಪೂರ್ವದಲ್ಲಿ ಅಸುರಜಯವು ತಮ್ಮಿಂದಲೇ ಆಯಿತೆಂದು ಗರ್ವಿತರಾದ ದೇವತೆಗಳಿಗೆ ಗರ್ವಾಪಹರಣ ದ್ವಾರಾ ಜ್ಞಾನೋದಯವಾಗಲೆಂಬ ಅಭಿಪ್ರಾಯದಿಂದ ನೀನು ಪೂಜ್ಯವಾದ ಒಂದು ಯಕ್ಷರೂಪವನ್ನು ಧರಿಸಿ ದೇವತೆಗಳ ಇದಿರಿಗೆ ಕಾಣಿಸಿಕೊಂಡೆ. ಆ ಯಕ್ಷ (ಪೂಜ್ಯ) ಮಹೇಶನನ್ನೇ ಯಾರೆಂದು ತಿಳಿದುಕೊಳ್ಳುವುದಕ್ಕಾಗಿ ಪ್ರಥಮದಲ್ಲಿ ನಿನ್ನ ಸಮೀಪಕ್ಕೆ ಹೋದ ಅಗ್ನಿಯು ನೀನಿಟ್ಟ ತೃಣವನ್ನು ಸುಡಲು ಅಶಕ್ತನಾದನು. ಹಾಗೆಯೇ ನಿನ್ನ ಸ್ವರೂಪವನ್ನರಿಯದೇ ಹಿಂತಿರುಗಿದನು. ಅನಂತರ ವಾಯುವು ಹೋಗಿ ಸ್ವಶಕ್ತಿಯಿಂದಯಕ್ಷನ ಇದಿರು ತೃಣವನ್ನು ಗ್ರಹಣಮಾಡಬೇಕೆಂದೆಣಿಸಿ ಅಸಮರ್ಥನಾಗಿ ಹಿಂದಿರುಗಿದನು. ಹಾಗೆಯೇ ಇಂದ್ರನು ಸಮೀಪಕ್ಕೆ ಹೋದಾಗ ಆ ಯಕ್ಷನು ಅಂತರ್ಹಿತನಾದ್ದರಿಂದ ಅವನಿಗೂ ಅವನಪರಿಚಯವಾಗಲಿಲ್ಲ. ಹೀಗೆ ಈ ಅಗ್ನ್ಯಾದಿ ಮೂವರೂ ವಿಫಲರಾದ ಮೇಲೆ ಭಗವಂತನಾದ ನಿನ್ನ ಸ್ವರೂಪವನ್ನು ಯಾವಾಗಲೂ ಪರಮೇಶ್ವರಸಾನ್ನಿಧ್ಯದಿಂದ ಶಿವಸ್ವರೂಪವನ್ನು ಅರಿತಿರುವ ಉಮಾದೇವಿಯು ಇವರಿಗೆ ತಿಳಿಸಿದಳು. ಹೀಗೆ ಉಮೆಯ ಪ್ರಸಾದದಿಂದ ಇಂದ್ರಾದಿ ದೇವತೆಗಳು ಆ ಯಕ್ಷನ ಸ್ವರೂಪವನ್ನೇ

ಯಾ ಚೋಮಾಭಗವಂಸ್ತ್ವದಂಕವಸತಿರ್ಯಸ್ಯಾಃ ಕೃಪಾಲೇಶತೋ
ಜಾತಂ ವಿಶ್ವಮಿದಂ ವಿಚಿತ್ರಜನಕಂ ಯಾ ಸಾ ಸ್ವಯಂ ಮೋಹಯೇತ್ ।
ಯಾಂ ದೇವಾ ಮುನಯೋಽಪ್ಯಮೀ ಸ್ತುತಿಶತೈಸ್ಸ್ತುತ್ವಾ ತ್ವದೀಯಂ ಶುಭಂ
ವಿಜ್ಞಾನಂ ಸಮವಾಪ್ಯ ಮುಕ್ತಕರಣಾ ಮುಕ್ತಿಂ ಪ್ರಯಾಂತ್ಯೇವ ತೇ ॥೬೯॥

ಈಶಾನಸ್ತ್ವಂ ಸರ್ವವಿದ್ಯಾಧಿನಾಥಸ್ತ್ವಂ
ವೇದಾದೌ ಸ್ವರ ಏಕೋ ಮಹೇಶಃ ।
ತಸ್ಯ ತ್ವಂ ಶೇ ಪ್ರಕೃತೌ ಸಂಪ್ರಲೀನತ್
ಪ್ರಾಣೋ ದೇವಃ ಪ್ರಣವಸ್ತ್ವಂ ಮಹೇಶ ॥೭೦॥

---

ಅರಿತು ತದ್ವಿಷಯಕ ಭ್ರಾಂತಿಯನ್ನು ಆಗ ಕಳೆದುಕೊಂಡರು. (ಇಲ್ಲಿ ಕೇನೋಪನಿಷತ್ತಿನ "ಬ್ರಹ್ಮಹದೇವೇಭ್ಯೋ ವಿಜಿಗ್ಯೇ" ಇತ್ಯಾದಿ ವಾಕ್ಯಗಳಿಂದ ತಿಳಿಸಿದ ಕಥೆಯು ಸಂಗೃಹೀತವಾಗಿದೆ.) ॥೬೮॥

ಓ ಭಗವಂತನೇ, ಲೋಕಮಾತೆಯಾದ ಪಾರ್ವತಿಯು ನಿನ್ನ ಊರುವಿನಲ್ಲಿ ವಾಸಿಸುವಳು. ಆಶ್ಚರ್ಯೋತ್ಪಾದಕವಾದ ಈ ಸಮಸ್ತ ಪ್ರಪಂಚವು ಆಕೆಯ ಕೃಪಾಲೇಶಮಾತ್ರದಿಂದ ಜನಿಸಿರುವುದು. ದೇವಿಯು ಆತ್ಮಸ್ವರೂಪವನ್ನು ಮರೆಮಾಡಿ ವಿಪರೀತಜ್ಞಾನದಿಂದ ಲೋಕವನ್ನು ತಾನಾಗಿ ಮೋಹಿಸುವಳು. ಈ ಲೋಕಮಾತೆಯನ್ನು ದೇವತೆಗಳೂ ಜ್ಞಾನಿಗಳೂ ನೂರಾರು ಸ್ತೋತ್ರಗಳಿಂದ ಸ್ತುತಿಸಿ, ಅದರಿಂದ ಮಾಯಾಸ್ವರೂಪಿಣಿಯಾದ ದೇವಿಯ ಪ್ರತಿಬಂಧಕವನ್ನು ನಿವೃತ್ತಿಪಡಿಸಿಕೊಂಡು, ನಿನ್ನ ವಿಷಯಕವಾದ ಶುಭವಿಜ್ಞಾನವನ್ನು ಪಡೆದು, ಅದರಿಂದ ತಮ್ಮ ಸಕಲ ಕರಣಗಳನ್ನೂ ಆತ್ಮನಲ್ಲಿ ಲಯಮಾಡಿ, ವಿಮುಕ್ತಕರಣರಾಗಿ ಕೊನೆಗೆ ಅವರು ವಿದೇಹ ಕೈವಲ್ಯವನ್ನು ಪಡೆಯುವರು. ॥೬೯॥

ಪರಮೇಶ್ವರ! ನೀನು ಸಮಸ್ತ ಪ್ರಪಂಚನಿಯಾಮಕನು. ಸರ್ವವಿದ್ಯೆಗಳಿಗೂ ನಾಯಕನು. ನೀನೇ ವೇದಾದಿಯಲ್ಲಿರುವ ಅಕಾರಾತ್ಮಕ ಮುಖ್ಯ ಸ್ವರವು. ಪರಮೇಶ್ವರನು. ಕೊನೆ ಕಾಲದಲ್ಲಿ ನಿನ್ನ ಅಧೀನವಾದ ಮೂಲಪ್ರಕೃತಿಯೆಂಬ ಅನಾದಿಮಾಯೆಯಲ್ಲಿ ಲಯವಾಗುವ ಪ್ರಾಣದೇವ (ಹಿರಣ್ಯಗರ್ಭ) ನು ನೀನೇ. ಮತ್ತು ನೀನೇ ವೇದಸಾರಭೂತವಾದ ಪ್ರಣವ (ಓಂಕಾರ) ಸ್ವರೂಪನು. ॥೭೦॥

ಸದೈವ ತ್ವಾ ನ ವಿದುರಮರಾಃ ಕೇವಲಮಹೋ
ತ್ವಮಾತ್ಮಾ ಶಕ್ರಸ್ಯ ಪ್ರತಿಹತಗುಣೋ ದೇವಶತಧಾ ।
ಚರಸ್ಯೇಕೋ ನಾಡೀಷ್ವಮಿತಪರಮಾನಂದಮಧುರೋ
ಹೃದಾ ಪಶ್ಯಂತೀಶಂ ಯಮಿತಕರಣಾಸ್ತೇ ಹಿ ಮನಸಾ ॥೭೧॥

ಯೋ ವೈ ರುದ್ರ ಇತಿ ಶ್ರುತಿಃ ಪ್ರತಿಪದಂ ವಕ್ತಿ ತ್ವದೀಯಾಂಶಕಂ
ಚಂದ್ರೇಂದ್ರಾನಲಭಾಸ್ಕರಂ ಹರಿವಿಧಿಸ್ಕಂದಾ ಗಣಾನಾಂ ಪತಿಃ ।
ಏವಂ ತ್ವನ್ಮಯಮೇತದೇವ ಜಗತಿ ತಚ್ಛಾದಿಶಬ್ದೈಃ ಶ್ರುತಿ
ರ್ನಿರ್ವಕ್ತಿ ಪ್ರಮಥಾಧಿನಾಥ ಸುತರಾಂ ತ್ವಾಂ ದೇವದೇವಂ ಸದಾ ॥೭೨॥

ವೇದಾಹಮೇತಂ ಪುರುಷಂ ಮಹಾಂತ
ಮಾದಿತ್ಯವರ್ಣಂ ತಮಹ ಪರಸ್ತಾತ್ ।

---

ದೇವ! ಯಾವಾಗಲೂ ನೀನು ಅದ್ವಿತೀಯಬ್ರಹ್ಮಸ್ವರೂಪನು ಎಂದು ದೇವತೆಗಳೂ ಅರಿತಿಲ್ಲ. ಇದು ಆಶ್ಚರ್ಯ. ನೀನು ಇಂದ್ರನ ಆತ್ಮಭೂತನು. ಶತಧಾ ನಿನ್ನ ಗುಣಗಳು ನಷ್ಟಗಳಾಗಿವೆ. (ನಿರ್ಗುಣಸ್ವರೂಪನು) ನಿರತಿಶಯ ಪರಮಾನಂದಸ್ವರೂಪನಾದ ನೀನು ಈ ಸಂಘಾತಾತ್ಮಕಶರೀರದಲ್ಲಿ ಜೀವರೂಪದಿಂದ ಪ್ರವೇಶಿಸಿ ನಾಡಿಗಳಲ್ಲಿ ಒಬ್ಬನಾಗಿಯೇ ಸಂಚರಿಸುವೆ. ಬಾಹ್ಯಾಭ್ಯಂತರಕರಣ ಗಳನ್ನು ಜಯಿಸಿದ ವಿದ್ವಾಂಸರು ಸುಸಂಸ್ಕೃತವಾದ ಮನಸ್ಸಿನಿಂದ ತಮ್ಮ ಹೃದಯ ದಲ್ಲೇ ಈಶ್ವರಾಪರೋಕ್ಷವನ್ನು ಪಡೆಯುವರು. ॥೭೧॥

ಪ್ರಮಥಗಣಾಧಿಪನೇ, ಯೋ ವೈ ರುದ್ರ ಇತ್ಯಾದಿ ಶ್ರುತಿಯು ಚಂದ್ರ, ಇಂದ್ರ, ಅಗ್ನಿ, ಸೂರ್ಯ ಇವರು ನಿನ್ನ ಅಂಶಸಂಭೂತರೆಂದು ಬಾರಿ ಬಾರಿಗೂ ಹೇಳುತ್ತಿದೆ. ಮತ್ತು ವಿಷ್ಣು, ಬ್ರಹ್ಮ, ಸ್ಕಂದ, ಗಣಪತಿ ಇವರೂ ನಿನ್ನ ಅಂಶರು. ಈರೀತಿ ಜಗತ್ತೆಲ್ಲ ಶಿವಮಯವಾಗಿದೆ. ಶ್ರುತಿಯೂ ಕೂಡ ದೇವತೆಗಳಿಗೂ ದೇವನಾದ ನಿನ್ನನ್ನು ಪ್ರಪಂಚಸ್ವರೂಪನೇ ನೀನು ಎಂದು ಅರ್ಥಕೊಡುವ ಅನೇಕ ಶಬ್ದಗಳಿಂದ ನಿನ್ನ ಸ್ವರೂಪವನ್ನೇ ನಿರ್ವಚನಮಾಡಿ ಸದಾ ತಿಳಿಸುತ್ತಿರುವುದು. ॥೭೨॥

ಶಂಭುವೇ, ನಾನು ಈ ವ್ಯಾಪಕನಾಗಿಯೂ ಆದಿತ್ಯವರ್ಣನಾಗಿಯೂ ಮಾಯಾಸಂಬಂಧವಿಲ್ಲದವನಾಗಿಯೂ ಇರುವ ಪುರುಷನನ್ನು ತಿಳಿದಿದ್ದೇನೆ. ನೀನು

ಸರ್ವಾಣಿ ರೂಪಾಣಿ ಸದೈವ ಶಂಭೋ
ಕೃತ್ವಾಧಿತಿಷ್ಠಸ್ಯಥ ಪದ್ಮಜೇನ ॥೭೩॥

ಸ್ತುತೋಽಸಿ ಹೃಷ್ಟಿಪ್ರಥನಾಯ ಚಾಗ್ರೇ
ಇಂದ್ರೇಣ ಚಾಶಾಮಧಿಪೈಶ್ಚ ಸರ್ವದಾ ।
ಜ್ಞಾತ್ವಾ ಪರಂ ತ್ವಾ ಭವತೇ ವೀತಶೋಕಾ
ನಾನ್ಯಃ ಪಂಥಾ ವಿದ್ಯತೇಽಯನಾಯ ॥೭೪॥

ತ್ವನ್ಮನ್ಯವೇ ಚ ಕರಜಾತಧನುಃ ಶರಾಣಾಂ
ಹೇತಿಂ ತಥೈವ ಶರವೀನಮುಸಾಂಗಣೈಶ್ಚ
ವಕ್ತಿ ಶ್ರುತಿಃ ಪ್ರಮಥನಾಥ ತವೋರುಭಾವಂ
ಸರ್ವಾತ್ಮಕಂ ಬಹುಭಯಾತ್ಕಿಲ ವೇದವೇದ್ಯ ॥೭೫॥

ಅರಣ್ಯಾದಿನಾಮ್ನೈರ್ಭವಾದ್ಯೈಶ್ಚ ಹೋಮ್ಯೈಃ
ಶಿವಾಯೇತಿ ಚ ತ್ವಾಂ ಮಹೇಶಂ ನತೋಽಸ್ಮಿ ।

---

ಮೊದಲು ಬ್ರಹ್ಮನನ್ನು ಸೃಷ್ಟಿಸಿ ತದ್ವಾರಾ ಸರ್ವಕಾರ್ಯರೂಪಗಳನ್ನು ರೂಪುಗೊಳಿಸಿ ಅವುಗಳಲ್ಲಿ ನೀನು ಅಧಿಷ್ಠಿತನಾಗಿರುವೆ ಎಂಬುದೇ ನಿಜವಾದ ತತ್ವ. ॥೭೩॥

ಪರಮೇಶ್ವರ, ನೀನು ಈ ವಿಸ್ತೃತವಾದ ಪ್ರಪಂಚವನ್ನು ಸೃಷ್ಟಿಮಾಡಿದ್ದನ್ನು ಉದ್ದೇಶಿಸಿ ಪೂರ್ವದಲ್ಲಿ ಇಂದ್ರ ಮತ್ತು ಇತರ ದಿಕ್ಪಾಲಕರು, ಎಲ್ಲರೂ ಸರ್ವದಾ ನಿನ್ನನ್ನು ಸ್ತುತಿಸಿರುತ್ತಾರೆ. ಪರಮಾತ್ಮನಾದ ನಿನ್ನ ಅಪರೋಕ್ಷವನ್ನು ಪಡೆದು ಜ್ಞಾನಿಗಳು ಶೋಕನಿವೃತ್ತಿಯನ್ನು ಹೊಂದಿರುವರು. ಮೋಕ್ಷಕ್ಕೆ ಪರಮಾತ್ಮಜ್ಞಾನ ಒಂದನ್ನು ಬಿಟ್ಟು ಇತರ ಸುಲಭಮಾರ್ಗವಾವುದೂ ತೋರುವುದಿಲ್ಲ. ॥೭೪॥

ಪ್ರಮಥಾಧಿಪನೇ, ವೇದಪ್ರತಿಪಾದ್ಯನೇ, ನೀನು ಕುಪಿತನಾದಾಗ ಆ ಕೋಪಕ್ಕಾಗಿ ಕೈಯ್ಯಲ್ಲಿ ಧನುರ್ಧಾರಣಮಾಡಿ, ಆ ಧನುರ್ಮುಕ್ತಶರಗಳ ಏಟು ಗಳಿಂದಲೂ, ಹಾಗೆ ಬಾಣಗಳ ಸಮುದಾಯಗಳು ಇವುಗಳಿಂದಲೂ ಆ ಕೋಪವನ್ನು ಅಡಗಿಸುವೆ ಎಂದು ಶ್ರುತಿಯು ಬಹು ಭಯದಿಂದ ಸರ್ವಾತ್ಮಕವಾದ ನಿನ್ನ ಮಹಿಮಾತಿಶಯವನ್ನು ತಪ್ಪದೆ ಹೇಳುತ್ತದೆ. ॥೭೫॥

ಪರಮೇಶ್ವರನೇ, ಮಹೇಶ್ವರನಾದ ನಿನಗೆ ನಾನು ಹಿರಣ್ಯಾದಿ ನಾಮಗಳನ್ನು ಹೇಳಿಕೊಂಡು, ಹಾಗೆ ಭವಾದಿನಾಮ, ಸೋಮ, ಶಿವ ಇತ್ಯಾದಿ ಪವಿತ್ರವಾದ

ಇಂದ್ರಂ ಮಿತ್ರಂ ವರುಣಮನಲಂ ಪಂಕಜಾತ
ಮೇಕಂ ನಾನಾರೂಪಂ ಹರಿಮಿತಿ ಮುಖಕೇ
ತ್ವಾಂ ಹ್ವಯಂತೇಧ್ವರೇಶಂ ॥೭೬॥

ತೇಷಾಂ ತತ್ತಚ್ಛ್ರುತಿಭಿಃ ಪರಿಪಿಬಸಿ
ಮಹಾಸೋಮಮಿಶಾನತುಷ್ಟಃ
ಸಾರ್ಥಂ ಕಾಮ್ಯೈಶ್ಚ ಪುಷ್ಣಾಸ್ಯಖಿಲಭವಹರೋ
ಬ್ರಾಹ್ಮಣಾನ್ ಸೋಮಪೂತಾನ್ ॥೭೭॥

ತ್ವಂ ವೇದೇಷು ಪ್ರಥಿತೋ ವಿಪ್ರವರ್ಯೋ
ಮನುಷ್ಯೋಽಹಂ ಬ್ರಾಹ್ಮಣಶ್ಚಾದ್ಯಕಾಮಃ
ತಸ್ಮಾತ್ಸೋಮೋ ಬ್ರಾಹ್ಮಣಾನಾಂ ಹಿ ರಾಜಾ
ವೇದೇಷು ತ್ವಂ ಪ್ರಥಿತಶ್ಚೋಪವೀತೀ
ತಸ್ಮಾಚ್ಛ್ರೇಯಸ್ತ್ವತ್ಪದಾಬ್ಜಂ ಮಹೇಶ ॥೭೮॥

---

ಹೆಸರುಗಳಿಂದ ನಿನಗೆ ನಮಸ್ಕಾರಮಾಡುತ್ತೇನೆ. ಏಕೆಂದರೆ ಕರ್ತೃ ಭೋಕ್ತೃ ರೂಪೇಣ ಯಜ್ಞಕರ್ಮಾಧೀಶ್ವರನು ನೀನೊಬ್ಬನಾದರೂ, ಏಕನಾದ ನಿನ್ನನ್ನೇ ಯಾಗಕಾಲದಲ್ಲಿ ಕರ್ಮಿಗಳು ಇಂದ್ರ, ಮಿತ್ರ, ವರುಣ, ಅಗ್ನಿ, ಪದ್ಮೋದ್ಭವ, ಹರಿ ಎಂದು ನಾನಾರೂಪವಾಗಿ ಆಹ್ವಾನಿಸುತ್ತಾರೆ ಅಲ್ಲವೆ! ॥೭೬॥

ಈಶ್ವರನೇ, ಮೇಲೆ ಹೇಳಿದಂತೆ ಕರ್ಮಿಗಳು ಮಾಡುವ ಆಯಾಯಾ ಆಹ್ವಾನ ಶ್ರುತಿಗಳಿಂದ ಸಂತುಷ್ಟನಾಗಿ ನೀನು ಆ ಯಾಗಗಳಲ್ಲಿ ಮಹಾಸೋಮಪಾನ ಮಾಡುತ್ತೀಯೆ. ಆ ರೀತಿಯ ಸೋಮಯಾಗಾನುಷ್ಠಾನದಿಂದ ಪವಿತ್ರರಾದ ಬ್ರಾಹ್ಮಣರಿಗೆ (ಜ್ಞಾನೋತ್ಪಾದನದ್ವಾರಾ) ಸಮಸ್ತ ಸಂಸಾರನಿವೃತ್ತಿ ಮಾಡುವೆ ಯಲ್ಲದೆ, ಅದರ ಜೊತೆಗೆ ಐಹಿಕಸಕಲಕಾಮಪ್ರದಾನದಿಂದಲೂ ಅವರನ್ನು ಪೋಷಿಸುವೆ. ॥೭೭॥

ಓ ಮಹೇಶ್ವರನೇ, ನೀನು ವೇದಗಳಲ್ಲಿ ಬ್ರಾಹ್ಮಣೋತ್ತಮನೆಂದು ಪ್ರಸಿದ್ಧ ನಾಗಿರುವೆ. ನಾನು ಸಕಾಮನಾದ ಮನುಷ್ಯನು, ಬ್ರಾಹ್ಮಣವರ್ಗದವನು. ನೀನು ವಿಪ್ರವರ್ಯನಾಗಿರುವುದರಿಂದಲೇ ಉಮಾಸಮೇತನಾದ ನೀನು ವೇದಗಳಲ್ಲಿ ಯಜ್ಞೋಪವೀತಿ ಬ್ರಾಹ್ಮಣರಾಜನೆಂದು ಪ್ರಸಿದ್ಧನಾಗಿರುವೆ. (ಶ್ರುತಿಯಲ್ಲಿ ಸೋಮ

ದ್ವೈಧೀಭಾವೈರನೇಕೈಃ ಶ್ರುತಿಶತವಿಹಿತೈಃ ಪೂರ್ವಪಕ್ಷೈರನೇಕೈ
ರ್ನಾನಾದೇಹೈಸ್ತ್ವಯೀಶೇ ಉಪವಸನಪರಾಃ ಕಲ್ಪಯಂತ್ಯದ್ವಿತೀಯಂ ।
ದೇಹೈರ್ಭೂತೇಂದ್ರಿಯೋತ್ಥೈಃ ಜನಿಶತವಿತತೈಃ ಕರ್ಮಸಂಕಲ್ಪಜಾತೈಃ
ಸರ್ವೈರ್ಭಿನ್ನಸ್ತ್ವಮಾತ್ಮಾ ಭವಸಿ ಶ್ರುತಿಗತೈರ್ನೇತಿ ನೇತ್ಯಾದಿವಾಕ್ಯೈಃ ॥೭೯

ಶುಕ್ತಿಸ್ತ್ವಂ ರಜತಂ ಜಗತ್ತ್ವಯಿ ಸದಾ ಭಾತೀದಮತ್ಯದ್ಭುತಂ
ತ್ವಜ್ಞಾನೇ ಸತಿ ಭೇದಮಾನಮಖಿಲಂ ತ್ವಯ್ಯೇವ ಸಂಲೀಯತೇ ।
ಯಸ್ಮಿನ್ ಜ್ಞಾತೇತಿ ಶ್ರುತ್ವಾ ಮನನಪರಿಗತಾ ಪಾದಯುಕ್ತ್ಯಾ ಗುರೂಕ್ತ್ಯಾ
ವೇದಾಂತಾರ್ಥೈಕಶಕ್ತ್ಯಾ ತ್ವಮಸಿ ಭವಶತೋಽಭೇದತಃ ಸಾಧಕಾನಾಂ॥೮೦॥

---

ಸೋಮಲತೆ, ಬ್ರಾಹ್ಮಣರಿಗೆ ರಾಜ. ಚಂದ್ರನಿಗೂ ಸೋಮಲತೆಗೂ ರಾಜನೆಂದು ಶಿವನಿಗೆ ಹೆಸರಿದೆ.) ಆದ್ದರಿಂದ ನಿನ್ನ ಪಾದಕಮಲಗಳೇ ಶ್ರೇಯಸ್ಸಾಧನಗಳು.॥೭೮॥

ಪರಮೇಶ್ವರನಾದ ನಿನ್ನಲ್ಲಿ ಅತಿ ಸಾಮಿಪ್ಯದಿಂದ ವಾಸಮಾಡಬೇಕೆಂಬ ಅಭಿಪ್ರಾಯವುಳ್ಳವರು ಅಂದರೆ ಈಶ್ವರಭಾವಾಪತ್ತಿರೂಪಮೋಕ್ಷಕಾಮನೆಯುಳ್ಳ ಜ್ಞಾನಿಗಳು ಅನೇಕತರವಾದ ದ್ವೈತಭಾವಗಳಿಂದಲೂ, ಅನೇಕಕಡೆಗಳಲ್ಲಿ ಪೂರ್ವ ಪಕ್ಷವಾಗಿ ಹೇಳಿರುವ ಶ್ರುತಿವಾಕ್ಯಗಳಿಂದಲೂ, ನಾನಾದೇಹಗಳಿಂದಲೂ ದ್ವೈತವು ಸತ್ಯವೆಂದು ತೋರಿದರೂ ಅದನ್ನು ಖಂಡಿಸಿ ನಿನಗೆ ಅದ್ವಿತೀಯತ್ವವನ್ನು ಸ್ಥಾಪಿಸು ವರು. ನೂರಾರು ಜನ್ಮಗಳಲ್ಲಿ ಅನುವೃತ್ತವಾಗಿರುವ ಪಂಚಭೂತ, ಸೂಕ್ಷ್ಮ, ಇಂದ್ರಿಯ ಇವುಗಳ ಸಮುದಾಯದಿಂದಲೂ, ಮತ್ತು ಪ್ರಾಚೀನಕರ್ಮಸಂಕಲ್ಪ ಇವು ಗಳಿಂದಲೂ ಜನಿಸುವ ಶರೀರಗಳಿಂದ ಭಿನ್ನನಾಗಿಯೂ ವ್ಯಾಪಕನಾಗಿಯೂ ಇರುವ ನೀನು ವೇದಾಂತಗಳಲ್ಲಿರುವ "ನೇತಿನೇತಿ" ಇತ್ಯಾದಿ ವಾಕ್ಯಗಳಿಂದ ತಿಳಿಯಲ್ಪಡು ವವನಾಗುವೆ. (ಬೃಹದಾರಣ್ಯಕದಲ್ಲಿ "ಅಥಾತ ಆದೇಶೋ ನೇತಿನೇತಿ" ಎಂದು ಮೂರ್ತಾಮೂರ್ತಪ್ರತಿಷೇಧಮುಖೇನ ಆತ್ಮನನ್ನು ನಿರೂಪಿಸಿದೆ.) ॥೭೯॥

ಶುಕ್ತಿ (ಮುತ್ತಿನ ಚಿಪ್ಪು) ಸ್ಥಾನೀಯನಾದ ನಿನ್ನಲ್ಲಿ ರಜತ (ಬೆಳ್ಳಿ) ಸ್ಥಾನೀಯ ವಾದ ಜಗತ್ತು ಯಾವಾಗಲೂ ತೋರುತ್ತದೆಂಬುದು ಆತ್ಯದ್ಭುತವು. ನಿನ್ನ ಸಾಕ್ಷಾ ತ್ಕಾರವಾದಮೇಲೆ ಭೇದಪ್ರಮಾಣವೆಲ್ಲ ನಿನ್ನಲ್ಲೇ ಲಯವಾಗುತ್ತದೆ. ಮೋಕ್ಷಸಾಧಕ ರಾದ ಮುಮುಕ್ಷುಗಳು "ಯಸ್ಮಿನ್ ಜ್ಞಾತೇ" ಇತ್ಯಾದಿ ಶ್ರುತಿವಾಕ್ಯವನ್ನು ಕೇಳಿ, ಯಾವ ಆತ್ಮಸ್ವರೂಪಾಪರೋಕ್ಷಜ್ಞಾನವಾದರೆ ಸಮಸ್ತವೂ ತಿಳಿದಂತಾಗುತ್ತದೋ

ಪ್ರಜ್ಞಾನಂ ಬ್ರಹ್ಮ ಏವಾಯಮಾತ್ಮಾ ಬ್ರಹ್ಮಪುಚ್ಛಂ ಪ್ರತಿಷ್ಠೇ
ತ್ಯಹಂ ಬ್ರಹ್ಮಾಸ್ಮೀತಿ ಶ್ರುತಿಶಿಖರಗೈಸ್ತತ್ತ್ವಮಸ್ಯಾದಿವಾಕ್ಯೈಃ ।
ತತ್ತ್ವಂ ಶಬ್ದಾರ್ಥಭೇದವ್ಯಪಗಮನಿಯತಾ ಯೇ ಯತಂತೇ ಯತೀಂದ್ರಾ
ಸ್ತೇಷಾಂ ಕೋಟಿಶತೇಷು ತ್ವಮಸಿ ಭವಶತೋಚ್ಛೇದಕಸ್ತ್ವಂತರಾತ್ಮಾ॥೮೧॥

ತವ ಜ್ಞಾನಮೇತಂ ಭವಚ್ಛೇದಹೇತುಃ
ಶ್ರುತಿಶ್ಚಾಪಿ ನಾನ್ಯಃ ಪಂಥೇತ್ಯಾಹ ಸತ್ಯಂ ।
ಭವದ್ಭಕ್ತಿಲಭ್ಯಂ ಹಿತಜ್ಞಾನಮಿಷ್ಟಂ
ನ ತಚ್ಛ್ರವಣೇನಾಪಿ ಲಭ್ಯಂ ಕದಾಚಿತ್ ॥೮೨॥

---

ಎಂದು ಶ್ರುತಿ ಹೇಳಿದ್ದನ್ನು ಕೇಳಿ ಗುರುಗಳು ಬೋಧಿಸಿದ ಅದ್ವೈತಾರ್ಥವನ್ನು ಅಪರಿಮಿತ ಯುಕ್ತಿಸಹಿತವಾಗಿ ಮನನಮಾಡುವರು. "ತತ್ತ್ವಮಸಿ" ಇತ್ಯಾದಿ ವೇದಾಂತವಾಕ್ಯಾರ್ಥವಾದ ಅದ್ವೈತಬ್ರಹ್ಮವಿಷಯಕವಾದ ಅಖಂಡಾಕಾರವೃತ್ತಿಯಲ್ಲಿ ಪ್ರತಿಬಿಂಬಿತನಾದ ನೀನು, ಆ ಸಾಧಕರಿಗೆ ಮುಂದೆ ಬರುವ ನೂರಾರು ಜನ್ಮಗಳ ನಾಶಕನಾಗುವೆ. ಅಂದರೆ ಅವರು ಮುಕ್ತರಾಗುವರು. ॥೮೦॥

ಪೂಜ್ಯ ಯತಿವರ್ಯರು "ಪ್ರಜ್ಞಾನಂ ಬ್ರಹ್ಮ" "ಅಯಮಾತ್ಮಾ ಬ್ರಹ್ಮ" "ಬ್ರಹ್ಮಪುಚ್ಛಂ ಪ್ರತಿಷ್ಠಾ" "ಅಹಂ ಬ್ರಹ್ಮಾಸ್ಮಿ" "ತತ್ವಮಸಿ" ಇತ್ಯಾದಿ ವೇದಾಂತ ಗ್ರಂಥಗಳಲ್ಲಿರುವ ವಾಕ್ಯಗಳಿಂದ 'ತತ್ವಂ' ಶಬ್ದಗಳ ವಾಚ್ಯಾರ್ಥಗಳಿಗೆ ವಿರೋಧ ವಿರುವುದರಿಂದ ವಾಕ್ಯವು ಸಂಭವಿಸದಿದ್ದರೂ ಭಾಗತ್ಯಾಗಲಕ್ಷಣೆಯನ್ನು ಹೇಳಿ ವಿಶೇಷ್ಯಭೂತಚೈತನ್ಯ ಒಂದಾದುದರಿಂದ ಐಕ್ಯವು ಅಬಾಧಿತವೆಂದು ಭೇದನಿರಾಸ ದಲ್ಲಿ ಬದ್ಧಕಂಕಣರಾಗಿರುತ್ತಾರೆ. ಹಾಗೆ ಪ್ರಯತ್ನಮಾಡುವ ನೂರಾರು ಕೋಟಿ ಯತಿವರ್ಯರಲ್ಲಿ ಯಾವನೋ ಒಬ್ಬನಿಗೆ ಮಾತ್ರ ಅಂತರಾತ್ಮಸ್ವರೂಪನಾದ ನೀನು ಸಂಸಾರದುಃಖೋಚ್ಛೇದಕನಾಗುವೆ. ಇಲ್ಲಿ ಮುಕ್ತಿಯು ದುರ್ಲಭವೆಂದೂ ಅದಕ್ಕಾಗಿ ಬಹುಪ್ರಯತ್ನಮಾಡಬೇಕೆಂದೂ ಮುಖ್ಯತಾತ್ಪರ್ಯ. ॥೮೧॥

ಸಂಸಾರನಿವೃತ್ತಿಗೆ ನಿನ್ನ ಜ್ಞಾನ ಒಂದೇ ಕಾರಣವು. ಶ್ರುತಿಯೂ "ನಾನ್ಯಃ ಪಂಥಾವಿದ್ಯತೇಽಯನಾಯ" ಎಂದು ದೃಢವಾಗಿ, ಮೋಕ್ಷಕ್ಕೆ ಜ್ಞಾನ ಬಿಟ್ಟು ಮಾರ್ಗಾಂತರವೇ ಇಲ್ಲವೆಂದು ಹೇಳುತ್ತದೆ. ಆ ಸಂಸಾರನಿವರ್ತಕ ಬ್ರಹ್ಮಜ್ಞಾನವು ನಿನ್ನ ಭಕ್ತಿಯಿಂದ ಲಭ್ಯವೆಂದು ವಿದ್ವಾಂಸರಿಗೆ ಸಮ್ಮತವಾಗಿದೆ. ಕೇವಲ ಶ್ರವಣ ಮಾತ್ರದಿಂದ ಆ ಜ್ಞಾನವು ಯಾವ ಕಾಲಕ್ಕೂ ಲಭಿಸಲಾರದು. ॥೮೨॥

ಯದ್ವನ್ಮದ್ಯಪಪಿತ್ತಚಿತ್ತಮಪಿ ಸ್ವಂಗಾಂಗಾನಿ ಸಂವೇತ್ತ್ಯಹೋ
ತದ್ವದ್ದೇಹಚತುಷ್ಟಯಂ ಚ ಮನಸಂ ಸಂಕಲ್ಪ್ಯ ಚಿತ್ರೋತ್ಥಿತಂ ।
ತ್ವಾಮಾನಂದಘನಂ ಮಹೋದಧಿಮಿವ ಪ್ರಾಪ್ತೇ ಯಥಾ ಶೀಕರಃ
ನಾಮ್ನಾ ರೂಪೈರ್ವಿನಷ್ಟಃ ಸ ತು ವಿಧಮನಸಾಂ ನಬ್ರಹ್ಮ ನ ಬ್ರಹ್ಮವಿತ್ ॥೮೩॥

ತ್ವಾಮಾತ್ಮಾನಮಖಂಡಬೋಧಸರಜಸಾನಂದ್ಯೈಕವೃತ್ತಿಸ್ಫುರ
ಚ್ಚಿಂತಾವೃತ್ತಕಥಾಂ ಚ ಯತ್ರ ತನುತೇ ಕರ್ಪೂರಮಗ್ನಿಪ್ರಭಾ ।
ದಗ್ಧ್ವಾ ನಾಶಮುಪೈತಿ ತದ್ವದಧುನಾ ಚಿತ್ತಂ ಮಹಾಕಾಮದಂ
ಸಾ ವೃತ್ತಿಃ ಪರಮಾರ್ಥಪಾನನಿಪುಣಾ ತದ್ಬ್ರಹ್ಮ ಸ ಬ್ರಹ್ಮವಿತ್ ॥೮೪॥

---

ಜಲಕಣವು ಮಹಾಸಮುದ್ರವನ್ನು ಹೊಂದಿದಂತೆ (ಜ್ಞಾನದಿಂದ) ಅಜ್ಞಾನ ನಿವೃತ್ತಿದ್ವಾರಾ ನಾಮರೂಪಾತ್ಮಕ ಪ್ರಪಂಚ ಬಾಧಪುರಸ್ಸರವಾಗಿ ಮಹಾಸಮುದ್ರ ಸ್ಥಾನೀಯನಾದ ಆನಂದಘನಸ್ವರೂಪನಾದ ನಿನ್ನನ್ನು ಪಡೆದ ಜ್ಞಾನಿಯು ಮದ್ಯ ಪಾನದಿಂದ ಮತ್ತನಾದವನಂತೆ ಪಿತ್ತೋದ್ರೇಕದಿಂದ ಹುಚ್ಚುಹಿಡಿದವನಂತೆಯೂ ಇರುವನು. ಇವರಿಗೆ ತಮ್ಮ ತಮ್ಮ ಶರೀರದ ಮೇಲೆ ಅರಿವೇ ಇರುವುದಿಲ್ಲ. ಆಗ ವಿಚಿತ್ರಮನಃಸ್ಸಂಕಲ್ಪ ವಿಕಲ್ಪಗಳಿಂದ ಕಲ್ಪಿತವಾದ ತನ್ನ ದೇಹ ಚತುಷ್ಟಯವನ್ನು ಅರಿಯುವುದಿಲ್ಲ. (ಜ್ಞಾನಿಗೆ ಸ್ವಶರೀರದಮೇಲೆ ಪ್ರಜ್ಞೆ ಇರುವುದಿಲ್ಲವೆಂದು ಭಾವ. ಈ ಅರ್ಥದಲ್ಲೆ ಭಾಗವತದಲ್ಲಿ "ದೇಹಂ ಚ ನಶ್ವರಮವಸ್ಥಿತಮುತ್ಥಿತಂ ವಾ ಸಿದ್ಧೋನ ಪಶ್ಯತಿ ಯತೋಽಧ್ಯ ಗಮತ್ ಸ್ವರೂಪಂ । ದೈವಾದಹೇತಮಥ ದೈವ ವಶಾದುಪೇತಂ ವಾಸೋ ಯಥಾಪರಿಗತಂ ಮದಿರಾಮದಾಂಧಃ ಎಂದು ಹೇಳಿದೆ.) ॥೮೩॥

ಯಾವ ಚಿತ್ತವೃತ್ತಿಯಲ್ಲಿ ಮಾನವನು ಚಿಂತೆ, ವೃತ್ತಕಥೆ ಇತ್ಯಾದಿಗಳನ್ನು ವಿಷಯೀಕರಿಸುವನೋ ಅಂತಹ ಚಿತ್ತವೃತ್ತಿಯಲ್ಲಿ ಅಖಂಡಬೋಧಸಹಜಾನಂದ ಸ್ವರೂಪನಾದ ನೀನು ಪ್ರತಿಬಿಂಬಿಸಿದರೆ ಆಗ ಅಖಂಡಾನಂದಕರವಾದ ಆ ವೃತ್ತಿಯು, ಅಗ್ನಿಪ್ರಭೆಯು ದಾಹ್ಯವಾದ ಕರ್ಪೂರವನ್ನು ಸುಟ್ಟು ತಾನು ನಾಶವಾಗುವಂತೆ, ಮಹಾಕಾಮೋತ್ಪಾದಕವಾದ ಚಿತ್ತವನ್ನು ನಾಶಮಾಡಿ ತಾನೂ ನಾಶವಾಗುತ್ತದೆ. ಚಿತ್ತಸಂಬಂಧದಿಂದಷ್ಟೆ ಇವನು ಅನರ್ಥಭಾಗಿಯಾಗಿರುತ್ತಾನೆ. ಚಿತ್ತನಾಶವಾದರೆ ಪರಮಾರ್ಥಬ್ರಹ್ಮರೂಪಮೋಕ್ಷಲಾಭವಾಗುವುದು. ಆಗ ಚರಮವೃತ್ತಿಪರಮಾರ್ಥ

ನ ಮುಕ್ತಿರ್ನ ಬಂಧೋಽದ್ಯ ಈಶಾನ ಶಂಭೋ
ನ ಚಾಹಾರವೇದಾಂತಮಾರ್ಗಾಃ ಕುತೋ ವಾ ।
ನ ಭೇದೋ ನ ಚಾದ್ವೈತಗಂಧಾದಿಲೇಶೋ
ನ ಚಾಜ್ಞಾನವಿಜ್ಞಾನಶಂಕಾ ಕುತೋ ವಾ ॥೮೫॥

ಅಹಂ ವಿಶ್ವಂ ಸರ್ವಂ ಭುವನಮಧುನಾ ವೇದವಚಸಾ
ಗುರೂಕ್ತ್ಯಾ ತ್ವದ್ಭಕ್ತ್ಯಾ ಅಭವಮಖಿಲಾನಂದಕುಹರಃ ।
ಅಹೋಽಸತ್ಯಾ ರತ್ನಿಪ್ರಮಿತಮತಿದೇಹಾದಿಷು ಮುಧಾ
ಅಹಂ ಮಾನಾಪನ್ನೋ ಭವಶತಜಸಂಕಲ್ಪವಶಗಃ ॥೮೬॥

---

ಬ್ರಹ್ಮಪ್ರಾಪಣದಲ್ಲಿ ಸಮರ್ಥವಾದೀತು. ಆ ಬ್ರಹ್ಮವೃತ್ತಿಯುಳ್ಳವನೇ ಬ್ರಹ್ಮ ಜ್ಞಾನಿಯು. ॥೮೪॥

ಓ ಸರ್ವನಿಯಾಮಕನಾದ ಶಂಭುವೇ, ಪರಮಾರ್ಥತಃ ವಿಚಾರಮಾಡಿದರೆ ಮೋಕ್ಷವೇ ಇಲ್ಲ. ಏಕೆಂದರೆ ಬಂಧವು ಸತ್ಯವಾದರೆ ಬದ್ಧನಿಗೆ ಮೋಕ್ಷವು ಸತ್ಯ ವಾದೀತು. ಬಂಧವು ಪಾರಮಾರ್ಥಿಕವಲ್ಲವೆಂದಮೇಲೆ ಬಂಧಮೋಕ್ಷಗಳೆರಡೂ ಸುಳ್ಳೆ. ಇವು ಆಪರಮಾರ್ಥಗಳಾದಮೇಲೆ ಮೋಕ್ಷಸಾಧಕ ಅಪಾರವೇದಾಂತ ಮಾರ್ಗಗಳು ಹೇಗೆ ಸತ್ಯವಾದಾವು? ಅವೂ ಅಸತ್ಯಗಳೇ. ಹೀಗೆ ಭೇದವೂ ಸತ್ಯವಲ್ಲ. ಆದ್ದರಿಂದ ಅದ್ವೈತವನ್ನು ಪೃಥಕ್‌ಸ್ಥಾಪನೆ ಮಾಡಬೇಕಾಗಿಲ್ಲ. ಅದ್ವೈತ ಗಂಧಮಾತ್ರವೂ ಇಲ್ಲದಿರುವಾಗ ಅಜ್ಞಾನ ವಿಜ್ಞಾನಗಳ ಶಂಕೆಗೆ ಎಲ್ಲಿಂದ ಅವಕಾಶವು? ॥೮೫॥

ಗುರೂಪದೇಶದ್ವಾರಾ ಹೊಂದಿದ ವೇದವಾಕ್ಯದಿಂದಲೂ, ನಿನ್ನಲ್ಲಿರುವ ಭಕ್ತಿಯಿಂದಲೂ, ಈಗ ನಾನು ಸಮಸ್ತ ಪ್ರಪಂಚಾತ್ಮಕನೂ ಸಮಸ್ತ ಲೋಕಾ ತ್ಮಕನೂ ಆಗಿದ್ದೇನೆ. ಅಂದರೆ ಅದ್ವೈತಾತ್ಮಸಾಕ್ಷಾತ್ಕಾರದಿಂದ ನನ್ನನ್ನು ಬಿಟ್ಟು ಬೇರೆ ಪ್ರಪಂಚವಾಗಲಿ, ಲೋಕವಾಗಲಿ, ಇಲ್ಲವೆಂಬ ಅರಿವು ಹುಟ್ಟಿದೆ. ಮತ್ತು ನಿರತಿಶಯ ಆನಂದಭಾಜನನೂ ಆಗಿದ್ದೇನೆ. ಅಹಾ ಏನಾಶ್ಚರ್ಯ! ತೋರಿಕೆಗೆ ಮಾತ್ರ ಕಾಣಿಸುವುದಾಗಿಯೂ ಅರತ್ನಿ (ಒಂದು ಮೊಳ) ಪ್ರಮಾಣಕವಾಗಿಯೂ ಇರುವ ಅಂತಃಕರಣದೇಹಾದಿಗಳಲ್ಲಿ (ಅನಾತ್ಮವಸ್ತುಗಳಲ್ಲಿ) ವ್ಯರ್ಥವಾಗಿ 'ಅಹಂ' ಎಂಬ ಆತ್ಮಾಧ್ಯಾಸಮಾಡಿಕೊಂಡು ನೂರಾರು ಜನ್ಮಗಳಿಗೆ ಕಾರಣಗಳಾದ ಸಂಕಲ್ಪ ಗಳಿಗೆ ಅಧೀನನಾಗಿ ದುಃಖಪಟ್ಟಿನಲ್ಲವೆ. ॥೮೬॥

ಶೂನ್ಯೇ ವಾ ವಿಪಿನೇ ಮಹಾಗಿರಿತಟೇ ಸಾಮಾನಿ ಗಾಯನ್ನಸೌ
ಆಹಾವೂ ಹಾವು ಇತಿ ತ್ರಿರುನ್ನತಪದಂ ತತ್ವಂ ಪದೈರ್ವರ್ಜಿತಃ ।
ಜಾತಾನಂದಭರಃ ಸ ಏವ ತ್ವಮಸಿ ತದ್ಬ್ರಹ್ಮ ನ ಬ್ರಹ್ಮವಿ
ಲ್ಲಿಂಗಾಗ್ರೇಷ್ವಪಿ ನೃತ್ಯತಿ ಪ್ರತಿದಿನಂ ಕೌತೂಹಲೈರನ್ವಿತಃ ॥೮೭॥

ಯದಾಕಾಶಕೋಶಂ ಜಗಚ್ಚಕ್ಷುಯುಕ್ತಂ
ವಿಮೂಢಾ ಯದಾ ಚರ್ಮವದ್ವೇಷ್ಟಯಂತಿ ।
ತದಾ ತ್ವಾಂ ಮಹೇಶತ್ವವಿಜ್ಞಾಯ ದುಃಖೈಃ
ವಿಮುಕ್ತಾ ಭವಿಷ್ಯಂತಿ ಸತ್ಯಂ ತ್ರಿಸತ್ಯಂ ॥೮೮॥

---

ಜೀವನ್ಮುಕ್ತನಾದ ಜ್ಞಾನಿಯು ಆನಂದಭರಿತನಾಗಿ ತತ್ವಪದಾರ್ಥಗಳಾದ ಜೀವೇಶ್ವರಕಲ್ಪನಾರಹಿತನಾಗಿ ಅದ್ವೈತಬ್ರಹ್ಮಾಪರೋಕ್ಷ್ಯವನ್ನು ಪಡೆದು ಆನಂದದಿಂದಿರುವನು. ಈ ಬ್ರಹ್ಮಾಪರೋಕ್ಷ್ಯವಿಲ್ಲದೇ ಸಂಸಾರದಾವಾನಲ ಶಾಂತಿಯಾಗದು. ಆದ್ದರಿಂದ ಸರ್ವರೂ ಪ್ರಯತ್ನಪೂರ್ವಕವಾಗಿ ಜ್ಞಾನಸಂಪಾದನೆ ಮಾಡಬೇಕು. ಎಂದು ಲೋಕದಲ್ಲಿ ಪ್ರಕಟಿಸುವುದಕ್ಕಾಗಿ ಈ ಜ್ಞಾನಿಯು ಶೂನ್ಯವಾದ ಹೆಗ್ಗಾಡಿನಲ್ಲೋ, ಮಹಾಪರ್ವತದ ತಪ್ಪಲಲ್ಲೋ, ಸರ್ವಸಮವಾದ ಬ್ರಹ್ಮವಿಷಯಕ ಅಪರೋಕ್ಷವನ್ನು ಪ್ರಕಟಿಸುತ್ತಾ ಆ ಹಾವೂ ಹಾವು ಎಂದು ಉಚ್ಚೈಃಸ್ಸ್ವರಯುಕ್ತ ವೇದದ ಪದಗಳನ್ನು ಮೂರುಸಲ ಹಾಡುತ್ತ ಇರುವನೋ, ಅಂತಹ ಜೀವನ್ಮುಕ್ತನು ನೀನೇ. ನೀನು ಬ್ರಹ್ಮಸ್ವರೂಪನು. ಬ್ರಹ್ಮವು (ವೃತ್ತಿಗೆ ವಿಷಯವು) ತಿಳಿಯಿತು ಎಂದು ಭಾವನೆಯುಳ್ಳವನು ಬ್ರಹ್ಮಸ್ವರೂಪನಾದ ಮುಕ್ತನಲ್ಲ. ಮೇಲೆ ಹೇಳಿದ ಜೀವನ್ಮುಕ್ತನು ಶಿವಲಿಂಗಾಗ್ರಗಳಲ್ಲಿಯೂ ಕೌತುಕಾನ್ವಿತನಾಗಿ ಪ್ರತಿದಿನವೂ ನರ್ತನ ಮಾಡುವನು. ಅಂದರೆ ಅವನೇ ಈಶ್ವರನು ಎಂದು ಭಾವ. ॥೮೭॥

ಪರಮೇಶ್ವರನೇ, ಸೂರ್ಯಸಹಿತವಾದ ಆಕಾಶಕೋಶವನ್ನು ಮೂಢರು ಚರ್ಮವನ್ನು ಸುತ್ತುವಂತೆ ಸುತ್ತುವುದಾದರೆ, ಆಗ ನಿನ್ನ(ಈಶ್ವರನ) ಜ್ಞಾನಸಹಾಯದಿಂದ ದುಃಖಗಳಿಂದ ಮುಕ್ತರಾಗುವರು ಎಂದು ಹೇಳಬಹುದು. (ಸಂಸಾರನಿವೃತ್ತಿಯನ್ನು ಹೊಂದುವರು.) ಇದನ್ನು ಮೂರು ಬಾರಿ ನಿಜವೆಂದು ಪ್ರತಿಜ್ಞೆಮಾಡುತ್ತೇನೆ. ಅಂದರೆ, ಆಕಾಶವನ್ನು ಮಡುಚುವುದು (ವೇಷ್ಟನಮಾಡುವುದು) ಹೇಗೆ ಅಸಾಧ್ಯವೋ, ಹಾಗೆ ಮೋಕ್ಷವು ಬ್ರಹ್ಮಜ್ಞಾನ ವಿನಾ ಅಸಾಧ್ಯವೆಂದು ಭಾವ. ("ಯದಾಚರ್ಮ

ಏವಂ ಸದಾತ್ಮಾನಮಸಂಶಯೇನ
ಯೋ ವೇತ್ತಿ ಧೀರಃ ಶ್ರುತಿತರ್ಕಯುಕ್ತ್ಯಾ ।
ಸ ತ್ವಾಮನು ತ್ವಂ ತಮನುಪ್ರವಿಷ್ಟ
ಸ್ತಸ್ಯೈವ ಶಾಂತಿರ್ನೇತರಸ್ಯಾಹ ವೇದಃ ॥೮೯॥

॥ ವಾಮದೇವ ಉವಾಚ ॥

ಭವತ್ಪ್ರಸಾದಲೇಶತಃ ಸುಜಾತವೇದವಾಕ್ಯತೋ
ಭವಂತಿ ಜನ್ಮನಿರ್ವೃತಾ ನ ಬೋಧತಃ ಪರಂ ಪದಂ ।
ನ ವೇದಾಂತಬೋಧೈರ್ನಚಾಚಾರಮಾರ್ಗೈರ್
ಗುರೂಕ್ತ್ಯಾದಿಸಿದ್ಧಾಂತರಾದ್ಧಾಂತವಾಕ್ಯೈಃ ॥೯೦॥

---

ಯದಾಕಾಶಂವೇಷ್ಟಯಿಷ್ಯಂತಿ ಮಾನವಾಃ । ತದಾ ದೇವಮವಿಜ್ಞಾಯ ದುಃಖ ಸ್ಯಾಂತೋ ಭವಿಷ್ಯತಿ " ಎಂಬ ಶ್ರುತ್ಯರ್ಥವು ಇಲ್ಲಿ ಹೇಳಿದೆ.) ॥೮೮॥

ಧೀರನಾದ ಸಂನ್ಯಾಸಿಯು ಈ ಪ್ರಕಾರವಾಗಿ ಶ್ರುತಿ, ಶ್ರುತ್ಯನುಗೃಹೀತತರ್ಕ, ಇವುಗಳ ಮೂಲಕವಾಗಿ ಸದಾ ಆತ್ಮವಿಚಾರಮಾಡಿ, ಆತ್ಮವಿಷಯಕವಾದ ನಿಸ್ಸಂದೇಹ ವಾದ ಜ್ಞಾನವನ್ನು ಪಡೆದು ಅವನು ನಿನ್ನಲ್ಲಿ, (ಈಶ್ವರನಲ್ಲಿ) ನೀನು ಅವನಲ್ಲಿ (ಜ್ಞಾನಿಯಲ್ಲಿ) ಪ್ರವಿಷ್ಟನಾದರೆ ಅಂದರೆ ಪ್ರತ್ಯಗಾತ್ಮನಲ್ಲಿ ಬ್ರಹ್ಮೈಕ್ಯಾಪರೋಕ್ಷ ಜ್ಞಾನಬಂದರೆ ಅಂತಹವನಿಗೆ ಮೋಕ್ಷಲಾಭವಾಗುವುದು. ಇತರ ದ್ವೈತಜ್ಞಾನಿಗೆ ಮೋಕ್ಷಲಾಭವಾಗಲಾರದು ಎಂದು ವೇದವು ಸಾರುತ್ತದೆ. ॥೮೯॥

ಮುಮುಕ್ಷುಗಳು ನಿನ್ನ ಪ್ರಸಾದಲೇಶಮಾತ್ರದಿಂದ ' ತತ್ವಮಸಿ ' ಇತ್ಯಾದಿ ವೇದವಾಕ್ಯಾರ್ಥಗಳನ್ನು ಚೆನ್ನಾಗಿ ಅನುಭವಾರೂಢಮಾಡಿಕೊಂಡು, ಜನ್ಮವಿನಿ ರ್ಮುಕ್ತರಾಗುತ್ತಾರೆ. ನಿನ್ನ ಪ್ರಸಾದಲೇಶವಿಲ್ಲದೇ ಕೇವಲ ಜ್ಞಾನದಿಂದ ಪರವು ಪದವಾದ ಮೋಕ್ಷದ ಲಾಭವಾಗುವುದಿಲ್ಲ. ಹೀಗೆ ಈಶ್ವರಾನುಗ್ರಹವಿಲ್ಲದೆ ಕೇವಲ ವೇದಾಂತಜ್ಞಾನದಿಂದಲೂ, ಸದಾಚಾರಮಾರ್ಗದಿಂದಲೂ, ಗುರೂಪದೇಶದ್ವಾರಾ ತಿಳಿದ ಸಿದ್ಧಾಂತದಿಂದಲೂ, ಇತರ ಸಿದ್ಧಾಂತ ವಾಕ್ಯಗಳಿಂದಲೂ, ಮೋಕ್ಷಹೇತುವಾದ ಅದ್ವೈತಾಪರೋಕ್ಷಜ್ಞಾನವು ಬರಲಾರದು. ಇದಕ್ಕಾಗಿಯೇ " ಈಶ್ವರಾನುಗ್ರಹಾದೇವ ಪುಂಸಾಮದ್ವೈತವಾಸನಾ " ಎಂದು ಅಭಿಯುಕ್ತರು ಹೇಳುತ್ತಾರೆ. ॥೯೦॥

ಶ್ರುತಿಶ್ರಾವಣ್ಯೈಃ ಶಾಸ್ತ್ರವಾರ್ತಾದಿಗರ್ತೈರ್ಮಹಾವರ್ತಜಾತೈಃ
ಶಿರೋಗ್ರಾಮಭೂತೈಃ । ಅಗಾಧಮಸ್ಪರ್ಶಮರೂಪಮದ್ಭುತಂ
ಅಣೋರಣುಂ ತ್ವಾಂ ಮಹತೋ ಮಹಾಂತಂ ॥೯೧॥

ಏವಂ ಚ ತ್ವಾಂ ಜ್ಞಾತುಮಶಕ್ತಿಭಾವಾ ಉಮಾಸಹಾಯಾದಿಗುಣೈರ್ಭಜಂತಿ
ಅಲಿಂಗಲಿಂಗಂ ಪರಮೀಶಿತಾರಮಾತ್ಮಾನಮಾನಂದಮಗಾಧಬೋಧಂ॥೯೨॥

ತಥಾಪಿ ಲಿಂಗೇಷು ಸಮರ್ಚಯಂತಿ
ಬಿಲ್ವೀದಲೈಃ ಕೋಮಲಪಲ್ಲವೈಸ್ತ್ವಾಂ ॥೯೩॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ವಾಮದೇವಕೃತೋಪ
ನಿಷತ್ ಸ್ತುತಿನಿರೂಪಣಂ ನಾಮ ಷಡ್ವಿಂಶೋಽಧ್ಯಾಯಃ

---

ಕೇವಲ ವೇದಾಂತಶ್ರವಣಗಳಿಂದಲೂ, ಶಿರೋಭ್ರಮಣೆಯನ್ನುಂಟುಮಾಡುವ ಮಹಾಪ್ರವಾಹದ ಸುಳಿಯಂತೆ ತೊಡಕಾಗಿ, ಅಗಾಧವಾದ ಹಳ್ಳದಂತೆ ಇರುವ ಇತರ ಶಾಸ್ತ್ರಾಧ್ಯಯನದಿಂದಲೂ, ಗಂಧಸ್ಪರ್ಶರೂಪಾದಿ ಗುಣರಹಿತವಾಗಿಯೂ ಅಣುವಿಗಿಂತಲೂ ಅಣು, ಮಹತ್ತಾದ ಪದಾರ್ಥಕ್ಕಿಂತಲೂ ಮಹತ್ತಾಗಿ ಅದ್ಭುತವಾಗಿರುವ ನಿನ್ನನ್ನು ಅರಿಯಲು ನಿಜವಾಗಿಯೂ ಸಾಧ್ಯವಿಲ್ಲ. ॥೯೧॥

ವಸ್ತುತಃ ನೀನು ಅಲಿಂಗನಾದರೂ ಅಜ್ಞಾನಿಗಳಿಂದ ಬಾಹ್ಯಲಿಂಗಗಳಲ್ಲಿ ಧ್ಯಾನಿಸಲ್ಪಡುವವನಾಗಿಯೂ, ಎಲ್ಲರಿಗೂ ಮುಖ್ಯ ನಿಯಾಮಕನಾಗಿಯೂ ವ್ಯಾಪಕನಾಗಿಯೂ ನಿರತಿಶಯಾನಂದಸ್ವರೂಪನಾಗಿಯೂ ಅಪರಿಚ್ಛಿನ್ನ ಜ್ಞಾನಸ್ವರೂಪನಾಗಿಯೂ, ಇರುವ ನಿನ್ನನ್ನು ಮೇಲೆ ತಿಳಿಸಿದಂತೆ ತಿಳಿಯಲು ಅಶಕ್ತರಾದವರು (ನಿನ್ನ ನಿತ್ಯಸಾನ್ನಿಧ್ಯವುಳ್ಳ) ಉಮೆ ಮೊದಲಾದವರ ಅನುಗ್ರಹಸಾಧನಗಳಿಂದ ಅರಿತುಕೊಳ್ಳುವರು. ॥೯೨॥

ಈ ಮೊದಲು ತಿಳಿಸಿದಂತೆ ವಸ್ತುತಃ ನೀನು ಅಲಿಂಗನಾದರೂ ನಿರಾಕಾರನಾಗಿ ನಿರ್ವಿಶೇಷನಾದ ನಿನ್ನಲ್ಲಿ ಮನಸ್ಸನ್ನು ನಿಲ್ಲಿಸಲು ಅಶಕ್ತರಾದ ಅಜ್ಞಾನಿಗಳು ಕೋಮಲ ಬಿಲ್ವದಳಗಳಿಂದ ಲಿಂಗಗಳಲ್ಲಿ ಆವಾಹನೆಮಾಡಿ ನಿನ್ನನ್ನು ಅರ್ಚಿಸುವರು

---

ವಿ. ಸೂ.—ಇಂದ್ರಾದಿಗಳು ಉಮೆಯ ಸಹಾಯದಿಂದ ಪರಮಾತ್ಮನನ್ನು ಅರಿತುಕೊಂಡರೆಂದು ಕೇನೋಪನಿಷತ್ತಿನಲ್ಲಿ ಹೇಳಿದೆ.

ಎಂದು ವಾಮದೇವಮಹರ್ಷಿಯು ಶಿವಾನುಗ್ರಹದಿಂದ ತನಗೆ ಲಭಿಸಿದ ಜ್ಞಾನಸ್ವರೂಪವನ್ನು ಸಕಲ ಮುನಿವೃಂದಕ್ಕೂ ಸುಲಭವಾಗಿ ತಿಳಿಯಪಡಿಸಿದನು. ॥೯೩॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಭರ್ಗನಾಮಕವಾದ ಐದನೆಯ ಅಂಶದಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

ಭರ್ಗಾಖ್ಯೇ

ಪಂಚಮಾಂಶೇ

## ಸಪ್ತವಿಂಶೋಽಧ್ಯಾಯಃ

### ಶ್ರೀಶೈಲಕ್ಷೇತ್ರಮಹಿಮಾವರ್ಣನಂ

॥ ಈಶ್ವರ ಉವಾಚ ॥

ವಾಮದೇವಸ್ತುತಿಂ ಶ್ರುತ್ವಾ ತೇ ಸರ್ವೇ ಮುನಿಸತ್ತಮಾಃ ।
ಸರ್ವೋಪನಿಷದಾಂ ಸಾರಂ ಶ್ರೋತೄಣಾಂ ಜ್ಞಾನಬೋಧದಂ ॥೧॥

ಊಚುಃ ಪ್ರಾಂಜಲಯಸ್ಸರ್ವೇ ಮಾಂ ಗೋಕರ್ಣೇಶ್ವರಂ ತದಾ ।
ದಕ್ಷಿಣಾಮೂರ್ತಿರೂಪೇಣ ಸಂಸ್ಥಿತಂ ಜಗದಂಬಿಕೇ ॥೨॥

॥ ಮುನಯ ಊಚುಃ ॥

ವಾಮದೇವೋ ಮಹಾಯೋಗೀ ತ್ವತ್ತೋ ಜ್ಞಾನವತಾಂ ವರಃ ।
ಶಂಭೋ ಮುನಿಸಹಸ್ರೇಷು ಕಶ್ಚಿತ್ತ್ವದ್ಧ್ಯಾನಭಾಜನಂ ॥೩॥

---

### ಇಪ್ಪತ್ತೇಳನೆಯ ಅಧ್ಯಾಯ

ಎಲೌ ಪ್ರಿಯೇ ಜಗದಂಬಿಕೇ, ಈ ರೀತಿ ಯೋಗಿಯಾದ ವಾಮದೇವನು ದಕ್ಷಿಣಾಮೂರ್ತಿಸ್ವರೂಪನೂ ಗೋಕರ್ಣೇಶನೂ ಆದ ನನ್ನನ್ನು ಬಹುವಾಗಿ ಸ್ತುತಿಸಿದನು. ಆ ಸ್ತುತಿಯು ಕೇವಲ ಉಪನಿಷದರ್ಥಗಳ ಸಾರಾಂಶಗರ್ಭಿತವಾದುದು. ಆ ಸ್ತುತಿಯನ್ನು ಕೇಳಿದವರಿಗೂ ಸಹ ತತ್ವಜ್ಞಾನಬೋಧವುಂಟಾಗುವುದು. ಇಂತಹ ಸ್ತುತಿಯನ್ನು ಕೇಳಿ ಅಲ್ಲಿ ನೆರೆದಿದ್ದ ವಸಿಷ್ಠರೇ ಮೊದಲಾದ ಋಷಿಗಳು ಮತ್ತೆ ನನ್ನನ್ನು ವಂದಿಸಿ ವಿನಯದಿಂದ ಈ ರೀತಿ ಹೇಳಿದರು. ॥೧-೨॥

ಮಹಾದೇವನೇ! ಈಗ ನೀನು ತತ್ವಜ್ಞಾನೋಪದೇಶ ಮಾಡಿದುದರಿಂದ

ಭವಿಷ್ಯತಿ ಮಹಾದೇವ ಇತ್ಯುಕ್ತ್ವಾಚ್ಛಿನ್ನಸಂಶಯಾಃ ।
ಉದ್ದಾಲಕೋಽಪಿ ದೇವೇಶಿ ಮತ್ತೋ ಲಬ್ಧ್ವಾತ್ಮನಿರ್ವೃತಃ ॥೪॥

ಪ್ರಣಮ್ಯ ಮುನಿಭಿಸ್ಸರ್ವೈರ್ಗೋಕರ್ಣೇಶಂ ಯಯುಸ್ತದಾ ।
ವಾಮದೇವೋ ಮಹಾಯೋಗೀ ನತ್ವಾ ಮಾಂ ಪರಮೇಶ್ವರಂ ॥೫॥

ಕೌಪೀನಸಂವೃತೋ ದೇವಿ ಸದಾ ಭಸ್ಮವಿಭೂಷಣಃ ।
ಮನ್ಮಯಂ ಜಗದಾಲೋಕ್ಯ ಯಯೌ ಸ್ವೈರಗತಿರ್ಮುನಿಃ ॥೬॥

ಗೋಕರ್ಣೇಶಂ ಸಮಾರಾಧ್ಯ ವಿಮುಕ್ತಾ ಬಹವೋ ಜನಾಃ ॥೭॥

---

ಯದ್ಯಪಿ ನಮ್ಮ ಸಂಶಯಗಳು ದೂರವಾದವು. ಆದರೆ ವಾಮದೇವನು ಈ ಸುಜ್ಞಾನದಿಂದ ನಿಜವಾಗಿ ಮೋಕ್ಷವನ್ನು ಪಡೆಯಬಲ್ಲನು. ಆತನು ಮಹಾಯೋಗಿಯಾಗಿ ಇರುವನಲ್ಲದೇ ಜ್ಞಾನಿಗಳಲ್ಲೆಲ್ಲಾ ಶ್ರೇಷ್ಠನಿರುವನು. ಈ ನಮ್ಮ ಮುನಿಗಳಲ್ಲೆಲ್ಲಾ ಅವನೊಬ್ಬನೇ ಪರಮಫಲವನ್ನು ಪಡೆದವನು. ಸದಾ ನಿನ್ನ ಸ್ವರೂಪಜ್ಞಾನವನ್ನೇ ಅನುಸಂಧಾನಮಾಡಿ ನಿನ್ನ ಸಾಯುಜ್ಯವನ್ನೇ ಸೇರುವನು. ಹೀಗೆಂದು ಆ ಋಷಿಗಳು ಹೇಳಿದರು. ॥೩॥

ಗಿರಿಜೆಯೇ, ವಾಮದೇವನಂತೆ ಉದ್ದಾಲಕಮುನಿಯೂ ಸಹ ನನ್ನ ವೇದಾಂತತತ್ತ್ವೋಪದೇಶದಿಂದ ಸುಜ್ಞಾನವನ್ನು ಪಡೆದನು. ಬಳಿಕ ಆ ಮುನಿಗಳೆಲ್ಲರೂ ಗೋಕರ್ಣೇಶ್ವರನಿಗೆ ನಮಸ್ಕರಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.॥೪॥

ಯೋಗಿವರ್ಯನಾದ ವಾಮದೇವನಾದರೋ ಅಲ್ಲಿಂದ ಹೊರಡಲು ಸಿದ್ಧನಾದನು. ಅವನಿಗೆ ಆಗಲೇ ಶುದ್ಧವಾದ ಸುಜ್ಞಾನಬೋಧವುಂಟಾಗಿದ್ದುದರಿಂದ ದೇಹಾಭಿಮಾನವೂ ಮತ್ತು ಭಯಲಜ್ಜಾದಿಗಳೂ ಅವನಲ್ಲಿ ಇರಲಿಲ್ಲ. ಆದ್ದರಿಂದಲೇ ಅವನು ಕೇವಲ ಕೌಪೀನಧಾರಿಯಾಗಿ, ಶೈವಚಿಹ್ನೆಗಳಾದ ಭಸ್ಮರುದ್ರಾಕ್ಷಗಳನ್ನು ಧರಿಸಿದ್ದನು. ಅವನಿಗೆ ಅಖಂಡ ಪ್ರಪಂಚವೂ ಸಹ ನನ್ನ ಸ್ವರೂಪವಾಗಿಯೇ ತೋರುತ್ತಿತ್ತು. ಸುಜ್ಞಾನದ ಪರಮಾನುಭವವು ಅವನಿಗೆ ಉಂಟಾಗಿದ್ದುದರಿಂದ ಅವನು ಜೀವನ್ಮುಕ್ತನೂ ನಿರ್ಬಾಧಗಮನನೂ ಆಗಿದ್ದನು. ಹೀಗೆ ವಾಮದೇವನು ಗೋಕರ್ಣೇಶ್ವರನಿಗೆ ನಮಸ್ಕರಿಸಿ ಅಲ್ಲಿಂದ ತೆರಳಿದನು. ॥೫-೬॥

ಎಲೌ ಪಾರ್ವತಿ, ಹೀಗೆ ಇನ್ನೂ ಎಷ್ಟೋ ಮಂದಿ ಗೋಕರ್ಣಮಹಾಕ್ಷೇತ್ರದಲ್ಲಿ ಶ್ರೀಗೋಕರ್ಣೇಶ್ವರನನ್ನು ಆರಾಧಿಸಿ ಅವನ ಪ್ರಸಾದದಿಂದಲೂ ಆ ಕ್ಷೇತ್ರದ

॥ ದೇವ್ಯುವಾಚ ॥

ವಾಮದೇವಸ್ತುತಿಃ ಪುಣ್ಯಾ ವಾಮದೇವ ಶ್ರುತಾಧುನಾ ।
ನಾತಃಪರತರೋ ದೇವ ಶ್ರುತೀನಾಂ ಸಾರ ಏವ ಹಿ ॥೮॥

ಶಂಭೋ ಜ್ಞಾನಪ್ರದಾ ನಿತ್ಯಂ ತ್ವದ್ಬೋಧಾನಂದದಾಯಿನೀ ।
ಕಿಂ ವಾನ್ಯಕ್ಷೇತ್ರಮಸ್ತೀಶ ಭೂಲೋಕೇ ತವ ಸಿದ್ಧಿದಂ ॥೯॥

ತದ್ವದಸ್ವ ಮಹಾದೇವ ಸಂಪ್ರೀತಾಸ್ಮಿ ಕಥಾರಸೈಃ ॥೧೦॥

॥ ಸೂತ ಉವಾಚ ॥

ಶಿವೋಂಬಿಕಾವಚಶ್ಶ್ರುತ್ವಾ ಪ್ರಹೃಷ್ಟಃ ಪ್ರಾಹ ತಾಂ ತದಾ ॥೧೧॥

---

ಮಹಿಮೆಯಿಂದಲೂ ಮುಕ್ತಿಯನ್ನು ಪಡೆದಿರುವರು. ಆದ್ದರಿಂದ ಶ್ರೀಗೋಕರ್ಣ ಕ್ಷೇತ್ರವು ಅತ್ಯಂತ ಶ್ರೇಷ್ಠವೂ ಮಹಿಮಾಶಾಲಿಯೂ ಆಗಿರುತ್ತದೆ ಎಂದು ಪರಶಿವನು ಪಾರ್ವತಿಗೆ ಹೇಳಲು, ॥೭॥

ಮತ್ತೆ ಪಾರ್ವತಿಯು "ಪ್ರಿಯಮಹಾದೇವನೇ, ವಾಮದೇವಮುನಿಯು ನಿನ್ನನ್ನು ಸ್ತುತಿಸಿದ ಬಗೆಯನ್ನು ಕೇಳಿದೆನು. ಸ್ತೋತ್ರವು ಅತ್ಯದ್ಭುತವಾಗಿರುವುದು. ಇದಕ್ಕಿಂತಲೂ ಮಹತ್ತರವಾದ ಸ್ತುತಿಯು ಮತ್ತೆಲ್ಲಿಯೂ ಇರಲಾರದು. ಈ ಸ್ತುತಿಯು ಕೇವಲ ವೇದಾಂತದ ಸಾರಭೂತವೆನಿಸಿದೆ. ಆದ್ದರಿಂದಲೇ ಇದರಿಂದ ಸುಜ್ಞಾನಲಾಭವೂ ನಿನ್ನ ಸ್ವರೂಪಾನುಭವವೂ ಲಭಿಸುವುದು. ॥೮॥

ವಲ್ಲಭನೇ, ಕ್ಷೇತ್ರಮಾಹಾತ್ಮ್ಯಪೂರಿತಕಥೆಯನ್ನು ಕೇಳಿ ನನಗೆ ಅತ್ಯಂತ ಆನಂದವಾಗುತ್ತಿರುವುದು. ಮತ್ತೂ ಮತ್ತೂ ಕೇಳಿ ಆನಂದಿಸಬೇಕೆಂದು ಅಪೇಕ್ಷೆ ಯಾಗುವುದು. ಆದ್ದರಿಂದ ಭೂಲೋಕದಲ್ಲಿ ಇನ್ನೂ ಯಾವ ಯಾವ ನಿನ್ನ ಕ್ಷೇತ್ರ ಗಳಿರುವುವು? ಯಾವ ಕ್ಷೇತ್ರವು ಮೋಕ್ಷಸಿದ್ಧಿಯನ್ನು ಕೊಡುವುದು? ಎಂಬುದನ್ನು ನನಗೆ ಹೇಳು." ಹೀಗೆಂದು ಕೇಳಿಕೊಂಡಳು. ॥೯-೧೦॥

ಪಾರ್ವತಿಯ ಈ ಬಗೆಯಾದ ಕೋರಿಕೆಯನ್ನು ಕೇಳಿ ಶಂಕರನಿಗೆ ಬಹು ಸಂತೋಷವಾಯಿತು. ಮತ್ತು ಪ್ರೀತಿಪುರಸ್ಸರವಾಗಿ ಕ್ಷೇತ್ರಮಹಿಮೆಯನ್ನು ಈ ರೀತಿ ಹೇಳತೊಡಗಿದನು. ॥೧೧॥

॥ ಶಿವ ಉವಾಚ ॥

ಶೃಣು ದೇವಿ ಪ್ರಿಯಂ ನಿತ್ಯಮಸ್ತಿ ಕ್ಷೇತ್ರವರಂ ಮಮ ।
ಯತ್ರೈತಜ್ಜ್ಞಾನಮಮಲಂ ದತ್ತಂ ಸ್ಕಂದಾಯ ಶಂಕರಿ ॥೧೨॥

ಶ್ರೀಶೈಲೇ ಚ ಮಹಾದೇವಿ ಮತ್ಪುತ್ರಸ್ಯ ತಪಸ್ಯಯಾ ।
ತುಷ್ಟೋಽಹಂ ತಸ್ಯ ಚ ಸ್ತುತ್ಯಾ ಜ್ಞಾನಂ ದತ್ತಂ ಮಯಾಂಬಿಕೇ॥೧೩

॥ ದೇವ್ಯುವಾಚ ॥

ಕುತ್ರ ಶ್ರೀಶೈಲಸಂಜ್ಞೋಽಸ್ತಿ ಭೂಧರಸ್ತ್ವತ್ಪ್ರಿಯಂಕರಃ ।
ವದ ತನ್ಮಹಿಮಾಂ ಶಂಭೋ ಸ್ಕಂದೇ ತುಷ್ಟೋ ಭವಾನ್ ಕಥಂ ॥೧೪॥

ತತ್ಕಥಾಂ ಶ್ರೋತುಮಿಚ್ಛಾಮಿ ವದ ತನ್ಮಹ್ಯಮಾದರಾತ್ ।
ಇತಿ ಶ್ರುತ್ವಾಂಬಿಕಾವಾಕ್ಯಂ ಪ್ರಾಹ ದೇವೋ ಕೃಪಾನಿಧಿಃ ॥೧೫॥

---

"ಪ್ರಿಯೆ ಗಿರಿಜೆ, ಹೇಳುವೆನು ಪ್ರೀತಿಯಿಂದ ಆಲಿಸು. ಭೂಲೋಕದಲ್ಲಿ ನನಗೆ ಅತ್ಯಂತ ಪ್ರಿಯವಾದ ಮತ್ತೊಂದು ಶಿವಕ್ಷೇತ್ರವಿರುವುದು. ಆ ಕ್ಷೇತ್ರದ ಮಹಿಮೆಯು ಅಮೋಘವಾದದ್ದು. ಅದರ ಮಹಿಮಾವಿಚಾರವನ್ನೇ ಹಿಂದೆ ಬಾಲಕನಾದ ಷಣ್ಮುಖನಿಗೆ ಹೇಳಿದ್ದೆ. ಅದನ್ನೇ ನಿನಗೂ ಈಗ ವಿವರಿಸುವೆನು ಕೇಳು.॥೧೨॥

ಹಿಂದೆ ಬಾಲಕನಾದ ಷಣ್ಮುಖನು ತನಗೆ ನಿಶ್ರೇಯಸ್ಸಾಧನವಾದ ಜ್ಞಾನವನ್ನು ಉಪದೇಶಿಸಬೇಕೆಂದು ಶ್ರೀಶೈಲಕ್ಷೇತ್ರದಲ್ಲಿ ಬಹುವಾಗಿ ತಪಸ್ಸನ್ನಾಚರಿಸಿದನು. ಮತ್ತು ಅನೇಕ ವಿಧವಾಗಿ ನನ್ನನ್ನೇ ಸ್ತುತಿಸಿದನು. ಆಗ ನಾನು ಅವನಲ್ಲಿ ಪ್ರಸನ್ನನಾಗಿ ಶ್ರೇಯಸ್ಕರವಾದ ಈ ಜ್ಞಾನವನ್ನು ಉಪದೇಶಿಸಿದೆನು." ಈ ರೀತಿ ಶಂಕರನು ಹೇಳುತ್ತಿರಲು ಮಧ್ಯೆ ಗಿರಿಜೆಯು ಪುನಃ ಪ್ರಶ್ನಿಸಿದಳು. ॥೧೩॥

"ಪ್ರಿಯ ಶಂಕರನೇ, ನೀನು ಹೇಳಿದ ಶ್ರೀಶೈಲಪರ್ವತವು ಎಲ್ಲಿದೆ? ನಿನ್ನ ಪ್ರೀತಿಗೆ ಪಾತ್ರವಾದ ಆ ಶ್ರೀಶೈಲಕ್ಷೇತ್ರವು ಯಾವ ದಿಕ್ಕಿನಲ್ಲಿದೆ? ಅದರ ಮಹಿಮೆಯ ಪರಿಏನು? ನೀನು ಯಾವಾಗ ಬಾಲಕ ಸ್ಕಂದನಿಗೆ ಸುಪ್ರೀತನಾಗಿ ಹೇಳಿದೆ? ಅದಕ್ಕೆ ಕಾರಣವೇನು? ಈ ಎಲ್ಲಾ ಕಥೆಯನ್ನೂ ಕೇಳಬೇಕೆಂದು ನನಗೆ ಆಸೆಯಾಗುತ್ತಿರುವುದು. ಈಗ ನೀನು ಪ್ರೀತಿಯಿಂದ ಇದೇ ವೃತ್ತಾಂತಗಳನ್ನು ವಿಸ್ತಾರವಾಗಿ ನನಗೆ ಹೇಳಬೇಕೆಂದು ಕೋರುತ್ತೇನೆ.'' ಹೀಗೆಂದು ಗೌರಿಯು ಕೇಳಿಕೊಳ್ಳಲು ಶಂಕರನು ಹರ್ಷದಿಂದ ತಥಾಸ್ತು ಎಂದು ಈ ರೀತಿ ಹೇಳತೊಡಗಿದನು.॥೧೪-೧೫॥

|| ಈಶ್ವರ ಉವಾಚ ||

ಶ್ರೀಶೈಲೋಽಪಿ ಚ ದೇವೇಶಿ ನಿವಾಸೋ ಮಮ ವಿಶ್ರುತಃ ।
ಶ್ರೀಶೈಲೇಶ್ವರಲಿಂಗಾತ್ಮಾ ತತ್ರ ನಿತ್ಯಂ ವಸಾಮ್ಯಹಂ ||೧೬||

ಭ್ರಮರಾಂಬೇತಿ ವಿಖ್ಯಾತಾ ಗೌರಿ ತ್ವಂ ತತ್ರ ಸಂಸ್ಥಿತಾ ।
ತತ್ರಾಪಿ ಬಹವಶ್ಶೈವಾಃ ಶ್ರೀಶೈಲೇಶಾರ್ಚನೇ ರತಾಃ ||೧೭||

ಭಸ್ಮರುದ್ರಾಕ್ಷಸಂವೀತಾಸ್ತ್ರಿಪುಂಡ್ರೋಜ್ವಲಫಾಲಕಾಃ ।
ರುದ್ರಲಿಂಗಾರ್ಚನರತಾ ರುದ್ರಾಧ್ಯಾಯಜಪಾದರಾಃ ||೧೮||

ಪಂಚಾಕ್ಷರರತಾ ನಿತ್ಯಂ ಪಂಚಾಸ್ಯಧ್ಯಾನಪೂರ್ವಕಂ ।
ಶ್ರೀಶೈಲೇ ನಿವಸಾಮೀಶೇ ಗಣವೃಂದೈಶ್ಚ ಸಂವೃತಃ ||೧೯||

ತತ್ರ ತ್ವಯಾ ತಪಸ್ತಪ್ತಂ ಬ್ರಹ್ಮಾವಿಷ್ಣುಮುಖೈಸ್ಸುರೈಃ ।
ಇಂದ್ರಾದ್ಯಾ ವಿಬುಧಾಸ್ಸರ್ವೇ ತಪ್ಯಂತಿ ಪರಮಂ ತಪಃ ||೨೦||

---

ಪ್ರಿಯ ವಲ್ಲಭೆಯೇ, ಭೂಲೋಕದಲ್ಲಿ ಶ್ರೀಶೈಲವೆಂಬ ಕ್ಷೇತ್ರವು ಅತ್ಯಂತ ಪ್ರಸಿದ್ಧವಾಗಿರುವುದು. ಆ ಕ್ಷೇತ್ರವು ನನಗೆ ಅತ್ಯಂತ ಪ್ರಿಯವಾದುದು. ಅಲ್ಲಿ ಸದಾ ನಾನು ಶ್ರೀಶೈಲೇಶ್ವರಲಿಂಗಸ್ವರೂಪವನ್ನು ತಾಳಿ ವಾಸಿಸುತ್ತೇನೆ. ||೧೬||

ಅದೇ ಶ್ರೀಶೈಲಪರ್ವತದಲ್ಲಿ ನೀನು ಸಹ ಭ್ರಮರಾಂಬಿಕೆ ಎಂಬ ವಿಖ್ಯಾತವಾದ ಹೆಸರಿನಿಂದ ನೆಲಸಿರುವೆ. ಹೀಗೆ ಆ ಸ್ಥಳ ಮಾಹಾತ್ಮ್ಯೆಯು ಅತ್ಯುತ್ಕೃಷ್ಟವಾಗಿರುವುದರಿಂದ ನಾನು ನನ್ನ ಅನೇಕ ಗಣಪರಿವಾರದೊಂದಿಗೆ ಅಲ್ಲಿ ನನ್ನ ಸಾನ್ನಿಧ್ಯವನ್ನು ವಿಶೇಷವಾಗಿ ಇಟ್ಟಿರುತ್ತೇನೆ. ಆ ಪರ್ವತವು ಇಂಥ ಪುಣ್ಯತಮವಾದ ಕ್ಷೇತ್ರವೆಂಬುದನ್ನು ಅರಿತುಕೊಂಡ ಅನೇಕ ಶೈವರು ಅಲ್ಲಿ ಅತ್ಯಂತ ಸಾಧನಾಸಕ್ತರಾಗಿರುವರು. ನಿತ್ಯವೂ ಭಸ್ಮರುದ್ರಾಕ್ಷಗಳನ್ನೂ ಭಸ್ಮತ್ರಿಪುಂಡ್ರವನ್ನೂ ಧರಿಸಿಕೊಂಡ ಆ ನನ್ನ ಭಕ್ತರು ಕೆಲವರು ರುದ್ರಾಧ್ಯಾಯವನ್ನು ಪಾರಾಯಣಮಾಡುತ್ತಲೂ, ಮತ್ತೆ ಕೆಲವರು ಶಿವಪಂಚಾಕ್ಷರೀಮಂತ್ರವನ್ನು ಜಪಿಸುತ್ತಲೂ, ಇನ್ನೂ ಕೆಲವರು ಪಂಚಮುಖನಾದ ನನ್ನನ್ನೇ ಧ್ಯಾನಿಸುತ್ತಲೂ, ಶ್ರೀಶೈಲೇಶೇಶ್ವರನನ್ನು ಸದಾ ಪೂಜಿಸುತ್ತಿರುವರು. ||೧೭-೧೮-೧೯||

ಅದೇ ಕ್ಷೇತ್ರದಲ್ಲಿ ಹಿಂದೆ ನೀನು ಸಹ ತಪಸ್ಸನ್ನಾಚರಿಸಿದ್ದೆ. ಆ ಶ್ರೀಶೈಲ ಕ್ಷೇತ್ರವು ನನಗೆ ಮಹಾಪ್ರಿಯವಾದುದೆಂದೂ ಉತ್ತಮವಾದ ತಪಸ್ಸಿದ್ಧಿಸ್ಥಾನವೆಂತಲೂ

ಅನ್ಯೈರ್ಮುನಿವರ್ಯೈರ್ದೇವಿ ಗೌತಮಾತ್ರಿಪರಾಶರೈಃ ।
ತಪಸ್ಸಿದ್ಧಿಕರಂ ಸ್ಥಾನಂ ಮಮ ಶ್ರೀಶೈಲಮುತ್ತಮಂ ॥೨೧॥

ಅತ್ರ ಜಪ್ತೋ ಮಹಾದೇವಿ ಮಂತ್ರಃ ಕೋಟಿಗುಣೋ ಭವೇತ್ ।
ಅತ್ರಾನ್ನಂ ಯೇ ಪ್ರಯಚ್ಛಂತಿ ಸ್ಮೃತ್ವಾನ್ನಪತಿಮಾದರಾತ್ ॥೨೨॥

ಅನ್ನಂ ಮತ್ಪ್ರೀತಯೇ ದೇವಿ ಬಹುಕುರ್ವೀತ ಚ ಶ್ರುತಿಃ ।
ಶಾಂಭವಂ ಭೋಜಯಿತ್ವೈಕಂ ಸಂತೋಷಯತಿ ಮಾಂ ಸದಾ ॥೨೩॥

ಕೃಷ್ಣಾನಾಮ ಪರಾಪುಣ್ಯಾನದೀ ಸಾಗರಗಾಮಿನೀ ।
ಭಿತ್ವಾ ಶ್ರೀಶೈಲಮೂಲಂ ವೈ ಸ್ನಾತಾನಾಮಘಹಾರಿಣೀ ॥೨೪॥

ಸಂತರ್ಪ್ಯ ಪಯಸಾ ತಸ್ಯಾಃ ಪಿತೄನ್ ದೇವಾನ್ನೃಷೀನಪಿ ।
ಪಿತರಸ್ತಸ್ಯ ತೃಪ್ತಾಸ್ಸ್ಯುರ್ಮಲ್ಲೋಕೇ ನಿವಸಂತಿ ಚ ॥೨೫॥

---

ಅರಿತುಕೊಂಡ ದೇವತೆಗಳೂ, ಬ್ರಹ್ಮ, ವಿಷ್ಣು, ಮತ್ತು ಇಂದ್ರ ಮುಂತಾದವರೂ, ಗೌತಮ, ಅತ್ರಿಮುನಿ, ಪರಾಶರ ಮುಂತಾದ ಋಷಿಶ್ರೇಷ್ಠರೂ ಸಹ, ನನ್ನನ್ನು ಕುರಿತು ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದಿರುವರು. ॥೨೦-೨೧॥

ಈ ಕ್ಷೇತ್ರದಲ್ಲಿ ಯಾವ ಮಂತ್ರವನ್ನು ಜಪಿಸಿದರೂ ಸಹ ಅದು ಕೋಟಿ ಗುಣ ಅಧಿಕವಾಗಿ ಫಲವನ್ನು ಕೊಡುವುದು. ಅನ್ನಪತಿಯಾದ ನನ್ನನ್ನು ಧ್ಯಾನಿಸುತ್ತಾ ಇಲ್ಲಿ ಅನ್ನವನ್ನು ನನಗೆ ಸಮರ್ಪಿಸಿದರೆ ನಾನು ಪರಮ ಸುಪ್ರೀತನಾಗುವೆನು. ಅನ್ನದಾನವನ್ನು ಸದಾ ವಿಶೇಷವಾಗಿ ನಡೆಸಬೇಕು ಎಂದು ಹೇಳಿರುವ ಶ್ರುತಿಗನು ಸಾರವಾಗಿ ಈ ಕ್ಷೇತ್ರದಲ್ಲಿ ಕನಿಷ್ಠಪಕ್ಷ ಒಬ್ಬ ಶೈವನಿಗೇ ಭೋಜನವನ್ನು ಮಾಡಿಸಿದರೂ ನನಗೆ ಬಹು ಸಂತುಷ್ಟಿಯಾಗುವುದು. ॥೨೨-೨೩॥

ಕೃಷ್ಣೆ ಎಂಬ ನದಿಯು ಆ ನನ್ನ ಕ್ಷೇತ್ರವಾದ ಶ್ರೀಶೈಲವನ್ನು ಬಳಸಿಕೊಂಡು ಹರಿಯುತ್ತಿದೆ. ಆ ನದಿಯು ನೇರವಾಗಿ ಸಮುದ್ರವನ್ನೇ ಸೇರುವುದರಿಂದ ಮಹಾನದಿಯೂ ಮತ್ತು ಅತ್ಯಂತ ಪುಣ್ಯತಮವೂ ಆಗಿರುತ್ತದೆ. ಆ ನದಿಯಲ್ಲಿ ಸ್ನಾನ ಮಾಡುವವರ ಸಕಲ ಪಾಪಗಳನ್ನೂ ಅದು ನಾಶಮಾಡುವುದಾಗಿದೆ. ॥೨೪॥

ಯಾರು ಆ ಪುಣ್ಯತಮವಾದ ನದಿಯ ನೀರಿನಿಂದ ತಮ್ಮ ಪಿತೃಗಳಿಗೆ ಅಥವಾ ದೇವಋಷಿಗಳಿಗೆ ತರ್ಪಣವನ್ನೀಯುವರೋ, ಅವರ ಪಿತೃಗಳು ಸಂತೃಪ್ತರಾಗುವರಲ್ಲದೇ ನನ್ನ ಲೋಕದಲ್ಲಿ ನಿವಾಸಸಿದ್ಧಿಯನ್ನೂ ಪಡೆಯುವರು. ॥೨೫॥

ತತ್ಪೂತನೀರೈರ್ಬಿಲ್ವೈರ್ಮಾಂ ಸಮಾರಾಧ್ಯಾಪಿ ಭಕ್ತಿತಃ ।
ಮದಾಲಯಸ್ಯ ಶಿಖರಂ ದೃಷ್ಟ್ವಾ ನೈವಾಪ್ನುಯಾಜ್ಜನುಃ ॥೨೬॥

ಶಿವಲೋಕೈಕಕಾಮೀ ಯೋ ಮರ್ತ್ಯಃ ಶ್ರೀಶೈಲೇ ನಿವಸೇಚ್ಚ ಸಃ ।
ಪ್ರಾತಸ್ಸಂಗವಮಧ್ಯಾಹ್ನೇ ಸಾಯಮಭ್ಯರ್ಚ್ಯ ಪಶ್ಯ ಚ ॥೨೭॥

ಬಿಲ್ವಪತ್ರೈರ್ಮಹಾದೇವಿ ಮುಕ್ತೋ ಮಜ್ಜ್ಞಾನತೋ ಭವೇತ್ ।
ಅಶ್ವಮೇಧಾದಯೋ ಯಾಗಾ ಯೇನ ಸಾನ್ನಾಸ್ಸದಕ್ಷಿಣಾಃ ॥೨೮॥

ಕೃತಾಸ್ತೇನೈವ ಲಭ್ಯೇತ ಶ್ರೀಶೈಲೇಶಸ್ಯ ದರ್ಶನಂ ।
ಯೇನ ಷೋಡಶ ದಾನಾನಿ ಬ್ರಹ್ಮಾಂಡಾದೀನಿ ಸತ್ತಮೇ ॥೨೯॥

---

ಆ ನದಿಯ ನೀರಿನಿಂದ ಪವಿತ್ರೀಕೃತಗಳಾದ ಬಿಲ್ವದಳಗಳಿಂದ ಯಾರು ನನ್ನನ್ನು ಭಕ್ತಿಯಿಂದ ಪೂಜಿಸುವರೋ ಅವರು ನನ್ನ ಕೈಲಾಸ ಶಿಖರವನ್ನು ಸಂದರ್ಶಿಸುವರು. ಮತ್ತು ಪುನಃ ಹುಟ್ಟೆಂಬುದಿಲ್ಲದೆ ಮುಕ್ತಿಯನ್ನು ಸಹ ಹೊಂದುವರು. ॥೨೬॥

ಯಾವನು ಶಿವಧಾಮದಲ್ಲಿ ತನಗೆ ವಾಸವು ಸಿದ್ಧಿಸಬೇಕೆಂದು ಅಪೇಕ್ಷಿಸುವನೋ, ಅವನು ಅವಶ್ಯವಾಗಿ ಶ್ರೀಶೈಲಕ್ಷೇತ್ರದಲ್ಲಿ ಮೊದಲು ವಾಸಮಾಡಬೇಕು. ಅಲ್ಲಿ ಪ್ರಾತಃಕಾಲದಲ್ಲಿಯೂ ಸಂಗವಕಾಲದಲ್ಲಿಯೂ ಮಧ್ಯಾಹ್ನ ಕಾಲದಲ್ಲಿಯೂ ಮತ್ತು ಸಾಯಂಕಾಲದಲ್ಲಿಯೂ ಸಹ ನನ್ನನ್ನು ಬಿಲ್ವಪತ್ರಾದಿಗಳಿಂದ ಪೂಜಿಸಬೇಕು. ಈ ರೀತಿ ಯಾವನು ಸಾಧನೆಮಾಡುವನೋ ಅವನು ನನ್ನ ಲೋಕವನ್ನು ಹೊಂದುವನಲ್ಲದೇ ಸುಜ್ಞಾನವನ್ನು ಸಹ ಪಡೆದುಕೊಂಡು ಈ ಸಂಸಾರದಿಂದ ವಿಮುಕ್ತನಾಗುವನು. ॥೨೭॥

ಯಾವ ಮನುಷ್ಯನು ಅಶ್ವಮೇಧಯಾಗವನ್ನು ಮಾಡಿ ದಕ್ಷಿಣೆಯನ್ನೂ ಅನ್ನವನ್ನೂ ಸಹ ದಾನಮಾಡಿರುವನೋ, ಕೇವಲ ಅಂತಹವನಿಗೆ ಮಾತ್ರವೇ ಶ್ರೀಶೈಲೇಶ್ವರನ ಸಂದರ್ಶನಯೋಗವು ಲಭಿಸುವುದು. ಅನ್ಯರಿಗೆ ಲಭಿಸುವುದಿಲ್ಲ. ಅಂತಹ ಯಾಗಾಚರಣೆಗೂ ಇದೇ ಫಲವಾಗುವುದು. ॥೨೮॥

ಯಾವನು ಮಹಾದಾನಗಳೆನಿಸಿದ ಹದಿನಾರು ವಿಧದ ದಾನಗಳನ್ನೂ ಮಾಡಿರುವನೋ, ಅಥವಾ ಮಹಾಮಹಾ ವಸ್ತುಗಳೆನಿಸಿದ ಜಗತ್ತೆ ಮೊದಲಾದುವುಗಳಲ್ಲಿ ಆಸೆ ಬಿಟ್ಟಿರುವನೋ, ಅಂತಹವನಿಗೆ ಮಾತ್ರ ಶ್ರೀಶೈಲೇಶ್ವರನ ಸಂದರ್ಶನವು ಲಭಿಸು

ಕೃತಾನಿ ತಸ್ಯ ದೇವೇಶಿ ಶ್ರೀಶೈಲೇಶ್ವರದರ್ಶನಂ ।
ನಾತಪ್ತತಪಸೋ ದೇವಿ ಶ್ರೀಶೈಲೇಶ್ವರದರ್ಶನಂ ॥೩೦॥

ಮತಿರ್ಭವತಿ ತಸ್ಯೈವ ಯೇನ ತಪ್ತಂ ತಪೋಽಂಬಿಕೇ ।
ಅದ್ಯಾಪಿ ಬ್ರಹ್ಮವಿಷ್ಣ್ವಾದ್ಯಾ ಮುನಯಶ್ಚ ತಥಾಪರೇ ॥೩೧॥

ಪಶ್ಯಂತಿ ನಿಯತಂ ಗೌರಿ ತಲ್ಲಿಂಗಂ ದ್ರಷ್ಟುಮಿಚ್ಛವಃ ।
ರುದ್ರಾಧ್ಯಾಯಾವರ್ತನೈಶ್ಚ ಪಂಚಾಕ್ಷರಜಪಾದಿಭಿಃ ॥೩೨॥

ಶಿವಲಿಂಗಾರ್ಚಕೋ ಯಃ ಸ್ಯಾದ್ಭೂರಿಭಾಗ್ಯೇನ ಶಾಂಭವಿ ।
ಯೋ ಭಸ್ಮನಿಷ್ಠಸ್ಸತತಂ ರುದ್ರಾಕ್ಷಕೃತಕಂಕಣಃ ॥೩೩॥

---

ವುದು. ಮಹಾತಪಸ್ಸನ್ನು ಮಾಡದಿರುವವರೆಂದೂ ಆ ಈಶ್ವರ ದರ್ಶನವನ್ನು ಪಡೆಯಲಾರರು. ॥೨೯-೩೦॥

ಯಾವನು ಮಹಾತಪಸ್ಸುಗಳಿಂದ ಪುಣ್ಯರಾಶಿಯನ್ನು ಗಳಿಸಿಕೊಂಡಿರುವನೋ ಅಂತಹವನಿಗೆ ಮಾತ್ರವೇ ಶ್ರೀಶೈಲೇಶ್ವರನನ್ನು ಸಂದರ್ಶಿಸಬೇಕೆಂಬ ಆಸೆಯು ಉದ್ಭವಿಸುವುದು. ಈ ಸದಪೇಕ್ಷೆಯು ಇತರ ಸಾಮಾನ್ಯ ಜನರ ಬುದ್ಧಿಗೆ ಉಂಟಾಗುವುದೇ ಇಲ್ಲ. ಬ್ರಹ್ಮ ಮತ್ತು ವಿಷ್ಣು ಮುಂತಾದವರೂ ಸಹ ಮೊದಲು ಪುಣ್ಯರಾಶಿಯನ್ನು ಸಂಪಾದಿಸಿಕೊಂಡಿರುವುದರಿಂದಲೇ ಶ್ರೀಶೈಲೇಶ್ವರನನ್ನು ಈಗಲೂ ಸಹ ಸಂದರ್ಶಿಸುವರು. ಹಾಗೆಯೇ ಪುಣ್ಯಸಂಚಯಮಾಡಿಕೊಂಡ ಋಷಿಗಳು ಸಹ ಆ ಈಶ್ವರನನ್ನು ಸಂದರ್ಶಿಸಬೇಕೆಂದು ರುದ್ರಾಧ್ಯಾಯವನ್ನು ಪಾರಾಯಣಮಾಡುವರು. ಪಂಚಾಕ್ಷರೀ ಮಂತ್ರವನ್ನು ಜಪಿಸುವರು. ಆ ಪುಣ್ಯದಿಂದ ಶಿವಸಂದರ್ಶನಲಾಭವನ್ನೂ ಪಡೆಯುವರು. ॥೩೧-೩೨॥

ಪೂರ್ವಸಂಚಿತವಾದ ಪುಣ್ಯದ ದೆಸೆಯಿಂದ ಯಾವನು ಭಸ್ಮ ರುದ್ರಾಕ್ಷಧಾರಿಯೂ, ಭಸ್ಮತ್ರಿಪುಂಡ್ರಧಾರಿಯೂ ಮತ್ತು ಶಿವಲಿಂಗಾರ್ಚಕನೂ ಆಗಿರುತ್ತಾನೆಯೋ ಅಂತಹವನಿಗೆ ಮಾತ್ರವೇ ಆ ಶ್ರೀಶೈಲವಾಸಿಯಾದ ನನ್ನ ದರ್ಶನವು ಲಭಿಸುವುದು. ॥೩೩॥

ತ್ರಿಪುಂಡ್ರಧಾರೀ ಸತತಂ ತಸ್ಯ ಮೇ ದರ್ಶನಂ ಭವೇತ್ ।
ಪ್ರಾಪ್ಯ ನಾರಂ ವಪುರಿದಂ ದೃಷ್ಟ್ವಾ ಶ್ರೀಶೈಲನಾಯಕಂ ॥೩೪॥

ತಜ್ಜನ್ಮ ಸಫಲಂ ಗೌರಿ ನೋ ಚೇಜ್ಜನ್ಮ ನಿರರ್ಥಕಂ ।
ಶತಾಯುಃ ಪುರುಷೋ ಯೋ ಹಿ ಜನ್ಮಮಧ್ಯೇಽಪಿ ಮಾಂ ಶಿವಂ ॥೩೫॥

ಶ್ರೀಶೈಲೇಶಂ ಸಕೃದ್ದೃಷ್ಟ್ವಾ ಮುಚ್ಯತೇ ಭವಬಂಧನಾತ್ ।
ಅನ್ಯತ್ರಾಪಿ ಮೃತೋ ಗೌರಿ ಮಮ ಲೋಕೇ ವಸೇತ್ಸ ಹಿ ॥೩೬॥

ಶ್ರೀಶೈಲೇ ಚ ಮೃತೋ ಜಂತು ರ್ನ ಪುನರ್ಜನ್ಮಭಾಗ್ಭವೇತ್ ।
ಅತ್ರಾಪಿ ದೇವಿ ಲಿಂಗಾನಿ ಶ್ರೀಶೈಲೇ ಸಂತಿ ತಾನ್ಯಪಿ ॥೩೭॥

ಪೂಜಿತೇ ಮುಕ್ತಿದಾನೀಹ ದೃಷ್ಟಾನ್ಯಪಿ ಮನೋರಮೇ ।
ಬಿಲ್ವಪತ್ರೈಸ್ಸದಾ ದೇವಿ ಪುಷ್ಪೈರ್ದೂರ್ವಾಂಕುರೈರಪಿ ॥೩೮॥

---

ಮನುಷ್ಯ ಜನ್ಮವನ್ನು ಪಡೆದುಕೊಂಡಿರುವಾಗ ಒಂದು ಸಲವಾದರೂ ಆ ಶ್ರೀಶೈಲಾಧೀಶ್ವರನಾದ ನನ್ನ ಸಂದರ್ಶನವನ್ನು ಮಾಡಿಕೊಂಡರೆ ಅವರ ಜನ್ಮವು ಸಾರ್ಥಕವಾಗುವುದು. ಹಾಗಿಲ್ಲದಿದ್ದರೆ ಖಂಡಿತವಾಗಿಯೂ ಆ ಮನುಷ್ಯ ಜನ್ಮವು ವ್ಯರ್ಥವೇ ಸರಿ. ॥೩೪॥

ಮನುಷ್ಯನಿಗೆ ನೂರು ವರ್ಷ ಆಯುಷ್ಯವಿರುವುದು. ಅಂಥ ದೀರ್ಘಕಾಲದ ಎಂದಾದರೂ ಒಂದು ದಿನ ಅಥವಾ ಒಂದು ಸಲವಾದರೂ ಆ ಶ್ರೀಶೈಲ ಮಹಾ ಕ್ಷೇತ್ರಾಧಿ ಪತಿಯಾದ ನನ್ನನ್ನು ಸಂದರ್ಶಿಸಿದರೆ ಸಂಸಾರದ ಸಕಲ ಬಂಧನಗಳೂ ಕಿತ್ತುಹೋಗುವುವು ॥೩೫॥

ಒಂದು ಸಲ ಶ್ರೀಶೈಲೇಶ್ವರನನ್ನು ಸಂದರ್ಶಿಸಿದವನು ಎಲ್ಲಿಯೇ ಮೃತನಾದರೂ, ಅವನು ನನ್ನ ಲೋಕದಲ್ಲಿ ಸುಖವಾಗಿ ವಾಸಿಸುವನು. ಶ್ರೀಶೈಲದಲ್ಲೇ ಮೃತನಾದವನಂತೂ ಪುನರ್ಜನ್ಮವನ್ನೇ ಪಡೆಯುವುದಿಲ್ಲ. ಅವನಿಗೆ ಸಂಸಾರಕ್ಲೇಶವೇ ತಪ್ಪಿಹೋಗುವುದು. ॥೩೬॥

ಪ್ರಿಯೆ, ಈ ಕೈಲಾಸದಲ್ಲಿ ಯಾವ ಯಾವ ಶಿವಲಿಂಗಗಳಿವೆಯೋ ಅವುಗಳೆಲ್ಲವೂ ಆ ಶ್ರೀಶೈಲದಲ್ಲಿಯೂ ಇರುವುವು. ಇಲ್ಲಿರುವ ಶಿವಲಿಂಗಗಳು ಪೂಜಿಸಿದವನಿಗೆ ಹೇಗೆ ಮುಕ್ತಿಯನ್ನು ಕೊಡುವುವೋ, ಹಾಗೆಯೇ ಆ ಶ್ರೀಶೈಲದಲ್ಲಿರುವ

ಉತ್ಫುಲ್ಲಪದ್ಮೈರಮಲೈಃ ಫುಲ್ಲನೀಲೋತ್ಪಲೈರಪಿ ।
ಭೂಧರಾರಾಧಿತಂ ಲಿಂಗಂ ತ್ರಿಪುರಾಂತಕಸಂಜ್ಞಿತಂ ॥೩೯॥

ತಲ್ಲಿಂಗದರ್ಶನೇನೈವ ಸರ್ವಪಾಪಕ್ಷಯೋ ಭವೇತ್ ।
ದೃಷ್ಟೇ ಲಿಂಗೇ ಮಹಾದೇವಿ ಮುಕ್ತೋ ಭವತಿ ಶಂಕರಿ ॥೪೦॥

ಪೂರ್ವಂ ತ್ರಿಪುರಸಂಹಾರಂ ಕೃತ್ವಾ ದೇವೈಸ್ತಥಾ ಸ್ತುತಃ ।
ತ್ರಿಪುರಾಂತಕಲಿಂಗಸ್ಥಂ ಶ್ರೀಶೈಲೇ ಸರ್ವಕಾಮದೇ ॥೪೧॥

ಘಂಟಾಕರ್ಣೇಶ್ವರಂ ಲಿಂಗಂ ತತ್ರಾಸ್ತಿ ಭುವನೇಶ್ವರಿ ।
ಘಂಟಾಕರ್ಣಗಣೇಶೇನ ಪೂಜಿತಂ ಮುಕ್ತಿದಾಯಕಂ ॥೪೨॥

---

ಶಿವಲಿಂಗಗಳಿಗೆ ಯಾವನು ಬಿಲ್ವಪತ್ರೆ, ದೂರ್ವಾಂಕುರ, ಕಮಲ, ಕನ್ನೈದಿಲೆ ಮುಂತಾದವುಗಳಿಂದ ಪೂಜೆಯನ್ನು ಮಾಡುವನೋ ಅವನು ನಿಶ್ಚಯವಾಗಿಯೂ ಮೋಕ್ಷವನ್ನೇ ಪಡೆಯುವನು. ||೩೭-೩೮||

ಆ ಶ್ರೀಶೈಲದಲ್ಲಿಯೂ ಹಿಮವಂತನಿಂದ ಪೂಜಿತವಾದ ಶಿವಲಿಂಗವಿರುವುದು. ಇಲ್ಲಿರುವಂತೆ ಅಲ್ಲಿಯೂ ಆ ಲಿಂಗಕ್ಕೆ ತ್ರಿಪುರಾಂತಕ ಎಂದೇ ಹೆಸರಿರುವುದು. ಆ ಲಿಂಗವನ್ನು ಸಂದರ್ಶಿಸಿದೊಡನೆಯೇ ಸಕಲ ಮಹಾಪಾಪಗಳೂ ಸಹ ದೂರವಾಗು ವುವು. ಯಾವನು ಆ ತ್ರಿಪುರಾಂತಕಲಿಂಗವನ್ನು ಸಂದರ್ಶಿಸುವನೋ ಅವನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡು ಮುಕ್ತಿಯನ್ನೇ ಪಡೆಯುವನು. ||೩೯-೪೦||

ಹಿಂದೆ ನಾನು ತ್ರಿಪುರಾಸುರನನ್ನು ಸಂಹರಿಸಿ ವಿಜಯಶಾಲಿಯಾಗಿರಲು ಆಗ ದೇವತೆಗಳು ನನ್ನನ್ನು ಅಲ್ಲಿ ಬಹುವಾಗಿ ಸ್ತುತಿಸಿದರು. ಮತ್ತು ತ್ರಿಪುರಾಂತಕ ಎಂಬ ಹೆಸರಿನಿಂದಲೇ ಶ್ರೀಶೈಲದಲ್ಲಿ ನಾನು ಆವಾಸಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಅದೇ ಮೇರೆಗೆ ನಾನು ಇಷ್ಟಾರ್ಥಪ್ರದಾತೃವಾದ ಶ್ರೀಶೈಲದಲ್ಲಿ ತ್ರಿಪುರಾಂತಕಲಿಂಗದಲ್ಲಿ ವಾಸಮಾಡತೊಡಗಿದನು. ಅದು ಹಾಗೆಯೇ ಇಂದೂ ಪ್ರಸಿದ್ಧವಾಗಿರುವುದು. ||೪೧||

ಆ ಶ್ರೀಶೈಲದಲ್ಲಿ ಘಂಟಾಕರ್ಣೇಶ್ವರವೆಂಬ ಶಿವಲಿಂಗವಿರುವುದು. ಘಂಟಾ ಕರ್ಣನೆಂಬ ನನ್ನ ಗಣಾಧಿಪತಿಯು ಆ ಲಿಂಗವನ್ನು ಪೂಜಿಸಿದ್ದರಿಂದ ಆ ಲಿಂಗಕ್ಕೆ ಆ ಹೆಸರು ಬಂದಿತು. ಆ ಮಹಾಲಿಂಗವನ್ನು ಪೂಜಿಸಿದರೆ ಮುಕ್ತಿಯೇ ದೊರಕು ವುದು. ||೪೨||

ಯಸ್ತಲ್ಲಿಂಗಂ ಸಕೃದ್ದೃಷ್ಟ್ವಾ ಪೂಜ್ಯ ಬಿಲ್ವೈಶ್ಚ ಕೋಮಲೈಃ ।
ಮುಕ್ತಿಕಾಂತಾ ಕರಾಕ್ರಾಂತಾ ತಸ್ಯ ದೇವಿ ಭವಿಷ್ಯತಿ ॥೪೩॥

ತತ್ರಾಸ್ತಿ ಚ ಸುಧಾಕುಂಡಂ ಸುಧಾಸ್ವಾದುಜಲಂ ಶಿವೇ ।
ತಸ್ಮಿನ್ ಕುಂಡೇ ಸಕೃತ್ಸ್ನಾತ್ವಾ ನ ಯಾಮೀಂ ಯಾತನಾಂ ವ್ರಜೇತ್॥೪೪॥

ಘಂಟಾಕರ್ಣಮಹಾಲಿಂಗಂ ದೃಷ್ಟ್ವಾ ಯಸ್ತೋಷ್ಯತಿ ಪ್ರಿಯೇ ।
ತಸ್ಯ ಮುಕ್ತಿಂ ದದಾಮೀಶೇ ಯಾ ದೇವೈರಪಿ ದುರ್ಲಭಾ ॥೪೫॥

ವಿಶ್ವೇಶ ಪ್ರಮಥಾಧಿನಾಥ ಪುರಹನ್ ಶ್ರೀಶೈಲಮೌಲಿಸ್ಥಿತಂ
ಪಾಪಾನಂಗಪತಂಗಸಂಗಜನಿತಾನಂದಾಂಗವಿದ್ಯುತ್ಪ್ರಭ ।
ತ್ವನ್ನಾಮಾನ್ಯನಿಶಂ ವದಾಮಿ ಭಗವನ್ನನ್ಯಾನಿ ನಾಮಾನಿ ಮೇ
ಶ್ರೋತುಂ ನ ಬುದ್ಧಿರ್ಮಮ ಘಂಟಾಕರ್ಣೋಽಹಮೀಶ ತ್ವಯಿ
ಶಿವ ಸತತಂ ಭಕ್ತಿರಸ್ತ್ವದ್ಯ ಶಂಭೋ ॥೪೭॥

---

ಆ ಘಂಟಾಕರ್ಣೇಶ್ವರಲಿಂಗವನ್ನು ಯಾವನು ಒಂದು ಸಲವಾದರೂ ಸಂದರ್ಶಿಸಿ ಕೋಮಲವಾದ ಬಿಲ್ವಪತ್ರೆ ಮುಂತಾದವುಗಳಿಂದ ಸಂಪೂಜಿಸುವನೋ ಆತನನ್ನು ಮುಕ್ತಿ ಎಂಬ ರಮಣಿಯು ಸ್ವತಃ ಬಂದು ಪಾಣಿಗ್ರಹಣ ಮಾಡಿಕೊಳ್ಳುವಳು. ॥೪೩॥

ಆ ಲಿಂಗದ ಸಮೀಪದಲ್ಲೇ ಸುಧಾಕುಂಡವೆಂಬ ಒಂದು ತೀರ್ಥವಿರುವುದು. ಆದರ ನೀರು ಅಮೃತದಂತೆ ರುಚಿಕರವಾಗಿರುವುದು. ಆ ತೀರ್ಥದಲ್ಲಿ ಯಾವನು ಒಂದು ಸಲವಾದರೂ ಸ್ನಾನಮಾಡುವನೋ ಅವನಿಗೆ ಯಮಯಾತನೆ ಎಂದೂ ಸಂಭವಿಸುವುದಿಲ್ಲ. ॥೪೪-೪೫॥

ಹಿಂದೆ ಆ ಲಿಂಗವನ್ನು ಘಂಟಾಕರ್ಣನು ಬಹುವಾಗಿ ಸ್ತುತಿಸಿದ್ದನು. ಅವನು ರಚಿಸಿದ ಸ್ತೋತ್ರದಿಂದ ಯಾರು ಸ್ತುತಿಸುವರೋ ಅವರಿಗೆ ನಾನು ಮುಕ್ತಿಯನ್ನೇ ಅನುಗ್ರಹಿಸುವೆನು. ಆ ಸ್ತೋತ್ರವು ಮಹಾಶ್ರೇಷ್ಠವಾದದ್ದು. ಘಂಟಾಕರ್ಣನು ರಚಿಸಿದ ಸ್ತೋತ್ರವೇ ಇದು. ॥೪೬॥

" ಓ ವಿಶ್ವೇಶ್ವರನೇ, ನೀನು ಪ್ರಮಥಗಣಕ್ಕೆ ಮುಖ್ಯಾಧಿಪತಿಯಾಗಿರುವೆ. ತ್ರಿಪುರನನ್ನು ಸಂಹರಿಸಿ ಜಗತ್ತನ್ನು ಕಾಪಾಡಿರುವೆ. ಶ್ರೀಶೈಲದಲ್ಲಿ ವಾಸಮಾಡುತ್ತಾ

ಅಥಾನ್ಯದಪಿ ದೇವೇಶಿ ಲಿಂಗಂ ತಚ್ಛಿಖರೇಶ್ವರಂ ।
ತಚ್ಚ ಲಿಂಗಂ ಸಕೃದ್ದೃಷ್ಟ್ವಾ ಬಿಲ್ವೈಸ್ಸಂಪೂಜ್ಯ ಮುಕ್ತಿಭಾಕ್ ॥೪೮॥

ವಿಭೂತಿಕುಂಡಂ ತತ್ರಾಸ್ತಿ ಸ್ನಾನಾತ್ಪಾನಾವಗಾಹನಾತ್ ।
ಪಾಪನಾಶಕರಂ ದೇವಿ ಸರ್ವಸೌಭಾಗ್ಯದಾಯಕಂ ॥೪೯॥

ಹಾಟಕೇಶಂ ತಥಾನ್ಯಂ ಹಿ ಲಿಂಗಮಸ್ತ್ಯೇಕಮುತ್ತಮಂ ।
ಸಂಪೂಜ್ಯ ಹಾಟಕೇಶಂ ತು ಬಿಲ್ವೈರ್ಮುಕ್ತಿಸ್ತಥಾಂಬಿಕೇ ॥೫೦॥

---

ಸಂಸಾರಿಗಳನ್ನು ಉದ್ಧರಿಸುವೆ. ವಿದ್ಯುತ್ಪ್ರಭನಾದ ನಿನ್ನೆದುರಿನಲ್ಲಿ ಪಾಪರಾಶಿಯು, ಮನ್ಮಥನು ಹೇಗೆ ಪತಂಗದಂತೆ ಗತಿಮುಟ್ಟಿದನೋ, ಹಾಗೆಯೇ ನಾಶವಾಗುವುದು. ನಿನ್ನ ಅನುಗ್ರಹಕ್ಕೆ ಪಾತ್ರನಾದವನಿಗೆ ಎಂದೂ ಪಾಪಸಂಸರ್ಗದಿಂದ ಭಯವು ಸಂಭವಿಸುವುದಿಲ್ಲ. ಓ ದೇವದೇವನೇ, ಅಂಥ ನಿನ್ನ ಪ್ರಸನ್ನತೆಯನ್ನು ಪಡೆದುಕೊಳ್ಳಲು ಸದಾ ನಿನ್ನ ಪುಣ್ಯನಾಮಗಳನ್ನೇ ಸಂಕೀರ್ತಿಸುವೆನು. ನಿನ್ನ ನಾಮಗಳನ್ನೇ ಕೇಳುವೆನು. ಬೇರೆ ಹೆಸರುಗಳನ್ನು ಕೇಳುವುದಕ್ಕೆ ನನಗೆ ಎಂದೂ ಮನವೇ ಬಾರದು ಮತ್ತು ಬರದಿರಲಿ. ನಾನು ಘಂಟಾಕರ್ಣನಿರುವೆನು. (ಘಂಟೆಯನ್ನು ಕಿವಿಗೆ ಕಟ್ಟಿಕೊಂಡಿರುವುದರಿಂದ ಅದರ ಶಬ್ದದಿಂದ ಬೇರೆ ಶಬ್ದವು ಕಿವಿಗೆ ಕೇಳಿಸುವುದೇ ಇಲ್ಲ) ಓ ಪರಶಿವನೇ, ನಿನ್ನಲ್ಲಿ ನನಗೆ ಶಾಶ್ವತವಾದ ಭಕ್ತಿ ನೆಲೆಸುವಂತೆ ಅನುಗ್ರಹಿಸು." ಹೀಗೆಂದು ಆ ಘಂಟಾಕರ್ಣನು ಸ್ತೋತ್ರವನ್ನು ರಚಿಸಿ ಸ್ತುತಿಸಿದ್ದನು. ||೪೭||

ಆ ಶ್ರೀಶೈಲದಲ್ಲಿ ಶಿಖರೇಶ್ವರ ಎಂಬ ಶಿವಲಿಂಗ ಒಂದಿರುವುದು. ಅದನ್ನು ಒಂದುಸಲ ಯಾವನು ಸಂದರ್ಶಿಸಿ ಬಿಲ್ವಾದಿಗಳಿಂದ ಪೂಜಿಸುವನೋ ಅವನು ಮುಕ್ತಿ ಪಡೆಯುವನು. ||೪೮||

ಅಲ್ಲಿ ವಿಭೂತಿ ಕುಂಡ ಎಂಬ ಮತ್ತೊಂದು ತೀರ್ಥವಿರುವುದು. ಅದರಲ್ಲಿ ಸ್ನಾನಮಾಡಿದರೆ ಅಥವಾ ಆ ಜಲವನ್ನು ಪಾನಮಾಡಿದರೆ ಸಕಲ ಪಾಪಗಳೂ ನಾಶವಾಗುವುವು. ಅಲ್ಲದೇ ಸಮಸ್ತ ಸೌಭಾಗ್ಯಗಳೂ ಸಹ ಲಭಿಸುವುವು. ||೪೯||

ಆ ಶ್ರೀಶೈಲದಲ್ಲಿ ಹಾಟಕೇಶ್ವರ ಎಂಬ ಲಿಂಗವಿರುವುದು. ಆ ಲಿಂಗಕ್ಕೆ ಬಿಲ್ವಾದಿಗಳಿಂದ ಪೂಜೆಮಾಡಿದರೆ ನಿಸ್ಸಂದೇಹವಾಗಿಯೂ ಮುಕ್ತಿಯು ಲಭಿಸುವುದು. ||೫೦||

ಹಾಟಕಾಖ್ಯಂ ಮಹಾಕುಂಡಂ ತಲ್ಲಿಂಗಾಗ್ರೇ ಮಹೇಶ್ವರೀ ।
ತತ್ರ ಸ್ನಾತ್ವಾ ಸ ಗೌರೀಶಸೇವಯಾ ಗಣಪೋ ಭವೇತ್ ॥೫೧॥

ಸ ತು ಲಿಂಗಮಯೋ ದೇವಿ ನಾನಾಕುಂಡವಿರಾಜಿತಃ ।
ಶ್ರೀಪರ್ವತಃ ಶ್ರಿಯಾ ಯುಕ್ತೋ ನಾನಾಲಿಂಗವಿರಾಜಿತಃ ॥೫೨॥

ಭ್ರಮರಾಂಬಾ ಚ ಗೌರಿ ತ್ವಂ ಸದಾ ತಚ್ಛಿಖರೇ ಸ್ಥಿತಾ ।
ತವ ಪಾದಾಂಬುಜದ್ವಂದ್ವದರ್ಶನಾನ್ಮುಕ್ತಿಭಾಙ್ನರಃ ॥೫೩॥

ಶ್ರೀಶೈಲೇಶೋಽಹಮೀಶಾನಿ ತತ್ತುಂಗಶಿಖರೇ ಸ್ಥಿತಃ ।
ಬ್ರಹ್ಮವಿಷ್ಣ್ವಾದಿಭಿರ್ದೇವೈರ್ಗಣೇಂದ್ರೈರಪಿ ಸೇವಿತಃ ॥೫೪॥

---

ಅದೇ ಶಿವಲಿಂಗದ ಬಳಿಯಲ್ಲಿ ಹಾಟಕಕುಂಡವೆಂಬ ತೀರ್ಥವಿರುವುದು. ಯಾವನು ಆ ತೀರ್ಥದಲ್ಲಿ ಸ್ನಾನಮಾಡುವನೋ ಮತ್ತು ಆ ಲಿಂಗವನ್ನು ಸಂಪೂಜಿಸುವನೋ ಅವನು ನನ್ನ ಗಣಕ್ಕೆ ಅಧಿಪತಿಯಾಗುವನು. ॥೫೧॥

ಹೀಗೆ ಆ ಶ್ರೀಶೈಲ ಪರ್ವತದಲ್ಲಿ ಇನ್ನೂ ಅನಂತವಾಗಿ ಶಿವಲಿಂಗಗಳಿರುವುವು. ಆ ಶ್ರೀಶೈಲವೇ ಒಂದು ಮಹಾಲಿಂಗಮಯವಾಗಿರುವುದು. ಅಲ್ಲಿ ಇನ್ನೂ ಅನೇಕ ತೀರ್ಥಗಳಿರುವುವು. ಆದ್ದರಿಂದ ಆ ಪುಣ್ಯತಮ ಪರ್ವತವು ಅತ್ಯಂತ ಸೊಬಗಿನಿಂದ ವಿರಾಜಿಸುವುದು. ॥೫೨॥

ಗಿರಿಜೆಯೇ, ಆ ಶ್ರೀಶೈಲಪರ್ವತದಲ್ಲಿ ಭ್ರಮರಾಂಬೆ ಎಂದು ಪ್ರಸಿದ್ಧಳಾಗಿ ನೀನು ಸದಾ ವಾಸಿಸುತ್ತಿರುವೆ. ಅಲ್ಲಿರುವ ನಿನ್ನನ್ನು, ನಿನ್ನ ಪಾದಾರವಿಂದಗಳನ್ನು, ಯಾವ ಮನುಷ್ಯನು ಸಂದರ್ಶಿಸುವನೋ, ಅವನು ನಿಜವಾಗಿಯೂ ಮುಕ್ತಿಯನ್ನು ಪಡೆಯುವನು. ॥೫೩॥

ಆ ಶ್ರೀಶೈಲದ ಶಿಖರದಲ್ಲಿ ನಾನು ಶ್ರೀಶೈಲೇಶನೆಂಬ ಹೆಸರನ್ನು ತಳೆದುಕೊಂಡು ವಾಸಿಸುತ್ತಿರುವೆನು. ನಿತ್ಯವೂ ಸಹ ಬ್ರಹ್ಮ ವಿಷ್ಣು ಮತ್ತು ದೇವೇಂದ್ರ ಮುಂತಾದವರೆಲ್ಲರೂ ಅಲ್ಲಿಗೇ ಬಂದು ನನ್ನನ್ನು ಸೇವಿಸುವರು. ಹೀಗೆ ಸಮಸ್ತ ಪರಿವಾರ ಸಂಸೇವಿತನಾದ ನನ್ನನ್ನು ಯಾರು ನಿತ್ಯವೂ ನಿಯಮಪೂರ್ವಕವಾಗಿ ಸಂದರ್ಶಿಸುವರೋ ಅವರು ಸಕಲ ಪಾಪಗಳಿಂದ ವಿಮುಕ್ತರಾಗುವರು. ॥೫೪॥

ತತ್ರ ಮಾಂ ನಿಯಮಾದ್ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಪುರಾ ಶ್ರಿಯಾ ತಪಸ್ತಪ್ತಂ ತಚ್ಛೃಣುಷ್ವಾಂಬಿಕೇ ಮುದಾ ॥೫೫॥

ಯದಾನಂಗೋ ಮಯಾ ದಗ್ಧಃ ಶ್ರಿಯಃ ಪುತ್ರೋ ಮಹೇಶ್ವರಿ ।
ತೇನ ದುಃಖೇನ ಸಂತಪ್ತಾ ಭಸ್ಮರುದ್ರಾಕ್ಷಭೂಷಣಾ ॥೫೬॥

ಪಂಚಾಗ್ನಿನಿರತಾ ದೇವಿ ಪಂಚಾಕ್ಷರಪರಾಯಣಾ ।
ತತಾಪ ತಪ ಅತ್ಯುಗ್ರಂ ವರ್ಷಾಣಾಂ ಶತಕಂ ಶಿವೇ ॥೫೭॥

ದತ್ತಂ ಚ ದರ್ಶನಂ ದೇವಿ ತದಾ ಕಾಲಾಂತರೇ ಮಯಾ ।
ಮಾಂ ದೃಷ್ಟ್ವಾ ಪ್ರಣತಾ ಗೌರಿ ತುಷ್ಟಾವ ನಿಯತಾ ತದಾ ॥೫೮॥

ಶರ್ವರೀರಮಣಖಂಡಮೌಳಿನಂ
ಶರ್ವರೀಕೃತವಿಹಾರಹಾರಿಣಂ ।
ಶರ್ವಪರ್ವಪತಿಮಾಶ್ರಯೇ ಸದಾ
ಪೂರ್ವಯಾಶು ಸತತಂ ಸಮರ್ಚಯೇ ॥೫೯॥

---

ಎಲೌ ಅಂಬಿಕೆ! ಶ್ರೀಶೈಲದಲ್ಲಿ ಹಿಂದೆ ಲಕ್ಷ್ಮಿಯು ತಪಸ್ಸನ್ನು ಮಾಡಿದ್ದಳು. ಆ ಸಂಗತಿಯನ್ನು ಹೇಳುವೆನು ಕೇಳು. ಲಕ್ಷ್ಮಿಯ ಪುತ್ರನಾದ ಮನ್ಮಥನು ನನ್ನ ಫಾಲಾಗ್ನಿಗೆ ಸಿಲುಕಿ ದಗ್ಧನಾದಾಗ ಪುತ್ರಮರಣದಿಂದ ಲಕ್ಷ್ಮಿಯು ಅತ್ಯಂತ ದುಃಖಿತಳಾಗಿ ಭಸ್ಮರುದ್ರಾಕ್ಷಿಗಳನ್ನು ಧರಿಸಿಕೊಂಡು ನನ್ನನ್ನು ಕುರಿತು ತಪಸ್ಸನ್ನು ಮಾಡಿದಳು. ॥೫೪-೫೬॥

ಆ ಲಕ್ಷ್ಮಿಯು ಪಂಚಾಗ್ನಿಮಧ್ಯದಲ್ಲಿ ಕುಳಿತುಕೊಂಡು ಸದಾ ಶಿವಪಂಚಾಕ್ಷರೀಮಂತ್ರವನ್ನೇ ಜಪಿಸುತ್ತಾ ಅತ್ಯುಗ್ರವಾಗಿ ನೂರು ವರ್ಷಗಳ ಪರ್ಯಂತ ತಪಸ್ಸನ್ನಾಚರಿಸಿದಳು. ॥೫೭॥

ಆಕೆಯ ಆ ನಿಶ್ಚಲವಾದ ಭಕ್ತಿಗೆ ನಾನು ಪ್ರಸನ್ನನಾಗಿ ಕಾಲಾಂತರದಲ್ಲಿ ಪ್ರತ್ಯಕ್ಷನಾದೆನು. ಆಗ ನನ್ನನ್ನು ಕಂಡೊಡನೆಯೇ ಲಕ್ಷ್ಮಿಯು ನಮಸ್ಕರಿಸಿ ವಿನಯದಿಂದ ಈರೀತಿ ಸ್ತುತಿಸಿದಳು. ॥೫೮॥

ನಿಶಾರಮಣನ ಅಂಶವೇ (ಚಂದ್ರಕಲೆ) ಶಿರೋಭೂಷಣವಾಗಿ ಉಳ್ಳ ಮಹಾದೇವನಿಗೆ ನಮಸ್ಕರಿಸುವೆನು. ಪ್ರದೋಷಕಾಲದಲ್ಲಿ ವಿಶೇಷವಾಗಿ ಆಭರಣ

ಕುಂಭಿಕುಂಭದಳನೋಜ್ಜ್ವಲತ್ಪದಂ
ಕುಂಭಿವಕ್ತ್ರಕೃತಮಾನ್ಯಪುತ್ರಕಂ ।
ಕುಂಭಸಂಭವಮುನೀಂದ್ರಪೂಜಿತಂ
ಕುಂಭಿಭಿನ್ನಟನಮೀಶಮಾಶ್ರಯೇ ॥೬೦॥

॥ ಲಕ್ಷ್ಮ್ಯುವಾಚ ॥

ಅಮರೀಕಬರೀಭಾರಚಂಚರೀಕೈ
ರ್ಮುಖರಿತವೇದಶಿರೋಭಿರೀಡ್ಯಪಾದಾಂ ।
ಸುಖಕರಕಿನ್ನರಮೌಳಿಪುಷ್ಪಜಾಲೈ
ರ್ಭ್ರಮರಾಂಬಾಂ ಪ್ರಣತಾಸ್ಮಿ ಶಾಂಕರೀಂ ॥೬೧॥

---

ಗಳಿಂದ ಅಲಂಕೃತನಾಗಿರುವ ಪರಶಿವನನ್ನು ಸ್ತುತಿಸುವೆನು. ಸಮಸ್ತ ಪುಣ್ಯಕಾಲ ಗಳಿಗೂ ಅಖಂಡ ಕಾಲಕ್ಕೂ ಅಧಿಪತಿಯಾದ ಶಂಕರನನ್ನೇ ಶರಣುಹೊಕ್ಕು ದೂರ್ವಾ ದಿಗಳಿಂದ ನಿತ್ಯವೂ ಪೂಜಿಸುವೆನು. ॥೫೯॥

ಯಾವ ಮಹಾದೇವನ ಪಾದಾರವಿಂದಗಳು ಗಜಕುಂಭಸ್ಥಳಧ್ವಂಸಿಯಾದ ಸಿಂಹದ ಮೇಲೆ ವಿರಾಜಿಸುವುವೋ, ಯಾವಾತನಿಗೆ ಗಜಮುಖನು ಪ್ರೀತಿಪಾತ್ರನಾದ ಪುತ್ರನಾಗಿರುವನೋ, ಯಾವಾತನನ್ನು ಅಗಸ್ತ್ಯನೇ ಮೊದಲಾದ ಮುನಿಗಳು ಸದಾ ಪೂಜಿಸುವರೋ, ಯಾವಾತನ ಉದ್ಧತತಾಂಡವನೃತ್ಯದಿಂದ ಅಖಂಡ ಭೂಮಂಡ ಲವೂ ತತ್ತರಿಸುವುದೋ, ಅಂಥ ಪರಶಿವನನ್ನು ಶರಣು ಹೊಂದುವೆನು. ಹೀಗೆಂದು ಆ ಲಕ್ಷ್ಮಿಯು ನನ್ನನ್ನು ಸ್ತುತಿಸಿ ಬಳಿಕ, ಎಲೌ ಗಿರಿಜೆ, ನಿನ್ನನ್ನೂ ಸಹ ಈರೀತಿ ಸ್ತುತಿಸಿದಳು. ॥೬೦॥

ಯಾರ ಚರಣಕಮಲವನ್ನು ವಂದಿಸುವಾಗ ದೇವಾಂಗನೆಯರು ತಮ್ಮ ಕೇಶಪಾಶದಲ್ಲಿ ಮುತ್ತಿಕೊಂಡಿರುವ ಭ್ರಮರಗಳಿಂದ ಶಬ್ದಾಯಮಾನವನ್ನಾಗಿ ಮಾಡುವರೋ, ವೇದಾಂತಗಳು ಯಾವ ದೇವಿಯ ಪಾದಾರವಿಂದಗಳನ್ನು ಸದಾ ಸ್ತುತಿಸುವುವೋ, ಯಾವ ಮಾತೆಯ ಪಾದಕಮಲಗಳಿಗೆ ಕಿನ್ನರ ಕಿಂಪುರುಷರು ಸದಾ ನಮಿಸುವರೋ, ಅಂಥ ದಿವ್ಯಚರಣಗಳಿಂದ ವಿರಾಜಿತಳಾದ ಭ್ರಮರಾಂಬಿಕೆ ಯನ್ನು ನಾನು ನಮಿಸುವೆನು. ॥೬೧॥

ಅನಂಗಃ ಕೋಪತಸ್ತೇಽದ್ಯ ದಗ್ಧೋಽದ್ಯೈವ ಮಹೇಶ್ವರ ।
ಪುನಸ್ತಮಾಪ್ನುಯಾಂ ಶಂಭೋ ದೇಯ ಏಷ ವರೋ ಮಮ ॥೬೩॥

ತದಾ ಲಕ್ಷ್ಮ್ಯಾ ವಚಶ್ಶ್ರುತ್ವಾ ತ್ವಾಮವೋಚಂ ತದಾಂಬಿಕೇ ॥೬೪॥

॥ ಈಶ್ವರ ಉವಾಚ ॥

ತ್ವತ್ಕಟಾಕ್ಷೇಣ ದೇವೇಶಿ ಪುನರುಜ್ಜೀವ್ಯತಾಂ ಸ್ಮರಃ ।
ಪುತ್ರಿಣೀಯಂ ಭವೇಲ್ಲಕ್ಷ್ಮೀಸ್ಸದಾ ಮುದಿತಮಾನಸಾ ॥೬೫॥

ಇತ್ಥಂ ಮದ್ವಚನಾತ್ತ್ವಂ ಹಿ ತ್ವತ್ಕಟಾಕ್ಷೋತ್ಥಕೋಣತಃ ।
ಅನಂಗಸ್ಸಾಂಗತಾಂ ನೀತೋ ವಿಬಭೌ ಸ ಯಥಾಪುರಃ ॥೬೬॥

---

ಎಲೌ ಗಿರಿಜೆ, ಈರೀತಿ ಲಕ್ಷ್ಮಿಯು ನನ್ನನ್ನೂ ಮತ್ತು ನಿನ್ನನ್ನೂ ಸಹ ಸ್ತುತಿಸಿ ಬಳಿಕ ಉತ್ತಮವಾದ ವರವನ್ನು ಬೇಡಿಕೊಂಡಳು. ॥೬೨॥

" ಮಹೇಶ್ವರನೇ, ನನ್ನ ಪುತ್ರನಾದ ಮನ್ಮಥನು ನಿನ್ನ ಕೋಪಕ್ಕೆ ಪಾತ್ರನಾಗಿ ಸುಟ್ಟುಹೋಗಿರುತ್ತಾನೆ. ನಾನು ಪುನಃ ಆತನನ್ನೇ ಪುತ್ರನನ್ನಾಗಿ ಪಡೆಯಬೇಕು. ಈ ವರವನ್ನು ನನಗೆ ಅನುಗ್ರಹಿಸು.'' ಹೀಗೆಂದು ಬೇಡಿಕೊಂಡಳು. ॥೬೩॥

ಲಕ್ಷ್ಮಿಯ ಮಾತನ್ನು ಕೇಳಿ ಆಕೆಯ ಇಷ್ಟಾರ್ಥವನ್ನು ಪೂರೈಸಿಕೊಡ ಬೇಕೆಂಬ ಇಚ್ಛೆಯಿಂದ ಆಗ ನಾನು ನಿನ್ನನ್ನು ಕುರಿತು ಈರೀತಿ ಹೇಳಿದೆನು. ॥೬೪॥

"ಎಲೌ ಪ್ರಿಯೆ, ನೀನು ಕರುಣಾಕಟಾಕ್ಷವನ್ನು ಬೀರು. ಆದರಿಂದ ಮನ್ಮಥನು ಪುನಃ ಉಜ್ಜೀವಿತನಾಗಲಿ. ಈ ಲಕ್ಷ್ಮಿಯು ಪುನಃ ಶ್ಲಾಘ್ಯನಾದ ಆತನನ್ನೇ ಪುತ್ರನನ್ನಾಗಿ ಪಡೆಯಲಿ. ಮತ್ತು ಈ ಪುತ್ರಶೋಕದಿಂದ ಮುಕ್ತಳಾಗಿ, ಪುತ್ರನ ಪುನಃ ಪ್ರಾಪ್ತಿಯಿಂದ ಪರಮಾನಂದವನ್ನು ಪಡೆಯಲಿ.'' ॥೬೫॥

ಹೀಗೆಂದು ನಾನು ನಿನಗೆ ಹೇಳಲು, ನೀನು ಆ ಮನ್ಮಥನ ಮೇಲೆ ಪ್ರಸನ್ನಳಾಗಿ ಕರುಣಾಕಟಾಕ್ಷವನ್ನು ಬೀರಲು ಅವನು ಪುನಃ ಬದುಕಿದನು. ನಷ್ಟ ಶರೀರನಾಗಿ ಬಿದ್ದಿದ್ದವನು ಪುನಃ ದಿವ್ಯವಾದ ಶರೀರವನ್ನು ಪಡೆದುಕೊಂಡನು. ಮತ್ತು ಮೊದಲಿನಂತೆ ಉಜ್ವಲವಾಗಿ ವಿರಾಜಿಸತೊಡಗಿದನು. ॥೬೬॥

ಐಕ್ಷವಂ ಕಾರ್ಮುಕಂ ಬಿಭ್ರನ್ ಪುಷ್ಪಬಾಣಾನ್ ತದಾಂಬಿಕೇ ।
ರತ್ಯಾ ಸಹ ತದಾ ಗೌರಿ ಮಾಂ ತುಷ್ಟಾವ ಪ್ರಹೃಷ್ಟಧೀಃ ॥೬೭॥

॥ ಮನ್ಮಥ ಉವಾಚ ॥

ದುಗ್ಧಾಬ್ಧಿಪ್ರಭವಪ್ರಪಂಚಗರಜಾಪಾರವ್ಯಥಾಸಂಹೃತೌ
ತ್ವಾಮೇಕಂ ದದೃಶುರ್ನಿಲಿಂಪಮುಖರಾಸ್ತ್ರೋತ್ಕಂಪಗಾತ್ರಾಶ್ರಿವಂ ।
ತತ್ಪಾನಾರುಣಲೋಲನೇತ್ರಯುಗಳಂ ವೀಕ್ಷ್ಯೈಕೃತಾರ್ಧಸ್ಮಿತಂ
ಶಂಭೋ ಶಂಕರ ಶಾಶ್ವತೇತಿ ಬಹುಧಾ ತ್ವಾಂ ತುಷ್ಟುವುಸ್ಸಂಸ್ತುತಂ ॥೬೮॥

ಇತ್ಥಂ ಸ್ಮರೇಣ ದೇವೇಶಿ ಶ್ರೀಶೈಲೇಶಃ ಸ್ತುತೋಽಸ್ಮ್ಯಹಂ ।
ಲಕ್ಷ್ಮೀಃ ಪುತ್ರಂ ತದಾ ವೀಕ್ಷ್ಯ ಸಾಂಗಮುದ್ಯತಕಾರ್ಮುಕಂ ॥೬೯॥

---

ಆ ಮನ್ಮಥನು ಮೊದಲಿನಂತೆ ಕಬ್ಬಿನ ಧನುಸ್ಸಿಂದಲೂ ಹೂಬಾಣಗಳಿಂದಲೂ ಒಪ್ಪತೊಡಗಿದನು. ಆತನು ತನ್ನ ಪ್ರಿಯಳಾದ ರತೀದೇವಿಯೊಡನೆ ಸೇರಿದನು ಈ ಬಗೆಯ ಮೇಲ್ಮೆಯು ಲಭಿಸಿದ್ದರಿಂದ ಅತ್ಯಂತ ಆನಂದಿತನಾಗಿ ಕಾಮನು ಈರೀತಿ ನನ್ನನ್ನು ಸ್ತುತಿಸಿದನು. ॥೬೭॥

ಕ್ಷೀರಸಮುದ್ರವನ್ನೂ ಆಳವಡಿಸಿಕೊಂಡಿರುವ ಈ ಬ್ರಹ್ಮಾಂಡದಲ್ಲಿ ಅಖಿಲ ಪ್ರಪಂಚವೂ ಇರುವುದು. ಈ ಪ್ರಪಂಚದಲ್ಲಿರುವ ಜೀವಗಳಿಗೆ ರಜೋಗುಣದ ಅತ್ಯಂತ ಉದ್ರೇಕದಿಂದ ಪದೇಪದೇ ಮಹಾಯಾತನೆಗಳೂ ವ್ಯಥೆಗಳೂ ಉಂಟಾಗುವುವು. ಹೀಗೆ ವ್ಯಥೆಯುಂಟಾದಾಗ ಜೀವಗಳು ದುಂಬಿಗಳಂತೆ ಚೀರಿಕೊಳ್ಳುವುವು. ಮತ್ತು ದುಃಖಭಯಗಳಿಂದ ಥರಥರನೆ ನಡುಗುವುವು. ಇಂಥ ಜೀವಗಳ ವ್ಯಥೆಗಳನ್ನು ಪರಿಹಾರಮಾಡಲು ಪರಶಿವನಾದ ನೀನೇ ಸಮರ್ಥನೆಂದು ಸಿದ್ಧಾಂತಮಾಡಿ ನಿರ್ಣೀತವಾಗಿರುವುದು. ಹಾಗೆಂತಲೇ ದುಃಖಿತರಾದವರು ನಿನ್ನನ್ನು ನಾನಾ ವಿಧವಾಗಿ ಸ್ತುತಿಸುವರು. ಚಾರುಮಂದಹಾಸಯುಕ್ತನಾದ ನಿನ್ನನ್ನೆ ಶಂಭೋ, ಶಂಕರ, ಶಾಶ್ವತ, ಜಗನ್ನಾಥ ಎಂದು ಮುಂತಾಗಿ ಸ್ತುತಿಸಿ ತಮ್ಮ ಕಷ್ಟವನ್ನು ಪರಿಹರಿಸಲು ಪ್ರಾರ್ಥಿಸಿಕೊಳ್ಳುವರು. ಇಂತಹ ಮಹಾತ್ಮನಾದ ದೇವನೆ, ನಿನಗೆ ನಮಿಸುವೆನು. ॥೬೮॥

ಹೀಗೆಂದು ಮನ್ಮಥನು ನನ್ನನ್ನು ಬಹುವಾಗಿ ಸ್ತುತಿಸಿದನು. ಅನಂತರ ಲಕ್ಷ್ಮಿಯು ತನ್ನ ಪುತ್ರನು ಧನುರ್ಬಾಣಾದಿಗಳಿಂದ ಅಲಂಕೃತನಾಗಿ ಸಂಜೀವಿತ

ಪ್ರಹೃಷ್ಟಾತ್ಮಾಭವದ್ಗೌರಿ ವೃತಶ್ಚಾಪಿ ತಯಾ ವರಃ ॥೨೦॥
ಮನ್ನಾಮ ಪರ್ವತಶ್ಚಾಯಂ ಭವಿಷ್ಯತು ಮಹೇಶ್ವರ ।
ತಸ್ಯೈ ದತ್ತೋ ವರೋ ದೇವಿ ತನ್ನಾಮಖ್ಯಾಪನಾಯ ಮೇ ॥೨೧॥

ಕೃತಃ ಶ್ರೀಪರ್ವತೋ ನಾಮ್ನಾ ಸಾಪಿ ಪುತ್ರಯುತಾ ಯಯೌ ।
ಪುರಾ ದೇವಾಸುರಾ ಯುದ್ಧೇ ತಾರಕಾದೀನ್ ಮಹಾಬಲಾನ್ ॥೨೨॥

ನಿಪಾತಯಚ್ಛಕ್ತಿಸಾತ್ಯೈಃ ಕುಮಾರೋ ಮೇಽಂಬಿಕೇ ತದಾ ।
ನಾನಾವಾಹನಸಂಪನ್ನಾನ್ ದೈತ್ಯಕೋಟಿಶತಾವೃತಾನ್ ॥೨೩॥

ನಿಹತ್ಯೈವ ಚ ರಾಜಾನಂ ತ್ರಿವಿಷ್ಟಪನಿವಿಷ್ಠಿತಂ ।
ಚಕಾರಾತಿಬಲೋ ದೇವಿ ತಾರಕಾರಿಸ್ಸುರಾಸುರಾನ್ ॥೨೪॥

---

ನಾಗಿರುವುದನ್ನು ನೋಡಿ ಅತ್ಯಂತ ಆನಂದಪಟ್ಟಳು. ಮತ್ತು ಮತ್ತೊಂದು ವರವನ್ನು ಅನುಗ್ರಹಿಸಬೇಕೆಂದು ಕೋರಿದಳು. ॥೧೯-೨೦॥

ತಾನು ತಪಸ್ಸನ್ನು ಮಾಡಿ ಇಷ್ಟಾರ್ಥವನ್ನು ಸಂಪೂರ್ಣವಾಗಿ ನೆರವೇರಿಸಿಕೊಂಡ ಈ ಪರ್ವತಕ್ಕೆ ತನ್ನ ಹೆಸರೇ ಇರಬೇಕು, ಹೀಗೆಂದು ಲಕ್ಷ್ಮಿಯು ಕೇಳಿಕೊಂಡಳು. ಆಗ ನಾನು ತಥಾಸ್ತು ಎಂದು ಅನುಗ್ರಹಿಸಿದೆನು. ಅದೇ ಮೇರೆಗೆ ಆ ಪರ್ವತವು ಲಕ್ಷ್ಮಿಯ ಹೆಸರಿಂದ ಕೂಡಿಕೊಂಡು ಶ್ರೀಶೈಲ ಎಂದು ಪ್ರಸಿದ್ಧವಾಯಿತು. ಈರೀತಿ ಆ ಕ್ಷೇತ್ರ ಮಹಿಮೆಯಿಂದ ಲಕ್ಷ್ಮಿಯು ತನ್ನ ಸಕಲ ಇಷ್ಟಾರ್ಥಗಳನ್ನೂ ಪಡೆದುಕೊಂಡು ಪುತ್ರನಾದ ಮನ್ಮಥನೊಡನೆ ಸಂತೋಷದಿಂದ ತನ್ನ ಸ್ಥಳಕ್ಕೆ ತೆರಳಿದಳು. ಇನ್ನು ಕುಮಾರಸ್ವಾಮಿಯ ವಿಷಯವನ್ನು ಕೇಳು. ॥೨೧॥

ಹಿಂದೆ ತಾರಕನೆಂಬ ಮಹಾಸುರನು ದೇವೇಂದ್ರನ ಸ್ಥಾನವನ್ನು ಆಕ್ರಮಿಸಿಕೊಂಡಿದ್ದನು. ಆಗ ದೇವತೆಗಳಿಗೂ ಆ ಅಸುರರಿಗೂ ಮಹಾಯುದ್ಧವು ನಡೆಯಿತು. ಅಸುರರೂ ಮತ್ತು ದೈತ್ಯಾಧಿಪತಿಯಾಗಿದ್ದ ತಾರಕನೂ ಅತ್ಯಂತ ಬಲಿಷ್ಠರಾಗಿದ್ದರಿಂದ ಅವರನ್ನು ದೇವತೆಗಳು ಜಯಿಸಲಾರರಾದರು. ॥೨೨॥

ಆಗ ದೇವತೆಗಳ ಮೊರೆಯ ಮೇರೆಗೆ ನನ್ನ ಪುತ್ರನಾದ ಷಣ್ಮುಖನು ಆ ಅಸುರರೊಡನೆ ಯುದ್ಧಮಾಡಿ ಆ ಸಮಸ್ತ ಅಸುರರನ್ನೂ ಅವರ ವಸ್ತುವಾಹನ ರಥಗಳನ್ನೂ ಮತ್ತು ದೇವೇಂದ್ರನ ಸಿಂಹಾಸನವನ್ನೇರಿದ್ದ ಆ ತಾರಕ ಮಹಾಸುರ

ತದಾ ಕಾವ್ಯೇನ ಶಪ್ತಸ್ಸಭವತ್ವಂ ಮೋಹಮಾಸ್ಥಿತಃ ।
ತಚ್ಛಾಪವಿನಿವೃತ್ಯರ್ಥಂ ಶ್ರೀಶೈಲಂ ಮೇ ಸಮಾಗತಃ ॥೭೫॥

ಕುಮಾರೋ ಮೇ ಮಹಾದೇವ ಕಥಂ ಕಾವ್ಯೇನ ಶಾಪಿತಃ ।
ತದ್ಧೇತುಂ ವಿಸ್ತರೇಣಾದ್ಯ ಮಹ್ಯಂ ಕಥಯ ಶಂಕರ ॥೭೬॥

॥ ಈಶ್ವರ ಉವಾಚ ॥

ಶೂರಪದ್ಮಾದಯೋ ದೈತ್ಯಾಸ್ತಾರಕಾದ್ಯಾ ಮಹಾಬಲಾಃ ।
ಶಸ್ತ್ರಾಸ್ತ್ರೈಶ್ಶಕ್ತಿಭಿರ್ಘೋರೈರ್ನಿಹತಾ ದಾನವೋತ್ತಮಾಃ ॥೭೭॥

---

ನನ್ನೂ ಸಹ ಕೊಂದು ಧ್ವಂಸಮಾಡಿದನು. ಹೀಗೆ ಸ್ವಬಲಪರಾಕ್ರಮಗಳನ್ನು ತೋರಿ ದೇವತೆಗಳನ್ನು ಕಾಪಾಡಿದ್ದರಿಂದ ಸ್ಕಂದನನ್ನು ಮಹಾಬಲನೆಂದೂ ತಾರಕಧ್ವಂಸಿ ಎಂದೂ ಇಂದೂ ಸಹ ಶ್ಲಾಘಿಸುವರು. ॥೭೩-೭೪॥

ಆ ಯುದ್ಧದಲ್ಲಿ ಎಲ್ಲಾ ಅಸುರರೂ ಮಡಿದದ್ದರಿಂದ ಅಸುರಗುರುವಾದ ಶುಕ್ರಾಚಾರ್ಯನಿಗೆ ತನ್ನ ಶಿಷ್ಯರೆಲ್ಲಾ ನಾಶಹೊಂದಿದರೆಂದು ದುಃಖವಾಯಿತು. ಆಗ ಅವನು ಶಿಷ್ಯ ಮೋಹದಿಂದ ಷಣ್ಮುಖನನ್ನು ಶಪಿಸಿದನು. ಈ ಶಾಪದಿಂದ ಕಲುಷಿತನಾದ ಷಣ್ಮುಖನು ಶಾಪನಿವೃತ್ತಿಗಾಗಿ ಅದೇ ಶ್ರೀಶೈಲಕ್ಕೆ ಬಂದು ವಾಸ ಮಾಡತೊಡಗಿದನು. ಹೀಗೆಂದು ಈಶ್ವರನು ಹೇಳಲು ಗೌರಿಯು ಮಧ್ಯೆ ಈರೀತಿ ಪ್ರಶ್ನಿಸಿದಳು. ॥೭೫॥

ಪ್ರಿಯ ಶಂಕರನೇ! ನನ್ನ ಕುಮಾರನಿಗೆ ಆ ಶುಕ್ರನು ಏತಕ್ಕೆ ಶಾಪ ಕೊಟ್ಟನು? ಅದಕ್ಕೆ ಕಾರಣವೇನು? ಈ ಸಂಗತಿಯನ್ನು ನನಗೆ ವಿಸ್ತಾರವಾಗಿ ಹೇಳೆಂದು ಗಿರಿಜೆಯು ಕೇಳಿಕೊಳ್ಳಲು, ಶಂಕರನು ಆ ಕಥೆಯನ್ನು ಮುಂದುವರಿಸಿ ಹೇಳಲಾರಂಭಿಸಿದನು. ॥೭೬॥

ಶೂರ, ಪದ್ಮ ಎಂದು ಮುಂತಾದ ಅನೇಕದೈತ್ಯರು ಅತ್ಯಂತ ಬಲಿಷ್ಠರಾಗಿದ್ದರು. ಅವರೆಲ್ಲರಿಗೂ ರಾಜನಾದ ತಾರಕಾಸುರನೂ ಸಹ ಬ್ರಹ್ಮನ ವರದಿಂದ ಅತ್ಯಂತ ಗರ್ವಿಷ್ಠನೂ ಅಜೇಯನೂ ಆಗಿದ್ದನು. ಅಂಥ ಮಹಾಸುರರೆಲ್ಲರನ್ನೂ ಸಹ ಷಣ್ಮುಖನು ನಾನಾವಿಧವಾದ ಶಸ್ತ್ರ, ಅಸ್ತ್ರ, ಶಕ್ತಿ ಮುಂತಾದ ದಿವ್ಯಾಯುಧಗಳಿಂದ ಸಂಹರಿಸಿದನು. ॥೭೭॥

ತಾನ್ ಸರ್ವಾನ್ನಿಹತಾನ್ ಶಿಷ್ಯಾನ್ ಕಾವ್ಯೋ ದೃಷ್ಟ್ವಾತಿಕೋಪನಃ ।
ಶಶಾಪ ಷಣ್ಮುಖಂ ಗೌರಿ ಮೋಹಯುಕ್ತೋ ಭವೇತಿ ತಂ ॥೭೮॥

ದ್ವಿಜಿಹ್ವಃ ಫಣಿರೂಪಶ್ಚ ಸರ್ವೇಷಾಮಿಷ್ಟದಾಯಕಃ ।
ಸ್ಕಂದಷಷ್ಠೀಪರಾಣಾಂ ತ್ವಂ ಸಾಕ್ಷಾತ್ಕಾಮಪ್ರದೋ ಭವ ॥೭೯॥

ಸಾ ತಿಥಿಸ್ತೇ ಪ್ರಿಯತಮಾ ಕೃತ್ತಿಕಾಭಂ ಚ ತೇ ಪ್ರಿಯಂ ।
ಏವಂ ಶಶಾಪ ಕಾವ್ಯೋಽಸೌ ಷಣ್ಮುಖಂ ಕೇಕಿವಾಹನಂ ॥೮೦॥

ತಥಾ ಕಾವ್ಯಸ್ಯ ತಚ್ಛಾಪಂ ಸ್ವೀಚಕಾರ ಕೃಪಾಬಲಾತ್ ।
ಲೋಕಾನಾಮುಪಕಾರಾಯ ಕುಂಡಲೀಶೋಽಭವತ್ತದಾ ॥೮೧॥

ಶಪ್ತಂ ಸ್ಕಂದಂ ತದಾ ಜ್ಞಾತ್ವಾ ಮಹಾಕ್ರೋಧಾನ್ಮಯಾ ತದಾ ।
ಕಾವ್ಯೋ ಗ್ರಸ್ತಸ್ತದಾ ಗೌರಿ ಜಠರೇ ಮಯ್ಯಧೋಗತಃ ॥೮೨॥

---

ಹೀಗೆ ಎಲ್ಲಾ ದೈತ್ಯರನ್ನೂ ಕೊಂದದ್ದರಿಂದ ತನ್ನ ಶಿಷ್ಯರೆಲ್ಲರೂ ಸಂಹೃತರಾದರೆಂದು ಶುಕ್ರನಿಗೆ ಷಣ್ಮುಖನ ಮೇಲೆ ಕೋಪಬಂದಿತು. ಆಗ ಅವನು ಸ್ಕಂದನಿಗೆ ಮೋಹಮಯವಾದ ಸರ್ಪರೂಪವು ಬರಲೆಂದು ಶಪಿಸಿದನು. ಯದ್ಯಪಿ ಈ ಶಾಪದಿಂದ ಲೋಕದ ಜನರಿಗೆ ಅನುಕೂಲವಾಯಿತು. ಹೀಗೆ ಫಣಿರೂಪಧಾರಿಯಾದ ಷಣ್ಮುಖನು ಸಕಲ ಇಷ್ಟಾರ್ಥಪ್ರದಾಯಕನೂ, ಅದರಲ್ಲೂ ಸ್ಕಂದಷಷ್ಠೀವ್ರತಸ್ಥರಾದವರಿಗೆ ಮುಖ್ಯ ಕಾಮಪ್ರದನೂ ಆಗಿರುವನು. ಸ್ಕಂದಷಷ್ಠೀತಿಥಿಯೂ ಮತ್ತು ಕೃತ್ತಿಕಾನಕ್ಷತ್ರವೂ ಷಣ್ಮುಖನಿಗೆ ಅತ್ಯಂತ ಪ್ರಿಯವಾದದ್ದು. ಇದೇ ತೆರನಾಗಿ ಶಾಪವನ್ನನುಭವಿಸೆಂದು ಮಯೂರವಾಹನನಾದ ಷಣ್ಮುಖನನ್ನು ಶುಕ್ರನು ಶಪಿಸಿದನು. ||೭೮-೭೯-೮೦||

ಈ ರೀತಿ ತನ್ನನ್ನು ಶುಕ್ರನು ಶಪಿಸಿದರೂ ಷಣ್ಮುಖನು ವಿಚಲಿತನಾಗಲಿಲ್ಲ. ತನ್ನ ಸಹಜಸೌಜನ್ಯದಿಂದ ದೀರ್ಘಾಲೋಚನೆಯನ್ನು ಮಾಡಿ ಇದರಿಂದ ಲೋಕೋಪಕಾರವಾಗುವುದೆಂದು ಆ ಶಾಪವನ್ನು ಸ್ವೀಕರಿಸಿ ಸರ್ಪನಾದನು. ||೮೧||

ನನ್ನ ಪ್ರಿಯಕುಮಾರನಿಗೆ ಶಾಪಕೊಟ್ಟದ್ದರಿಂದ ಶುಕ್ರನಮೇಲೆ ನನಗೆ ಕೋಪಬಂದಿತು. ಆಗ ನಾನು ಆ ಶುಕ್ರನನ್ನು ಏಕಾಪೋಶನಮಾಡಿ ನುಂಗಿಬಿಟ್ಟೆನು. ಶುಕ್ರನು ನನ್ನ ಉದರಮಧ್ಯದಲ್ಲಿ ಹೋಗಿ ಬಿದ್ದನು. ||೮೨||

ತದಾ ಮಜ್ಜತರೇ ತಿಷ್ಠನ್ ತುಷ್ಟಾವ ಪ್ರಣತಸ್ತದಾ ॥೩೩॥

॥ ಕಾವ್ಯ ಉವಾಚ ॥

ಕಂಜಜಕಂಧರ ಕಂಜಜನೇತ್ರ
ಕೃತಕಂಜಪೂಜ್ಯಶಿರ ।
ಕಂಜಮಿತ್ರಕೃತನೇತ್ರ ವಿಚಿತ್ರಾಂ
ದುರ್ಗತಿಂ ಮಮ ವಿನಾಶಯ ಶಂಭೋ ॥೩೪॥

ವಹ್ನಿವೃತ್ರಹಣಬಭ್ರುಸೋಮಮುಖ್ಯೈಃ
ಶೂರ ಮಾರಜನಕಾಬ್ಜಜಪೂಜ್ಯ ।
ಪಾಪತಾಪಹೃದಯೇನ ಕಂಪಿತಂ
ದೇವಭೂಪ ಸತತಂ ದಯಸ್ವ ಮಾಂ ॥೩೫॥

---

ಆಗ ಆ ಶುಕ್ರನಿಗೆ ತನ್ನ ತಪ್ಪು ಅರಿವಾಯಿತು. ಆಗ ಪಶ್ಚಾತ್ತಾಪಪಟ್ಟು ನನ್ನನ್ನು ವಂದಿಸಿ ಸ್ತುತಿಸಲಾರಂಭಿಸಿದನು. ॥೩೩॥

ಓ ಮಹಾದೇವನೇ, ನನ್ನ ತಪ್ಪನ್ನು ಮನ್ನಿಸು. ನೀನು ದಯಾಳುವಾಗಿರುವೆ. ನಿನ್ನ ಸ್ವರೂಪವು ದಿವ್ಯವಾಗಿದೆ. ನಿನ್ನ ಕಂಠವು ಕನ್ನೈದಿಲೆಯಂತೆ ನೀಲವರ್ಣವಾಗಿದೆ. ನಿನ್ನ ನೇತ್ರಗಳು ಅಚ್ಚಕಮಲಗಳಂತಿವೆ. ನೀನು ಕಮಲಾಭರಣಗಳಿಂದ ಶಿರಸ್ಸಿನಲ್ಲಿ ಅಲಂಕೃತನಾಗಿರುವೆ. (ನೀನು ಸಾಕ್ಷಾತ್ ಸೂರ್ಯನೇತ್ರನು) ಕಮಲಬಂಧುವಾದ ಸೂರ್ಯನೇ ನಿನಗೆ ನೇತ್ರನಾಗಿರುವನು. ನನಗೆ ಈಗ ಮಹಾದುರವಸ್ಥೆಯು ಪ್ರಾಪ್ತವಾಗಿದೆ. ದೀನವತ್ಸಲನಾದ ಶಂಭೋ, ನನ್ನ ಕಷ್ಟವನ್ನು ಪರಿಹರಿಸಿ ಕಾಪಾಡು. ॥೩೪॥

ಎಲೈ ಶಂಕರನೇ, ನೀನೇ ಸಕಲ ದೇವತೆಗಳಿಗೂ ಅಧಿಪತಿಯಾಗಿರುವೆ. ನಿನ್ನನ್ನೇ ಅಗ್ನಿ, ದೇವೇಂದ್ರ, ಸೂರ್ಯ, ಚಂದ್ರ ಮುಂತಾದವರೆಲ್ಲರೂ ಪೂಜಿಸುವರು. ನಾರಾಯಣನು ತನ್ನ ನೇತ್ರಕಮಲದಿಂದಲೇ ನಿನ್ನನ್ನು ಪೂಜಿಸಿರುವನು. ಆದುದರಿಂದ ನೀನು ಮಹಾದೇವನಿರುವೆ. ನೀನೇ ಪರಮ ದಯಾಳುವೂ ಆಗಿರುವೆ. ನಾನು ಮಹಾ ಅಕೃತ್ಯವನ್ನು ಮಾಡಿದೆ. ಆ ಪಾಪದಿಂದ ನಾನು ಅತ್ಯಂತ ಭೀತನಾಗಿ ನಿನ್ನನ್ನೇ ಮರೆಹೊಕ್ಕಿರುವೆನು. ನನ್ನ ಮೇಲೆ ದಯೆತೋರಿ ಉದ್ಧರಿಸು. ॥೩೫॥

ಇತ್ಥಂ ತೇನ ಸ್ತುತೋ ದೇವಿ ವಿಸೃಷ್ಟಶ್ಶುಕ್ರತೋ ಮಯಾ ।
ಸ ವೈ ಶುಕ್ರೋ ಮಹಾದೇವಿ ತಸ್ಯಾಖ್ಯಾಭವದುತ್ತಮಾ ॥೮೬॥

ಸ್ಕಂದಃ ಶ್ರೀಶೈಲಮಾಗತ್ಯ ಮಾಂ ಪ್ರಣಮ್ಯಾಂಬಿಕೇ ತದಾ ।
ತತಾಪ ಚ ತಪೋ ಘೋರಂ ವಾಯುಭಕ್ಷೋಽಂಬಿಕಾಸುತಃ ॥೮೭॥

ಜ್ವಲತ್ಪಂಚಾಗ್ನಿಮಧ್ಯಸ್ಥೋ ಭಸ್ಮಾಭ್ಯಕ್ತೋಽರ್ಚಯನ್ ಹಿ ಮಾಂ।
ಪ್ರಜಪನ್ ಶತರುದ್ರೀಯಂ ದೃಷ್ಟೋ ಬ್ರಹ್ಮಾದಿಭಿಸ್ತದಾ ॥೮೮॥

ತತ್ತಪಃ ಕ್ಷುಬ್ಧಹೃದಯಾಃ ಪ್ರಾರ್ಥಯಂತಿ ತದಾ ಹಿ ಮಾಂ ।
ಶ್ರೀಶೈಲೇಶಂ ಸಮಭ್ಯರ್ಚ್ಯ ಬಿಲ್ವಪತ್ರೈಶ್ಚ ಕೋಮಲೈಃ ॥೮೯॥

ದೇವಾಸ್ತುಷ್ಟುವುರೀಶಾನಂ ಭ್ರಮರಾಂಬಾಪತಿಂ ಶಿವಂ ॥೯೦॥

---

ಹೀಗೆಂದು ಶುಕ್ರನು ಬಹುವಾಗಿ ಬೇಡಿಕೊಳ್ಳಲು ನನಗೂ ಆತನ ಮೇಲೆ ದಯೆಯುಂಟಾಯಿತು. ಆಗ ನಾನು ಆತನನ್ನು ರೇತೋರೂಪವಾಗಿ ಹೊರಕ್ಕೆ ವಿಸರ್ಜಿಸಿದೆನು. ಅದರಿಂದಲೇ ಅವನಿಗೆ ಶುಕ್ರ (ರೇತಸ್) ಎಂಬ ಹೆಸರು ಬಂದಿತು. ॥೮೬॥

ಆ ಶುಕ್ರನ ಶಾಪದಿಂದ ಮಲಿನನಾದ ಷಣ್ಮುಖನು ಆ ದೋಷವನ್ನು ಕಳೆದು ಕೊಳ್ಳಬೇಕೆಂದು ಶ್ರೀಶೈಲಕ್ಕೆ ಹೋದನು. ಅಲ್ಲಿ ಅವನು ಘೋರವಾದ ತಪಸ್ಸಿಗೆ ಆರಂಭಿಸಿದನು. ಪಂಚಾಗ್ನಿಮಧ್ಯದಲ್ಲಿ ಕುಳಿತುಕೊಂಡು, ಕೇವಲ ವಾಯುವನ್ನೇ ಸೇವಿಸುತ್ತಾ, ಭಸ್ಮರುದ್ರಾಕ್ಷಗಳಿಂದ ಅಲಂಕೃತನಾಗಿ, ಬಾಯಲ್ಲಿ ರುದ್ರಾಧ್ಯಾಯವನ್ನು ನೂರಾವರ್ತಿ ಪಾರಾಯಣಮಾಡುತ್ತಾ ಉಗ್ರವಾದ ತಪಸ್ಸನ್ನಾಚರಿಸುತ್ತಿರಲು ಅವನನ್ನು ಬ್ರಹ್ಮಾದಿಗಳು ನೋಡಿದರು. ॥೮೭-೮೮॥

ಷಣ್ಮುಖನ ಘೋರವಾದ ತಪಸ್ಸಿನ ಬೇಗೆಯಿಂದ ದೇವತೆಗಳೆಲ್ಲರೂ ಸಂತಪ್ತ ರಾಗಿ ಶ್ರೀಶೈಲಾಧಿಪತಿಯಾದ ನನ್ನ ಬಳಿಗೆ ಶರಣು ಬಂದರು. ಅವರೆಲ್ಲರೂ ಶ್ರೀಶೈಲೇಶ್ವರನನ್ನು ಬಿಲ್ವಾದಿಗಳಿಂದ ಪೂಜಿಸಿ ಭ್ರಮರಾಂಬಾಪತಿಯಾದ ನನ್ನನ್ನು ಕುರಿತು ಎಲ್ಲರನ್ನೂ ಕಾಪಾಡೆಂದು ಈರೀತಿ ಪ್ರಾರ್ಥಿಸಿದರು. ॥೮೯-೯೦॥

॥ ಬ್ರಹ್ಮಾದ್ಯಾ ಊಚುಃ ॥

ಉಪೇಂದ್ರವಿಧಿಕಾರಣಂ ನಿಗಮಮೌಳಿಸಂಚಾರಿಣಂ
ಕುರಂಗಕಿಣಧಾರಿಣಂ ನಮಕನಾಮಗಣ್ಯಂ ಗುಣಂ ।
ಭಜಾಮ ಭವಹಾರಿಣಂ ಮುನಿಸುರಾದಿಮೌಳಿಸ್ಫುರತ್
ಸರೋರುಹಗಣಾರುಣಂ ಶಿವದಚರಣಂ ಕಾಲಹಾರಿಣಂ ॥೯೧॥

ಫಣೀಂದ್ರಕೃತಕಂಕಣಂ ಧೃತತ್ರಿಪುಂಡ್ರಫಾಲೇಕ್ಷಣಂ
ಸುಶೈವಕೃತರಕ್ಷಣಂ ಗಿರಿಸುತಾಬ್ಜವಕ್ತ್ರೇಕ್ಷಣಂ ।
ಯಮಸ್ಮರಪುರಾಂಧಕಪ್ರಬಲರಕ್ಷಸಂಶೋಷಣಂ
ಭಜಾಮ ಗಿರಿಧಾರಿಣಂ ಸುಕೃತರಾಶಿಸಂಪೂರಣಂ ॥೯೨॥

ಇತಿ ಸ್ತುತ್ವಾಂಬಿಕೇ ದೇವಾಃ ಶ್ರೀಶೈಲೇಶಂ ತದಾ ಹಿ ಮಾಂ ।
ತತ್ಕ್ಷಣಾದಾವಿರಾಸಂ ಚ ಗಣೇಂದ್ರೈರಮರೈಸ್ತ್ವಯಾ ॥೯೩॥

ಸ್ಕಂದಪಾರ್ಶ್ವಂ ತದಾ ಗತ್ವಾ ಸಮುಪಸ್ಪೃಶ್ಯ ತಂ ತದಾ ।
ಆಜಿಘ್ರಂ ತಸ್ಯ ಮೂರ್ಧಾನಂ ತಮವೋಚಮಹಂ ಪ್ರಿಯೇ ॥೯೪॥

---

ಹರಿ ಬ್ರಹ್ಮಾದಿಗಳಿಗೂ ಕಾರಣಭೂತನಾದ ಪರಮೇಶ್ವರನಿಗೆ ವಂದಿಸುವೆವು. ವೇದಾಂತವೇದ್ಯನೂ ನಮಕಾಧ್ಯಾಯಸ್ತುತ್ಯನೂ ಆದ ಚಂದ್ರಕಲಾಧಾರಿಯನ್ನು ನಮಿಸುವೆವು. ಭವಭಂಜನಕಾರಣವೂ, ಕಲ್ಯಾಣಪ್ರದವೂ, ಅಪಮೃತ್ಯುವಿನಾಶಕವೂ ಮತ್ತು ದೇವಮುನಿಗಳ ಶಿರಃಕಮಲದಿಂದ ನೀರಾಜಿತವೂ ಆದ ಶಿವಪಾದಾರ ವಿಂದವನ್ನೇ ಶರಣುಹೊಂದುವೆವು. ॥೯೧॥

ಭಸ್ಮತ್ರಿಪುಂಡ್ರಾಲಂಕೃತನೂ, ಸರ್ಪಕಂಕಣದಿಂದ ಸುಶೋಭಿತನೂ ಆದ ಪರಶಿವನನ್ನು ಧ್ಯಾನಿಸುತ್ತೇವೆ. ಶಂಕರನೇ, ನೀನು ಪ್ರಬಲರಾದ ಲೋಕಕಂಟಕರನ್ನೂ, ಮೃತ್ಯು, ಮನ್ಮಥ, ತ್ರಿಪುರ, ಅಂಧಕಾಸುರ ಮುಂತಾದ ಅಹಂಕಾರಿಗಳನ್ನೂ ಧ್ವಂಸ ಮಾಡಿರುವೆ. ಆಗಾಗ್ಗೆ ಒದಗುವ ಕಷ್ಟಗಳನ್ನು ಸಹ ಪರಿಹರಿಸಿ ನಮ್ಮಂತಹಶಿವ ಭಕ್ತರನ್ನು ಪರಿಪಾಲಿಸುವೆ. ಭ್ರಮರಾಂಬಾವಲ್ಲಭನೂ ಪುಣ್ಯರಾಶಿಯೂ ಆದ ನಿನ್ನನ್ನೇ ಕಾಪಾಡೆಂದು ನಾವು ಈಗ ಭಜಿಸುವೆವು. ॥೯೨॥

ಪ್ರಿಯೆ ಗಿರಿಜೆ! ಈರೀತಿ ಆ ದೇವತೆಗಳು ಪ್ರಾರ್ಥಿಸಿಕೊಳ್ಳಲು ಅವರಿಗೆ ನಾನು ಅಭಯಪ್ರದಾನಮಾಡಿದೆನು. ಮತ್ತು ಷಣ್ಮುಖನ ನಿಶ್ಚಲವಾದ ತಪಸ್ಸಿಗೆ

ಮತ್ಕರಸ್ಪರ್ಶಮಾತ್ರೇಣ ಹಿತ್ವೈಹಂ ರೂಪಮಂಬಿಕೇ ।
ಮುದಾ ಶಕ್ತಿಧರಃ ಸ್ಕಂದೋ ಮಾಂ ಪ್ರಣಮ್ಯಾಸ್ತುವತ್ತದಾ ॥೯೫॥

॥ ಸ್ಕಂದ ಉವಾಚ ॥

ಸುಂದರವರಮಂದರಗಿರಿಕಂದರಚರ ಕುಂದಜಸುಮಸುಗಂಧ
ಮಧುರಬಂಧುರತರ ಇಂದುಜಕರನಂದಿತ ಕುಮುದಾಕರಹಾರಜ ।
ಮಕರಂದರಣಿತ ಪನ್ನಗಜನನಂದನಕರವಂದಿತ ಮುನಿವಂದಿತ
ಕೃತವೇದವಚನಬಂದಿಜಗುಣತುಂದಿಲ ಮಮ ಮಾನಸವರನಂ
ದಿತ ಶಿವ ಪಾಲಯ ಮಾಂ ॥೯೬॥

---

ಮೆಚ್ಚಿ ನಿನ್ನೊಡಗೂಡಿ ಗಣೇಂದ್ರರೇ ಮೊದಲಾದ ಸಮಸ್ತ ಪರಿವಾರದೊಂದಿಗೆ ಅವನೆದುರಿಲ್ಲಿ ಪ್ರತ್ಯಕ್ಷನಾದೆನು. ಪುತ್ರವಾತ್ಸಲ್ಯದಿಂದ ಕುಮಾರನನ್ನು ಪ್ರೀತಿಸಿ ಮೈದಡವಿ ಶಿರಸ್ಸನ್ನು ಆಘ್ರಾಣಿಸಿದೆನು. ॥೯೩-೯೪॥

ಈರೀತಿ ನಾನು ಕುಮಾರನನ್ನು ಮುಟ್ಟಿದೊಡನೆಯೇ ನನ್ನ ಕರಸ್ಪರ್ಶದಿಂದ ಅವನಲ್ಲಿದ್ದ ಶಾಪಮಾಲಿನ್ಯವೆಲ್ಲಾ ಮಾಯುವಾಯಿತು. ಶಾಪದ ಹೊಡೆತದಿಂದ ಕಳೆದುಕೊಂಡಿದ್ದ ಸಮಸ್ತ ದೈವೀಸಂಪತ್ತೆಲ್ಲವೂ ಪುನಃ ಅವನಿಗೆ ಪ್ರಾಪ್ತವಾಯಿತು. ಆಗ ಕುಮಾರನು ಶಕ್ತ್ಯಾಯುಧಧಾರಿಯೂ ದಿವ್ಯರೂಪನೂ ಆಗಿ ಪರಮಾನಂದದಿಂದ ಸರ್ಪರೂಪವನ್ನು ತ್ಯಜಿಸಿ ಈರೀತಿ ನನ್ನನ್ನು ಸ್ತುತಿಸಲಾರಂಭಿಸಿದನು. ॥೯೫॥

ಅತ್ಯಂತ ಮನೋಹರವೆನಿಸಿದ ಮಂದರಾದ್ರಿಯ ಗುಹೆಯಲ್ಲಿ ವಿಹರಿಸುವ ಮಹಾದೇವನೇ, ನಿನ್ನ ಸಮೀಪದಲ್ಲಿ ಸರ್ವದಾ ಕೋಲುಮಲ್ಲಿಗೆಯೇ ಮೊದಲಾದ ಪುಷ್ಪಗಳ ಸುಗಂಧವು ಎರಚುತ್ತಿರುವುದು. ನೀನು ಸದಾ ಚಂದ್ರಕಿರಣಗಳಿಂದ ರಂಜಿಸುತ್ತಿರುವೆ. ಕನ್ನೈದಿಲೆಗಳ ಮಕರಂದದಿಂದ ಶುಭ್ರನಾಗಿ ಕಾಣುವೆ. ನಾಗಲೋಕದವರಿಂದಲೂ ವಂದಿತವಾಗಿರುವೆ. ಮುನಿವೃಂದದಿಂದ ಸ್ತುತನಾದ ನಿನ್ನ ವಿಶೇಷ ಗುಣಗಳು ವೇದರಾಶಿಯಲ್ಲಿ ಬಂಧಿತವಾಗಿ ನಿಂತಿವೆ. ಇಂತಹ ನಿನ್ನ ಸ್ವರೂಪ ಧ್ಯಾನದಿಂದ ನನ್ನ ಮನಸ್ಸು ಸದಾ ಹರ್ಷಗೊಳ್ಳುತ್ತಿರುವುದು. ॥೯೬॥

ಉಂದುರುಕೃತವಾಹನಸುತಸಿಂಧುರ ಭವ ಕೃತ್ತಿವಸನ
ತಿಂದುಕೆಸುಮಪೂಜಿತಪದ ಇಂದುನಿವಹಬಿಂಬಿತ ।
ಕರಚುಂಬಿತ ಜಟಿಲೋತ್ತಮ ಪೂಜನ ನಂದಿನವಿದಿ
ಶಾನ(?) ನಂದಿವಾಹನ ಪರಿಪಾಲಯ ಮಾಂ ॥೯೭॥

ಕಾವ್ಯಶಾಪಾನ್ಮಹಾದೇವ ನಷ್ಟಜ್ಞಾನೋಽಸ್ಮಿ ಶಂಕರ ।
ತದ್ ಜ್ಞಾನಂ ದೇಹಿ ಮೇ ದೇವ ಸ್ಥಾನಂ ಮೇಽದ್ಯ ದಿಶ ಪ್ರಭೋ ॥೯೮॥

ತದಾ ಸ್ಕಂದವಚಃ ಶ್ರುತ್ವಾ ಬ್ರಹ್ಮಾದೀನಾಂ ಚ ಶೃಣ್ವತಾಂ ।
ಅವೋಚಂ ವೇದವಾಕ್ಯೋತ್ಥಂ ಜ್ಞಾನಂ ಸ್ಕಂದಾಯ ಪಾರ್ವತಿ ॥೯೯॥

॥ ಈಶ್ವರ ಉವಾಚ ॥

ಅನಾಖ್ಯೇಯಮಿದಂ ಗುಹ್ಯಂ ಯಸ್ಯ ಕಸ್ಯಾಪಿ ದೇಹಿನಃ ।
ಅಹಂ ಮಾಂ ಚ ಪರಂ ಬ್ರಹ್ಮ ನಿರುಪಾಧಿರನೀಶ್ವರಃ ॥೧೦೦॥

---

ಮಹಾದೇವನೇ, ವರಮೂಷಕವಾಹನನಾದ ಗಣಪತಿಯೇ ನಿನಗೆ ಪುತ್ರನಾಗಿರುವನನಲ್ಲವೆ. ಚರ್ಮವೇ ನಿನಗೆ ವಸ್ತ್ರವಾಗಿರುವುದು. ತುಂಬೆಹೂಗಳಿಂದ ಸರ್ವದಾ ನಿನ್ನ ಪಾದವು ಪೂಜಿತವಾಗಿರುವುದು. ಜಟಾಕಲಾಪವಾದರೋ, ಚಂದ್ರನ ಅತಿಶಯವಾದ ಕಿರಣರಾಶಿಯಿಂದ ಸುಂದರವಾಗಿರುವುದು. ನಂದಿಯೇ ಮೊದಲಾದ ಭಕ್ತಶ್ರೇಷ್ಠರಿಂದ ನೀನು ಪೂಜಿತನಾಗಿರುವೆ. ವೃಷಭವಾಹನನಾದ ಪರಶಿವನೇ, ಇಂತಹ ನೀನು ನನ್ನನ್ನು ಪರಿಪಾಲಿಸು. ॥೯೭॥

ಓ ಮಹಾಪ್ರಭುವೇ, ಶುಕ್ರಶಾಪಗ್ರಸ್ತನಾದ ನನ್ನ ಸುಜ್ಞಾನವು ಮಲಿನವಾಗಿ ಹೋಗಿದೆ. ಆ ಶಾಪದ ಹೊಡೆತದಿಂದ ಕಲ್ಮಷೀಕೃತನಾಗಿದ್ದೇನೆ. ನನ್ನ ಮೇಲೆ ದಯೆತೋರು. ನನ್ನ ಸುಜ್ಞಾನವು ಪುನಃ ಪರಿಶುದ್ಧವಾಗಿ ನನಗೆ ಲಭಿಸುವಂತೆ ಅನುಗ್ರಹಿಸು. ನನ್ನ ಮೊದಲಿನ ಸ್ಥಾನವೇ ಪುನಃ ನನಗೆ ಪ್ರಾಪ್ತವಾಗುವಂತೆ ಕೃಪೆಮಾಡು. ॥೯೮॥

ಹೀಗೆಂದು ಕುಮಾರನು ಪ್ರಾರ್ಥಿಸಿಕೊಳ್ಳಲು ನಾನು ಆಗ ಪ್ರಸನ್ನನಾದೆನು. ಎದುರಿಗೆ ಬ್ರಹ್ಮಾದಿದೇವತೆಗಳೂ ಇದ್ದಂತೆಯೇ ನಾನು ಷಣ್ಮುಖನಿಗೆ ವೇದಾಂತ ಪ್ರತಿಪಾದಿತವಾದ ಸುಜ್ಞಾನವನ್ನು ಈರೀತಿ ಉಪದೇಶಿಸಿದೆನು. ॥೯೯॥

ಕುಮಾರನೇ, ನಿನಗೆ ಈಗ ಸುಜ್ಞಾನವನ್ನು ಉಪದೇಶಿಸುವೆನು ಆಲಿಸು. ಇದು

ತತಸ್ಸರ್ವಮಿದಂ ಜಾತಂ ದೃಶ್ಯತೇ ಶ್ರೂಯತೇ ಚ ಯತ್ ।
ಮಯ್ಯೇವ ಸಂಸ್ಥಿತಂ ವಿಶ್ವಂ ಮಯ್ಯೇವ ಲಯಮೇಷ್ಯತಿ ॥೧೦೧॥

ಅಗಂಧರಸಮಸ್ಪರ್ಶಮಶರೀರೇಂದ್ರಿಯೋಜ್ಝಿತಂ ।
ಮಮಾತ್ಮಾನಂ ಚ ಯೋ ವೇದ ಸದ್ಯ ಏವ ವಿಮುಚ್ಯತೇ ॥೧೦೨॥

ಮಮ ಕಾರ್ಯಂ ನ ವೈ ಕಿಂಚಿನ್ನ ಕರೋಮೀಹ ಕಿಂಚನ ।
ನ ಮತ್ಸಮೋಽಸ್ತಿ ಕೋಽಪ್ಯೇಕೋ ನಾಧಿಕೋ ದೃಶ್ಯತೇಽಪಿ ವಾ ॥೧೦೩॥

---

ಮಹಾಗುಪ್ತವಾದ ವಿದ್ಯೆಯು. ಇದನ್ನು ಜನಸಾಮಾನ್ಯಕ್ಕೆ ಹೇಳತಕ್ಕದ್ದಲ್ಲ. ಅತ್ಯ ಮೋಘವಾದ ವಿದ್ಯೆಯನ್ನು ಈಗ ಹೇಳುವೆನು. ಸರಿಯಾಗಿ ಗ್ರಹಿಸು. ನನ್ನನ್ನು ಅಹಂ ಶಬ್ದನಿರ್ದೇಶ್ಯನಾದ ಆತ್ಮನೆಂದು ತಿಳಿ. ನಾನೇ ಪರಬ್ರಹ್ಮನು. ಅಖಂಡ ಅಪರಿಚ್ಛಿನ್ನ ಸ್ವರೂಪನಾಗಿರುವೆನು. ನನಗೆ ಯಾವ ದೇಹವೇ ಮೊದಲಾದವುಗಳ ಸಂಬಂಧವೂ ಇರುವುದಿಲ್ಲ. ನಾನೇ ಸಮಸ್ತ ಜಗತ್ತಿಗೂ ಈಶ್ವರನು. ನನಗೆ ಈಶ್ವರನು ಮತ್ತೊಬ್ಬನಿರುವುದಿಲ್ಲ. ||೧೦೦||

ನನ್ನ ಸ್ವರೂಪವಾದ ಬ್ರಹ್ಮವಸ್ತುವಿಂದಲೇ ಈ ಕಣ್ಣಿಗೆ ಕಾಣುವ ಕಿವಿಗೆ ಕೇಳುವ ಸಮಸ್ತ ಪ್ರಪಂಚವೂ ಉಂಟಾಗಿರುತ್ತದೆ. ಮತ್ತು ಮೊದಲಿಲ್ಲದ ಪ್ರಪಂಚವು ಹೊಸತಾಗಿ ಹುಟ್ಟುವುದಲ್ಲ. ನನ್ನಲ್ಲಿಯೇ ಇರುವ ಪ್ರಪಂಚವು ನನ್ನ ಸಂಕಲ್ಪ ದಿಂದಲೇ ಹೊರಕ್ಕೆ ತೋರುವುದು ಮತ್ತು ಅಂತ್ಯದಲ್ಲಿ ನನ್ನಲ್ಲಿಯೇ ಲೀನವಾಗಿ ಅಡಗಿಕೊಳ್ಳುವುದು. ||೧೦೧||

ನಾನು ಇಂದ್ರಿಯಗೋಚರವಾಗುವ ಗಂಧವಲ್ಲ, ರಸವಲ್ಲ, ಸ್ಪರ್ಶವಲ್ಲ, ಈ ಗುಣಗಳೂ ನನ್ನಲ್ಲಿಲ್ಲ. ನನಗೆ ಶರೀರವೂ ಇಲ್ಲ, ಇಂದ್ರಿಯಗಳೂ ಇಲ್ಲ. ನಾನು ಶುದ್ಧ ಚೈತನ್ಯಸ್ವರೂಪವಾದ ಆತ್ಮವಸ್ತುವು. ಈ ನಿರ್ಣಯವಾದ ಸುಜ್ಞಾನವನ್ನು ಯಾವನು ಅನುಭವಕ್ಕೆ ತಂದುಕೊಳ್ಳುವನೋ ಅವನು ಮುಕ್ತನಾಗುವನು. ||೧೦೨||

ನನಗೆ ಇಲ್ಲಿಯೂ ಎಲ್ಲಿಯೂ ಏನೂ ಕೆಲಸವಿಲ್ಲ. ನಾನು ಮಾಡಬೇಕಾದ್ದೂ ಇಲ್ಲ. ಮಾಡುವುದೂ ಇಲ್ಲ ಏನೊಂದಕ್ಕೂ ಕರ್ತೃವು ನಾನಲ್ಲ. ಆದ್ದರಿಂದ ನನ್ನ ಆತ್ಮವಸ್ತುವಿಗೆ ದೃಷ್ಟಾಂತವಿಲ್ಲ. ನನ್ನಿಂದ ಮಿಗಿಲಾದ ವಸ್ತುವಂತೂ ಇಲ್ಲವೇ ಇಲ್ಲ. ನನಗೆ ಸದೃಶವಾದ ವಸ್ತುವೂ ಮತ್ತೊಂದಿಲ್ಲ. ||೧೦೩||

ಮಮೈವ ಶಕ್ತಿರ್ವಿಧಾಯ ಯಯಾ ವ್ಯಾಪ್ತಮಿದಂ ಜಗತ್ ।
ಅಣೋರಣೀಯಸಾಂ ಛಾಯಂ ಮಹತೋಽಪಿ ಮಹತ್ತರಃ ॥೧೦೪॥

ನ ಚ ಮಾಂ ವಿದುರನ್ಯಾನಿ ಅಹಂ ವೇದೇದಮೇವ ಹಿ ।
ಸತ್ಯಂ ಜ್ಞಾನೋಽಹಮಾನಂದಂ ವಿಶ್ವಂ ವಿಶ್ವಾಧಿಕೋಽಹ್ಯಹಂ ॥೧೦೫॥

ನ ಮತ್ತೋಽಸ್ತಿ ಪೃಥಕ್ಕಿಂಚಿನ್ನೇಹ ನಾನಾಸ್ತಿ ಕಿಂಚನ ।
ಮಾಮವಿಜ್ಞಾಯ ದುಃಖೇಷು ನಿಮಜ್ಜಂತ್ಯಖಿಲಾ ಜನಾಃ ॥೮೦೬॥

ಮಾಂ ವಿಜ್ಞಾಯ ನ ವೈ ಕಶ್ಚಿನ್ಮೋಮುಹ್ಯತಿ ನ ವೈ ನರಃ ।
ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ॥೧೦೭॥

---

ನನ್ನ ಆತ್ಮಶಕ್ತಿಯ ಸ್ವಭಾವವೇ ಅಖಂಡ ಜಗತ್ತನ್ನೂ ವ್ಯಾಪಿಸಿಕೊಂಡಿರುವುದು. ಅದರಿಂದಲೇ ಈ ಪ್ರಪಂಚವು ಇದ್ದಂತೆ ತೋರುವುದು. ನಾನು ಅತ್ಯಂತ ಸೂಕ್ಷ್ಮವಸ್ತುಗಳಿಗಿಂತಲೂ ಸೂಕ್ಷ್ಮತಮನಾಗಿರುವೆನು. ಎಲ್ಲಾ ಮಹದ್ವಸ್ತುಗಳಿಗಿಂತಲೂ ಮಹತ್ತಮನಾಗಿರುವೆನು. ॥೧೦೪॥

ನನ್ನ ಸ್ವರೂಪವನ್ನು ಸುಲಭವಾಗಿ ಕಂಡವರಿಲ್ಲ. ನಾನು ಹಾಗೆ ತೋರಿಕೊಳ್ಳುವ ವಸ್ತುವೂ ಅಲ್ಲ. ಆದರೆ ಮಾತ್ರ ನಾನು ಸಮಸ್ತವನ್ನೂ ತಿಳಿದಿರುತ್ತೇನೆ. ಪ್ರಪಂಚದಲ್ಲಿ ಪ್ರತಿ ಕ್ಷಣದಲ್ಲಿ ಎಲ್ಲೆಲ್ಲಿ ಏನೇನು ನಡೆಯುವುದೆಂಬುದೂ ನನಗೆ ತಿಳಿದಿರುತ್ತದೆ. ಆದ್ದರಿಂದ ನಾನು ಸತ್ಯಸ್ವರೂಪನೂ ಜ್ಞಾನಸ್ವರೂಪನೂ ಆತ್ಮಸ್ವರೂಪನೂ ಆಗಿದ್ದೇನೆಂದೂ, ಅಖಿಲವಿಶ್ವಾಧಿಪತಿಯೂ, ಅಖಿಲ ವಿಶ್ವಸ್ವರೂಪನೆಂದೂ ತಿಳಿದುಕೊಳ್ಳಬೇಕು. ॥೧೦೫॥

ನನ್ನಿಂದ ಹೊರಗೆ ಅಥವಾ ನನ್ನ ಆಶ್ರಯವಿಲ್ಲದೇ ಯಾವ ವಸ್ತುವೂ ಇರುವುದಿಲ್ಲ. ಎಲ್ಲವೂ ನನ್ನಲ್ಲಿಯೇ ಇರತಕ್ಕವು. ನಾನು ಒಂದೇ ಸತ್ಯವಸ್ತುವು. ಪಾರಮಾರ್ಥಿಕವಾಗಿ ನಾನಾವಸ್ತುಗಳೇ ಇರುವುದಿಲ್ಲ. ನಾನೊಬ್ಬನೇ ಅದ್ವೈತತತ್ವನಿರುವೆನು. ಇಂಥ ತಾತ್ವಿಕಜ್ಞಾನವಿಲ್ಲದೇ ಜನರು ಮೋಹ ಮಮತೆಗಳಲ್ಲಿ ಬಿದ್ದು ದುಃಖಗಳನ್ನನುಭವಿಸುವರು. ನನ್ನ ಅರಿವಿಲ್ಲದವರೇ ಸಂಸಾರಕ್ಲೇಶಗಳಿಗೆ ಸಿಲುಕುವರು. ॥೧೦೬॥

ನನ್ನ ಸ್ವರೂಪವನ್ನು ಯಾರು ತಿಳಿದುಕೊಳ್ಳುವರೋ ಅವರು ಮತ್ತೆ ಯಾವಾಗಲೂ ಮೋಹಾಜ್ಞಾನಗಳಿಗೆ ಸಿಲುಕುವುದಿಲ್ಲ. ಬ್ರಹ್ಮಜ್ಞಾನವು ಉಂಟಾಗುವ

ಅದಾಹ್ಯೋಽಹಮಶೀಯೋಽಹಂ ದೇಹಜಾಲೇಷು ಸತ್ತಮ ।
ನಾಹಂ ಸ್ತ್ರೀ ನೈವ ಪುರುಷೋ ನ ತಿರ್ಯಕ್‌ಸ್ಥಾವರೋಽಪಿ ವಾ ॥೧೦೮॥

ವಿಭಾಂತಿ ಯಾಂತಿ ಉದ್ಯಂತಿ ಚಂದ್ರೇಂದ್ರಾನಿಲಭಾಸ್ಕರಾಃ ।
ಮದ್ಭಾಸಾ ಭಾಸತೇ ಲೋಕೋ ಜಡೋಽಯಂ ಕಾಷ್ಠಸನ್ನಿಭಃ ॥೧೦೯॥

ಋತಮಾತ್ಮಾ ಪರಂ ಬ್ರಹ್ಮ ಸತ್ಯಂ ಜ್ಞಾನೋಽಹಮೀಶ್ವರಃ ।
ಯೋ ಮಾಂ ವೇದ ಸ ಸರ್ವಂ ಹಿ ವೇದೇತ್ಯೇವ ಪರಾಶ್ರುತಿಃ ॥೧೧೦॥

---

ವೇಳೆಯಲ್ಲಿ ಸಮಸ್ತ ಸಂಶಯಗಳೂ ಅಜ್ಞಾನವಾಸನೆಗಳೂ ಸಹ ಸಮೂಲವಾಗಿ ನಾಶಹೊಂದುವುವು. ಬ್ರಹ್ಮಸ್ವರೂಪಾನುಭವ ಸಮಯದಲ್ಲೇ ಹೃದಯಪುಂಡರೀಕವು ಭಿನ್ನವಾಗಿ ಸಂಕೋಚಭಾವನೆಯು ತೊಲಗುವುದು. ಸರ್ವತೋವಿಶಾಲವಾದ ಬ್ರಹ್ಮಾಸ್ಮಿ, ಶಿವೋಽಹಂ, ಎಂಬ ಸುಜ್ಞಾನವು ಲಭಿಸುವುದು. ॥೧೦೭॥

ಖಗೋಳ ಭೂಗೋಳಗಳಲ್ಲಿ ಚಂದ್ರ, ಸೂರ್ಯ, ಗಾಳಿ ಮುಂತಾದವುಗಳು ಸತತವೂ ಪರಿಚಲಿಸುತ್ತಿರುತ್ತವೆ. ಹುಟ್ಟುತ್ತವೆ. ಅಳಿಯುತ್ತವೆ. ಇವುಗಳು ನಿಜವಾಗಿಯೂ ಸ್ವಯಂಕರ್ತೃತ್ವಶಕ್ತಿಯುಳ್ಳವುಗಳಲ್ಲ. ನನ್ನ ಸತ್ಯತ್ವದ ಆಭಾಸಗಳು. ಅಧಿಷ್ಠಾನಸ್ವರೂಪನಾದ ನನ್ನ ಚೈತನ್ಯಸ್ವರೂಪದ ಮುಗ್ಧವಾದ ತೋರುಗಾಣಿಕೆಯಿಂದ ಆ ವಸ್ತುಗಳೂ ಅವುಗಳ ವ್ಯಾಪಾರಗಳೂ ಸತ್ಯತೆಯನ್ನು ಪಡೆದುಕೊಂಡಿರುವಂತೆ ಭಾಸವಾಗುವುದು. ಆದರೆ ತಥ್ಯಾಂಶವು ಅದಕ್ಕೆ ವಿಪರೀತವಾಗಿರುತ್ತದೆ. ಪ್ರಪಂಚವು ಕೇವಲ ಜಡವು. ಅದಕ್ಕೆ ಏನೊಂದಕ್ಕೂ ಚೈತನ್ಯವಿರುವುದಿಲ್ಲ. ಸೌದೆ ತುಂಡು ಹೇಗೆ ಜಡವಾಗಿ ವ್ಯಾಪಾರಶೂನ್ಯವಾಗಿರುತ್ತದೆಯೋ ಹಾಗೆಯೇ ಪ್ರಪಂಚವೂ ನಿಶ್ಚೇತನವಾಗಿದೆ. ಆದರೆ ಆ ಪ್ರಪಂಚದಲ್ಲಿ ನಾನು ಓತಪ್ರೋತವಾಗಿ ಹಾಸುಹೊಕ್ಕಾಗಿ ವ್ಯಾಪಿಸಿಕೊಂಡಿರುವೆನು. ನಾನು ಮಾತ್ರ ಸ್ತ್ರೀಯೂ ಅಲ್ಲ ಪುರುಷನೂ ಅಲ್ಲ. ತಿರ್ಯಗ್ಜಂತು ಅಥವಾ ಪರ್ವತಾದಿ ಸ್ಥಾವರವೂ ಅಲ್ಲ. ನಾನು ಸರ್ವದೇಹಗಳಲ್ಲಿ ವ್ಯಾಪ್ತನಾಗಿದ್ದರೂ ಬೆಂಕಿಯಿಂದ ಸುಟ್ಟುಹೋಗುವುದಿಲ್ಲ. ನೀರಿಂದ ನೆನೆಯುವುದಿಲ್ಲ. ಗಾಳಿಯಿಂದ ನಡುಗುವುದಿಲ್ಲ. ॥೧೦೮-೧೦೯॥

ಪರಮಾತ್ಮನೂ, ಈಶ್ವರನೂ, ಬ್ರಹ್ಮನೂ, ನಾನೇ ಆಗಿರುವೆನು. ನಾನು ಸತ್ಯಸ್ವರೂಪನೂ ಜ್ಞಾನಸ್ವರೂಪನೂ ಆಗಿರುವೆನು. ಹೀಗೆಂಬ ತತ್ವಜ್ಞಾನವನ್ನು ಯಾವನು ಪಡೆಯುವನೋ ಅವನೇ ಸರ್ವಜ್ಞನು. ಮುಕ್ತನು. ಹೀಗೆಂದು ವೇದಾಂತವೆಲ್ಲವೂ ಸಾರುತ್ತಿರುವುವು. ॥೧೧೦॥

ಏತನ್ನ ಕರ್ಮಣಾ ಪ್ರಾಪ್ತಂ ಪೂಜಯಾ ನ ಧನೇನ ವಾ ।
ನ ಚೈವೋಪಾಸನಾಭಿಶ್ಚ ಜ್ಞಾನಾದೇವ ಹಿ ಕೇವಲಂ ॥೧೧೧॥

ಏತದ್ಗುಹ್ಯತಮಂ ಜ್ಞಾನಂ ನಾಖ್ಯೇಯಂ ಯಸ್ಯ ಕಸ್ಯಚಿತ್ ।
ಪ್ರಿಯಪುತ್ರಾಯ ತೇ ದತ್ತಂ ಶಿಷ್ಯಾಯ ಚ ಹಿತಾಯ ಚ ॥೧೧೨॥

ಮಾಂ ಪ್ರಣಮ್ಯ ತದಾ ಸ್ಕಂದೋ ಮುದಾ ತುಷ್ಟಾವ ಹೃಷ್ಟಧೀಃ ॥೧೧೩॥

ಶಶಿಖಂಡಶಿಖಂಡಮಂಡನಂ
ವಿಧಿಮುಂಡಾಮಲಖಂಡಕಂಠಮಾಲಂ ।
ಧೃತನಾಗಸುಕುಂಡಲಂ ಭಜೇ
ಹತಚಂಡಾಂಶುಸುತಪ್ರಚಂಡಗರ್ವಂ ॥೧೧೪॥

---

ಮೇಲೆ ಹೇಳಿದ ಸಮಸ್ತ ತತ್ವಜ್ಞಾನಗಳ ಅನುಭವವೂ ಧರ್ಮದಿಂದ ಲಭಿಸುವುದಿಲ್ಲ. ದಾನ, ಪೂಜೆ, ಧನ, ಉಪಾಸನೆ ಇವು ಯಾವುಗಳಿಂದಲೂ ಸಾಧಿಸಲಾರದು. ಆ ತತ್ವಜ್ಞಾನಾನುಭವವು ಕೇವಲ ವಿಜ್ಞಾನವಾದದಿಂದಲೇ, ವಿಮರ್ಶೆಯಿಂದಲೇ ಮತ್ತು ವಸ್ತುತತ್ವಜ್ಞಾನದಿಂದಲೇ ಸಾಧ್ಯವಾಗುವುದು. ॥೧೧೧॥

ಕುಮಾರನೇ ! ನಾನು ಉಪದೇಶಿಸಿದ ಈ ಪರಾವಿದ್ಯೆಯನ್ನು ಸರಿಯಾಗಿ ಮನನ ಮಾಡಿಕೋ. ಈ ವಿದ್ಯೆಯು ಅತ್ಯಂತ ರಹಸ್ಯವಾದದ್ದು. ಇದನ್ನು ಸಾಮಾನ್ಯರಿಗೆ ಉಪದೇಶಿಸತಕ್ಕದ್ದಲ್ಲ. ನೀನು ನನ್ನ ಪ್ರಿಯಕುವರನಾಗಿದ್ದರಿಂದಲೂ ಹಿತಕರನೂ ಶಿಷ್ಯನೂ ಆಗಿರುವುದರಿಂದಲೂ ನಿನಗೆ ಹೇಳಿದ್ದೇನೆ. ಇದರ ಮನನ ನಿಧಿಧ್ಯಾಸಾದಿಗಳಿಂದ ಪರಿಪಕ್ವಜ್ಞಾನವನ್ನು ಪಡೆದುಕೋ. ॥೧೧೨॥

ಹೀಗೆಂದು ನಾನು ಪರಾವಿದ್ಯೆಯನ್ನೂ ಅದರ ಸಿದ್ಧಿಪ್ರಕಾರವನ್ನೂ ಉಪದೇಶಿಸಲು, ಕುಮಾರನು ಪರಮಾನಂದ ಭರಿತನಾದನು. ಆಗ ಆತನು ನನ್ನನ್ನು ಭಕ್ತಿಯಿಂದ ನಮಸ್ಕರಿಸಿ ಪುನಃ ಈರೀತಿ ಸ್ತುತಿಸಿದನು. ॥೧೧೩॥

ಕರುಣಾಸಾಗರನಾದ ಪರಶಿವನೇ ! ನಿನ್ನನ್ನು ಸದಾ ಭಜಿಸುವೆನು. ನೀನು ದಿವ್ಯಮಂಗಳ ವಿಗ್ರಹನಿರುವೆ. ಚಂದ್ರಕಲೆಯೇ ನಿನ್ನ ಜಟಾಲಂಕಾರವಾಗಿರುವುದು. ಬ್ರಹ್ಮಕಪಾಲವು ಕತ್ತಿನ ಹಾರವಾಗಿರುವುದು. ಬಾಹು ಮತ್ತು ಹಸ್ತಗಳಿಗೆ ಸರ್ಪಗಳು ಭೂಷಣವಾಗಿರುವುವು. ಹೀಗೆ ನೀನು ಅದ್ಭುತಾಲಂಕಾರವುಳ್ಳವನಾಗಿರುವೆಯಲ್ಲದೇ

ಅಖಂಡಬೋಧಾಯ ಸುಚಂಡದೀಧಿತಿಂ
ಪ್ರಚಂಚನೇತ್ರಂ ಕೃತತಾಂಡವಂ ಸದಾ ।
ಭಜಾಮಿ ವೇತಂಡಮುಖಸ್ತುತಂ ಮುದಾ
ಸುಮೇರುಕೋದಂಡಧರಾಖಿಲಾಂಡಗಂ ॥೧೧೫॥

ಸುಚಂಡಬಾಹುಂ ರಣಶೌಂಡವಿಕ್ರಮಂ
ಸುಪುಂಡರೀಕೋಜ್ವಲಹಾರಲೀಲಂ ।
ತಂ ಖಂಡಪರಶುಂ ಪ್ರಣಮಾಮಿ ಶಂಭು
ಮಾಖಂಡಲಾದ್ಯೈರಭಿವಂದನೀಯಂ ॥೧೧೬॥

ಮುನೀಂದ್ರವರ್ಯೈರಖಿಲೈಸ್ಸಮರ್ಚಿತಂ
ಕರೀಂದ್ರಕುಂಭಸ್ಥಿತಪಾದಪದ್ಮಂ ।

---

ಸೂರ್ಯಪುತ್ರನಾಗಿ ಮಹಾಹಂಕಾರಿಯಾಗಿದ್ದ ಯಮನ ಗರ್ವವನ್ನು ಸಹ ಧ್ವಂಸ ಮಾಡಿರುವೆ. ಹೀಗೆ ಪರದೈವವಾದ ನಿನ್ನನ್ನೇ ನಾನು ಭಜಿಸುವೆನು. ॥೧೧೪॥

ಓ ಶಂಕರನೇ! ನನಗೆ ಅಖಂಡಬ್ರಹ್ಮಜ್ಞಾನವು ಸಿದ್ಧಿಸುವಂತೆ ಅನುಗ್ರಹಿಸೆಂದು ದಿವ್ಯತೇಜಸ್ಸ್ವರೂಪನಾದ ನಿನ್ನನ್ನೇ ಭಜಿಸುವೆನು. ನಿನ್ನನ್ನೇ ಗಣಪತಿಯೇ ಮೊದಲಾದವರು ತ್ರಿನಯನನೆಂದೂ ತಾಂಡವಪ್ರಿಯನೆಂದೂ ಸ್ತುತಿಸುವರು. ಸುಮೇರು ಪರ್ವತವು ನಿನ್ನ ಕೋದಂಡವಾಗಿದೆ. ನೀನು ಅಖಿಲಾಂಡಗಳಲ್ಲಿಯೂ ಸರ್ವವ್ಯಾಪಿಯಾಗಿರುವೆ. ಇಂಥ ಮಹಾಮಹಿಮನಾದ ನಿನ್ನನ್ನೇ ಭಕ್ತಿಯಿಂದ ಭಜಿಸುವೆನು. ॥೧೧೫॥

ಓ ಮಹಾದೇವನೇ! ನಿನ್ನ ಬಾಹು ಬಲವನ್ನು ಇಷ್ಟೆಂದು ತಿಳಿದವರಿಲ್ಲ. ರಣಾಂಗಣದಲ್ಲಿ ನಿನ್ನ ಪರಾಕ್ರಮದ ಪ್ರಖರತೆಯನ್ನು ಕಣ್ಣಿಂದ ನೋಡಲೂ ಸಹ ಶಕ್ಯವಿರುವುದಿಲ್ಲ. ಹೀಗೆ ನೀನು ರುದ್ರಮೂರ್ತಿಯಾಗಿದ್ದರೂ ಭಕ್ತರಿಗೆ ಮಾತ್ರ ಸುಂದರವಿಗ್ರಹನೇ ಆಗಿರುವೆ. ಸುಂದರ ಕಮಲ ಮಾಲಾಧಾರಿಯಾದ ನಿನ್ನನ್ನೇ ದೇವೇಂದ್ರಾದಿ ಸಮಸ್ತ ದೇವತೆಗಳೂ ಅಭಿವಂದಿಸುವರು. ಅಂಥ ಖಂಡಪರಶುವಾದ ನಿನ್ನನ್ನೇ ನಾನು ನಮಸ್ಕರಿಸುವೆನು. ॥೧೧೬॥

ಗಜೇಂದ್ರಮಸ್ತಕದಮೇಲೆ ಚರಣಕಮಲಗಳನ್ನಿಟ್ಟುಕೊಂಡು ಸುಖಾಸೀನನಾಗಿರುವ ನಿನ್ನನ್ನೇ, ಸಮಸ್ತ ಮುನಿಗಳೂ ಬ್ರಹ್ಮೇಂದ್ರಹರಿ ಮುಂತಾದ ದೇವತೆ

ಗಿರೀಂದ್ರಜಾಪ್ರಾಣಸಖಂ ಭಜೇ ಶಿವಂ
ವಿಧೀಂದ್ರನಾರಾಯಣವೇದಸಂಸ್ತುತಂ ॥೧೧೭॥

ಭುಜಂಗಹಾರಂ ಗರನೀಲಕಂಧರಂ
ಮಹಾಜಟಾಭಾರಧರಂ ಹರಂ ಸದಾ ।
ಭಜಾಮಿ ಗಂಗಾಧರಮೀಶಿತಾರಂ
ಪರಾತ್ಪರಂ ಕಾಲಹರಂ ಮಹೇಶ್ವರಂ ॥೧೧೮॥

ವಸುಧಾಧರಧಾರಕಂ ಮಹೇಶಂ
ಅಮರೇಂದ್ರಂ ಚ ಸುಧಾಕರೋರುಚೂಡಂ ।
ಪ್ರಣಮಾಮ್ಯರ್ಜುನದೀಪ್ತಿದೀಧಿತಿಂ
ಭಗವಂತಂ ತಮಗಾಧಬೋಧದಂ ॥೧೧೯॥

ಜಗತಾಂ ಮಮ ದೇವದೇವ ಶಂಭೋ
ಜನಕಸ್ತ್ವಂ ಭಗವನ್ನುಮಾ ಜನಿತ್ರೀ ।
ಪ್ರಿಯಪುತ್ರೇ ಮಯಿ ದತ್ತಮೇತದಾದ್ಯಂ
ಶ್ರುತಿಗುಹ್ಯಂ ಜಗತೋ ವಿಮುಕ್ತಯೇ ॥೧೨೦॥

---

ಗಳೂ ಸಹ ಪೂಜಿಸುವರು. ಅಂಥ ಸೌಮ್ಯಮೂರ್ತಿಯೂ ಗಿರಿಜಾಪತಿಯೂ ಆದ ನಿನ್ನನ್ನೇ ಸದಾ ಭಜಿಸುವೆನು. ॥೧೧೭॥

ಸರ್ಪಾಭರಣನೂ, ಜಟಾಭಾರಾಲಂಕೃತನೂ, ಗಂಗಾಧರನೂ ಆದ ಮಹೇಶ್ವರನನ್ನೇ ಸದಾ ವಂದಿಸುವೆನು. ಪರಾತ್ಪರನೂ ತತ್ವಜ್ಞಾನಪ್ರದನೂ ಆದಿಶೇಷಾಲಂಕೃತನೂ ಚಂದ್ರಶೇಖರನೂ ಭಗವಂತನೂ ಆದ ನಿನ್ನನ್ನು ಭಜಿಸುವೆನು. ಓ ದೇವದೇವನಾದ ಪಿತನೇ! ಅಂದು ಪುತ್ರವಾತ್ಸಲ್ಯದಿಂದ ಅರ್ಜುನನನ್ನು ಅನುಗ್ರಹಿಸಿದೆ. ನನ್ನ ಪಿತನಾದ ನೀನು ಸಮಸ್ತ ಜಗತ್ತುಗಳಿಗೂ ಜನಕನಾಗಿರುವುದರಿಂದಲೂ, ನನ್ನ ಮಾತೃವು ನಿಖಿಲ ಜಗದಂಬಿಕೆಯಾಗಿರುವುದರಿಂದಲೂ ನನ್ನ ಸೌಭಾಗ್ಯವು ಇಂದು ಫಲಿಸಿತು. ನಮಗೆ ಈ ತತ್ವಜ್ಞಾನವನ್ನು ಉಪದೇಶಿಸಿ ಉದ್ಧರಿಸಿದ್ದರಿಂದ ಇದೇ ಪ್ರಪಂಚದಲ್ಲಿ ಇನ್ನೂ ಅನೇಕ ಮಂದಿಗಳಿಗೆ ಈ ವೇದಗುಪ್ತವಾದ ಸುಜ್ಞಾನತತ್ವವು ತಿಳಿದು ಅವರು ತಮ್ಮನ್ನು ಉದ್ಧರಿಸಿಕೊಳ್ಳುವುದಕ್ಕೂ ಮೋಕ್ಷವನ್ನು ಪಡೆಯುವುದಕ್ಕೂ ಅನುಕೂಲವಾಯಿತು. ಹಾಗೆ ಪ್ರಪಂಚದ ಜನರ ಉದ್ಧಾರಕ್ಕಾಗಿಯೇ

ಇತ್ಥಂ ಸ್ತುತೋಽಹಂ ಸ್ಕಂದೇನ ಸ್ತೋತ್ರವರ್ಯೇಣ ಸತ್ತಮೇ ।
ಅವೋಚಂ ತಂ ತದಾ ಸ್ಕಂದಂ ತತ್ಸ್ತುತ್ಯಾ ತೋಷಿತೋಽಂಬಿಕೇ ॥೧೨೧॥

ಸ್ಕಂದ ತ್ವತ್ಕೃತಭಕ್ತಿಸೂಕ್ತಿಭಿರಹೋ ಸ್ತುತ್ಯಂ ಸ್ತುವನ್ಮಾಂ ಮುದಾ
ಯುಕ್ತಃ ಪಾತಕವರ್ಗಜಾತಸಹಿತೋ ಮುಕ್ತಸ್ಸ ವೈ ಪುಣ್ಯಭಾಕ್ ।
ತಸ್ಮೈ ತದ್ವಯುನಂ ದಿಶಾಮಿ ಚ ಯದಾ ಶಕ್ತೋಽಸ್ತು ತತ್ವಾಧಿಕಃ॥೧೨೨॥

ವಸ ತ್ವಂ ಭೂಧರೇ ಸ್ಕಂದ ಸಿಂಹಾದ್ರೌ ಸುರಸೇವಿತೇ ।
ಸ್ವಾಮಿಪುಷ್ಕರಣೀತೀರೇ ನಾನಾವೃಕ್ಷೈಕಶೋಭಿತೇ ॥೧೨೩॥

ನಿವಾಸೋ ವಿಹಿತಸ್ತೇಽದ್ಯ ಯಾವದಾಭೂತಸಂಪ್ಲವಂ ।
ಮದಾಜ್ಞಯಾ ಯಯೌ ಸ್ಕಂದೋ ಬ್ರಹ್ಮಾದಿವಿಬುಧೈಸ್ಸಹ ॥೧೨೪॥

---

ಈ ಪರಾವಿದ್ಯೆಯನ್ನು ನನಗೆ ಉಪದೇಶಿಸಿ ಪ್ರಚುರಪಡಿಸಿರುವೆ ಎಂದು ನಾನು ನಂಬುತ್ತೇನೆ. ಈ ವಿಷಯದಲ್ಲಿ ನಿನ್ನ ದಯೆಯು ಅಪಾರವಾಗಿರುವುದು.॥೧೧೮-೧೧೯-೧೨೦॥

ಹೀಗೆಂದು ಕುಮಾರನು ಅತ್ಯಂತ ಶ್ಲಾಘ್ಯವಾದ ಸ್ತೋತ್ರದಿಂದ ನನ್ನನ್ನು ಸ್ತುತಿಸಲು ನಾನು ಸಂಪೂರ್ಣ ಸುಪ್ರೀತನಾಗಿ ಆತನನ್ನು ಈರೀತಿ ಹರಸಿದೆನು.॥೧೨೧

ಕುಮಾರನೇ! ನಿನ್ನ ಪರಮ ಭಕ್ತಿಯನ್ನು ಸೂಚಿಸುವ ಸೂಕ್ತಿಸುಧಾರೂಪವಾದ ಈ ಸ್ತೋತ್ರದಿಂದ ಯಾವನು ನನ್ನನ್ನು ಭಜಿಸುವನೋ, ಅವನು ಮಹಾಪಾಪಿಯಾಗಿದ್ದರೂ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಪುಣ್ಯಾತ್ಮನೆನಿಸುವನು. ನಾನು ಅವನನ್ನು ತತ್ವಜ್ಞಾನಿಯಾಗುವಂತೆಯೂ ಮುಕ್ತಿಯನ್ನು ಪಡೆಯುವಂತೆಯೂ ಅನುಗ್ರಹಿಸುವೆನು. ॥೧೨೨॥

ಎಲೈ ಕುಮಾರನೇ! ಈಗ ನೀನು ಸಮಗ್ರವಾದ ದೈವೀತೇಜಸ್ಸಿನಿಂದ ಪರಿಪೂರ್ಣನಾಗಿರುವೆ. ಈಗ ನೀನು ಸ್ವಾಮಿಪುಷ್ಕರಣೀ ತೀರದಲ್ಲಿರುವ ಸಿಂಹಾದ್ರಿಯಲ್ಲಿ ಆವಾಸಮಾಡಿಕೊಂಡಿರು. ಆ ಪರ್ವತವು ಪ್ರಕೃತಿಸೌಂದರ್ಯದಿಂದ ಮನೋಹರವಾಗಿರುವುದು. ಆ ಪುಣ್ಯತಮವಾದ ಸಿಂಹಾದ್ರಿಯನ್ನು ದೇವತೆಗಳೂ ಸಹ ಸೇವಿಸುವರು. ಆ ಪುಣ್ಯಕ್ಷೇತ್ರದಲ್ಲಿ ಕಲ್ಪಾಂತ್ಯದವರೆಗೂ ನೀನು ಆವಾಸಮಾಡಿಕೊಂಡಿರು. ಇದೇ ನನ್ನ ಪರಮಾನುಗ್ರಹವು. ॥೧೨೩॥

ಹೀಗೆಂದು ನಾನು ಅಪ್ಪಣೆಮಾಡಿದೊಡನೆಯೇ ಷಣ್ಮುಖನಿಗೆ ಅತ್ಯಂತ ಆನಂದವಾಯಿತು. ಆಗ ಅವನು ಪರಮಾನುಗ್ರಹವಾಯಿತೆಂದು ಸ್ತುತಿಸುತ್ತಾ

ಪ್ರಣಮ್ಯ ಮಾಂ ತದಾ ದೇವಿ ಶ್ರೀಶೈಲೇಶಂ ಕೃಪಾನಿಧಿಂ ।
ಸಂಪೂಜ್ಯ ಭ್ರಮರಾಂಬಾಂ ತ್ವಾಂ ನತ್ವಾ ಸ್ಕಂದೋ ಗಣೈರ್ವೃತಃ ॥೧೨೫॥

ಬಿಲ್ವೈಃ ಪದ್ಮೈಸ್ತಥಾ ಪೂಜ್ಯ ಪ್ರದಕ್ಷಿಣಪುರಸ್ಸರಂ ।
ಭುಜಂಗೇನೋಜ್ವಲಚ್ಛಂಚ್ವಾ ಕೇಕಾರಾವೈರ್ವಿರಾಜಿತಾ ॥೧೨೬॥

ಮಯೂರೇಣೋಹ್ಯಮಾನಶ್ಚ ಯಯೌ ಸ್ಕಂದಸ್ಸುರೈರ್ವೃತಃ ।
ಸ್ವಾಮಿಪುಷ್ಕರಿಣೀ ತೀರೇ ಸಿಂಹಾದ್ರೌ ಭಕ್ತಿಭಾವಿತಃ ॥೧೨೭॥

ಉವಾಸ ಚ ತದಾ ಸ್ಕಂದೋ ದೇವಿ ಶಕ್ತಿಧರಸ್ತದಾ ॥೧೨೮॥

॥ ಈಶ್ವರ ಉವಾಚ ॥

ಶ್ರೀಶೈಲೇಶ್ವರಲಿಂಗನೇತದಮಲಂ ಮುಕ್ತಿಪ್ರದಂ ಶಾಶ್ವತಂ
ದೃಷ್ಟಂ ಯೇನ ಸಮಸ್ತಪುಣ್ಯಫಲದಂ ಸ್ವರ್ಗಾಪವರ್ಗಪ್ರದಂ ।

---

ಶ್ರೀಶೈಲೇಶ್ವರನಾದ ನನ್ನನ್ನು ನಮಸ್ಕರಿಸಿದನು. ಬಳಿಕ ಭ್ರಮರಾಂಬೆಯಾದ ನಿನ್ನನ್ನೂ ಸಹ ಪೂಜಾಪುರಸ್ಸರವಾಗಿ ನಮಿಸಿ ಅಲ್ಲಿಂದ ತೆರಳಬೇಕೆಂದು ಸಂಕಲ್ಪಿಸಿದನು. ॥೧೨೪-೧೨೫॥

ಅನಂತರ ಬಿಲ್ವದಳ, ಕಮಲಪುಷ್ಪ ಮುಂತಾದುವುಗಳಿಂದ ಪುನಃ ನನ್ನನ್ನೂ ಮತ್ತು ನಿನ್ನನ್ನೂ ಸಹ ಸಂಪೂಜಿಸಿ, ಪ್ರದಕ್ಷಿಣಪುರಸ್ಸರವಾಗಿ ನಮಿಸಿ, ಅಲ್ಲಿಂದ ಹೊರಟನು. ಆಗ ಅವನ ಪರಿವಾರವು ದೇವತೆಗಳಿಂದಲೂ ಗಣೇಂದ್ರರಿಂದಲೂ ಉಜ್ವಲವಾಗಿದ್ದಿತು. ಅವನು ಮಯೂರಗಳ ಕೇಕಾನಾದದಿಂದ ಉಲ್ಲಸಿತನಾಗಿ ಮಯೂರವಾಹನವನ್ನೇರಿ ಅಲ್ಲಿಂದ ತೆರಳಿದನು. ॥೧೨೬॥

ಬಳಿಕ ಸ್ವಾಮಿ ಪುಷ್ಕರಿಣೀತೀರ್ಥದ ತೀರದಲ್ಲಿರುವ ಸಿಂಹಾದ್ರಿಯನ್ನು ಸೇರಿದನು. ಅಲ್ಲಿಯೇ ಶಕ್ತ್ಯಾಯುಧಧಾರಿಯಾಗಿ ಷಣ್ಮುಖನು ಈಗಲೂ ವಾಸ ಮಾಡಿಕೊಂಡಿರುವನು. ॥೧೨೭-೧೨೮॥

ಈರೀತಿ ಷಣ್ಮುಖನು ತನ್ನ ಶಾಪಪಾಪವನ್ನು ಕಳೆದುಕೊಂಡು ಪುನಃ ದೈವೀ ಸಂಪತ್ತನ್ನು ಪಡೆದುಕೊಂಡನು. ಆದುದರಿಂದ ಎಲೌ ಪ್ರಿಯೆ ಗಿರಿಜೆಯೆ, ಈ ಶ್ರೀಶೈಲವು ಅತ್ಯಂತ ಪುಣ್ಯತಮವಾದ ಕ್ಷೇತ್ರವಿರುವುದು. ಈ ಪರ್ವತದಲ್ಲಿ ಪುಣ್ಯಸಾಧನೆಯು ಅತಿ ಶೀಘ್ರವಾಗಿ ಸಿದ್ಧಿಸುವುದು. ಈ ಪರ್ವತದಲ್ಲಿರುವ ಶ್ರೀಶೈಲೇಶ್ವರ ಲಿಂಗವು

ತೇನೋರ್ವೀ ಸಕಲಾ ಸುಶಾಂಭವವರೇ ದತ್ತಾಖಿಲೈಃ ಪಾತಕೈಃ
ಮುಕ್ತೋ ಮತ್ಕಥಯಾ ಸ್ವಸುಂದರತರೇ ಶ್ರೋತ್ರೇ ಚ ಪಾತ್ರೀಕೃತೇ॥೧೨೫

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಶ್ರೀಶೈಲೇಶಮಾಹಾತ್ಮ್ಯೇ
ಲಕ್ಷ್ಮೀತಪೋವರ್ಣನ ವರಪ್ರದಾನ ಸ್ಕಂದಶಾಪವಿಮೋಚನ
ಜ್ಞಾನೋಪದೇಶಸ್ಥಾನಕಲ್ಪನಂ ನಾಮ
ಸಪ್ತವಿಂಶೋಽಧ್ಯಾಯಃ

---

ಮಹಾಪುಣ್ಯಪ್ರದವಾದದ್ದು. ಅದು ಶಾಶ್ವತವಾಗಿರುವುದಲ್ಲದೇ ಮುಕ್ತಿಪ್ರದವೂ ಆಗಿರುತ್ತದೆ. ಆ ಲಿಂಗವನ್ನು ಒಂದೇ ಒಂದು ಸಲ ಸಂದರ್ಶಿಸಿದರೂ ಸಹ ಸಮಸ್ತಪಾಪಗಳೂ ನಾಶವಾಗಿ ಪುಣ್ಯಪುಲವು ದೊರೆಯುವುದು. ಅಂತ್ಯದಲ್ಲಿ ಸ್ವರ್ಗವು ಲಭಿಸುವುದು ಮತ್ತು ಮೋಕ್ಷವು ಸಹ ಸಿದ್ಧಿಸುವುದು. ಇಂಥ ಶ್ರೀಶೈಲೇಶ್ವರನ ಸಂದರ್ಶನವನ್ನು ಯಾವನು ಮಾಡಿ ಶಿವಕಥೆಯನ್ನೂ ತಪ್ಪದೆ ಶ್ರವಣಮಾಡಿರುತ್ತಾನೆಯೋ ಅವನೇ ಪರಮಶಿವಭಕ್ತನು. ಅವನೇ ಸುಂದರನು ಸುಭಾಗ್ಯಶಾಲಿಯು. ಸಮಸ್ತ ಭೂಮಂಡಲವೂ ಅವನ ಕರಗತವೇ ಆಗುವುದು. ಅಂಥ ಶಿವಭಕ್ತನೇ ಅಖಿಲ ಲೋಕಕ್ಕೂ ಅಧಿಪತಿಯಾಗುವನು. ಅಂತ್ಯದಲ್ಲಿ ಸ್ವರ್ಗಾದಿ ಸುಖಗಳನ್ನೂ ಸಹ ಅನುಭವಿಸಿ ನನ್ನ ಪರಮಧಾಮವೆನಿಸಿದ ಕೈಲಾಸವನ್ನು ಪಡೆಯುವನು. ||೧೨೫||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಭರ್ಗನಾಮಕವಾದ ಐದನೆಯ ಅಂಶದಲ್ಲಿ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಶಿವರಹಸ್ಯೇ

## ಪಂಚಮಾಂಶೇ

## ಅಷ್ಟಾವಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಶೃಣು ದೇವಿ ಪ್ರಿಯತಮೋ ಅಸ್ತಿ ಕ್ಷೇತ್ರವರಂ ಮಮ ।
ಸೇತುಬಂಧಮಿತಿ ಪ್ರೋಕ್ತಂ ಭುವಿ ಸಾಕ್ಷಾದ್ವಿಮುಕ್ತಿದಂ ॥೧॥

ಗಂಧಮಾದನಸಂಜ್ಞಶ್ಚ ತತ್ರಾಸ್ತಿ ಧರಣೀಧರಃ ।
ಸ ತು ಲಿಂಗಮಯೋ ದೇವಿ ನಾನಾತೀರ್ಥಮಯೋ ಹಿ ಸಃ ॥೨॥

ಬಿಲ್ವಾಮಲಕಹಿಂತಾಲಲೋಧ್ರಸಾಲವನಾವೃತಃ ।
ರಸಾಲಸುರಸಾಮೋದಚಂದನಾಮೋದಮೋದಿತಃ ॥೩॥

---

## ಇಪ್ಪತ್ತೆಂಟನೆಯ ಅಧ್ಯಾಯ

ಪ್ರಿಯತಮೆ ಗಿರಿಜೆ! ಇಲ್ಲಿನವರೆಗೂ ಶ್ರೀಶೈಲಕ್ಷೇತ್ರ ಮಹಿಮೆಯನ್ನು ಕೇಳಿದೆಯಲ್ಲವೇ! ಹಾಗೆಯೇ ಭೂಲೋಕದಲ್ಲಿ ಮತ್ತೊಂದು ನನ್ನ ಕ್ಷೇತ್ರವುಂಟು. ಅದಕ್ಕೆ ಸೇತುಬಂಧಕ್ಷೇತ್ರವೆಂದು ಹೆಸರು. ಅದು ಅತ್ಯಂತ ಪುಣ್ಯಪ್ರದವೂ ಮೋಕ್ಷ ದಾಯಕವೂ ಆಗಿರುತ್ತದೆ. ॥೧॥

ಆ ಸೇತುಬಂಧಕ್ಷೇತ್ರದಲ್ಲಿ ಗಂಧಮಾದನವೆಂಬ ಒಂದು ಪರ್ವತವಿರುವುದು. ಆ ಬೆಟ್ಟವು ಸಾಕ್ಷಾತ್ ಶಿವಲಿಂಗಮಯವಾಗಿರುವುದು ಮತ್ತು ಪುಣ್ಯತೀರ್ಥ ಸ್ವರೂಪವೂ ಆಗಿದೆ. ॥೨॥

ಆ ಗಂಧಮಾದನ ಪರ್ವತಪ್ರಾಂತದಲ್ಲಿ ಸುಂದರವಾದ ಅರಣ್ಯವಿರುವುದು. ಅಲ್ಲಿ ಬಿಲ್ವ, ನೆಲ್ಲಿ, ತಾಳೆ, ಸಜ್ಜ, ಮಾವು, ಹಲಸು ಮುಂತಾದ ಮರಗಳು ದಟ್ಟವಾಗಿ ಬೆಳೆದಿರುತ್ತವೆ. ಅಲ್ಲಿ ಚಂದನವೃಕ್ಷಗಳೂ ನಾನಾಬಗೆಯ ಲತೆಗಳೂ ಬೆಳೆದಿರುವುದ ರಿಂದ ರಮ್ಯವಾದ ಪ್ರಮೋದೋದ್ಯಾನವೆಂಬಂತೆ ಮನೋಹರವಾಗಿರುವುದು. ॥೩॥

ಅನ್ಯೈಶ್ಚಾಖಿಶತೋಪೇತೋ ನಾನಾವಲ್ಲೀವಿರಾಜಿತಃ ।
ತಚ್ಛೈಲಶಿಖರೇ ದೇವಿ ಶಿವಲಿಂಗಾಕೃತಿಸ್ತ್ವಹಂ ॥೪॥

ಮಧ್ಯೇ ತಚ್ಛೈಲಶಿಖರಂ ದೃಶ್ಯತೇ ಲವಣಾರ್ಣವೇ ।
ದೂರತೋ ವಾಪಿ ಶಿಖರಂ ದೃಷ್ಟ್ವಾ ಶಿಖರಿಣೋಽಂಬಿಕೇ ॥೫॥

ತತ್ರತ್ಯವಾತಪೋತೇನ ಪಾಪತಾಪೈರ್ವಿಮುಚ್ಯತೇ ।
ನಿವಸಾಮಿ ತ್ವಯಾ ಗೌರಿ ಸದಾ ಗಣವರೈರ್ವೃತಃ ॥೬॥

ನಾಮ್ನಾಹಂ ಭೂಧರೇ ತಸ್ಮಿನ್ ಗಂಧಮಾದನ ಈಶ್ವರಃ ।
ತತ್ರ ಶೈವವರಾ ನಿತ್ಯಂ ನಿವಸಂತಿ ಶುಭಾನನೇ ॥೭॥

ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮೋದ್ಧೂಳಿತವಿಗ್ರಹಾಃ ।
ಅನಂತರುದ್ರಾಕ್ಷಕೃತಕಿರೀಟೇನ ವಿರಾಜಿತಾಃ ॥೮॥

ರುದ್ರಾಕ್ಷಹಾರವಲಯಾ ಬಾಹುಕಂಕಣಭೂಷಿತಾಃ ।
ತ್ರಿಪುಂಡ್ರನಿಟಿಲಾಸ್ಸರ್ವೇ ತೃಣೀಕೃತಜಗತ್ತ್ರಯಾಃ ॥೯॥

---

ಆ ಗಂಧಮಾದನಬೆಟ್ಟದ ಶಿಖರದಲ್ಲಿ ನಾನು ಶಿವಲಿಂಗರೂಪವನ್ನು ಧರಿಸಿ ಸದಾ ವಾಸಿಸುವೆನು. ಸಮುದ್ರಮಧ್ಯದಲ್ಲಿ ಆ ಪರ್ವತವೂ ಆದರ ಶಿಖರವೂ ಸಹ ಅತ್ಯಂತ ಮನೋಹರವಾಗಿ ತೋರುವುದು. ಆ ಪುಣ್ಯತಮವಾದ ಶಿಖರವನ್ನು ಯಾವನು ದೂರದಿಂದಲೇ ಸಂದರ್ಶಿಸುವನೋ ಅಥವಾ ಆ ಪರ್ವತದ ವಾಯುವನ್ನು ಸೇವಿಸುವನೋ ಅವನು ಸಮಸ್ತ ಪಾಪಗಳಿಂದಲೂ ಮುಕ್ತನಾಗುವನು. ॥೪-೫॥

ಆ ಕ್ಷೇತ್ರವೂ ಮತ್ತು ಪರ್ವತವೂ ನನಗೆ ಅತ್ಯಂತ ಪ್ರಿಯವಾಗಿರುವುದರಿಂದ ನಾನು, ನಿನ್ನೊಡನೆ ಮತ್ತು ನಮ್ಮ ಗಣೇಂದ್ರರೊಡನೆ ಅಲ್ಲಿ ಆವಾಸಮಾಡುತ್ತಿರುವೆನು. ಅಲ್ಲಿ ಲಿಂಗರೂಪಿಯಾದ ನನಗೆ ಗಂಧಮಾದನೇಶ್ವರನೆಂದು ಹೆಸರು. ॥೬॥

ಆ ಕ್ಷೇತ್ರವನ್ನು ಮಹಾಪುಣ್ಯತಮವಾದದ್ದೆಂದು ಅರಿತುಕೊಂಡು ಅನೇಕ ಶಿವಭಕ್ತಾಗ್ರಣಿಗಳು ಅಲ್ಲಿ ವಾಸಮಾಡುತ್ತಿರುವರು. ಅವರು ನಿತ್ಯವೂ ಶಿವಧರ್ಮ ನಿರತರಾಗಿ ಶಿವೋಪಾಸನೆಯನ್ನು ಮಾಡುವರು. ವೇದೋಕ್ತರೀತಿಯಲ್ಲಿ ಭಸ್ಮವನ್ನೂ ಭಸ್ಮತ್ರಿಪುಂಡ್ರವನ್ನೂ ಮತ್ತು ರುದ್ರಾಕ್ಷಮಾಲೆಗಳನ್ನೂ ಕಂಠದಲ್ಲಿಯೂ ತಲೆಯಲ್ಲೂ

ಪಂಚಾಕ್ಷರಪರಾ ನಿತ್ಯಂ ಪಂಚಾಸ್ಯಧ್ಯಾನತತ್ಪರಾಃ ।
ರುದ್ರಾಧ್ಯಾಯಾರ್ಥವಿಜ್ಞಾನತಜ್ಜಪಪ್ರವಣಾಸ್ಸದಾ ॥೧೦॥

ಶಿವಲಿಂಗಾರ್ಚನಪರಾಸ್ತ್ರಿಕಾಲಂ ಬಿಲ್ವಪತ್ರಕೈಃ ।
ಸದಾನ್ಯನಾಮವಿಮುಖಾಶ್ಶಿವನಾಮೈಕಜೀವನಾಃ ॥೧೧॥

ಸ್ಕಂದನಂದೀಶ್ವರಮುಖಾಮರೇಶ್ವರಗಣೇಶ್ವರಾಃ ।
ತತ್ರ ಮಾಂ ಬಿಲ್ವಪತ್ರೈಶ್ಚ ಗಂಧಮಾದನಶಂಕರಂ ॥೧೨॥

ಪೂಜಯಂತಿ ಸದಾ ಭಕ್ತ್ಯಾ ವಿಷ್ಣುಬ್ರಹ್ಮಾದಯಸ್ಸುರಾಃ ।
ಸ್ತುವಂತಿ ಸ್ತುತಿಭಿರ್ನಿತ್ಯಂ ಮಾಂ ಸದಾ ಲಿಂಗರೂಪಿಣಂ ॥೧೩॥

---

ಕೈಗಳಲ್ಲೂ ಧರಿಸಿಕೊಂಡಿರುತ್ತಾರೆ. ಅವರು ಪರಮವೈರಾಗ್ಯಶಾಲಿಗಳಾಗಿ ಜಗತ್ರಯವನ್ನೂ ಸಹ ಹುಲ್ಲುಗರಿಕೆಯನ್ನೋಪಾದಿಯಲ್ಲಿ ನೋಡುತ್ತಾ ಉದಾಸೀನರಾಗಿ ಕಾಣುತ್ತಾರೆ. ॥೭-೮-೯॥

ಆ ಶೈವರು ಸದಾ ಪಂಚಾಕ್ಷರೀಮಂತ್ರವನ್ನು ಜಪಿಸುವರು. ಪಂಚಮುಖನಾದ ನನ್ನನ್ನೇ ಧ್ಯಾನಿಸುವರು. ಸತತವೂ ರುದ್ರಾಧ್ಯಾಯದ ಅರ್ಥವನ್ನು ಮನನ ಮಾಡುವರು. ಆದರ ಅರ್ಥಜ್ಞಾನವನ್ನು ಪಡೆದುಕೊಂಡು ಸದಾ ಅದನ್ನೇ ಜಪಿಸುವರು. ॥೧೦॥

ಆ ಶೈವರು ನಿತ್ಯವೂ ತಪ್ಪದೇ ತ್ರಿಕಾಲದಲ್ಲಿಯೂ ಬಿಲ್ವಾದಿಗಳಿಂದ ಶಿವಲಿಂಗಗಳನ್ನು ಅರ್ಚಿಸುವರು. ಸದಾ ಶಿವನಾಮವನ್ನೇ ಸಂಕೀರ್ತಿಸುವರಲ್ಲದೇ ಅವರು ಇತರ ದೇವತೆಗಳ ಹೆಸರನ್ನು ಉಚ್ಚರಿಸುವುದಿಲ್ಲ. ಸ್ಮರಿಸುವುದು ಸಹ ಇಲ್ಲ. ॥೧೧॥

ಆ ಗಂಧಮಾದನಪರ್ವತದಲ್ಲಿ ಲಿಂಗರೂಪವನ್ನೂ ಗಂಧಮಾದನೇಶ್ವರನೆಂಬ ಹೆಸರನ್ನೂ ತಾಳಿಕೊಂಡಿರುವ ನನ್ನನ್ನು ಷಣ್ಮುಖ, ನಂದೀಶ್ವರ, ಗಣಪತಿ ಮುಂತಾದ ಗಣೇಂದ್ರರೂ, ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೂ ಸಹ ಬಿಲ್ವಾದಿಗಳಿಂದ ನಿತ್ಯವೂ ಪೂಜಿಸುವರು. ಹೀಗೆ ಎಲ್ಲರೂ ಲಿಂಗರೂಪಿಯಾದ ನನ್ನನ್ನು ಪೂಜಿಸಿ ಈರೀತಿ ಸ್ತುತಿಸುವರು. ॥೧೨-೧೩॥

॥ ದೇವರ್ಷಿಗಣೇಂದ್ರಾ ಊಚುಃ ॥

ಸಂಸಾರದರ್ಪೋದ್ಧತಸರ್ಪದಷ್ಟಾ
ಜನಾ ನ ಜಾನಂತಿ ಮಹೇಶ್ವರಂ ತ್ವಾಂ ।
ತೇ ವೈ ಮಹಾಕಾಮವಿಷಪ್ರದಗ್ಧಾ
ದಗ್ಧಾ ಮಹಾಮೃತ್ಯುಮುಖಾಗ್ನಿಮಧ್ಯೇ ॥೧೪॥

ಸಂತಪ್ತಭ್ರಷ್ಟತಪ್ತಾತ್ಶಿವನತಿವಿಮುಖಾಶ್ಛಿನ್ನಹಸ್ತಾಸ್ತ್ವದರ್ಚಾ
ಹೀನಾ ವಿಚ್ಛಿನ್ನಮಸ್ತಾ ಭಗವತಿ ಗಿರಿಶೇ ಪ್ರಕ್ರಮೇ ಪಂಗವೋ ಯೇ ।
ತ್ವನ್ನಾಮೋಚ್ಚಾರಣೇ ಯೇ ಪ್ರತಿದಿನಮಸಕೃನ್ಮೂಕಭಾವಂ ಪ್ರಪನ್ನಾಃ
ತ್ವಲ್ಲಿಂಗೇಕ್ಷಾವಿಹೀನಾ ಯಮಭಟಪಟಲೀದಂಡಖಂಡ್ಯಾ ಭವಂತಿ ॥೧೫॥

ಏವಂ ಸ್ತುವಂತಿ ಮಾಂ ತತ್ರ ಮುನಿದೇವಗಣಾ ಗಣಾಃ ।
ತತ್ರ ಲಿಂಗಾನ್ಯನಂತಾನಿ ಸುರರ್ಷಿಸ್ಥಾಪಿತಾನ್ಯಮೇ ॥೧೬॥

---

ಮಹಾದೇವನೇ, ಪ್ರಪಂಚದಲ್ಲಿರುವ ಜನರು ಅಜ್ಞಾನದಿಂದ ಮೂಢರಾಗಿರುತ್ತಾರೆ. ಮಹೇಶ್ವರನಾದ ನಿನ್ನ ಪಾರಮ್ಯದ ತಿಳಿವಳಿಕೆ ಇಲ್ಲದೇ ಸಂಸಾರದಲ್ಲಿ ತೊಳಲುತ್ತಿರುತ್ತಾರೆ.ಅದೇ ಸಂಸಾರವೆಂಬ ಮಹಾ ಕಾಳಸರ್ಪದಿಂದ ಕಚ್ಚಲ್ಪಟ್ಟು । ಕಾಮವೆಂಬ ವಿಷದಿಂದ ಆವೃತರಾಗಿ ಪದೇ ಪದೇ ಮಹಾಮೃತ್ಯುವಿನ ಭಯಂಕರವೂ ಅಗ್ನಿಸದೃಶವೂ ಆದ ಮುಖದಲ್ಲಿ ಬಿದ್ದು ಬೆಂದುಹೋಗುವರು, ಸುಟ್ಟುಹೋಗುವರು. ॥೧೪॥

ಹೀಗೆ ಅಜ್ಞಾನಿಗಳು ಪುನಃ ಪುನಃ ಸಂತಪ್ತರೂ ಭ್ರಷ್ಟರೂ ಕಂಗಾಲಿಗಳೂ ಆಗಿರುವುದರಿಂದ ಪರಶಿವನಾದ ನಿನ್ನನ್ನು ಶರಣುಹೊಂದಬೇಕೆಂಬ ಪ್ರಜ್ಞೆಯು ಅವರಿಗೆ ಉಂಟಾಗುವುದಿಲ್ಲ. ಕೇವಲ ಶಿವವಿಮುಖರಾಗಿ ತಮ್ಮ ಜೀವಿತವನ್ನೆಲ್ಲಾ ವ್ಯರ್ಥಮಾಡಿಕೊಂಡು ಮೃತ್ಯುವಿಗೆ ತುತ್ತಾಗುವರು. ಅನಂತರ ನರಕದಲ್ಲಿ ಯಮಭಟರು ಶಿವಪೂಜೆಯನ್ನು ಮಾಡದ ಅವರ ಕೈಗಳನ್ನು ಕತ್ತರಿಸುವರು. ಶಿವಯಾತ್ರೆಯನ್ನು ಮಾಡದ ಕಾಲುಗಳನ್ನು ತುಂಡರಿಸುವರು. ಶಿವನನ್ನು ನಮಸ್ಕರಿಸದ ತಲೆಯನ್ನು ಕಡಿಯುವರು. ಶಿವನಾಮವನ್ನು ಉಚ್ಚರಿಸದ ಅವರ ಬಾಯನ್ನೂ, ಶಿವಲಿಂಗವನ್ನು ಸಂದರ್ಶಿಸದ ಅವರ ಕಣ್ಣುಗಳನ್ನೂ, ಹೀಗೆಯೇ ಪ್ರತಿಒಂದೂ ಅಂಗಾಂಗಗಳನ್ನೂ ಸಹ ಯಮದೂತರು ಖಂಡಖಂಡವಾಗಿ ಕತ್ತರಿಸುವರು. ॥೧೫॥

ಈರೀತಿ ಸ್ತುತಿಸುತ್ತಾ ಮುನಿಗಳೂ ದೇವತೆಗಳೂ ಮತ್ತು ಗಣೇಂದ್ರರೂ

ತೀರ್ಥಾನಿ ಚೈವ ಪುಣ್ಯಾನಿ ಸ್ನಾತಾನಾಂ ಮುಕ್ತಿದಾನಿ ಹಿ ।
ದಕ್ಷಿಣಾಂಭೋನಿಧೇಃ ಕೋಟೌ ಪಿನಾಕಧನುಷಾ ಮಯಾ ॥೧೭॥

ತ್ರಿಪುರಾನ್ ತಾನ್ ತದಾ ಹತ್ವಾ ಮದ್ಧನುಃಕೋಟಿದೇಶತಃ ।
ದಕ್ಷಿಣಾಬ್ಧೌ ತದಾ ರೇಖಾ ಕೃತಾ ಲೀಲಾರ್ಥಮಂಬಿಕೇ ॥೧೮॥

ತದ್ಧನುಷ್ಕೋಟಿರಿತ್ಯಾಖ್ಯಾಂ ಗಮಿತಂ ತೀರ್ಥಮುತ್ತಮಂ ।
ಮಯ್ಯೈವಂ ಧನುಷಃ ಕೋಟ್ಯಾ ಕೃತಂ ಲೋಕಹಿತಾಯ ವೈ ॥೧೯॥

ಸ್ನಾತಾನಾಂ ತತ್ರ ದೇವೇಶಿ ಮಜ್ಜ್ಞಾನಂ ಪರಮಂ ಭವೇತ್ ।
ಬ್ರಹ್ಮಣಾಪಿ ಪುರಾ ಕನ್ಯಾ ನಿರ್ಮಿತಾಸೀತ್ತಿಲೋತ್ತಮಾ ॥೨೦॥

---

ಸಹ ನಿತ್ಯವೂ ನನ್ನನ್ನು ಆರಾಧಿಸುವರು. ಹೀಗೆ ಶಿವಭಕ್ತಾಗ್ರಣಿಗಳಿಂದ ಸಂಭ್ರಮ ಪರಿಪೂರ್ಣವಾದ ಆ ಗಂಧಮಾದನಪರ್ವತದಲ್ಲಿ ಖುಷಿಗಳೂ ದೇವತೆಗಳೂ ಸಹ ಅನೇಕಾನೇಕ ಶಿವಲಿಂಗಗಳನ್ನು ಪ್ರತಿಷ್ಠಿಸಿರುವರು. ಅಲ್ಲಿ ಅನೇಕ ಪುಣ್ಯತೀರ್ಥಗಳೂ ಸಹ ಇರುತ್ತವೆ. ಆ ತೀರ್ಥಗಳಲ್ಲಿ ಸ್ನಾನ ಮಾಡಿ ಶಿವಲಿಂಗಗಳನ್ನು ಪೂಜಿಸುವವನಿಗೆ ಮೋಕ್ಷವು ನಿಶ್ಚಿತವಾಗಿಯೂ ಲಭಿಸುವುದು. ॥೧೬॥

ಹಿಂದೆ ನಾನು ತ್ರಿಪುರಾಸುರನನ್ನು ಸಂಹರಿಸಿದೆನಷ್ಟೆ! ಆಗ ಆ ದಕ್ಷಿಣ ಭೂಶಿರವಾದ ಸೇತುಬಂಧ ಸಮುದ್ರದಲ್ಲಿ ಕ್ರೀಡಾರ್ಥವಾಗಿ ನನ್ನ ಪಿನಾಕ ಧನುಸ್ಸಿನಿಂದ ರೇಖಾಕಾರವಾಗಿ ಒಂದು ಗುರುತನ್ನು ಮಾಡಿರುವೆನು. ॥೧೭-೧೮॥

ಲೋಕದ ಜನರ ಶ್ರೇಯಃಕಾರಣವಾಗಿಯೇ ನಾನು ಧನುಸ್ಸಿನ ಕೋಟಿಯಿಂದ (ಅಗ್ರಭಾಗದಿಂದ) ಇದು ಪುಣ್ಯತಮವಾದ ತೀರ್ಥವೆಂಬುದಕ್ಕೆ ಗುರುತನ್ನು ಮಾಡಿದೆನು. ಆದ್ದರಿಂದ ಆ ತೀರ್ಥಕ್ಕೆ ಧನುಷ್ಕೋಟಿ ಎಂದೇ ಹೆಸರು ಬಂದಿತು. ॥೧೯॥

ಪ್ರಿಯೇ ಗಿರಿಜೆ! ಈ ತೀರ್ಥವು ಅತ್ಯಂತ ಪುಣ್ಯಕರವೆಂಬುದಕ್ಕೂ ಸುಜ್ಞಾನಪ್ರದವೆಂಬುದಕ್ಕೂ ಒಂದು ನಿದರ್ಶನವನ್ನು ಹೇಳುವೆನು ಕೇಳು. ಹಿಂದೆ ಪ್ರಜಾಪತಿಯು ತಿಲೋತ್ತಮೆ ಎಂಬ ಕಾಮಿನಿಯನ್ನು ಸೃಜಿಸಿದನು. ಅವಳ ಅತ್ಯಂತ ಸೌಂದರ್ಯವನ್ನು ನೋಡಿ ತನ್ನ ಪುತ್ರಿ ಎಂಬುದನ್ನು ಸಹ ಮರೆತು ಅವಳಲ್ಲಿಯೇ ಮೋಹಗೊಂಡನು. ಅನಂತರ ತನ್ನ ಪ್ರೀತಿಯನ್ನು ಪ್ರಕಟಿಸುತ್ತಾ ಅವಳೊಡನೆ ಸಂಭೋಗವನ್ನು ಸಹ ಮಾಡಿ ಅತ್ಯಂತ ಸುಖವನ್ನನುಭವಿಸಿದನು. ॥೨೦॥

ತಾಂ ತದಾ ಚಕಮೇ ಕಾಮಾತ್ತಯಾ ಸ ಮಿಥುನಂ ಗತಃ ।
ತದಾ ಪಾಪನಿವೃತ್ಯರ್ಥಂ ಸ್ನಾತ್ವಾ ತತ್ರ ಮಹೋದಧೌ ॥೨೧॥

ದೃಷ್ಟ್ವಾಽಭಿಪೂಜ್ಯ ಮಾಂ ಬಿಲ್ವೈಸ್ತತಶ್ಶುದ್ಧಶ್ಚತುರ್ಮುಖಃ ।
ಈಶಾನೋಽಪಿ ಪುರಾ ಗೌರಿ ಹತ್ವಾ ಬ್ರಹ್ಮಶಿರಸ್ತದಾ ॥೨೨॥

ಮಮ ನಿಂದಾಕರಂ ಕ್ರೋಧಾದ್ಬ್ರಹ್ಮವಧ್ಯಾಮವಾಪ ಸಃ ।
ಸ ಚಾಪಿ ಧನುಷಃಕೋಟೌ ಸ್ನಾತ್ವಾ ಮುಕ್ತಶ್ಚ ಕಿಲ್ಬಿಷಾತ್ ॥೨೩॥

ಶಕ್ರೋಽಹಲ್ಯಾಂ ಪುರಾ ಗತ್ವಾ ಸ್ನಾತ್ವಾ ಪಾಪೈರ್ವಿಮೋಚಿತಃ ।
ಅಗ್ನಿಶ್ಚ ಸರ್ವಭಕ್ಷೋತ್ಥಪಾಪೈಃ ಸ್ನಾತ್ವಾ ವಿಮೋಚಿತಃ ॥೨೪॥

ವರುಣೋಽಪಿ ಮಹಾರೋಗಪೀಡಿತೋ ಮುನಿಶಾಪತಃ ।
ಸ್ನಾತ್ವಾತ್ರ ಧನುಷಃ ಕೋಟೌ ರೋಗಾನ್ಮುಕ್ತೋಽಭವಚ್ಛಿವೇ ॥೨೫॥

---

ಬಳಿಕ ಆ ಬ್ರಹ್ಮನಿಗೆ ತಾನು ಪಾಪಕಾರ್ಯವನ್ನು ಮಾಡಿದೆನೆಂಬ ಅರಿವಾಯಿತು. ಆಗ ಅವನು ಪಶ್ಚಾತ್ತಾಪಪಟ್ಟು ಆ ಪಾಪವನ್ನು ಕಳೆದುಕೊಳ್ಳಲು ಈ ಧನುಷ್ಕೋಟಿ ತೀರ್ಥದಲ್ಲಿ ಸ್ನಾನಮಾಡಿ ಬಿಲ್ವಾದಿಗಳಿಂದ ನನ್ನನ್ನು ಸಂಪೂಜಿಸಿ ಸಂದರ್ಶಿಸಿದನು. ಇದರಿಂದ ಅವನ ಪಾಪಗಳೆಲ್ಲವೂ ನಾಶವಾಗಿ ಅವನು ಪುಣ್ಯಾತ್ಮನೆನಿಸಿದನು. ॥೨೧॥

ಹಿಂದೆ ಬ್ರಹ್ಮನು ನನ್ನನ್ನು ನಿಂದಿಸುತ್ತಿರುವುದನ್ನು ಕೇಳಿ ನಮ್ಮ ಗಣಮುಖ್ಯನಾದ ಈಶಾನನು ಅವನ ಮೇಲೆ ಕೋಪಗೊಂಡು ಅವನ ತಲೆಯನ್ನೇ ಕತ್ತರಿಸಿದನು. ಹೀಗೆ ಬ್ರಹ್ಮಶಿರಶ್ಛೇದನದಿಂದ ಈಶಾನನಿಗೆ ಬ್ರಹ್ಮಹತ್ಯಾದೋಷವು ತಗಲಿತು. ಆಗ ಅವನು ತದ್ದೋಷನಿವೃತ್ತ್ಯರ್ಥವಾಗಿ ಧನುಷ್ಕೋಟಿತೀರ್ಥದಲ್ಲಿ ಸ್ನಾನಮಾಡಿ ತನ್ನ ಪಾಪವನ್ನು ಕಳೆದುಕೊಂಡನು. ॥೨೨-೨೩॥

ಹೀಗೆಯೇ ಈ ಧನುಷ್ಕೋಟಿಯು ಇನ್ನೂ ಅನೇಕ ಪಾಪಿಗಳನ್ನು ಪವಿತ್ರರನ್ನಾಗಿ ಮಾಡಿರುತ್ತದೆ. ಗುರುಪತ್ನೀಸಂಭೋಗವನ್ನು ಮಾಡಿದ ಇಂದ್ರನು ಆ ಪಾಪವನ್ನು ಈ ತೀರ್ಥದಲ್ಲಿ ಸ್ನಾನಮಾಡಿ ಕಳೆದುಕೊಂಡನು. ಮುನಿಶಾಪದಿಂದ ವರುಣನು ನಿತ್ಯವೂ ಮಹಾರೋಗದಿಂದ ಪೀಡಿತನಾಗಿದ್ದನು. ಅಗ್ನಿಯು ಸರ್ವಭಕ್ಷಕನಾಗಿ ಅನೇಕ ಪ್ರಾಣಿಹತ್ಯೆಗಳನ್ನು ಮಾಡಿದ್ದನು. ದಕ್ಷನ ಶಾಪದಿಂದ ಚಂದ್ರನು

ದಕ್ಷಶಪ್ತಶ್ಚಂದ್ರಮಾಪಿ ಸ್ನಾತ್ವಾ ಪಾಪೈರ್ವಿನೋಽಚಿತಃ ।
ಭೃಗುಣಾಪಿ ಹರಿಶ್ಶಪ್ತಃ ಸ್ವಪತ್ನೀವಧದುಃಖಿತಃ ॥೨೬॥

ನಾರಾಯಣಂ ಶಶಾಪಾಸೌ ಶಾಂಭವಃ ಕ್ರೋಧಮೂರ್ಛಿತಃ ॥೨೭॥

॥ ದೇವ್ಯುವಾಚ ॥

ಕಥಂ ನಾರಾಯಣೋ ದೇವಃ ಶಪ್ತೋ ಹಿ ಭೃಗುಣಾ ಶಿವ ।
ತನ್ಮೇ ಬ್ರೂಹಿ ಮಹಾದೇವ ಶ್ರೋತುಂ ಕೌತೂಹಲಂ ಹಿ ಮೇ॥೨೮॥

॥ ಈಶ್ವರ ಉವಾಚ ॥

ಪುರಾ ದೈತ್ಯೈಸ್ಸುರಾಣಾಂ ಹಿ ಸ್ವರ್ಗಾರ್ಥಂ ವಿಗ್ರಹೋಽಭವತ್ ।
ದೇವೈಸ್ಸಂಪೀಡಿತಾ ದೈತ್ಯಾಃ ಭೃಗುಪತ್ನೀಂ ತದಾ ಗತಾಃ ॥೨೯॥

---

ಪಾಪಿಯಾಗಿದ್ದನು. ಇವರೆಲ್ಲರೂ ಈ ಧನುಷ್ಕೋಟಿತೀರ್ಥದಲ್ಲಿ ಸ್ನಾನಮಾಡಿ ತಮ್ಮ ಪಾಪವನ್ನು ಕಳೆದುಕೊಂಡು ಪವಿತ್ರರಾದರು. ಹಿಂದೆ ವಿಷ್ಣುವು ಭೃಗುಮುನಿಯ ಪತ್ನಿಯನ್ನು ವಧಿಸಿದನು. ಆಗ ತನ್ನ ಪತ್ನಿಯನ್ನು ಕೊಂದನೆಂದು ಮುನಿಯು ಕೋಪಗೊಂಡು ವಿಷ್ಣುವನ್ನು ಶಪಿಸಿದನು. ಹೀಗೆಂದು ಶಿವನು ಹೇಳುತ್ತಿರುವ ಮಧ್ಯೆಯೇ ಗಿರಿಜೆಯು ಈರೀತಿ ಪ್ರಶ್ನಿಸಿದಳು. ॥೨೪-೨೫-೨೬-೨೭॥

ಪ್ರಿಯ ಶಂಕರನೇ! ದೇವೋತ್ತಮನಾದ ವಿಷ್ಣುವಿಗೆ ಭೃಗುಮುನಿಯು ಏಕೆ ಶಾಪಕೊಟ್ಟನೆಂಬ ವಿಷಯವನ್ನು ಕೇಳಬೇಕೆಂದು ನನಗೆ ಬಹಳ ಕುತೂಹಲವುಂಟಾಗಿದೆ. ಆದ್ದರಿಂದ ಆ ವೃತ್ತಾಂತವನ್ನು ವಿವರಿಸಬೇಕೆಂದು ಗಿರಿಜೆಯು ಕೇಳಿಕೊಳ್ಳಲು, ಭಗವಾನ್ ಶಂಕರನು ಈರೀತಿ ವಿಸ್ತರಿಸಿದನು. ॥೨೮॥

ಹಿಂದೆ ದೇವಾಸುರರು ತಮಗೇ ಸ್ವರ್ಗದ ಆಧಿಪತ್ಯವಿರಬೇಕೆಂದು ಮಹತ್ತರವಾಗಿ ಕಾಳಗವಾಡಿದರು. ಬಲಿಷ್ಠರಾದ ದೇವತೆಗಳು ಎಲ್ಲಾ ಅಸುರರನ್ನೂ ಬಲಿಹಾಕುತ್ತಾ ಬರಲು, ದೈತ್ಯರು ಭಯಗೊಂಡು ಪ್ರಾಣರಕ್ಷಣೆಗೆ ಉಪಾಯವನ್ನು ಯೋಚಿಸಿ, ದಯಾವತಿಯಾದ ಭೃಗುಪತ್ನಿಯ ಸಮೀಪಕ್ಕೆ ಹೋಗಿ ನಮಸ್ಕರಿಸಿ ತಾವು ಶರಣು ಹೊಕ್ಕಿದ್ದೇವೆಂದೂ ತಮ್ಮನ್ನು ಕಾಪಾಡಬೇಕೆಂದೂ ಪ್ರಾರ್ಥಿಸಿಕೊಂಡರು. ಆಗ ಭೃಗುಪತ್ನಿಯು ತಥಾಸ್ತು ಎಂದು ದೈತ್ಯರಿಗೆ ಅಭಯಪ್ರದಾನ ಮಾಡಿದಳು. ॥೨೯॥

ತಾಂ ಪ್ರಣಮ್ಯ ತದಾ ಗೌರಿ ಶರಣ್ಯಾಂ ಶರಣಂ ಯಯುಃ ।
ಸುರೈಸ್ಸಂಪ್ರಾರ್ಥಿತೋ ವಿಷ್ಣುಸ್ತಾಂ ಹನಚ್ಚಕ್ರಧಾರಯಾ ॥೩೦॥

ಭೃಗುಃ ಕೋಪವಶಾದ್ವಿಷ್ಣುಂ ಶಶಾಪ ಸನಿಯೋಗತಃ ॥೩೧॥

॥ ಭೃಗುರುವಾಚ ॥

ಮಾನುಷೇಷು ಹರೇ ಜನ್ಮ ತವ ಭೂಯಾತ್ಸುರಾಧಮ ।
ಸ್ತ್ರೀವಧೇ ನಿರ್ಘೃಣೋಽಸಿ ತ್ವಂ ತತ್ರ ಪತ್ನೀವಿಯೋಗಜಂ ॥೩೨॥

ತ್ವಯಾಪಿ ದುಃಖಂ ಭೋಕ್ತವ್ಯಂ ಯೇ ವೈ ದೈತ್ಯಾಸ್ತ್ವಯಾ ಹತಾಃ ।
ತೈರೇವ ಪತ್ನೀಹರಣಂ ಪ್ರಾಪ್ಸ್ಯಸೇ ತ್ವಂ ಹರೇ ಸದಾ ॥೩೩॥

ಇತ್ಯುಕ್ತ್ವಾ ಸ ಭೃಗುಃ ಪತ್ನೀಂ ತದಾ ಸ್ವತಪಸೋ ಬಲಾತ್ ।
ಸಮುಜ್ಜೀವ್ಯಾಶ್ರಮಂ ಪ್ರಾಪ ಮಮ ಭಕ್ತೋಽಂಬಿಕೇ ತದಾ ॥೩೪॥

---

ದೈತ್ಯರೆಲ್ಲರನ್ನೂ ನಿರ್ಮೂಲವಾಗಿ ನಾಶಮಾಡಬೇಕೆಂದಿದ್ದ ದೇವತೆಗಳು ಭೃಗುಪತ್ನಿಯ ಆಶ್ರಯದಲ್ಲಿದ್ದ ದೈತ್ಯರನ್ನು ಸಂಹರಿಸಲು ಶಕ್ತರಾಗದೇ ಭೃಗುಪತ್ನಿಯನ್ನೇ ಸಂಹರಿಸೆಂದು ವಿಷ್ಣುವನ್ನು ಕೋರಿದರು. ಆಗ ವಿಷ್ಣುವು ತನ್ನ ಸುದರ್ಶನ ಚಕ್ರದಿಂದ ಭೃಗುಪತ್ನಿಯನ್ನೇ ಸಂಹರಿಸಿದನು. ॥೩೦॥

ವಿಷ್ಣುವಿನ ಈ ಕೃತ್ಯದಿಂದ ಮುನಿಯಾಗಿದ್ದರೂ ಭೃಗುವಿಗೆ ಮಿತಿಮೀರಿದ ಕೋಪವುಂಟಾಯಿತು. ಆಗ ಅವನು ವಿಷ್ಣುವನ್ನು ಈರೀತಿ ಶಪಿಸಿದನು. ॥೩೧॥

ಎಲೈ ವಿಷ್ಣುವೇ! ನೀನು ಅತ್ಯಂತ ನೀಚಕರ್ಮವಾದ ಸ್ತ್ರೀವಧೆಯನ್ನು ಮಾಡುವುದರಲ್ಲಿಯೂ ಹಿಂಜರೆಯಲಿಲ್ಲ. ಆದ್ದರಿಂದ ನೀನು ಅಧಮದೇವತೆಯಾಗಿರುವೆ. ಈ ಕುತ್ಸಿತವಾದ ಕೃತ್ಯವನ್ನು ನೀನು ಮಾಡಿದ್ದರಿಂದ ಅಲ್ಪವಾದ ಮನುಷ್ಯ ಜನ್ಮವನ್ನು ಹೊಂದು. ಆ ಜನ್ಮದಲ್ಲಿ ನೀನು ಪತ್ನೀವಿಯೋಗದುಃಖವನ್ನು ಅನುಭವಿಸು. ನೀನು ಯಾವ ದೈತ್ಯರನ್ನು ಕೊಂದಿರುವೆಯೋ ಅವರೇ ಮುಂದೆ ರಾಕ್ಷಸರಾಗಿ ನಿನ್ನ ಹೆಂಡತಿಯನ್ನು ಅಪಹರಿಸಿಕೊಂಡು ಹೋಗುವರು. ಇದೇ ನಿನಗೆ ಶಾಪ. ॥೩೨-೩೩॥

ಹೀಗೆಂದು ನನ್ನ ಭಕ್ತನಾದ ಭೃಗುಮುನಿಯು ವಿಷ್ಣುವನ್ನು ಶಪಿಸಿ ಬಳಿಕ ತನ್ನ ತಪಸ್ಸಾಮರ್ಥ್ಯದಿಂದ ಪತ್ನಿಯನ್ನು ಪುನಃ ಬದುಕಿಸಿಕೊಂಡು ತನ್ನ ಆಶ್ರಮಕ್ಕೆ ಹೋದನು. ॥೩೪॥

ಸ ಚಾಪಿ ವಿಷ್ಣುಃ ಕಾಲೇನ ತಿರ್ಯಗ್ಯೋನಿಶತೇಷ್ವಭೂತ್ ।
ಸ ಚೋನ್ಮತ್ತೋ ಮಯಾ ತತ್ರ ಶೂಲಾಗ್ರೇಣ ವಿದಾರಿತಃ ॥೩೫॥

ಕೋಸಲೇಽಪ್ಯಭವದ್ರಾಜಾ ನಾಮ್ನಾ ದಶರಥಸ್ತದಾ ।
ಸ ಚಾನಪತ್ಯಸ್ತಸ್ಯಾಸೀತ್ಪುತ್ರೋ ವಿಷ್ಣುಸ್ತದಾಂಬಿಕೇ ॥೩೬॥

ದೇವೈಸ್ಸಂಪ್ರಾರ್ಥಿತೋ ದೇವಿ ಪೌಲಸ್ತ್ಯವಧಹೇತವೇ ।
ಸುರಾನ್ ಸಂಪೀಡಯಾಮಾಸ ರಾವಣೋ ಲೋಕರಾವಣಃ ॥೩೭॥

ತಸ್ಯಾಸೀಲ್ಲಕ್ಷ್ಮಣೋ ಭ್ರಾತಾ ಭಾರ್ಯಾ ಜನಕನಂದಿನೀ ।
ಪಿತ್ರಾ ವಿವಾಸಿತೋ ಮಾತ್ರಾ ಸಭಾರ್ಯೋ ವಿಪಿನಂ ಯಯೌ ॥೩೮॥

---

ಇತ್ತಲಾಗಿ ವಿಷ್ಣುವು ಮುನಿಶಾಪದಿಂದ ಪಾಪಭೂಯಿಷ್ಠವಾದ ಅನೇಕ ತಿರ್ಯಗ್ಜಂತುಗಳಲ್ಲಿ ಜನ್ಮವನ್ನೆತ್ತುತ್ತಾ ಕ್ಲೇಶವನ್ನನುಭವಿಸುತ್ತಿದ್ದನು. ಹೀಗೆ ತೊಳಲುತ್ತಿದ್ದ ಆತನನ್ನು ನಾನು ಆಗಿಂದಾಗ್ಗೆ ಶೂಲದಿಂದ ಉದ್ಧರಿಸುತ್ತಿದ್ದೆನು. ॥೩೫॥

ಹೀಗೆಯೇ ಕಾಲಕಳೆಯುತ್ತಿರಲು ಪುಲಸ್ತ್ಯಬ್ರಹ್ಮನ ವಂಶದಲ್ಲಿ ರಾವಣನೆಂಬ ರಾಕ್ಷಸನು ಹುಟ್ಟಿದ್ದನು. ಅವನು ಲೋಕಕಂಟಕನಾಗಿದ್ದನು. ದೇವತೆಗಳನ್ನು ಸಹ ಅವನು ಅತ್ಯಂತವಾಗಿ ಪೀಡಿಸುತ್ತಿದ್ದನು. ಅವನ ಪೀಡೆಯನ್ನು ತಾಳಲಾರದೆ ದೇವತೆಗಳು ಕಂಗೆಟ್ಟು ವಿಷ್ಣುವಿನಲ್ಲಿ ಮೊರೆಯಿಟ್ಟರು. ರಾವಣನನ್ನು ಸಂಹರಿಸಿ ಕಾಪಾಡಬೇಕೆಂದು ಪ್ರಾರ್ಥಿಸಿಕೊಂಡರು. ಆಗ ವಿಷ್ಣುವು ಅವರ ಪ್ರಾರ್ಥನೆ ಮೇರೆಗೆ ಆಗಿನ ಕಾಲದಲ್ಲಿ ಕೋಸಲದೇಶದ ರಾಜನಾಗಿದ್ದು ಮಕ್ಕಳಿಲ್ಲದ ದಶರಥನ ಪುತ್ರನಾಗಿ ಹುಟ್ಟಿದನು. ರಾಮ ಎಂದು ಹೆಸರನ್ನು ಪಡೆದನು. ॥೩೬-೩೭॥

ಆ ರಾಮನಿಗೆ ಲಕ್ಷ್ಮಣನೆಂಬ ತಮ್ಮನಿದ್ದನು. ಪ್ರಾಪ್ತವಯಸ್ಕನಾದಮೇಲೆ ರಾಮನಿಗೆ ಜನಕರಾಜನ ಪುತ್ರಿಯಾದ ಸೀತಾದೇವಿಯೊಡನೆ ವಿವಾಹವಾಯಿತು. ಆ ಬಳಿಕ ಮಲತಾಯಿಯ ಮಾತಿಗೆ ಸಿಲುಕಿಬಿದ್ದಿದ್ದ ರಾಮನು ತಂದೆಯ ಅಪ್ಪಣೆ ಮೇರೆಗೆ ಹೆಂಡತಿಯೊಡನೆ ಅರಣ್ಯಕ್ಕೆ ಹೋದನು. ॥೩೮॥

ತಸ್ಯ ಭಾರ್ಯಾ ಜನಸ್ಥಾನಾದ್ರಾವಣೇನ ಹೃತಾಬಲಾ ।
ಸ ದುಃಖಿತೋ ವಸನ್ ಭ್ರಾತ್ರಾ ಸುಗ್ರೀವಂ ನಾಮ ವಾನರಂ ॥೩೯॥

ಶರಣಂ ಸ ಗತೋ ದೇವಿ ತದಾ ಕ್ಷತ್ರಿಯನಂದನಃ ।
ತೇನ ವಾನರವೃಂದೈಶ್ಚ ಸಮುದ್ರಂ ಶರಣಂ ಗತಃ ॥೪೦॥

ತತ್ರಾಗಸ್ತ್ಯಂ ಮುನಿಂ ದೃಷ್ಟ್ವಾ ಗಂಧಮಾದನವಾಸಿನಂ ।
ಭಸ್ಮರುದ್ರಾಕ್ಷಸಂಪನ್ನಂ ಶಿವಲಿಂಗಾರ್ಚನೇ ರತಂ ॥೪೧॥

ಪ್ರಣಮ್ಯ ತಂ ತದಾ ರಾಮೋ ಅಗಸ್ತ್ಯಂ ಮುನಿಸತ್ತಮಂ ।
ದೀನಸ್ತದಾಹ ವಿನಯಾತ್ಸ್ವಭಾರ್ಯಾಹರಣಂ ಶಿವೇ ॥೪೨॥

ರಾವಣೇನ ತದಾ ರಾಮಃ ಪ್ರಾಂಜಲಿರ್ದುಃಖಿತೋ ಮುನಿಂ ॥೪೩॥

---

ಆ ರಾಮ, ಸೀತೆ ಮತ್ತು ಲಕ್ಷ್ಮಣ ಇವರು ಜನಸ್ಥಾನವೆಂಬ ಗೊಂಡಾರಣ್ಯ ದಲ್ಲಿ ಇದ್ದಾಗ ಲಂಕಾಧಿಪತಿಯಾದ ರಾವಣನು ಬಂದು ಸೀತೆಯನ್ನು ಕದ್ದುಕೊಂಡು ಹೋದನು. ಆಗ ರಾಮನು ಪತ್ನೀವಿರಹದಿಂದ ಅತ್ಯಂತ ದುಃಖಿತನಾದನು. ಬಳಿಕ ರಾಮಲಕ್ಷ್ಮಣರಿಬ್ಬರೂ ಅದೇ ಅರಣ್ಯ ಸಮೀಪದಲ್ಲಿದ್ದ ಸುಗ್ರೀವನೆಂಬ ವಾನರ ಸೇನಾಮುಖ್ಯನ ಬಳಿಗೆ ಹೋಗಿ, ತಮಗೆ ಸಹಾಯ ಮಾಡಬೇಕೆಂದು ಬೇಡಿ ಕೊಳ್ಳಲು ಆ ಸುಗ್ರೀವನು ಒಪ್ಪಿದನು. ಬಳಿಕ ರಾಮನು ಆ ಸುಗ್ರೀವನನ್ನೂ ಅವನ ಕಪಿಸೈನ್ಯವನ್ನೂ ಕರೆದುಕೊಂಡು ಸಮುದ್ರದ ಬಳಿಗೆ ಬಂದನು. ಆದರೆ ಮುಂದಕ್ಕೆ ಹೋಗಲು ದಾರಿಗಾಣದೇ ಅಲ್ಲಿ ಅತಿ ಚಿಂತಾಕ್ರಾಂತನಾದನು. ॥೩೯-೪೦॥

ಅದೇ ಗಂಧಮಾದನಪರ್ವತದ ಬಳಿಯಲ್ಲಿ ಅಗಸ್ತ್ಯಮುನಿಯು ವಾಸಿಸು ತ್ತಿದ್ದನು. ಪರಮಶಿವಭಕ್ತನಾದ ಆ ಮುನಿಯು ಆ ಪುಣ್ಯಕ್ಷೇತ್ರದಲ್ಲಿ ನಿತ್ಯವೂ ಭಸ್ಮರುದ್ರಾಕ್ಷಮಾಲೆಗಳನ್ನು ಧರಿಸಿಕೊಂಡು ಶಿವಲಿಂಗಾರ್ಚನೆಯಲ್ಲೇ ತತ್ಪರನಾ ಗಿದ್ದುಕೊಂಡು ಕಾಲಯಾಪನೆ ಮಾಡುತ್ತಿದ್ದನು. ಚಿಂತಾಕ್ರಾಂತನಾದ ರಾಮನು ಅಗಸ್ತ್ಯಮುನಿಯೊಡನೆ ಅಕಸ್ಮಾತ್ ಸಂಧಿಸಿದನು. ॥೪೧॥

ಆಗ ರಾಮನು ಅತ್ಯಂತ ಭಕ್ತಿಯಿಂದ ಅಗಸ್ತ್ಯಮುನಿಗೆ ನಮಸ್ಕರಿಸಿ ತನ್ನ ಅತ್ಯಂತ ದೀನಾವಸ್ಥೆಯನ್ನು ಹೇಳಿಕೊಂಡನು. ತನ್ನ ಪತ್ನಿಯನ್ನು ರಾವಣಾ ಸುರನು ಕದ್ದುಕೊಂಡು ಹೋದ ವಿಷಯುವನ್ನೂ ಸಹ ವಿವರಿಸುತ್ತಾ ಈರೀತಿ ಹೇಳಿದನು. ॥೪೨-೪೩॥

॥ ರಾಮ ಉವಾಚ ॥

ಭಗವನ್ ಶಾಂಭವಶ್ರೇಷ್ಠ ಮಾಮತ್ಯಂತದುಃಖಿತಂ ।
ಸಮುದ್ಧರಾವ ಮಾಂ ದೀನಂ ಭಾರ್ಯಾಹರಣಕರ್ಶಿತಂ ॥೪೪॥

ಮುನೀಂದ್ರೋಽಪಿ ತದಾ ರಾಮಂ ದೀಕ್ಷಯಿತ್ವಾ ವಿಧಾನತಃ ।
ಭಸ್ಮನೋದ್ಧೂಳ್ಯ ತಸ್ಯಾಂಗಂ ದತ್ವಾ ಪಂಚಾಕ್ಷರಂ ಮನುಂ ॥೪೫॥

ಗಂಧಮಾದನಸಂಸ್ಥಂ ಮಾಂ ದರ್ಶಯಾಮಾಸ ಭಕ್ತಿತಃ ।
ತಲ್ಲಿಂಗಂ ಪೂಜಯಾಮಾಸ ರಾಮೇಣ ಸ ತದಾ ಮುನಿಃ ॥೪೬॥

ಬಿಲ್ವಪತ್ರೈರ್ವನ್ಯಪುಷ್ಪೈಃ ಫಲೈರ್ನೈವೇದ್ಯಮಾತನೋತ್ ।
ತದಾ ತುಷ್ಟಾವ ರಾಮೋ ಮಾಂ ಸ್ವಕಷ್ಟವಿನಿವೃತ್ತಯೇ ॥೪೭॥

---

ಭಗವನ್, ನಾನು ಅತ್ಯಂತ ದುಃಖಿತನಾಗಿದ್ದೇನೆ. ರಾಜ್ಯಕೋಶಾದಿಗಳನ್ನು ಕಳೆದುಕೊಂಡು ಅರಣ್ಯದಲ್ಲಿ ಅಲೆಯುತ್ತಿದ್ದರೂ ಮತ್ತೂ ದೌರ್ಭಾಗ್ಯದಿಂದ ಹೆಂಡತಿಯನ್ನೂ ಈಗ ಕಳೆದುಕೊಂಡು ಅತ್ಯಂತ ದೀನನಾಗಿದ್ದೇನೆ. ದುಃಖಾತಿರೇಕದಿಂದ ಮೂಢನಾಗಿದ್ದೇನೆ. ಮುಂದೆ ಏನನ್ನು ಮಾಡಬೇಕೆಂಬುದೂ ಸಹ ನನಗೆ ಗೋಚರವಾಗುವುದಿಲ್ಲ. ನನ್ನ ಈ ಕಷ್ಟಗಳನ್ನು ಪರಿಹರಿಸಿಕೊಳ್ಳುವುದಕ್ಕೆ ಯಾವುದಾದರೂ ಉಪಾಯವನ್ನು ನನಗೆ ಉಪದೇಶಿಸಿ ನನ್ನನ್ನು ಉದ್ಧರಿಸು. ಹೀಗೆಂದು ರಾಮನು ಪ್ರಾರ್ಥಿಸಿಕೊಳ್ಳಲು, ॥೪೪॥

ಆಗ ಅಗಸ್ತ್ಯಮುನಿಯು ಆತನ ಮೇಲೆ ಕನಿಕರ ಹೊಂದಿದನು. ಆ ಕೂಡಲೇ ರಾಮನಿಗೆ ಶಾಸ್ತ್ರವಿಧಿಯ ಮೇರೆಗೆ ದೀಕ್ಷೆಯನ್ನು ಕೊಟ್ಟು ಭಸ್ಮಧಾರಣೆಯನ್ನು ಮಾಡಿಸಿ ಶಿವಪಂಚಾಕ್ಷರೀಮಂತ್ರವನ್ನು ಉಪದೇಶಿಸಿದನು. ॥೪೫॥

ಬಳಿಕ ಅಲ್ಲಿಯೇ ಬಳಿಯಲ್ಲಿದ್ದ ಗಂಧಮಾದನೇಶ್ವರನನ್ನು ಭಕ್ತಿಯಿಂದ ಸಂದರ್ಶಿಸೆಂದೂ ಆ ಗಂಧಮಾದನೇಶ್ವರಲಿಂಗವನ್ನು ಪೂಜಿಸೆಂದೂ ಹೇಳಿದನು. ॥೪೬॥

ಆಗ ರಾಮನು ಅಲ್ಲೀ ಹತ್ತಿರದಲ್ಲಿ ದೊರೆಯುತ್ತಿದ್ದ ಬಿಲ್ವಪತ್ರೆ, ವನಕುಸುಮ ಹಣ್ಣು, ಕಾಯಿ ಮುಂತಾದವುಗಳನ್ನು ಸಂಪಾದಿಸಿಕೊಂಡು ಬಂದು ಭಕ್ತಿಯಿಂದ ನನ್ನನ್ನು ಪೂಜಿಸಿ ನೈವೇದ್ಯಮಾಡಿದನು. ಬಳಿಕ ತನಗೆ ಒದಗಿರುವ ಕಷ್ಟವನ್ನು ಪರಿಹರಿಸೆಂದು ಬೇಡುತ್ತಾ ಈರೀತಿ ಸ್ತುತಿಸಿದನು. ॥೪೭॥

|| ರಾಮ ಉವಾಚ ||

ಶ್ರೀಕಾಲಕಾಲಾನಲಫಾಲಮೂಲ
ದೇವ ತ್ವಮಾದ್ಯೋ ಜಗತಃ ಪ್ರತಿಷ್ಠಾ ।
ಶೂಲಾಮಲೋದ್ಯತ್ಕರಬಾಲಪಾಲ
ಹಾಲಾಹಲಾಲಂಕೃತ ನೀಲಕಂಠ ||೪೮||

ತ್ವಂ ಭಕ್ತಿಗಮ್ಯೋಽಮರಪಾಲ ಶಂಭೋ
ಮಾಲಾಕೃತಾಹೀಂದ್ರ ವಿಶಾಲಬಾಹೋ ।
ಲೀಲಾಕೃತಂ ತೇ ಜಗದೇಕಜಾಲಂ
ನೋ ದುಃಖಮೂಲಂ ಸಹಸಾ ಹರಸ್ವ ||೪೯||

ಇತಿ ಸ್ತುತ್ವಾ ತದಾ ರಾಮೋ ಗಂಧಮಾದನಮೀಶ್ವರಂ ।
ತಸ್ಮೈ ಚ ದರ್ಶನಂ ದತ್ತಂ ಜೇತಾ ತ್ವಂ ರಾವಣಂ ಯುಧಿ ||೫೦||

---

ಓ ಭಗವನ್ ಮಹಾದೇವನೇ, ನೀನು ಕಾಲಕಾಲನು. ಮೃತ್ಯುಂಜಯನು. ಫಾಲಪ್ರದೇಶದಲ್ಲಿ ಮಹಾಗ್ನಿಯನ್ನು ಧರಿಸಿರುವೆ. ನೀನೇ ಸೃಷ್ಟಿಗೆ ಮೊದಲಿದ್ದವನು. ಜಗತ್ಕಾರಣನೆನಿಸಿ, ನೀನೇ ಸಕಲ ಜಗತ್ತುಗಳಿಗೂ ಆಧಾರಭೂತನಾಗಿರುವೆ. ಓ ತ್ರಿಶೂಲಪಾಣಿಯೇ, ನೀನು ಹಾಲಾಹಲಮಹಾವಿಷವನ್ನು ಪಾನಮಾಡಿ ಪ್ರಪಂಚವನ್ನು ಕಾಪಾಡಿದೆ. ಆದ್ದರಿಂದಲೇ ನೀಲಕಂಠ ಎಂಬ ಧನ್ಯವಾದ ಬಿರುದನ್ನು ಹೊತ್ತಿರುವೆ. ||೪೮||

ಓ ಶಂಭೋ, ನೀನು ಕೇವಲ ಭಕ್ತಿಸಾಧ್ಯನಿರುವೆ. ನಿನ್ನ ಮಹಿಮೆಯನ್ನು ವರ್ಣಿಸಲು ಯಾರಿಂದಲೂ ಅಳವಲ್ಲ. ನಾಗಾಭರಣನೂ ಆಜಾನುಬಾಹುವೂ ಆದ ನೀನೇ ಜಗತ್ತನ್ನು ವಿಲಾಸದಿಂದ ಸೃಷ್ಟಿಸುವೆ. ಸಕಲ ಚರಾಚರಗಳನ್ನೂ ಮತ್ತು ದೇವತೆಗಳನ್ನೂ ಸಹ ಪರಿಪಾಲಿಸಿರುವೆ. ದಯಾಸಾಗರನೇ, ನಾನು ಮಹಾದೀನನಾಗಿರುವೆನು. ನನ್ನ ದುಃಖಗಳನ್ನು ಪರಿಹರಿಸಿ ಕಾಪಾಡು. ||೪೯||

ಹೀಗೆಂದು ರಾಮನು ಗಂಧಮಾದನೇಶ್ವರನಾದ ನನ್ನ ಸನ್ನಿಧಿಯಲ್ಲಿ ಅಂಗಲಾಚಿ ಪ್ರಾರ್ಥಿಸಿಕೊಳ್ಳಲು ಅವನಿಗೆ ನಾನು ಪ್ರತ್ಯಕ್ಷನಾದೆನು. ಮತ್ತು ಅಭಯ ಪ್ರದಾನಮಾಡಿ ನೀನು ಯುದ್ಧಮಾಡಿ ರಾವಣಾಸುರನನ್ನು ಸಂಹರಿಸುವೆ.

ಗಚ್ಛೇತಿ ಚ ತದಾಚೋಕ್ತ್ವೋ ಮಾಂ ಪ್ರಣಮ್ಯಾಂಬಿಕೇ ತದಾ ।
ಅಗಸ್ತ್ಯೇನ ತದಾ ದತ್ತಂ ಖಡ್ಗಂ ಚಾಪಿ ಮಹಾಪ್ರಭಂ ॥೫೧॥

ತೂಣೀರಂ ಚ ಶರೈಃ ಪೂರ್ಣಂ ಯಯೌ ಭ್ರಾತ್ರಾ ಸಮನ್ವಿತಃ ।
ಸೇತುಂ ಮತ್ಕೃಪಯಾ ಬಧ್ವಾ ಯುದ್ಧೇ ರಾವಣಮುದ್ಭುತಂ ॥೫೨॥

ಸಾನುಜಂ ಸಸುತಂ ಹತ್ವಾ ಸೀತಾಂ ಪ್ರಾಪ್ಯ ಮಹಾಬಲಃ ।
ಪೌಲಸ್ತ್ಯವಧಸಂಜಾತಬ್ರಹ್ಮಹತ್ಯಾಪನುತ್ತಯೇ ॥೫೩॥

ಧನುಷ್ಕೋಟಿಮಹಾತೀರ್ಥೇ ಮಾಸಂ ಸ್ನಾತ್ವಾ ಸ ಭಕ್ತಿತಃ ।
ಸಭ್ರಾತಾ ಭಾರ್ಯಯಾ ಸಾರ್ಧಂ ವಲೀಮುಖಸಮನ್ವಿತಃ ॥೫೪॥

---

ಅನಂತರ ನೀನು ಸುಖವನ್ನು ಪಡೆಯುವೆ ಎಂದು ಹೇಳಿ ನಾನು ಅದೃಶ್ಯನಾದೆನು. ॥೫೦॥

ಅನಂತರ ಅಗಸ್ತ್ಯಮುನಿಯೂ ಸಹ ರಾಮನಿಗೆ ಮಹತ್ತರವಾದ ಒಂದು ಖಡ್ಗವನ್ನೂ ದಿವ್ಯಾಸ್ತ್ರಪರಿಪೂರ್ಣವಾದ ಒಂದು ಬತ್ತಳಿಕೆಯನ್ನೂ ಪ್ರೀತಿಯಿಂದ ಕೊಟ್ಟು ಅನುಗ್ರಹಿಸಿದನು. ಆಗ ರಾಮನು ಧೈರ್ಯಗೊಂಡವನಾಗಿ ಲಕ್ಷ್ಮಣನೊಂದಿಗೆ ರಾವಣಾಸುರನನ್ನು ಸಂಹರಿಸಲು ಉತ್ಸಾಹದಿಂದ ಹೊರಟನು. ॥೫೧॥

ಅನಂತರ ನನ್ನ ಅನುಗ್ರಹದಿಂದ ಸಮುದ್ರಕ್ಕೆ ಸೇತುವನ್ನು ಕಟ್ಟಿ ರಾಮನು ವಾನರ ಸೇನೆಯೊಂದಿಗೆ ಲಂಕಾಪಟ್ಟಣವನ್ನು ಸೇರಿದನು. ಅಲ್ಲಿ ಮಹಾಯುದ್ಧವನ್ನು ಹೂಡಿ ಅದ್ಭುತಪರಾಕ್ರಮಿಯಾದ ರಾವಣಾಸುರನನ್ನೂ ಅವನ ಸಹೋದರನನ್ನೂ ಪುತ್ರರನ್ನೂ ಸಂಹರಿಸಿ ವಿಜಯವನ್ನು ಪಡೆದನು. ಬಳಿಕ ಅಲ್ಲಿಯೇ ರಾವಣನ ಸೆರೆಮನೆಯಲ್ಲಿದ್ದ ಸೀತೆಯನ್ನು ಬಿಡಿಸಿಕೊಂಡು ಹಿಂತಿರುಗಿ ಬಂದನು. ॥೫೨॥

ರಾವಣನು ಬ್ರಹ್ಮವಂಶದವನಾಗಿದ್ದನು. ಅವನನ್ನು ವಧಿಸಿದ್ದರಿಂದ ರಾಮನಿಗೆ ಬ್ರಹ್ಮಹತ್ಯಾದೋಷವು ಅಂಟಿಕೊಂಡಿತು. ಆ ಪಾಪವನ್ನು ಕಳೆದುಕೊಳ್ಳುವುದಕ್ಕೆ ತನ್ನ ಸಕಲಪರಿವಾರದೊಂದಿಗೆ ರಾಮನು ಧನುಷ್ಕೋಟಿ ಮಹಾತೀರ್ಥದಲ್ಲಿ ಅತ್ಯಂತ ನಿಯಮದಿಂದ ಒಂದು ತಿಂಗಳು ಕಾಲ ಸ್ನಾನಮಾಡುತ್ತಾ ಅಲ್ಲಿಯೇ ವಾಸಿಸಿದನು. ॥೫೩-೫೪॥

ಸ ನಾರ್ಮದಂ ಸಮಾನೀಯ ಲಿಂಗಂ ತತ್ಪವನಾತ್ಮಜಾತ್ ।
ಸ್ಥಾಪಯಾಮಾಸ ಹೃಷ್ಟಾತ್ಮಾ ಮುನಿನಾ ರಾವಣಾಂತಕಃ ॥೫೫॥

ಗಂಧಮಾದನಪೃಷ್ಠೇ ವೈ ಗಂಧಮಾದನಶಂಕರಾತ್ ।
ಪಶ್ಚಿಮೇ ಪರಮೇಶಾನಿ ಸಂಪೂಜ್ಯಾಮರನಾಯಕಂ ॥೫೬॥

ರಾಮೇಶ್ವರಂ ತದಾ ದೇವಿ ಸ್ವನಾಮ್ನಾ ಲಿಂಗಮುತ್ತಮಂ ।
ಸಮರ್ಚಯಿತ್ವಾ ಬಿಲ್ವಾದ್ಯೈಃ ಪೂಜಯಾ ಮಾಂ ತದಾಂಬಿಕೇ॥೫೭॥

ಸಭ್ರಾತ್ರಾ ಚ ತದಾ ಪತ್ನ್ಯಾ ಸುಗ್ರೀವಾದ್ಯೈಶ್ಚ ವಾನರೈಃ ।
ಲಿಂಗಾನಿ ಸ್ಥಾಪಯಾಮಾಸ ಗಂಧಮಾದನಮಸ್ತಕೇ ॥೫೮॥

ತೀರ್ಥಾನಿ ಕಲ್ಪಯಿತ್ವಾಥ ದೇವಂ ರಾಮೇಶ್ವರಂ ತದಾ ।
ಶುದ್ಧಗಂಗಾಜಲೈಃ ಸ್ನಾಪ್ಯ ಪೂಜ್ಯ ಬಿಲ್ವೈಶ್ಚ ಪಂಕಜೈಃ ॥೫೯॥

ಪ್ರಣಮ್ಯ ರಾಮಸ್ಸಾಷ್ಟಾಂಗಂ ತುಷ್ಟಾವಾಥ ಕೃತಾಂಜಲಿಃ ॥೬೦॥

---

ಅನಂತರ ರಾಮನು ಆಂಜನೇಯನ ಮೂಲಕ ನರ್ಮದಾನದಿಯಿಂದ ಶಿವಲಿಂಗ ಒಂದನ್ನು ತರಿಸಿ ಅಗಸ್ತ್ಯಮುನಿಯಿಂದ ಆ ಲಿಂಗವನ್ನು ಅಲ್ಲಿ ಪ್ರತಿಷ್ಠೆ ಮಾಡಿಸಿದನು. ॥೫೫॥

ಗಂಧಮಾದನ ಪರ್ವತದಲ್ಲಿದ್ದ ಗಂಧಮಾದನೇಶ್ವರಲಿಂಗದಿಂದ ಪಶ್ಚಿಮ ದಿಕ್ಕಿನಲ್ಲಿ ಪ್ರತಿಷ್ಠಿಸಿದ ಆ ಲಿಂಗಕ್ಕೆ ರಾಮೇಶ್ವರ ಎಂದು ತನ್ನ ಹೆಸರನ್ನೇ ಇಟ್ಟನು. ಆ ರಾಮೇಶ್ವರಲಿಂಗವನ್ನು ರಾಮನು ನಿತ್ಯವೂ ಬಿಲ್ವಾದಿ ಸಾಧನಗಳಿಂದ ಭಕ್ತಿ ಪೂರ್ವಕವಾಗಿ ಪೂಜಿಸುತ್ತಿದ್ದನು. ॥೫೬-೫೭॥

ಅನಂತರ ರಾಮನು ತನ್ನ ಸಹೋದರನಿಂದಲೂ ಪತ್ನಿಯಿಂದಲೂ ಮತ್ತು ಸುಗ್ರೀವನೇ ಮೊದಲಾದ ತನ್ನ ವಾನರ ಪರಿವಾರದವರಿಂದಲೂ ಆ ಗಂಧಮಾದನ ಪರ್ವತದಲ್ಲಿ ಅನೇಕ ಶಿವಲಿಂಗಗಳನ್ನು ಪ್ರತಿಷ್ಠೆಮಾಡಿಸಿದನು. ॥೫೮॥

ಅಲ್ಲದೇ ಅಲ್ಲಿ ಅನೇಕ ಪುಣ್ಯತೀರ್ಥಗಳನ್ನು ನಿರ್ಮಿಸಿದನು. ಹೀಗೆ ರಾಮನು ಪರಮಶಿವಧರ್ಮಗಳನ್ನು ಅನುಷ್ಠಿಸಿ ನಿತ್ಯವೂ ಶುದ್ಧೋದಕಗಳಿಂದಲೂ ಬಿಲ್ವಪತ್ರೆ, ಕಮಲ ಮುಂತಾದ ಪೂಜಾಸಾಮಗ್ರಿಗಳಿಂದಲೂ ರಾಮೇಶ್ವರನನ್ನು ಪೂಜಿಸಿ ಸಾಷ್ಟಾಂಗ ನಮಸ್ಕಾರಪೂರ್ವಕವಾಗಿ ಈರೀತಿ ಸ್ತುತಿಸಿದನು. ॥೫೯-೬೦॥

॥ ರಾಮ ಉವಾಚ ॥

ರಾಮೇಶ್ವರೇಶ್ವರ ಮಹೇಶ ಪಿನಾಕಪಾಣೇ
ಗಂಭೀರಸಾಗರನಿಷಂಗ ಭುಜಂಗಹಾರ ।
ದ್ರಾಘಿರ್ಷ ಹಿರಣ್ಮಯಶರೀರ ಸುಚಂದ್ರಮೌಳೇ
ಗಂಗೋತ್ತಮಾಂಗ ಭವ ಭೂತಪತೇ ನಮಸ್ತೇ ॥೬೧॥

ವಿಶ್ವೋದಯಸ್ಥಿತಿಲಯಾಂತಕರ ಪ್ರಸೀದ
ಮಾಮಾಶು ಪಾಹಿ ದಯಯಾ ಪ್ರಮಥಾಧಿನಾಥ ।
ದುರ್ವಾರದುಃಖತರಸಂಸೃತಿಬಂಧನಾಶಂ
ಶಶ್ವತ್ಕುರುಷ್ವ ಭಗವನ್ ಕರುಣಾಕಟಾಕ್ಷೈಃ ॥೬೨॥

ಪಾಹಿ ಪ್ರಸೀದ ಪರಮೇಶ್ವರ ಪಂಚವಕ್ತ್ರ
ಭರ್ಗ ತ್ರಿಯಂಬಕ ಸುರಾಸುರಪೂಜ್ಯಪಾದ
ಪೌಲಸ್ತ್ಯಸಂಹೃತಿಭವಾಘಹರಂ ಹರಸ್ವ
ಮದ್ದುಃಖಜಾಲಮಪರಾಧಗಣಂ ಕ್ಷಮಸ್ವ ॥೬೩॥

---

ಓ ರಾಮೇಶ್ವರನೇ! ನೀನೇ ಈಶ್ವರನಾಗಿರುತ್ತೀಯೆ. ಪಿನಾಕವೆಂಬ ಮಹಾಯುಧವನ್ನು ಧರಿಸಿರುವ ಮಹೇಶ್ವರನೂ ನೀನೆಯೇ. ನಾಗಾಭರಣಗಳನ್ನು ಧರಿಸಿರುವ ನೀನು ಅತಿಗಂಭೀರಪ್ರಕೃತಿಯವನಿದ್ದೀಯೆ. ಸ್ವರ್ಣಮಯ ಶರೀರಿಯಾದ ನೀನು ಶಿರಸ್ಸಿನಲ್ಲಿ ಚಂದ್ರನನ್ನೂ ಗಂಗೆಯನ್ನೂ ಧರಿಸಿದ್ದೀಯೆ. ಸಕಲ ಭೂತಾಧಿಪತಿಯೇ! ನಿನ್ನನ್ನು ವಂದಿಸುತ್ತೇನೆ. ॥೬೧॥

ಓ ಪ್ರಮಥಪತಿಯಾದ ಶಂಕರನೇ! ನೀನು ಅಖಿಲವಿಶ್ವಗಳ ಉತ್ಪತ್ತಿಗೂ ರಕ್ಷಣೆಗೂ ಮತ್ತು ಪ್ರಳಯಕ್ಕೂ ಕಾರಣನಾಗಿದ್ದೀಯೆ. ಓ ಭಗವಂತನೇ! ಸಂಸಾರ ಬಂಧನದಲ್ಲಿ ಸಿಲುಕಿಕೊಂಡಿದ್ದೇನೆ. ಈ ಬಂಧನವನ್ನು ಶೀಘ್ರವಾಗಿ ನಾಶಮಾಡು. ನನ್ನ ಮೇಲೆ ದಯಾಪಾಂಗವನ್ನು ಬೀರಿ ಉದ್ಧರಿಸಿ ಕಾಪಾಡು. ॥೬೨॥

ಓ ಪರಮೇಶ್ವರನೇ! ನೀನು ಪಂಚಮುಖನೂ ತೇಜೋಮಯನೂ ಮುಕ್ಕಣ್ಣನೂ ಆಗಿರುವೆ. ನಿನ್ನ ಪಾದಾರವಿಂದಗಳನ್ನು ಅಖಿಲ ದೇವಾಸುರರೂ ಸಹ ಪೂಜಿಸುವರು. ನೀನು ಅಂಥ ಮಹಾನುಭಾವನಾಗಿರುತ್ತೀಯೆ. ನನ್ನ ಮೇಲೆ ಪ್ರಸನ್ನ

ಇತಿ ಸ್ತುತೋಽಹಂ ರಾಮೇಣ ತದಾ ದೇವಿ ಸಸೀತಯಾ ।
ತಂ ಪ್ರಸನ್ನಸ್ತದಾ ವಾಕ್ಯಮಬ್ರವಂ ಪ್ರಣತಂ ಶಿವೇ ॥೬೪॥

॥ ಈಶ್ವರ ಉವಾಚ ॥

ಮಾ ಭೈಷೀಸ್ಸರ್ವಭದ್ರಂ ತೇ ಕೃತಂ ಲೋಕಹಿತಂ ತ್ವಯಾ ।
ಬದ್ಧಸ್ಸೇತುಸ್ಸಮುದ್ರೇ ಮೇ ರಾವಣಸ್ಸಾನುಜೋ ಹತಃ ॥೬೫॥

ಮತ್ಪ್ರಸಾದಾದಭೂದ್ರಾಮ ಗುರುಸ್ತೇ ಕುಂಭಸಂಭವಃ ।
ಏತಸ್ಯ ಕೃಪಯಾ ರಾಮ ಮತ್ಪ್ರಸಾದಸ್ತದಾಭವತ್ ॥೬೬॥

---

ನಾಗು. ರಾವಣವಧೆಯಿಂದ ಈಗ ನನಗೆ ಉಂಟಾಗಿರುವ ಪಾಪವನ್ನು ಪರಿಹರಿಸು. ನನ್ನ ಸಕಲ ಅಪರಾಧಗಳನ್ನೂ ಮನ್ನಿಸಿ ನನಗೊದಗಿರುವ ಕಷ್ಟಗಳನ್ನೆಲ್ಲಾ ನಾಶ ಮಾಡು. ॥೬೩॥

ಈರೀತಿ ರಾಮನು ಪತ್ನಿಯಾದ ಸೀತೆಯೊಡನೆ ಭಕ್ತಿಪೂರ್ವಕವಾಗಿ ಸ್ತುತಿಸಲು, ನಾನು ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಅಭಯಪ್ರದಾನ ಮಾಡುತ್ತಾ ಈರೀತಿ ಹೇಳಿದೆನು. ॥೬೪॥

ಎಲೈ ರಾಮಚಂದ್ರನೇ! ನೀನು ಇನ್ನು ಹೆದರಬೇಕಾಗಿಲ್ಲ. ನಿನಗೆ ಎಲ್ಲಾ ಕಷ್ಟಗಳೂ ಪರಿಹೃತವಾಗಿ ಇನ್ನು ಸುಖವು ದೊರೆಯುವುದು. ನೀನು ಲೋಕಹಿತಾರ್ಥವಾಗಿ ಅತ್ಯದ್ಭುತಕಾರ್ಯಗಳನ್ನು ಮಾಡಿರುತ್ತೀಯೆ. ಸಮುದ್ರಕ್ಕೆ ಸೇತುವೆಯನ್ನು ಕಟ್ಟಿರುವೆ. ದುಷ್ಟನಾದ ರಾವಣಾಸುರನನ್ನೂ ಅವನ ಪರಿವಾರವನ್ನೂ ನಾಶಮಾಡಿ ಲೋಕಕ್ಕೆ ಕಲ್ಯಾಣವನ್ನುಂಟುಮಾಡಿರುವೆ. ಇದರಿಂದ ನಿನಗೆ ಇನ್ನು ಮುಂದೆ ಒಳ್ಳೆಯದೇ ಆಗುವುದು. ॥೬೫॥

ನಿನಗೆ ನನ್ನ ಅನುಗ್ರಹದಿಂದಲೇ ಉಚಿತವಾದ ಸಮಯದಲ್ಲಿ ಶಿವಭಕ್ತಾಗ್ರಣಿಯಾದ ಅಗಸ್ತ್ಯನು ದೊರೆತನು, ಮತ್ತು ಉಪಾಯಗಳನ್ನು ಉಪದೇಶಿಸಿದನು. ನನ್ನ ಅನುಗ್ರಹದೊಂದಿಗೆ ಅಗಸ್ತ್ಯಮುನಿಯ ಅನುಗ್ರಹವೂ ನಿನಗೆ ದೊರೆತದ್ದರಿಂದ ನೀನು ಅಮೋಘವಾದ ಕಾರ್ಯಗಳನ್ನು ಮಾಡಿ ಅಂತ್ಯದಲ್ಲಿ ಜಯವನ್ನು ಗಳಿಸಿಕೊಂಡಿರುವೆ. ॥೬೬॥

ರಾಮ ಶಾಂಭವಸಂಗೇನ ನ ಕಿಂಚಿದಪಿ ದುರ್ಲಭಂ ।
ಶಾಂಭವಾಂಗೈಕಸಂಗೇನ ಪಾಪಭಂಗೋಽಭವತ್ತದಾ ॥೬೭॥

ರಾಮೇಶ್ವರಮಿದಂ ಲಿಂಗಂ ತ್ವಯಾ ಸಂಸ್ಥಾಪಿತಂ ಮಮ ।
ಏತಸ್ಯ ದರ್ಶನಾತ್ಸದ್ಯಃ ಪಾಪನಾಶೋ ಭವಿಷ್ಯತಿ ॥೬೮॥

ಧನುಷ್ಕೋಟೌ ನರಃ ಸ್ನಾತ್ವಾ ರಾಮೇಶಂ ಯಸ್ತು ಪಶ್ಯತಿ ।
ಸ ಹಿ ಮುಕ್ತೋ ಭವತ್ಯೇವ ತಸ್ಯೈವ ಕುಲಮುನ್ನತಂ ॥೬೯॥

ತಸ್ಯೈವ ಪಿತರಸ್ತೃಪ್ತಾಸ್ತೇನೋರ್ವೀ ಸಫಲಾಂಬಿಕೇ ।
ಶಾಂಭವೇಭ್ಯೋ ಮುದಾ ದತ್ವಾ ಸ್ನಾಪಯೇದ್ಯೋ ಮಹೇಶ್ವರಂ ॥೭೦॥

ಗಂಗಾಂಭಸಾ ಮಹಾದೇವಿ ಬಿಲ್ವೈರಭ್ಯರ್ಚ್ಯ ಯೋ ಹಿ ಮಾಂ ।
ಶ್ರೀಮದ್ರಾಮೇಶ್ವರಂ ಲಿಂಗಂ ಮಜ್ಜ್ಞಾನಂ ಸ್ಸಪ್ರಾಪ್ಯ ಮುಚ್ಯತೇ ॥೭೧॥

---

ಇದೆಲ್ಲವೂ ಶಿವಭಕ್ತಸಮಾಗಮದ ಫಲವೆಂದು ತಿಳಿ. ನನ್ನ ಭಕ್ತರ ಸಂಗ ಒಂದಿದ್ದರೆ ದುಶ್ಶಕ್ಯವಾದದ್ದು ಯಾವುದೂ ಇರುವುದಿಲ್ಲ. ಶೈವರೊಡನಾಟದಿಂದ ನಿನ್ನ ಸಕಲ ಪಾಪಗಳೂ ದೂರವಾಗಿರುತ್ತವೆ. ಈಗ ನೀನು ಪವಿತ್ರನಾಗಿದ್ದೀಯೆ. ॥೬೭॥

ನೀನು ಸ್ಥಾಪಿಸಿರುವ ಈ ರಾಮೇಶ್ವರಲಿಂಗವು ಮಹಾಪುಣ್ಯಕರವಾದದ್ದು. ಇದರ ಸಂದರ್ಶನದಿಂದ ಕೂಡಲೇ ಸಕಲ ಪಾಪಗಳೂ ನಷ್ಟವಾಗಿ ಹೋಗುವುವು. ॥೬೮॥

ಯಾವ ಮನುಷ್ಯನು ಧನುಷ್ಕೋಟಿತೀರ್ಥದಲ್ಲಿ ಸ್ನಾನಮಾಡಿ ರಾಮೇಶ್ವರ ಲಿಂಗವನ್ನು ಸಂದರ್ಶಿಸುವನೋ ಅವನು ಸಕಲ ಪಾಪಗಳಿಂದಲೂ ಮುಕ್ತನಾಗುವನು. ಮತ್ತು ಅವನ ವಂಶವೇ ಊರ್ಜಿತವಾಗುವುದು ॥೬೯॥

ಯಾವ ಮನುಷ್ಯನು ಈ ಕ್ಷೇತ್ರದಲ್ಲಿ ಶಿವಭಕ್ತರಿಗೆ ದಾನಧರ್ಮಗಳನ್ನು ನೀಡುವನೋ ಅವನ ಪಿತೃಗಳು ಖಂಡಿತವಾಗಿಯೂ ತೃಪ್ತರಾಗುವರು. ಯಾವನು ಶುದ್ಧೋದಕ, ಬಿಲ್ವಪತ್ರೆ ಮುಂತಾದವುಗಳಿಂದ .ರಾಮೇಶ್ವರಲಿಂಗವನ್ನು ಪೂಜಿಸುವನೋ ಅವನೇ ಪುಣ್ಯಾತ್ಮನು. ಅಂತಹವನಿಂದಲೇ ಭೂಲೋಕವು ಸಾರ್ಥಕ್ಯವನ್ನು ಪಡೆಯುವುದು. ರಾಮೇಶ್ವರಲಿಂಗಪೂಜಕನು ಇಹದಲ್ಲಿ ಸುಖವನ್ನು ಅನುಭವಿಸುತ್ತಾ

ಗಚ್ಛ ತ್ವಂ ಕೋಸಲಾಮಾಶು ಮತ್ಪ್ರಸಾದಾತ್ಸುಖೀಭವ ।
ಇತ್ಯುಕ್ತ್ವಾ ತಂ ತದಾ ಗೌರಿ ತಸ್ಮಿನ್ ಲಿಂಗೇ ತಿರೋಹಿತಃ ॥೨೨॥

ಅಗಸ್ತ್ಯಂ ಮಾಂ ಪ್ರಣಮ್ಯೈವ ಯಯೌ ರಾಮಸ್ತದಾದ್ರಿಜೇ ।
ಗತ್ವಾಶ್ವಮೇಧಂ ಮತ್ತುಷ್ಟ್ಯೈ ಸಮುಪಾಹರದಂಬಿಕೇ ॥೨೩॥

ತತ್ರ ರಾಜ್ಯಂ ಚಿರಂ ಕೃತ್ವಾ ಸೋಽಪಿ ಕಾಲೇ ದಿವಂಗತಃ ।
ವಿಷ್ಣುರ್ಮಾಮಂಬಿಕೇ ನಿತ್ಯಂ ಸೇತುಮಾಧವಸಂಜ್ಞಕಃ ॥೨೪॥

ಗಂಗಾಂಭಸಾಭಿಷಿಚ್ಯೇಹ ಬಿಲ್ವೈಸ್ಸಂಪೂಜ್ಯ ಭಕ್ತಿತಃ ।
ರಾಮೇಶ್ವರಂ ತದಾ ಗೌರಿ ತತ್ರಾಸ್ತೇ ಮತ್ಪ್ರಸಾದತಃ ॥೨೫॥

---

ಸುಜ್ಞಾನವನ್ನು ಪಡೆಯುವನು. ಆದರಿಂದ ಅಂತ್ಯದಲ್ಲಿ ಮೋಕ್ಷವನ್ನು ಸಹ ಹೊಂದುವನು. ॥೨೦-೨೧॥

ಎಲೈ ರಾಮಚಂದ್ರನೇ! ಈ ರಾಮೇಶ್ವರಕ್ಷೇತ್ರವು ಈಗ ಮಹಾಪುಣ್ಯಕ್ಷೇತ್ರವಾಗಿರುವುದೆಂದು ನಾನು ದೃಢವಾಗಿ ಹೇಳುವೆನು. ಇನ್ನು ನೀನು ನಿನ್ನ ದೇಶಕ್ಕೆ ತೆರಳು. ಕೋಸಲದೇಶಕ್ಕೆ ರಾಜನಾಗುವೆ. ಪರಮ ಸುಖಾನಂದಗಳನ್ನೂ ಪಡೆಯುವೆ ಎಂದು ಹೇಳಿ ನಾನು ಆ ರಾಮೇಶ್ವರಲಿಂಗದಲ್ಲಿಯೇ ಅದೃಶ್ಯನಾದೆನು. ॥೨೨॥

ಅನಂತರ ರಾಮನು ನನ್ನನ್ನೂ ಮತ್ತು ಅಗಸ್ತ್ಯಮುನಿಯನ್ನೂ ಸಹ ಪೂಜಿಸಿ ತನ್ನ ದೇಶಕ್ಕೆ ತೆರಳಿದನು. ಅಲ್ಲಿ ಪಟ್ಟಾಭಿಷಿಕ್ತನಾದ ಬಳಿಕ ಪುನಃ ನನ್ನ ಪ್ರಸನ್ನತೆಗಾಗಿ ಅಶ್ವಮೇಧಮಹಾಯಾಗವನ್ನು ಮಾಡಿದನು. ॥೨೩॥

ಎಲೌ ಪ್ರಿಯೆ! ಈರೀತಿ ರಾಮನು ಅನೇಕ ವರ್ಷಗಳ ಪರ್ಯಂತ ಸುಖವಾಗಿ ರಾಜ್ಯಭಾರವನ್ನು ಮಾಡುತ್ತಾ ಅಂತ್ಯದಲ್ಲಿ ಸ್ವರ್ಗವನ್ನು ಸೇರಿದನು. ಈರೀತಿ ವಿಷ್ಣುವು ತನ್ನ ಅವತಾರವನ್ನು ಮುಗಿಸಿಕೊಂಡಿದ್ದರೂ ಈಗಲೂ ಸಹ ಸೇತುಮಾಧವ ಎಂಬ ಹೆಸರಿಂದ ಪ್ರಖ್ಯಾತನಾಗಿ ಬಿಲ್ವಾದಿಗಳಿಂದ ರಾಮೇಶ್ವರಲಿಂಗವನ್ನು ಪೂಜಿಸುತ್ತಿರುವನು. ಮತ್ತು ನನ್ನ ಪರಮವಿಶ್ವಾಸಕ್ಕೆ ಪಾತ್ರನಾಗಿರುವನು. ಹೀಗೆಂದು ಈಶ್ವರನು ರಾಮೇಶ್ವರ ಮಹಿಮೆಯನ್ನು ಹೇಳಿ ಮುಗಿಸಿದನು. ॥೨೫॥

॥ ಸೂತ ಉವಾಚ ॥

ಯ ಏತಚ್ಛೃಣುಯಾನ್ನಿತ್ಯಂ ಶ್ರೀರಾಮೇಶ್ವರವೈಭವಂ ।
ತಸ್ಯ ಪಾಪಾನಿ ನಶ್ಯಂತಿ ತೂಲಮಗ್ನಿಮುಖೇ ಯಥಾ ॥೭೬॥

ಶ್ರೀರಾಮೇಶ್ವರಲಿಂಗಮೇತದಮಲಂ ಸ್ವರ್ಗಾಪವರ್ಗಪ್ರದಂ
ಬಿಲ್ವಾದ್ಯೈರಮಲೈಸ್ತಥಾ ಮುನಿಗಣೈಸ್ಸಂಸೇವಿತಂ ಪೂಜಿತಂ ।
ದೃಷ್ಟ್ವಾ ಪಾಪಜರಾದಿರೋಗರಹಿತೋ ಮುಕ್ತೋ ಭವತ್ಯಂಬಿಕೇ
ಧನ್ಯೋ ಮತ್ಪದಪೂಜಕಸ್ಸುಕೃತಿನಾಂ ಮಾನ್ಯೋ ವರಿಷ್ಠಸ್ಸ ಹಿ॥೭೭॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಗಂಧಮಾದನಪರ್ವತೇಶ
ಧನುಷ್ಕೋಟಿ ರಾಮೇಶ್ವರಮಹಿಮಾವರ್ಣನಂ ನಾಮ
ಅಷ್ಟಾವಿಂಶೋಽಧ್ಯಾಯಃ

---

ಎಲೈ ಮುನಿಗಳಿರಾ! ಈ ರಾಮೇಶ್ವರವೈಭವಕಥೆಯನ್ನು ಯಾವನು ಶ್ರವಣ ಮಾಡುವನೋ ಅವನ ಸಕಲ ಪಾಪಗಳೂ ಬೆಂಕಿಯಿಂದ ಹತ್ತಿಯು ಧ್ವಂಸವಾಗುವಂತೆ ನಾಶವಾಗುವುವು. ॥೭೬॥

ಈ ಪರಮಪಾವನವೂ ಸ್ವರ್ಗ ಮತ್ತು ಮೋಕ್ಷಪ್ರದವೂ ಆದ ರಾಮೇಶ್ವರ ಲಿಂಗವನ್ನು ಯಾವನು ಬಿಲ್ವಾದಿಗಳಿಂದ ಪೂಜಿಸುವನೋ ಅವನು ಪಾಪ, ವಾರ್ಧಕ್ಯ, ರೋಗ ಮುಂತಾದ ಬಂಧನಗಳಿಂದ ವಿಮುಕ್ತನಾಗಿ ನನ್ನ ಸಕಲ ಭಕ್ತರಲ್ಲೆಲ್ಲಾ ಅವನೇ ಮಾನ್ಯನೂ ಶ್ರೇಷ್ಠನೂ ವರಿಷ್ಠನೂ ಧನ್ಯನೂ ಆಗುವನು. ಎಂದು ಶಂಕರನು ಪಾರ್ವತಿಗೆ ತಿಳಿಯಹೇಳಿದನು. ॥೭೭॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಭರ್ಗನಾಮಕವಾದ ಐದನೆಯ ಅಂಶದಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

ಭರ್ಗಾಖ್ಯೇ

ಪಂಚಮಾಂಶೇ

## ಏಕೋನತ್ರಿಂಶೋಽಧ್ಯಾಯಃ

### ಶ್ರೀಶೈಲಕ್ಷೇತ್ರಮಹಿಮಾವರ್ಣನಂ

॥ ದೇವ್ಯುವಾಚ ॥

ತ್ವತ್ತಃ ಶ್ರುತಾನಿ ಕ್ಷೇತ್ರಾಣಿ ಪುಣ್ಯಾನಿ ಪರಮೇಶ್ವರ ।
ಲಿಂಗಾನಿ ದೇವ ದೇವೇಶ ದರ್ಶನಾತ್ಪುಣ್ಯದಾನಿ ಚ ॥೧॥

ಸ್ಮರಣಾನ್ಮುಕ್ತಿದಾನೀಶ ಪೂಜನಾಜ್ಜ್ಞಾನದಾನಿ ಚ ।
ಅವಿಮುಕ್ತಸ್ಯ ಮಹಿಮಾ ತ್ವಯಾ ನೈವೋಪವರ್ಣಿತಃ ॥೨॥

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

"ಪ್ರಿಯ ಮಹೇಶನೇ! ನಿನ್ನ ಕೃಪೆಯಿಂದ ಶಿವಮಹಾಕ್ಷೇತ್ರಗಳ ಮಹಿಮೆಯನ್ನು ಕೇಳುವ ಸುಯೋಗವು ನನಗೆ ದೊರೆಯಿತು. ಆ ಮಹಿಮಾಪೂರ್ಣವಾದ ಕಥೆಗಳ ಶ್ರವಣದಿಂದ ನನಗೆ ಪರಮಾನಂದವು ಲಭಿಸಿತು. ಆ ಪುಣ್ಯಕ್ಷೇತ್ರಗಳಲ್ಲಿರುವ ಶಿವಲಿಂಗಗಳ ಮಹಿಮೆಯನ್ನೂ ಈಗ ವಿವರಿಸಿ ಹೇಳಿರುವೆ. ಆ ಲಿಂಗಗಳು ಪರಮ ಪುಣ್ಯಕರವಾದುವುಗಳೆಂಬ ವಿಷಯದಲ್ಲಿ ಸಂದೇಹವೇ ಇಲ್ಲ. ಅವುಗಳ ದರ್ಶನದಿಂದ ಪುಣ್ಯವು ಲಭಿಸುವುದು. ಪೂಜೆಯಿಂದ ಸುಜ್ಞಾನವು ಪ್ರಾಪ್ತವಾಗುವುದು. ಧ್ಯಾನಿಸುವುದರಿಂದ ಅಖಂಡ ಮುಕ್ತಿಸಾಮ್ರಾಜ್ಯವೂ ಸಿದ್ಧಿಸುವುದು. ॥೧॥

ಆದರೆ ಮಹೇಶನೇ! ಅವಿಮುಕ್ತವೆಂಬ ಕ್ಷೇತ್ರದ ಹೆಸರನ್ನು ನಾನು ಕೇಳಿರುವೆನು. ಆ ಕ್ಷೇತ್ರಮಹಿಮೆಯನ್ನು ಮಾತ್ರ ನೀನು ವರ್ಣಿಸಲಿಲ್ಲ. ಅದೇಕೆ?

ಕಿಂ ವಾ ತತ್ಕಾರಣಂ ಶಂಭೋ ಕಿಮನ್ಯಂ ತ್ವತ್ಪ್ರಿಯಂಕರಂ ।
ಕ್ಷೇತ್ರಮಸ್ತಿ ಮಹಾದೇವ ವದ ಗುಹ್ಯಮಪಿ ಪ್ರಭೋ ॥೩॥

ಇತಿ ದೇವ್ಯಾ ವಚಃ ಶ್ರುತ್ವಾ ಕರುಣಾರಸಸಾಗರಃ ।
ಶಂಕರಃ ಪ್ರಾಹ ತಾಂ ದೇವೀಂ ಶೃಣುಧ್ವಂ ಮುನಿಪುಂಗವಾಃ ॥೪॥

ಏಷ ದ್ವಾದಶಲಿಂಗಾನಾಂ ಮಹಿಮಾ ಜ್ಯೋತಿಷಾಂ ಶಿವೇ ।
ಮಯಾ ತವಾನುಪೂರ್ವೇಣ ಸೇತಿಹಾಸಂ ಚ ಕೃತ್ಸ್ನಶಃ ॥೫॥

ಅವಿಮುಕ್ತಸ್ಯ ಮಹಿಮಾ ವಿಶ್ವೇಶಸ್ಯಾಪಿ ವೈಭವಂ ।
ಕಥಯಾಮ್ಯಗ್ರತೋ ದೇವಿ ಸಂಗ್ರಹಾದಧುನೋದಿತಃ ॥೬॥

---

ಆ ಕ್ಷೇತ್ರವು ನಿನಗೆ ಪ್ರಿಯವಾಗಿಲ್ಲವೇ? ಅಥವಾ ಅದು ಮಹಾರಹಸ್ಯವಾದದ್ದೆಂದು ನನಗೆ ಮರೆಮಾಚುತ್ತಿರುವೆಯಾ? ಆ ಕ್ಷೇತ್ರಮಹಿಮೆಯನ್ನೂ ಮತ್ತೂ ಇತರ ಪುಣ್ಯಕ್ಷೇತ್ರಗಳ ಕಥೆಯನ್ನೂ ಕೇಳಬೇಕೆಂದು ನನಗೆ ಅತ್ಯಂತ ಕುತೂಹಲವಿರುವುದು. ಅವು ಎಷ್ಟೇ ರಹಸ್ಯವಾಗಿದ್ದರೂ ನನ್ನ ಮೇಲೆ ಕರುಣಿಸಿ ಆ ಮಹಿಮಾಕಥೆಗಳನ್ನು ಹೇಳಬೇಕೆಂದು ಬೇಡುವೆನು." ಹೀಗೆಂದು ಗಿರಿಜೆಯು ಕೇಳಿಕೊಳ್ಳಲು ॥೨-೩॥

ಗಿರಿಜೆಯ ಮಾತನ್ನು ಕೇಳಿ ಕರುಣಾಳುವಾದ ಶಂಕರನು ಕಾಶೀಕ್ಷೇತ್ರ ಮಹಿಮಾಕಥೆಯನ್ನು ವಿಸ್ತರಿಸಿದನು. ಎಲೈ ಮುನಿಗಳಿರಾ! ಅದೇ ಕಥೆಯನ್ನು ನಿಮಗೆ ಹೇಳುವೆನು ಆಲಿಸಿರಿ. ಎಂದು ಸೂತಮಹರ್ಷಿಗಳು ಶಿವಪ್ರೋಕ್ತವಾದ ವಿಷಯವನ್ನು ಋಷಿವೃಂದಕ್ಕೆ ವಿವರಿಸಿದರು. ॥೪॥

ಪ್ರಿಯೆ ಗಿರಿಜೆ! ಲೋಕದಲ್ಲಿ ದ್ವಾದಶಜ್ಯೋತಿರ್ಲಿಂಗಗಳಿರುವುವು. (ಈ ೧೨ ಸಹ ಸಿದ್ಧಲಿಂಗಗಳಾಗಿರುವುವು) ಅವುಗಳ ಸಂಗ್ರಹಕಥೆಯನ್ನು ನಿನಗೆ ಮೊದಲೇ ಹೇಳಿರುವೆನು. ಈಗ ಆ ಲಿಂಗಗಳ ಕಥೆಯನ್ನು ಆದ್ಯಂತವಾಗಿ ಇತಿಹಾಸದೊಂದಿಗೆ ಹೇಳುವೆನು. ಅವಿಮುಕ್ತೇಶ್ವರನ ಮತ್ತು ವಿಶ್ವೇಶ್ವರನ ಅದ್ಭುತವೈಭವವೃತ್ತಾಂತವನ್ನೂ ಸಹ ಮುಂದೆ ಸಮಗ್ರವಾಗಿ ಹೇಳುವೆನು. ॥೫-೬॥

ತ್ರಿಯಂಬಕಸ್ಯ ಮಹಿಮಾ ತತ್ರ ಕಿಂಚಿನ್ಮಯೋದಿತಃ ।
ಅಸ್ಮಿನ್ನೇವಾಗ್ರತೋ ದೇವಿ ಸಪ್ತಮಾಂಶೇ ಮಹೇಶ್ವರಿ ॥೭॥

ವೈಭವಂ ವಿಶ್ವನಾಥಸ್ಯ ಲಿಂಗಾನಾಂ ಚಾನುಪೂರ್ವಶಃ ।
ಕಾವೇರೀ ನಾಮ ದೇವೇಶಿ ನದೀ ಪುಣ್ಯಾ ಸರಿದ್ವರಾ ॥೮॥

ಯಥಾ ಭಾಗೀರಥೀ ಗಂಗಾ ವಿಂಧ್ಯಸ್ಯೋತ್ತರವಾಹಿನೀ ।
ತಥೈವ ಸಾ ಮಹಾದೇವೀ ವಿಂಧ್ಯಾದ್ದಕ್ಷಿಣತಃ ಸ್ಥಿತಾ ॥೯॥

ತತ್ರತ್ಯದಿವ್ಯಲಿಂಗಾನಾಂ ಕ್ಷೇತ್ರಾಣಾಮಪಿ ಶಂಕರಿ ।
ವೈಭವಂ ಕಥಯಾಮ್ಯಗ್ರೇ ಅಸ್ಮಿನ್ನಂಶೇ ಹಿ ಸಪ್ತಮೇ ॥೧೦॥

ಅಧುನಾ ಸಂಪ್ರವಕ್ಷ್ಯಾಮಿ ಹರಿದ್ವಾರಸ್ಯ ವೈಭವಂ ।
ಸಾವಧಾನಮನಾಃ ಪುಣ್ಯಂ ಶೃಣು ಭೂಧರಕನ್ಯಕೇ ॥೧೧॥

---

ತ್ರ್ಯಂಬಕೇಶ್ವರ ಮಹಾಲಿಂಗದ ಮಹಿಮೆಯನ್ನೂ ಹಿಂದೆ ಸೂಕ್ಷ್ಮವಾಗಿ ಹೇಳಿರುವೆನು. ಮುಂದೆ ಸಪ್ತಮಾಂಶದಲ್ಲಿ ವಿಶ್ವನಾಥನ ಮತ್ತು ಇತರ ಎಲ್ಲಾ ಶಿವಲಿಂಗಗಳ ಮಾಹಾತ್ಮ್ಯೆಯನ್ನೂ ಅನುಕ್ರಮವಾಗಿ ವಿಸ್ತರಿಸುವೆನು. ॥೭॥

ಭೂಲೋಕದ ದಕ್ಷಿಣಭಾರತದಲ್ಲಿ ಕಾವೇರಿ ಎಂಬ ಮಹಾನದಿಯು ಇರುವುದು. ಅದು ಮಹಾ ಪುಣ್ಯತಮವಾದದ್ದು. ವಿಂಧ್ಯಪರ್ವತದ ಉತ್ತರದಿಗ್ಭಾಗದಲ್ಲಿ ಗಂಗಾ ನದಿಯು ಹೇಗೆ ಉತ್ಕೃಷ್ಟವಾಗಿರುತ್ತದೆಯೋ ಹಾಗೆಯೇ ವಿಂಧ್ಯಕ್ಕೆ ದಕ್ಷಿಣದಲ್ಲಿ ಕಾವೇರಿಯು ಶ್ರೇಷ್ಠವಾದ ನದಿಯೆನಿಸಿರುವುದು. ॥೮-೯॥

ಆ ನದಿಯ ತೀರಪ್ರದೇಶಗಳಲ್ಲಿ ಅಲ್ಲಲ್ಲಿ ಇರುವ ಕ್ಷೇತ್ರಗಳ ಕಥೆಗಳನ್ನೂ ಶಿವಲಿಂಗಗಳ ಮಹಿಮೆಯನ್ನೂ ಕ್ರಮಕ್ರಮವಾಗಿ ಏಳನೇ ಅಂಶದ ಅಂತ್ಯದ ವರೆಗೂ ವಿಸ್ತರಿಸಿ ಹೇಳುವೆನು. ॥೧೦॥

ಈಗ ಇಲ್ಲಿ ಹರಿದ್ವಾರಕ್ಷೇತ್ರದ ಮಹಿಮಾವೈಭವವನ್ನು ಹೇಳುವೆನು. ಎಲೌ ಪ್ರಿಯತಮೇ, ಈ ಪುಣ್ಯಕರವಾದ ಮಹಿಮೆಯನ್ನು ಆಲಿಸಿ ಕೇಳು. ॥೧೧॥

ಹರಿದ್ವಾರಮಿತಿ ಖ್ಯಾತಂ ತೀರ್ಥಮೀಶಾನತುಷ್ಟಿದಂ ।
ಗಂಗಾಯಮುನಯೋರ್ಯತ್ರ ಪ್ರಭೇದೋ ದೃಶ್ಯತೇಽಂಬಿಕೇ ॥೧೨॥

ತತ್ರಾಸ್ತಿ ಲಿಂಗಮುತ್ಕೃಷ್ಟಂ ಹರಿಣಾ ಪೂಜಿತಂ ಪುರಾ ।
ತತ್ರಾಸ್ತಿ ವನಮುನ್ಮತ್ತಗಜೇಂದ್ರಪರಿಸೇವಿತಂ ॥೧೩॥

ಕರೇಣುಭಿಃ ಪರಿವೃತಃ ಮೃಗೇಂದ್ರೈರುಪಶೋಭಿತಂ ।
ಹಿಮವಚ್ಛಿಖರಂ ಚಾನ್ಯತ್ಕೇದಾರಾತ್ಪಶ್ಚಿಮೇ ಸ್ಥಿತಂ ॥೧೪॥

ನಾನಾದ್ರುಮಶತೋಪೇತಂ ತಪಸ್ವಿಜನಸೇವಿತಂ ।
ವೈಖಾನಸೈರ್ವಾಲಖಿಲ್ಯೈಸ್ತಥಾ ಮುನಿಗಣೈರಪಿ ॥೧೫॥

ತಪಸಸ್ಸಿದ್ಧಿಮಿಚ್ಛದ್ಭಿಸ್ತಪಃಸ್ಥಾನಮನುತ್ತಮಂ ।
ರಮ್ಯಶಾರ್ದೂಲಸಂಯುಕ್ತಂ ಸರಿದ್ಭಿಸ್ಸಾಗರೋಪಮೈಃ ॥೧೬॥

---

ಹರಿದ್ವಾರವೆಂಬ ಕ್ಷೇತ್ರವು ಮಹಾ ಪ್ರಸಿದ್ಧವಾದದ್ದು. ಈಶಾನನ ಪರಮ ಪ್ರೀತಿಗೆ ಪಾತ್ರವಾದ ಕ್ಷೇತ್ರವು ಅದೆಂದು ಹೆಸರುವಾಸಿಯಾಗಿರುವುದು. ಆ ಕ್ಷೇತ್ರವು ಗಂಗೆ ಮತ್ತು ಯಮುನೆ ಈ ಎರಡು ನದಿಗಳ ಉದ್ಭವಸ್ಥಾನದಲ್ಲಿ ಇರುವುದು.॥೧೨॥

ಅಲ್ಲಿ ಘನವಾದ ಒಂದು ಅರಣ್ಯವಿರುವುದು. ಆ ಅರಣ್ಯದಲ್ಲಿ ಕಾಡಾನೆಗಳೇ ಮುಂತಾದ ಅನೇಕ ಪ್ರಾಣಿಗಳಿರುವುವು. ಅದೇ ಅರಣ್ಯಮಧ್ಯದಲ್ಲಿ ಒಂದು ಶ್ರೇಷ್ಠವಾದ ಶಿವಲಿಂಗವಿರುತ್ತದೆ. ಆ ಲಿಂಗವನ್ನು ಹಿಂದೆ ವಿಷ್ಣುವು ಸಹ ಪೂಜಿಸುತ್ತಿದ್ದನು.॥೧೩॥

ಆ ಅರಣ್ಯವು ಕೇದಾರದಿಂದ ಪಶ್ಚಿಮದಿಕ್ಕಿನಲ್ಲಿರುವುದು. ಅನೇಕಾನೇಕ ವೃಕ್ಷಸಮೂಹಗಳಿಂದ ಮಹಾ ನಿಬಿಡವಾದ ಆ ಅರಣ್ಯದಲ್ಲಿ ಹೆಣ್ಣಾನೆಗಳೂ ಸಿಂಹಗಳೂ ಶಾರ್ದೂಲಗಳೂ ಸಹ ವಾಸಿಸುವುವು. ಆ ವನದಲ್ಲಿ ಅನೇಕ ತಪಸ್ವಿಗಳೂ ವೈಖಾನಸರೂ ವಾಲಖಿಲ್ಯರೂ ಮತ್ತು ಇತರ ಮುನಿಗಳೂ ಸಹ ತಪಸ್ಸನ್ನು ಮಾಡುತ್ತಿರುವರು. ॥೧೪-೧೫॥

ಆ ಸ್ಥಳವು ಶೀಘ್ರವಾಗಿಯೇ ತಪಸ್ಸಿಗೆ ಸಿದ್ಧಿಯನ್ನು ಉಂಟುಮಾಡುವುದರಿಂದ ಎಲ್ಲಾ ಮುನಿಗಳೂ ಅದು ಉತ್ತಮವಾದ ತಪಃಸ್ಥಾನವೆಂಬುದನ್ನು ಅರಿತು ಹುಲಿಗಳಿಂದಲೂ, ದೊಡ್ಡ ನದಿಯಿಂದಲೂ ತುಂಬಿರುವ ಅಲ್ಲಿಯೇ ವಾಸಮಾಡುವರು. ॥೧೬॥

॥ ದೇವ್ಯುವಾಚ ॥

ನೀಲತಾಲೀವನೋಪೇತಂ ವಾತಜರ್ಝರಪತ್ರಕಂ ।
ಗಂಗಾ ಪ್ರಭೂತಾ ಯತ್ರಾಸೀತ್ತತ್ರಾಸ್ತಿ ವಿಮಲಂ ಸರಃ ॥೧೭॥

ಕಲ್ಲೋಲಮಾಲಾಕಲಿತಂ ತಮಾಲಕದಳೀವೃತಂ ।
ಮಂದಾರತರುಭಿಶ್ಛನ್ನಂ ಮಂದಮಾರುತವೀಜಿತಂ ॥೧೮॥

ಸಹಸ್ರಪತ್ರೈಃ ಕಮಲೈಶ್ಶೋಭಿತಂ ಸ್ವಚ್ಛವಾಲುಕಂ ।
ತತ್ರಾಸ್ತಿ ಲಿಂಗಮೀಶಾನಿ ಹರಿದ್ವಾರೇಶ್ವರಾಭಿಧಂ ॥೧೯॥

ತಲ್ಲಿಂಗಮೂಲತೋ ದೇವಿ ಗಂಗಾ ಯತ್ರ ವಿನಿರ್ಗತಾ ॥೨೦॥

ಕಥಂ ಗಂಗಾ ಮಹಾದೇವ ಹರಿದ್ವಾರಾದ್ವಿನಿರ್ಗತಾ ।
ಕಿಂ ಚ ತತ್ಕಾರಣಂ ಶಂಭೋ ವದ ಮಹ್ಯಂ ಮಹೇಶ್ವರ ॥೨೧॥

---

ನೀಲವರ್ಣವುಳ್ಳ ತಾಳೆಮರಗಳಿಂದ ನಿಬಿಡವಾದ ಆ ಅರಣ್ಯದಲ್ಲಿ ಪಕ್ವವಾದ ಮರಗಳೆಲೆಗಳು ದೊಡ್ಡ ದೊಡ್ಡ ನದಿಗಳಲ್ಲಿಯೂ ಮತ್ತು ಇತರ ಕಡೆಗಳಲ್ಲಿಯೂ ಸಾಂದ್ರವಾಗಿ ಬೀಳುತ್ತಿರುತ್ತವೆ. ಅದೇ ವನದಲ್ಲಿ ಗಂಗಾನದಿಯಂತೆ ಪಾವನವಾದ ಒಂದು ದೊಡ್ಡ ಸರೋವರವು ಇರುವುದು. ಅದು ಅತ್ಯಂತ ಸ್ವಚ್ಛವಾದ ಜಲದಿಂದ ರಂಜಿಸುತ್ತಿದೆ. ॥೧೭॥

ಆ ಸರೋವರದ ಅಕ್ಕಪಕ್ಕಗಳಲ್ಲಿ ಬಾಳೆ, ಮಂದಾರ, ತಮಾಲ ಮುಂತಾದ ಮರಗಳು ಸಾಂದ್ರವಾಗಿ ಬೆಳೆದಿರುತ್ತವೆ. ಸುತ್ತಲೂ ಶುಭ್ರವಾದ ಮರಳುದಿಣ್ಣೆಗಳಿವೆ. ಆಗಾಗ ಮಂದಮಾರುತದಿಂದ ಚಲಿಸಿ ಅಲೆಗಳೇಳುವ ಆ ಸರೋವರದಲ್ಲಿ ಆಗಾಗ ಅರಳಿರುವ ಕಮಲಗಳು ಮನೋಹರವಾಗಿ ಕಣ್ಣುಗಳಿಗೆ ಆನಂದವೀಯುತ್ತವೆ. ॥೧೮॥

ಅದೇ ಕ್ಷೇತ್ರದಲ್ಲಿಯೇ ಒಂದು ಶಿವಲಿಂಗವಿರುವುದು. ಆ ಲಿಂಗಕ್ಕೆ ಹರಿದ್ವಾರೇಶ್ವರ ಎಂದು ಹೆಸರು. ಆ ಲಿಂಗದ ಮೂಲದಿಂದ ಗಂಗಾನದಿಯು ಹುಟ್ಟಿರುವುದು. ಹೀಗೆಂದು ಈಶ್ವರನು ಹೇಳುತ್ತಿರಲು ಗಿರಿಜೆಯು ಮತ್ತೆ ಪ್ರಶ್ನಿಸಿದಳು. ॥೧೯-೨೦॥

ಪ್ರಿಯ ಶಂಕರನೇ, ಆ ಹರಿದ್ವಾರೇಶ್ವರ ಲಿಂಗದ ಮೂಲದಲ್ಲಿ ಗಂಗೆಯು

ಶೃಣು ಶೈಲಸುತೇ ಬಾಲೇ ವಿಶಾಲನಯನೇಂಬಿಕೇ ।
ವಿಷ್ಣುಃ ಪುರಾ ತಪಸ್ತೆಪ್ಯನ್ಮಾಮಾರಾಧ್ಯಾವಸಚ್ಛಿವೇ ॥೨೨॥

॥ ಮಹೇಶ್ವರ ಉವಾಚ ॥

ಭಸ್ಮಾಭ್ಯಕ್ತತನುರ್ದೇವಿ ತ್ರಿಪುಂಡ್ರಾವಲಿಭಾಸುರಃ ।
ನೀಲಿಮಾನನಭಃಭ್ರಾಜಚ್ಛಾರದಾಭ್ರಗಣೋ ಯಥಾ ॥೨೩॥

ನೀಲತೋಯದಮಧ್ಯಸ್ಥತ್ರಿಪುಂಡ್ರತಡಿದುದ್ಯತಃ ।
ರುದ್ರಮಾವರ್ತಯನ್ ತಸ್ಥೌ ಮನು ಪಂಚಾಕ್ಷರಾದರಃ ॥೨೪॥

ಹರಿದ್ವಾರೇಶ್ವರಂ ಲಿಂಗಂ ಬಿಲ್ವೈರಭ್ಯರ್ಚ್ಯ ಸಂಸ್ಥಿತಂ ।
ತ್ವತ್ಪಿತುರ್ವಾರುಣೇ ದೇವಿ ಶಿಖರೇ ರಮಯಾ ತಪಾ ॥೨೫॥

---

ಹೇಗೆ ಹುಟ್ಟಿದಳು ? ಅದಕ್ಕೆ ಕಾರಣವೇನು ? ಈ ವಿಚಾರವನ್ನು ನನಗೆ ದಯೆಯಿಟ್ಟು ಹೇಳು. ಎಂದು ಗಿರಿಜೆಯು ಕೇಳಲು ಈಶ್ವರನು ಈರೀತಿ ನುಡಿದನು. ॥೨೧॥

ಎಲೌ ಪ್ರಿಯೇ, ಹಿಂದೆ ವಿಷ್ಣುವು ನನ್ನನ್ನು ಕುರಿತು ತಪಸ್ಸನ್ನು ಮಾಡುತ್ತಿದ್ದನು. ಅವನು ತಪಸ್ಸನ್ನು ಮಾಡುವಾಗ ಸರ್ವದಾ ಭಸ್ಮವನ್ನೂ ತ್ರಿಪುಂಡ್ರವನ್ನೂ ಧರಿಸಿರುತ್ತಿದ್ದನು. ಆಗ ವಿಷ್ಣುವನ್ನು ನೋಡಿದರೆ ನೀಲವಾದ ಆಕಾಶದಲ್ಲಿ ಶರತ್ಕಾಲದ ಮೇಘಗಳು ಶುಭ್ರವಾಗಿ ಇರುವುವೋ ಎಂಬಂತೆ ಭಾಸವಾಗುತ್ತಿದ್ದಿತು. ॥೨೨-೨೩॥

ಅಥವಾ ಆ ವಿಷ್ಣುವಿನ ಸ್ವರೂಪವು ಆಗ ಕಪ್ಪಾದ ಮೇಘದ ಮಧ್ಯದಲ್ಲಿ ಬೆಳ್ಳನೆಯ ಮಿಂಚು ಮಿರುಗುವುದೋ ಎಂಬಂತೆ ಕಾಣುತ್ತಿತ್ತು. ಈರೀತಿ ಸಕಲ ಶಿವಧರ್ಮಗಳನ್ನೂ ಅನುಷ್ಠಾನ ಮಾಡುತ್ತಾ ವಿಷ್ಣುವು ಸದಾ ರುದ್ರಾಧ್ಯಾಯವನ್ನು ಅಲ್ಲಿ ಪಾರಾಯಣಮಾಡುತ್ತಿದ್ದನು. ಅಥವಾ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿದ್ದನು. ॥೨೪॥

ಆ ವಿಷ್ಣುವು ನಿನ್ನ ತಂದೆಯಾದ ಹಿಮವತ್ಪರ್ವತದಲ್ಲೇ ವರುಣದಿಗ್ಭಾಗದಲ್ಲಿ ತನ್ನ ಪತ್ನಿಯಾದ ಲಕ್ಷ್ಮಿಯೊಡನೆ ಪ್ರತಿಷ್ಠನಾಗಿದ್ದನು. ನಿತ್ಯವೂ ಬಿಲ್ವಾದಿಗಳನ್ನು ಸಂಗ್ರಹಿಸಿಕೊಂಡು ಹರಿದ್ವಾರೇಶ್ವರಲಿಂಗವನ್ನು ತಪ್ಪದೆ ಪೂಜಿಸುತ್ತಿದ್ದನು. ॥೨೫॥

ಕಾಲಂ ನಿನ್ಯೇ ತಪೋರಾಶಿಃ ಕಾಲಕಾಲಾರ್ಚನೇನ ಹಿ ।
ರಮಂತಂ ತಂ ತಪಸ್ಯಂತಂ ರುದ್ರಾಕ್ಷಾಂಬರಧಾರಿಣಂ ॥೨೬॥

ರುದ್ರವಿನ್ಯಸ್ತಮನಸಂ ರುದ್ರಾಧ್ಯಾಯಜಪಾದರಂ ।
ಫಲಪುಷ್ಪಾಣಿ ಚಿನ್ವಂತೀ ಭರ್ತುಃ ಪೂಜಾಪ್ರಕಲ್ಪನೇ ॥೨೭॥

ದೀಪದಾ ಶಂಕರಸ್ಯಾಗ್ರೇ ಪಾಕಕರ್ತ್ರೀ ಶಿವಾಯ ವೈ ।
ನೈವೇದ್ಯೈಸ್ತರ್ಪಯಾಮಾಸ ಹರಿದ್ವಾರೇಶಮೀಶ್ವರಂ ॥೨೮॥

ಉತ್ಫುಲ್ಲಕಮಲೈರೀಶಂ ಕಮಲಾಪಿ ಸಮರ್ಚಯತ್ ।
ಹರಿದ್ವಾರೇಶ್ವರಂ ಲಿಂಗಂ ಬಿಲ್ವಪತ್ರೈಶ್ಚ ಕೋಮಲೈಃ ॥೨೯॥

ತಪಸ್ಯಂತಂ ಹರಿದ್ವಾರೇ ಹರಿಂ ದ್ರಷ್ಟುಂ ಸಮಾಗತಾಃ ।
ಬ್ರಹ್ಮಾಂಡಜಂ ಸಮಾರುಹ್ಯ ಸಿಂಧುರಂ ವೃತ್ರಹಾ ತದಾ ॥೩೦॥

---

ಹೀಗೆಯೇ ನಿತ್ಯವೂ ಮೃತ್ಯುಂಜಯನಾದ ಪರಮೇಶ್ವರನ ಪೂಜೆಯಲ್ಲೂ ಧ್ಯಾನದಲ್ಲೂ, ರುದ್ರಾಧ್ಯಾಯದ ಆವರ್ತನೆಯಲ್ಲೂ, ಭಸ್ಮಧಾರಣೆ ಮೊದಲಾದ ಶಿವಧರ್ಮಗಳಲ್ಲೂ ಮತ್ತು ನಾನಾವಿಧವಾದ ನಿಯಮಪೂರ್ವಕ ತಪಸ್ಸಿನಲ್ಲೂ ಆಸಕ್ತನಾಗಿ ಕಾಲವನ್ನು ಕಳೆಯುತ್ತಿದ್ದನು. ॥೨೬॥

ಈರೀತಿ ವಿಷ್ಣುವು ತಪಸ್ಸನ್ನಾಚರಿಸುತ್ತಿರಲು, ಅವನ ಪತ್ನಿಯಾದ ಲಕ್ಷ್ಮಿಯು ಪತಿಯ ತಪಸ್ಸಿನಲ್ಲೂ ಪೂಜಾವಿಧಿಯಲ್ಲೂ ಸಹಾಯಕಳಾಗಿದ್ದಳು. ಪೂಜೆಗಾಗಿ ಫಲಪುಷ್ಪಾದಿಗಳನ್ನು ಸಂಗ್ರಹಿಸುತ್ತಿದ್ದಳು. ಶಿವನೈವೇದ್ಯಕ್ಕಾಗಿ ಬಗೆಬಗೆಯ ಪಾಕಗಳನ್ನು ಮಾಡುತ್ತಿದ್ದಳು. ಶಿವನೆದುರಿನಲ್ಲಿ ದೀಪಮಾಲೆಗಳನ್ನು ಹೊತ್ತಿಸುತ್ತಿದ್ದಳು. ॥೨೭-೨೮॥

ಲಕ್ಷ್ಮಿಯು ತಾನೂ ಸಹ ನಿತ್ಯವೂ ಬಿಲ್ವ, ಕಮಲ ಮುಂತಾದವುಗಳಿಂದ ಹರಿದ್ವಾರೇಶ್ವರಲಿಂಗವನ್ನು ಭಕ್ತಿಯಿಂದ ಆರಾಧಿಸುತ್ತಿದ್ದಳು. ॥೨೯॥

ಈರೀತಿ ವಿಷ್ಣುವು ತಪಸ್ಸನ್ನು ಮಾಡುತ್ತಿರಲು ಅದನ್ನು ನೋಡುವ ಸಲುವಾಗಿ ಬ್ರಹ್ಮನು ಹಂಸವಾಹನನಾಗಿಯೂ, ದೇವೇಂದ್ರನು ಐರಾವತವನ್ನೇರಿಯೂ ಮತ್ತು ಇತರ ದೇವತೆಗಳೂ ನಾರದಾದಿ ಮುನಿಗಳೂ ಸಹ ಅಲ್ಲಿಗೆ ಬಂದರು. ॥೩೦॥

ಲೋಕಪಾಲಗಣಾಸ್ಸರ್ವೇ ನಾರದಾದ್ಯಾಶ್ಚ ಶಂಕರಿ ।
ದೃಷ್ಟ್ವಾ ತಂ ಹರಿಮತ್ಯುಗ್ರಂ ತಪಸಶ್ಚ ಪರಾಯಣಂ ॥೩೧॥

॥ ಬ್ರಹ್ಮೋವಾಚ ॥

ಕಿಂ ತೇ ಕಾರ್ಯಂ ಸಮುದ್ದಿಶ್ಯ ಭವತಾ ತಪ್ಯತೇ ತಪಃ ।
ಹಿಮವಚ್ಛಿಖರೇ ಪುಣ್ಯೇ ಲಕ್ಷ್ಮ್ಯಾ ಸಾಕಂ ಹರೇ ವದ ॥೩೩॥

ತದಾ ಪಿತಾಮಹವಚೋ ನಿಶಮ್ಯ ಹರಿರವ್ಯಯಃ ।
ಧ್ಯಾತ್ವಾ ಮಾಂ ಸ ತದಾ ಪ್ರಾಹ ಪ್ರಣಮ್ಯ ಪರಮೇಶ್ವರಂ ॥೩೪॥

॥ ವಿಷ್ಣುರುವಾಚ ॥

ವಿಶ್ವೇಶ್ವರೋಽಯಂ ಮದನಾಂತಕೋಽಯಂ
ಗಂಗಾಧರೋಽಯಂ ತ್ರಿಪುರಾಂತಕೋಽಯಂ ।
ಭಗಾಂತಕೋಽಯಂ ಹಿ ಯಮಾಂತಕೋಽಯಂ
ಮಖಾಂತಕೋಽಯಂ ಚ ಭವಾಂತಕೋಽಯಂ ॥೩೫॥

---

ವಿಷ್ಣುವು ಈರೀತಿ ಅತ್ಯುಗ್ರವಾದ ತಪಸ್ಸಿನಲ್ಲೇ ಆಸಕ್ತನಾಗಿರುವುದನ್ನು ನೋಡಿ ಸಪರಿವಾರನಾದ ಬ್ರಹ್ಮನಿಗೆ ವಿಸ್ಮಯವಾಯಿತು. ಆಗ ಅವನು ಈರೀತಿ ಪ್ರಶ್ನಿಸಿದನು. ॥೩೧-೩೨॥

ಎಲೈ ನಾರಾಯಣನೇ, ನೀನು ಯಾವ ಮಹಾಕಾರ್ಯಕ್ಕೆ ಸಂಕಲ್ಪಿಸಿದ್ದೀಯೆ? ಈ ಪಾವನವಾದ ಹಿಮವತ್ಪರ್ವತದಲ್ಲಿ ಪತ್ನಿಯೊಡನೆ ಈರೀತಿ ಘೋರವಾದ ತಪಸ್ಸನ್ನು ಏಕೆ ಆಚರಿಸುತ್ತಿದ್ದೀಯೆ? ಇದಕ್ಕೆ ನಿನ್ನ ಸಂಕಲ್ಪವೇನಿರುವುದು? ಈ ವಿಚಾರವನ್ನು ನಮಗೆ ತಿಳಿಸು. ॥೩೩॥

ಹೀಗೆಂದು ಬ್ರಹ್ಮನು ಪ್ರಶ್ನಿಸಲು ವಿಷ್ಣುವು ಶಿವನನ್ನೇ ಧ್ಯಾನಿಸಿ ಶಿವನಿಗೆ ನಮಸ್ಕರಿಸಿ ಈರೀತಿ ಉತ್ತರವನ್ನಿತ್ತನು. ॥೩೪॥

ಆಹಾ! ಪರಮೇಶ್ವರನು ಎಷ್ಟು ಪರಮಮಹಿಮನಿರುವನು! ಇಂಥ ಮಹಾನುಭಾವನನ್ನು ಅರಿತವನು ಯಾವನು ತಾನೇ ಪೂಜಿಸದೇ ಇದ್ದಾನು. ಈ ಶಂಕರನು ಅಖಂಡವಿಶ್ವಕ್ಕೇ ಏಕೇಶ್ವರನಾಗಿರುವನು. ಪಾವನೆಯಾದ ಗಂಗೆಯನ್ನು ಧರಿಸಿರುವನು. ಗರ್ವಿಷ್ಠನಾದ ಮನ್ಮಥನನ್ನೂ, ತ್ರಿಪುರಾಸುರನನ್ನೂ, ಭಗದೇವತೆಯನ್ನೂ

ಅಸ್ಯೈವ ದೇವಸ್ಯ ಮಹೇಶ್ವರಸ್ಯ
ಲಿಂಗಾರ್ಚನಾದ್ಭುತತರೋಽಸ್ಮಿ ಧನ್ಯಃ ।
ಚಕ್ರಂ ಸಹಸ್ರಾರಮಿದಂ ಸುದರ್ಶನಂ
ಲಬ್ಧಂ ತಥಾನ್ಯೈರಪಿ ದುರ್ಜಯೋಽಹಂ ॥೩೬॥

ತಸ್ಮಾತ್ತ್ರಿಪುರಾರಿಮಾರಾಧ್ಯ ಚಕ್ರಂ ಲಬ್ಧಂ ಸುದರ್ಶನಂ ।
ದೇವಾಸುರಂ ತದಾ ಯುದ್ಧೇ ಜಯಸ್ತೇನಾಭವನ್ಮಮ ॥೩೭॥

ತಸ್ಮಾದುಗ್ರಾನ್ಮಹಾದೇವಾದ್ಭವಾದ್ಭೀಮಾತ್ಕಪರ್ದಿನಃ ।
ಲಪ್ಸ್ಯೇ ಮನೋರಥಾನ್ ಬ್ರಹ್ಮನ್ ತೇನಾಹಂ ತಪಸಿ ಸ್ಥಿತಃ ॥೩೮॥

॥ ಬ್ರಹ್ಮೋವಾಚ ॥

ಕಿಂ ತೇ ಮನೋರಥೋ ವಿಷ್ಣೋ ದೇವೇನ ತ್ವಂ ಪ್ರಬೋಧಿತಃ ।
ಪುರಾ ಲಬ್ಧವರಶ್ಚಾಸಿ ದೇವದೇವಾನ್ಮಹೇಶ್ವರಾತ್ ॥೩೯॥

---

ಮತ್ತು ಇತರ ಲೋಕಕಂಟಕರನ್ನೂ ಸಹ ಈ ಶಂಕರನೇ ಸಂಹರಿಸಿರುವನು. ಈಶ್ವರನು ಮೃತ್ಯುಂಜಯನಿರುವನು. ದಕ್ಷಯಜ್ಞಧ್ವಂಸಿಯಾದ ಈ ಪರಶಿವನೇ ಸಂಸಾರಬಂಧನವನ್ನು ಕತ್ತರಿಸಲು ಶಕ್ತನಿರುವನು. ॥೩೫॥

ಈ ಮಹಾನುಭಾವನ ಆರಾಧನೆಯಿಂದಲೂ ಶಿವಲಿಂಗದ ಅರ್ಚನೆಯಿಂದಲೂ ನಾನು ಧನ್ಯನಾಗಿದ್ದೇನೆ ಮತ್ತು ಅದ್ಭುತ ಜಯಶಾಲಿಯಾಗಿದ್ದೇನೆ. ಶಂಕರಾನುಗ್ರಹ ದಿಂದಲೇ ಈ ಸಹಸ್ರಾರವುಳ್ಳ (ಹಲ್ಲು) ಸುದರ್ಶನ ಚಕ್ರವು ನನಗೆ ಲಭಿಸಿರುತ್ತದೆ. ಆದ್ದರಿಂದಲೇ ನಾನು ಸರ್ವರಿಂದಲೂ ಅಜೇಯನಾಗಿರುವೆನು. ॥೩೬॥

ಶಿವನಿಂದ ಅನುಗೃಹೀತವಾದ ಈ ಸುದರ್ಶನದ ದೆಸೆಯಿಂದಲೇ ದೇವಾಸುರ ಯುದ್ಧದಲ್ಲಿ ನನಗೆ ಜಯವು ಲಭಿಸುತ್ತಿರುವುದು. ॥೩೭॥

ಆದ್ದರಿಂದ ಈಗಲೂ ಸಹ ನಾನು ಆ ಉಗ್ರ, ಭೀಮ, ಕಪರ್ದಿನ್, ಮುಂತಾದ ಧನ್ಯನಾಮಕನಾದ ಮಹಾದೇವನಿಂದಲೇ, ಅವನ ಅನುಗ್ರಹದಿಂದಲೇ ನನ್ನ ಅಭಿಲಷಿತಾರ್ಥವನ್ನು ಪಡೆದುಕೊಳ್ಳಬೇಕೆಂದು ಈಗ ಇಲ್ಲಿ ತಪಸ್ಸನ್ನು ಮಾಡುತ್ತಿರುವೆನು. ಹೀಗೆಂದು ವಿಷ್ಣುವು ಹೇಳಲು ಬ್ರಹ್ಮನು ಪುನಃ ಪ್ರಶ್ನಿಸಿದನು. ॥೩೮॥

ವಿಷ್ಣುವೇ ! ನಿನಗೆ ಶಂಕರನು ಪೂರ್ವದಲ್ಲೇ ಬೇಕಾದ ವರಗಳನ್ನು ಕೊಟ್ಟ

ತತ್ರೈಕೈವಾದ್ಯ ಮೇ ಬ್ರಹ್ಮನ್ ಮುರೋ ನಾಮಾಸುರೋ ಬಲೀ ।
ದೃಷ್ಟ್ವಾ ವಿವಸ್ತ್ರಾಂ ಮತ್ಪತ್ನೀಂ ರಮಾಂ ಸರ್ವಾಂಗಸುಂದರೀಂ ॥೪೦॥

ಕ್ರೀಡಂತೀಂ ಸಖಿಭಿಸ್ಸಾರ್ಧಮಸ್ಮಿನ್ ಸರಸಿ ಪಾವನೇ ।
ಕಮಲಾನ್ಯುಪಚಿನ್ವಂತೀಂ ಹರಿದ್ವಾರೇಶ್ವರಾರ್ಚನೇ ॥೪೧॥

ಚಕಮೇಽಥಾಸುರಃ ಕಾಮಾತ್ ಜ್ಞಾತಸ್ತಸ್ಯಾಶಯೋ ಮಯಾ ।
ತದೈವ ಚಕ್ರೇಣೈತಸ್ಯ ಕಾರ್ಯಂ ಚ ವಿಧೇ ತದಾ ॥೪೨॥

ತದಾ ಸರ್ವೇ ಮುನಿಗಣಾ ಮಾಮವೋಚುಃ ಪ್ರಹರ್ಷಿತಾಃ ॥೪೩॥

ಸಾಧು ಸಾಧು ಹರೇ ತೇಽದ್ಯ ಕೃತಂ ಕರ್ಮ ಸುದುಷ್ಕರಂ ।
ತಪಸ್ವಿಜನರಕ್ಷಾಯೈ ತಪೋವಿಘ್ನಕರಸ್ಸದಾ ॥೪೪॥

---

ರುವನು. ಅಲ್ಲದೇ ಆಧ್ಯಾತ್ಮಿಕತತ್ವವನ್ನೂ ಸಹ ಉಪದೇಶಿಸಿರುವನು. ಆದರ ಮೇಲೆ ಈಗ ನಿನಗೆ ಮತ್ತೇನು ಅಪೇಕ್ಷಿತವಾಗಿರುವುದು? ॥೩೯॥

ಬ್ರಹ್ಮನೇ! ಹಿಂದೆ ಮುರನೆಂಬ ಮಹಾಗರ್ವಿಷ್ಠನಾದ ಅಸುರನಿದ್ದನು. ಅವನು ಆಕಸ್ಮಾತ್ ನನ್ನ ಪತ್ನಿಯಾದ ಲಕ್ಷ್ಮಿಯನ್ನು ಮೇಲುಹೊದಿಕೆಯನ್ನು ಸರಿಯಾಗಿ ಹೊದ್ದುಕೊಳ್ಳದಿದ್ದ ಸಮಯದಲ್ಲಿ ನೋಡಿಬಿಟ್ಟನು. ಮತ್ತು ಲಕ್ಷ್ಮಿಯು ಸರೋವರ ದಲ್ಲಿ ತನ್ನ ಸಖಿಯರೊಡನೆ ಕ್ರೀಡಿಸುತ್ತಿರುವಾಗ ಸಹ ಹೊಂಚುಹಾಕುತ್ತಾ ಆ ದುಷ್ಟನು ಆಕೆಯನ್ನು ನೋಡಿ ಪರಮಸುಂದರಿ ಎಂದು ಅರಿತುಕೊಂಡು ದುರ್ಭಾವನೆ ಹೊಂದಿದನು. ॥೪೦॥

ಒಂದು ದಿವಸ ಇಂದಿರೆಯು ಹರಿದ್ವಾರೇಶ್ವರಾರ್ಚನೆಗಾಗಿ ಸರೋವರದಲ್ಲಿ ಕಮಲಗಳನ್ನು ಕೊಯ್ಯುತ್ತಿರುವಾಗ ಆ ಭ್ರಷ್ಟನು ಬಂದು ಅಸಭ್ಯವಾಗಿ ವರ್ತಿಸಿ ದನು. ಈ ವಿಚಾರವು ನನಗೆ ತಿಳಿದೊಡನೆಯೇ, ॥೪೧॥

ನಾನು ಹೋಗಿ ಚಕ್ರದಿಂದ ಅವನನ್ನು ಕತ್ತರಿಸಿದೆನು. ಮುರನನ್ನು ಸಂಹರಿಸಿದ ವಾರ್ತೆಯನ್ನು ಕೇಳಿದೊಡನೆಯೇ ಅನೇಕ ಮುನಿಗಳು ನನ್ನ ಬಳಿಗೆ ಬಂದು ಸಂತೋಷದಿಂದ ನನ್ನನ್ನು ಈರೀತಿ ಅಭಿನಂದಿಸಿದರು. ॥೪೨-೪೩॥

ಎಲೈ ವಿಷ್ಣುವೇ! ಭಲೇ ಭಲೇ. ಒಳ್ಳೇ ಕೆಲಸವನ್ನು ಮಾಡಿದೆ. ನೀನು ಈಗ ಅತ್ಯಂತ ಸಾಹಸವಾದ ಕಾರ್ಯವನ್ನು ಮಾಡಿರುವೆ. ಆ ಮುರಾಸುರನು

ಯಜ್ಞಧ್ವಂಸಸ್ಸದಾ ಪಾಪೀ ಸುರಾಣಾಮಪಿ ಕಂಟಕಃ ।
ಕಿಂ ಚಾಯಂ ದೇವದೇವೇಶಾತ್ಪೂರ್ವಂ ಲಬ್ಧವರೋಽಸುರಃ ॥೪೫॥

ಭಕ್ತಶ್ಚ ದೇವದೇವಸ್ಯ ತಸ್ಮಾಚ್ಛಾಪೈರ್ನ ಯೋಜಿತಃ ।
ಭಕ್ತಸ್ಯ ಹನನೇ ಪಾಪಮಮಿತಂ ಖಲು ವೈ ಹರೇ ॥೪೬॥

ಅತ್ರ ತತ್ಪಾಪಶಾಂತ್ಯರ್ಥಂ ಹರಿದ್ವಾರೇಶಮೀಶ್ವರಂ ।
ತಪಸಾ ತೋಷಯಸ್ವಾದ್ಯ ಪೂಜಯಾ ಚ ಸದಾ ಹರಂ ॥೪೭॥

ಸರ್ವತ್ರ ನಿಷ್ಕೃತಿರ್ದೃಷ್ಟಾ ಶೈವದ್ರೋಹೇ ನ ನಿಷ್ಕೃತಿಃ ।
ತಸ್ಮಾಚ್ಛಿವೈಕಶರಣಶ್ಶಿವಶಪ್ತೋ ಭವಿಷ್ಯಸಿ ॥೪೮॥

---

ಮಹಾ ದುಷ್ಟನಾಗಿದ್ದನು. ಯಜ್ಞಾದಿ ಕರ್ಮಗಳನ್ನು ನಾಶಮಾಡುತ್ತಿದ್ದನಲ್ಲದೇ ಋಷಿಜನರನ್ನು ಬಹಳವಾಗಿ ಪೀಡಿಸುತ್ತಿದ್ದನು. ಆತನು ದೇವತೆಗಳನ್ನೂ ಸಹ ಲಕ್ಷಿಸದೇ ಹಿಂಸಿಸುತ್ತಿದ್ದನು. ಈಗ ನೀನು ಆ ದುಷ್ಟನನ್ನು ಸಂಹರಿಸಿ ನಮ್ಮ ತಪಸ್ಸಿನ ವಿಘ್ನವನ್ನು ಪರಿಹರಿಸಿದೆ. ಮತ್ತು ತಪಸ್ವಿಜನರನ್ನೂ ಸಹ ಕಾಪಾಡಿರುವೆ. ॥೪೪॥

ಈ ಗರ್ವಿಷ್ಟನಾದ ಅಸುರನು ಹಿಂದೆ ಪರಮೇಶ್ವರನಿಂದ ವರವನ್ನು ಪಡೆದು ಕೊಂಡಿದ್ದನು. ಮತ್ತು ಸ್ವಯಂಶಿವಭಕ್ತನೂ ಆಗಿದ್ದನು. ಆದ್ದರಿಂದ ಅವನ ಹಿಂಸೆ ಯನ್ನು ಸಹಿಸಲಶಕ್ಯವಿದ್ದರೂ ಅವನಿಗೆ ನಾವು ಶಾಪವನ್ನು ಕೊಡಲಾಗಲಿಲ್ಲ. ॥೪೫॥

ಈಗ ನೀನು ಧೈರ್ಯಮಾಡಿ ಆ ದುಷ್ಟನನ್ನು ಸಂಹರಿಸಿರುವೆ. ಇದರಿಂದ ನೀನು ಈಗ ಅಭಿನಂದನೀಯನಾಗಿದ್ದೀಯೆ. ಆದರೆ ಆತನು ಶಿವಭಕ್ತನಾಗಿದ್ದನಾದ ಪ್ರಯುಕ್ತ ಪಾಪದೋಷವೂ ನಿನಗೆ ಸಂಭವಿಸಿರಬಹುದು. ಶಿವಭಕ್ತವಧೆಯು ಮಹಾ ಪಾಪಕರವೆಂಬುದನ್ನು ನೀನೂ ಅರಿತಿರುವೆಯಷ್ಟೆ. ಆದ್ದರಿಂದ ಆ ಪಾಪನಿವೃತ್ತಿಗಾಗಿ ಈ ಪುಣ್ಯತೀರ್ಥವಾದ ಹರಿದ್ವಾರದಲ್ಲಿ ತಪಸ್ಸನ್ನು ಮಾಡು. ಹರಿದ್ವಾರೇಶ್ವರನನ್ನು ಪೂಜಿಸಿ ಆರಾಧಿಸು. ನೀನು ಕೂಡಲೇ ಶಿವಾನುಗ್ರಹವನ್ನು ಸಂಪಾದಿಸುವೆ. ॥೪೭॥

ಸಮಸ್ತ ಅಪರಾಧಗಳಿಗೂ ಪ್ರಾಯಶ್ಚಿತ್ತ ಉಂಟು. ಆದರೆ ಶೈವದ್ರೋಹಕ್ಕೆ ಪ್ರಾಯಶ್ಚಿತ್ತವಿರುವುದಿಲ್ಲ. ಶಿವಭಕ್ತರಿಗೆ ದ್ರೋಹಮಾಡಿದರೆ ಶಿವಕೋಪಕ್ಕೆ ಪಾತ್ರ ನಾಗಬೇಕಾಗುವುದು. ಆದ್ದರಿಂದ ಈ ಪಾಪವನ್ನು ಕಳೆದುಕೊಳ್ಳಲು ಯಾವ ಬೇರೆ ಉಪಾಯವೂ ಇಲ್ಲ. ನೀನು ಕೂಡಲೇ ಶೈವದೀಕ್ಷಿತನಾಗಿ ಶಿವನನ್ನೇ ಶರಣು ಹೊಂದು. ಇದರಿಂದಲೇ ನಿನಗೆ ಶ್ರೇಯಸ್ಸು ಲಭಿಸುವುದು. ॥೪೮॥

ಇತ್ಯುಕ್ತೋ ಮುನಿಭಿರ್ಬ್ರಹ್ಮನ್ ಭಕ್ತಸ್ಯ ಹನನೇನ ಹಿ ।
ಪ್ರಾಪ್ತಃ ಪಾಪಸಮೂಹೋ ಮೇ ತಸ್ಮಾದ್ಯಕ್ಷೇ ಮಹೇಶ್ವರಂ ॥೪೯॥

ಸ ಪಾಪೇಷ್ವಪಿ ಭಕ್ತೇಷು ಕಿಂ ಪುನಃ ಪುಣ್ಯಕರ್ಮಸು ।
ಇತ್ಯುಕ್ತ್ವಾ ದೇವದೇವೇಶಂ ಹರಿದ್ವಾರೇಶಮೀಶ್ವರಂ ॥೫೦॥

ಪ್ರಣಮ್ಯ ಪರಯಾ ಭಕ್ತ್ಯಾ ತುಷ್ಟಾವ ಹರಿರವ್ಯಯಂ ॥೫೧॥

॥ ವಿಷ್ಣುರುವಾಚ ॥

ತರಂಗವಿಲಸಜ್ಜಟಂ ವೃಷತುರಂಗಖೇಲದ್ಗತಿಂ
ಭುಜಂಗಕೃತಕಂಕಣಂ ಹರಿಶರಾಂಕಭಾರೋದ್ವಹಂ ।
ಪತಂಗಸಮಯನಂ ಸದಾ ಮುಹುರನಂಗದಾಹೇ ರತಂ
ನಿಷಂಗಪಯಸಾಂ ನಿಧಿಂ ಕ್ಷಿತಿರಥಾಂಗಮೀಶಂ ಭಜೇ ॥೫೨॥

---

ಎಲೈ ಬ್ರಹ್ಮನೇ, ಹೀಗೆಂದು ಆ ಮುನಿಗಳು ಹೇಳಲು ನಾನೂ ಸಹ ಇದೇ ಉಪಾಯವೇ ಗತಿ ಎಂದು ನಿರ್ಣಯಮಾಡಿಕೊಂಡೆನು. ಈಗ ಆದೇ ಆ ಶಿವಭಕ್ತನ ವಧೆಯಿಂದ ಉಂಟಾಗಿರುವ ಪಾಪವನ್ನು ತೊಡೆದುಕೊಳ್ಳಲು ಇಲ್ಲಿ ಮಹೇಶ್ವರನನ್ನು ಆರಾಧಿಸುತ್ತಿರುವೆನು. ॥೪೯॥

ಆ ದಯಾಮಯನಾದ ಪರಮೇಶ್ವರನು ತನ್ನ ಭಕ್ತರು ಪಾಪಿಗಳಾಗಿದ್ದರೂ ನೀಚಕರ್ಮಿಗಳಾಗಿದ್ದರೂ ಸಹ ಅವರನ್ನು ಉದ್ಧರಿಸುವನು. ಅಂದಮೇಲೆ ಶಿವಪೂಜಾದಿ ಪುಣ್ಯಕರ್ಮಗಳನ್ನು ಮಾಡುವ ಭಕ್ತರಲ್ಲಿ ಉದಾಸೀನ ಮಾಡುವನೇ ? ಎಂದೂ ಇಲ್ಲ. ಆದ್ದರಿಂದ ನನ್ನನ್ನೂ ಒಂದು ದಿವಸ ಅನುಗ್ರಹಿಸುವನು. ಹೀಗೆಂದು ಹೇಳಿ ವಿಷ್ಣುವು ಹರಿದ್ವಾರೇಶ್ವರನನ್ನು ನಮಸ್ಕರಿಸಿ ಭಕ್ತಿಪುರಸ್ಸರವಾಗಿ ಈರೀತಿ ಸ್ತುತಿಸಲಾರಂಭಿಸಿದನು. ॥೫೦-೫೧॥

ಜಟಾಜೂಟದಲ್ಲಿ ಗಂಗಾಲಹರಿಯನ್ನು ಧರಿಸಿಕೊಂಡಿರುವ ಪರಮೇಶ್ವರನಿಗೆ ನಾನು ನಮಿಸುವೆನು. ಆ ಶಂಕರನು ನಾಗಾಭರಣನೂ ವೃಷಭವಾಹನನೂ ಸೂರ್ಯಾಕ್ಷನೂ ಮತ್ತು ಮನ್ಮಥಧ್ವಂಸಿಯೂ ಆಗಿರುತ್ತಾನೆ. ಆ ಮಹಾನುಭಾವ ನಿಗೆ ಹರಿಯು ಅಸ್ತ್ರವಾಗಿದ್ದಾನೆ. ಸಮುದ್ರವು ಬತ್ತಳಿಕೆಯಾಗಿರುತ್ತದೆ. ಅಖಂಡ ಭೂಮಂಡಲವೇ ರಥವಾಗಿರುತ್ತದೆ. ಇಂಥ ದೇವೇಶನನ್ನು ಸದಾ ಭಜಿಸುವೆನು.॥೫೨॥

ಅಸಂಗಿಜನಸಂಗತಂ ಮುನಿಜನಾರ್ಚಲಿಂಗಸ್ಥಿತಂ
ದೃಶಾ ಕರುಣಯಾ ತತಂ ಗಿರಿಸುತಾರ್ಧಭಾಗಸ್ಥಿತಂ ।
ವಿಧೀಂದ್ರಸುರಸಂಸ್ತುತಂ ಮುಹುರನನ್ಯಭಾವಂ ಗತಂ
ಪ್ರಸೀದತು ಭವಾನ್ ಹಿ ಮಾಂ ಪರಮುಪಾಸತಾಪೈರ್ಹತಂ ॥೫೩॥

ಶಂಭೋ ವಿಶ್ವೇಶ ಭರ್ಗ ತ್ರಿನಯನ ಭಗವನ್ ಪಾಹಿ ಮಾಮೀಶ ದೃಷ್ಟ್ವಾ
ತುಷ್ಟ್ವಾ ದುಷ್ಟೋಽಹಮೀಶಸ್ಥಿತಿಲಯಜನನಾಪಾರಸಂಸಾರಮಗ್ನಃ ।
ಮತ್ಪಾಪಾನಿ ವಿನಾಶಯಾಶು ಸುತರಾಂ ಶುದ್ಧೇ ಪದೇ ದೇಹಿ ಮೇ
ಸ್ನಾತುಂ ವಾರಿ ಮಹಾಘಹಾರಿ ಭಗವನ್ನಸ್ಮಿನ್ ಪರೇ ಭೂಧರೇ ॥೫೪॥

॥ ಸೂತ ಉವಾಚ ॥

ಇತ್ಥಂ ಹರಿಸ್ತದಾ ಸ್ತುತ್ವಾ ಬ್ರಹ್ಮಾದಿವಿಬುಧೈಸ್ಸಹ ।
ತಸ್ಮೈ ದದಾತಿ ತತ್ಸರ್ವಂ ಪ್ರತ್ಯಕ್ಷೀಕೃತವಿಗ್ರಹಃ ॥೫೫॥

---

ಪರಮವಿರಾಗಿಗಳಾದ ಸಂನ್ಯಾಸಿಗಳಿಗೆ ಮಾತ್ರ ಆ ಶಂಕರನ ಸಹವಾಸವು ದೊರೆಯುವುದು. ಆ ಗಿರಿಜಾರ್ಧದೇಹಿಯಾದ ಮಹಾದೇವನು ಮುನಿಜನ ಪೂಜಿತವಾದ ಶಿವಲಿಂಗದಲ್ಲಿ ಸದಾ ಆವಾಸಮಾಡುವನು. ಕರುಣಾಕಟಾಕ್ಷಪರಿ ಪೂರ್ಣನಾದ ಆ ಶಿವನನ್ನೇ ಬ್ರಹ್ಮನೇ ಮೊದಲಾದ ದೇವತೆಗಳು ಸದಾ ಸ್ತುತಿಸುವರು. ಓ ಅನನ್ಯಭಾವನಾಗಮ್ಯನಾದ ಪರಮೇಶ್ವರನೇ, ಪ್ರಸನ್ನನಾಗು. ಅನಂತ ಪಾಪಾಹತ ನಾದ ನನ್ನನ್ನು ಕಾಪಾಡಿ ಉದ್ಧರಿಸು. ॥೫೩॥

ಓ ಭಗವನ್ ಶಂಕರನೇ, ನೀನು ವಿಶ್ವೇಶ, ಭರ್ಗ, ತ್ರಿನಯನ, ಈಶ್ವರ ಎಂದು ಮುಂತಾದ ಅನ್ವರ್ಥವಾದ ಪುಣ್ಯನಾಮಧೇಯಗಳಿಂದ ಒಪ್ಪುತ್ತಿರುವೆ. ಈಗ ನಾನಾದರೋ ಮಹಾಪಾಪಿಯೂ ದೋಷಿಯೂ ಆಗಿದ್ದೇನೆ. ಜನನಮರಣಾ ತ್ಮಕವಾದ ಅಗಾಧ ಸಂಸಾರಸಾಗರದಲ್ಲಿ ಪತಿತನಾಗಿ ಕ್ಲೇಶಯಾತನೆಗಳನ್ನು ಅನುಭವಿ ಸುತ್ತಿದ್ದೇನೆ. ಆದುದರಿಂದ ದಯಾಮಯನಾದ ನೀನು ನನ್ನ ಪಾಪಗಳೆಲ್ಲವನ್ನೂ ಪರಿಹರಿಸು. ನನಗೆ ಪುಣ್ಯಸ್ಥಾನವು ದೊರೆಯುವಂತೆ ಅನುಗ್ರಹಿಸು. ಇದೇ ಪವಿತ್ರವಾದ ಪುಣ್ಯಕ್ಷೇತ್ರದಲ್ಲಿ ವಾಸಮಾಡಿಕೊಂಡು ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಕೊಂಡಿರುವಂತೆ ಅನುಗ್ರಹಿಸು. ॥೫೪॥

ಹೀಗೆಂದು ಬ್ರಹ್ಮಾದಿ ದೇವತೆಗಳಿಂದೊಡಗೂಡಿದ ವಿಷ್ಣುವು ಸ್ತುತಿಸಲು

|| ಈಶ್ವರ ಉವಾಚ ||

ಕಿಂ ತ್ವತ್ಪ್ರಿಯಕರಂ ವಿಷ್ಣೋ ಯನ್ಮತ್ತಃ ಪ್ರಾಪ್ತುಮಿಚ್ಛಸಿ ।
ಬ್ರಹ್ಮಾದ್ಯೈಸ್ತ್ವದಸ್ವಾದ್ಯ ಪ್ರಸನ್ನೋಽಹಂ ತವಾನಘ ||೫೬||

ವಿಷ್ಣುಃ ಪ್ರಣಮ್ಯ ದೇವೇಶಂ ವರಮೇನಮಯಾಚತ ||೫೭||

|| ವಿಷ್ಣುರುವಾಚ ||

ಪುರಾ ತ್ರಿಪಥಗಾ ಶಂಭೋ ಪಾತಾಲಾಂತರಚಾರಿಣೀ ।
ವಿಯತ್ಪಥಗತಾ ತ್ವೇಕಾ ಚೈಕಾ ಭೂಲೋಕವಾಹಿನೀ ||೫೮||

ಬ್ರಹ್ಮಾಂಡೋರುಕಟಾಹಾನ್ತೇ ಪೂರ್ವಂ ವಿಕ್ರಮತಾ ಮಯಾ ।
ಮತ್ಪಾದಘಟನಾಜ್ಜಾತಾ ಸಾಪಿ ಭೂಮಿತಲಂ ಗತಾ ||೫೯||

ಪೀತಾ ತು ಜಹ್ನುನಾ ಶಂಭೋ ನಿಲೀನಾ ಸಾ ನೃಪಂ ಗತಾ ।
ಮತ್ಪಾದತೋಽಯಂ ಮತ್ಪಾಪಂ ಕಥಂ ನಾಶಕರಂ ಭವೇತ್ ||೬೦||

---

ಪರಮೇಶ್ವರನು ಸುಪ್ರೀತನಾಗಿ ಅವನಿಗೆ ಪ್ರತ್ಯಕ್ಷನಾದನು ; ಮತ್ತು ಅವನ ಇಷ್ಟಾರ್ಥಗಳನ್ನು ಅನುಗ್ರಹಿಸುವುದಕ್ಕಾಗಿ ಈರೀತಿ ನುಡಿದನು. ||೫೫||

ಎಲೈ ವಿಷ್ಣುವೇ, ನೀನು ಯಾವ ವರವನ್ನು ಅಪೇಕ್ಷಿಸುವೆ? ಕೇಳು. ನಾನು ಅದನ್ನು ಈಗಲೇ ಕೊಡುವೆನು. ನಿನ್ನ ಭಕ್ತಿಸೇವೆಗಳಿಂದ ನಾನು ಸುಪ್ರೀತನಾಗಿದ್ದೇನೆ. ನೀನು ಕೇಳಿದ ವರವನ್ನು ನಿನಗೆ ಕೊಡುವೆನು. ಹೀಗೆಂದು ಶಂಕರನು ಹೇಳಲು ಆಗ ವಿಷ್ಣುವು ಪರಮಾನಂದದಿಂದ ಶಿವನಿಗೆ ನಮುಸ್ಕರಿಸಿ ಈರೀತಿ ವರವನ್ನು ಬೇಡಿದನು. ||೫೬-೫೭||

" ಓ ಭಗವನ್ ಶಂಭೋ, ಪೂರ್ವಕಾಲದಿಂದಲೂ ಪಾವನೆಯಾದ ಗಂಗೆಯು ಮೂರು ರೂಪಗಳನ್ನು ಧರಿಸಿಕೊಂಡು ಪಾತಾಳಮಾರ್ಗದಲ್ಲಿಯೂ ಆಕಾಶಮಾರ್ಗದಲ್ಲಿಯೂ ಮತ್ತು ಭೂಲೋಕದಲ್ಲಿಯೂ ಹರಿಯುತ್ತಿರುವಳಷ್ಟೆ. ||೫೮||

ಆದರೆ ಈಗ ನನ್ನ ಪಾಪವನ್ನು ಕಳೆದುಕೊಳ್ಳಲು ಯಾವ ಗಂಗೆಯೂ ಇಲ್ಲದಂತಾಗಿರುವುದು. ಏಕೆಂದರೆ ಭಗೀರಥನನ್ನು ಅನುಸರಿಸಿದ ಪಾತಾಳಗಂಗೆಯನ್ನು ಜಹ್ನುಮುನಿಯು ಪಾನಮಾಡಿ ಉಚ್ಛಿಷ್ಟವನ್ನಾಗಿ ಮಾಡಿರುವನು. ಆಕಾಶಗಂಗೆಯಾದರೋ ನನ್ನ ಪಾದೋದಕವೇ ಆಗಿರುತ್ತದೆ. ಹಿಂದೆ ನಾನು ವಾಮನಾವತಾರದಲ್ಲಿ

ವಿಯತ್ಪಥಗತಾ ತ್ವೇಕಾ ಭಗೀರಥವರಾತ್ತ್ವಯಾ ।
ಗಂಗಾಗರ್ವೋಪಶಾಂತ್ಯರ್ಥಂ ತ್ವಯಾ ಮೂರ್ಧ್ನಿ ವಿಧಾರಿತಾ ॥೬೧॥

ತಾಮದ್ಯೇಶಾನ ದೇವೇಶ ಪ್ರಾರ್ಥಿತೋಽಸಿ ಮಮಾಘಹೃತ್ ।
ದೇಹಿ ಶಂಭೋ ಮಹಾದೇವ ಇತ್ಥಂ ಪ್ರಾರ್ಥಿತವಾನ್ ಹರಿಃ ॥೬೨॥

ಹರಿದ್ವಾರಮಹಾಲಿಂಗಪಾದಪೀಠಾದ್ವಿನಿರ್ಗತಾ ।
ತದೋತ್ಸೃಷ್ಟಾ ಮಯಾ ಗಂಗಾ ದಿವ್ಯಾತ್ರಿಪಥಗಾ ಶಿವೇ ॥೬೩॥

ತುಂಗೈಸ್ತರಂಗೈರ್ವಿತತಾ ಫುಲ್ಲಪದ್ಮಸುಶೋಭಿತಾ ।
ಕಲ್ಹಾರಮಾಲಾಕಲಿತಾ ಅವಿಮುಕ್ತಪಥಂ ಗತಾ ॥೬೪॥

---

ಮೇಲ್ಗಡೆಗೆ ಬ್ರಹ್ಮಾಂಡದ ಪರಮಾವಧಿಯವರೆಗೂ ಕಾಲನ್ನು ಚಾಚಿದ್ದರಿಂದ ಆ ಗಂಗೆಯಲ್ಲಿ ನನ್ನ ಪಾದಸ್ಪರ್ಶವು ಆಗಿಹೋಗಿರುವುದು. ಅಂದಮೇಲೆ ಆ ಗಂಗೆಯ ಜಲದಿಂದ ನನ್ನ ಪಾಪಶೋಧನೆಯು ಹೇಗಾದೀತು? ॥೫೯-೬೦॥

ನೀನು ಯದ್ಯಪಿ ಭಗೀರಥನಿಗೆ ಕೊಟ್ಟ ವರದಂತೆ ಆಕಾಶಗಂಗೆಯ ಒಂದಂಶವನ್ನು ಭೂಲೋಕಕ್ಕೆ ಅನುಗ್ರಹಿಸಲು ಉದಾರಸಂಕಲ್ಪವನ್ನು ಮಾಡಿದ್ದೆ. ಆದರೆ ಆ ಗಂಗೆಯು ಗರ್ವವನ್ನು ಖಂಡಿಸಲು ಕೊನೆಗೆ ಅದನ್ನೂ ನೀನು ನಿನ್ನ ಶಿರಸ್ಸಿನಲ್ಲಿಯೇ ಅಡಕಮಾಡಿಕೊಂಡು ಧರಿಸಿರುವೆ. ॥೬೧॥

ಎಲೈ ಗಂಗಾಧರನೇ, ನಾನು ಈಗ ಅದೇ ಗಂಗೆಯನ್ನು ಪಡೆಯಲು ಅಪೇಕ್ಷಿಸುತ್ತೇನೆ. ನೀನು ಶಿರಸ್ಸಿನಲ್ಲಿ ಧರಿಸಿಕೊಂಡಿರುವ ಗಂಗೆಯೇ ಈಗ ನನ್ನ ಪಾಪವನ್ನು ಶೋಧಿಸಲು ಸಮರ್ಥಳಾಗಿರುವಳು. ಆ ಗಂಗೆಯನ್ನೇ ನನಗೆ ಅನುಗ್ರಹಿಸು.'' ಹೀಗೆಂದು ವಿಷ್ಣುವು ಕೇಳಿಕೊಳ್ಳಲು, ॥೬೨॥

ಎಲೌ ಗಿರಿಜೆ, ಆಗ ನಾನು ಆ ಹರಿದ್ವಾರೇಶ್ವರಲಿಂಗದ ಪಾಣಿಪೀಠದ ಮೂಲಕ ದೇವಗಂಗೆಯ ಪ್ರವಾಹವನ್ನು ಹರಿಸಿದೆನು. ॥೬೩॥

ಈ ರೀತಿ ನನ್ನ ಪಾಣಿಪೀಠತಲದಿಂದ ಉದ್ಗಮಿಸಿದ ಆ ಗಂಗಾಪ್ರವಾಹವು ಉನ್ನತೋನ್ನತ ತರಂಗಗಳಿಂದ ಹಿಮವತ್ಪರ್ವತಪ್ರದೇಶದಲ್ಲಿ ರಮ್ಯವಾಗಿ ಪ್ರವಹಿಸತೊಡಗಿತು. ಆ ಪ್ರವಾಹವು ವಿಕಸಿತವಾದ ಕಮಲಕನ್ನೈದಿಲೆಗಳಿಂದ ಕೂಡಿಕೊಂಡು ಪರಮ ರಮ್ಯತೆಯಿಂದೊಪ್ಪುತ್ತಿದ್ದಿತು. ॥೬೪॥

ಹಿಮವಚ್ಛಿಖರಾದ್ದೇವಿ ಮತ್ಪಾದತಲನಿರ್ಗತಾ ।
ತಸ್ಯಾಂ ವಿಷ್ಣುಸ್ತದಾ ಲಕ್ಷ್ಮ್ಯಾ ಬ್ರಹ್ಮಾದಿವಿಬುಧೈಸ್ಸಹ ॥೬೫॥

ಸ್ನಾತ್ವಾ ಸ್ವಶಾಪಶಾಂತ್ಯರ್ಥಮವಿಮುಕ್ತಂ ತದಾ ಗತಃ ।
ನಾನಾಲಿಂಗಕಲೋಪೇತಂ ಸ ವಿಶ್ವೇಶಂ ಪ್ರಣಮ್ಯ ಚ ॥೬೬॥

ಸ್ತುತ್ವಾ ಸ್ತೋತ್ರಪ್ರವರ್ಯೈರ್ವಿಷ್ಣುರ್ಬಿಲ್ವಪತ್ರೈಸ್ಸುರೈಸ್ಸಹ ।
ತುಷ್ಟಾವ ಚ ಮಹೇಶಾನಂ ಕೃಪಾರಾಶಿಂ ತದಾಂಬಿಕೇ ॥೬೭॥

॥ ವಿಷ್ಣುರುವಾಚ ॥

ಉತ್ಫುಲ್ಲಕಲ್ಹಾರವಿಲೋಲಹಾರಂ
ಮಂದಾರಮಲ್ಲೀಸುಮಪೂಜಿತಾಂಘ್ರಿಂ ।
ಹಲ್ಲೀಸಲಾಸ್ಯಪ್ರಿಯಯಾ ಸಮೇತಂ
ಮಲ್ಲಿಂಗಗಂ ಬಿಲ್ವದಲೋತ್ತಮಾಂಗಂ ॥೬೮॥

---

ಆ ಗಂಗೆಯಲ್ಲಿ ವಿಷ್ಣುವು ತನ್ನ ಪತ್ನಿಯಾದ ಲಕ್ಷ್ಮಿಯೊಡನೆ ಮಿಂದು ತನ್ನಲ್ಲಿದ್ದ ಶಾಪದೋಷವನ್ನು ಕಳೆದುಕೊಂಡನು. ಆಗ ಬ್ರಹ್ಮಾದಿದೇವತೆಗಳೂ ಸಹ ಆ ನದಿಯಲ್ಲಿ ಸ್ನಾನಮಾಡಿ ಪೂತರಾದರು. ಬಳಿಕ ವಿಷ್ಣುವು ಅವಿಮುಕ್ತಕ್ಷೇತ್ರಕ್ಕೆ ತೆರಳಿದನು. ಗಂಗಾನದಿಯೂ ಸಹ ಆ ಅವಿಮುಕ್ತಕ್ಷೇತ್ರಮಾರ್ಗವಾಗಿಯೇ ಹರಿಯುತ್ತಿದ್ದಳು. ॥೬೫॥

ವಿಷ್ಣುವು ಅವಿಮುಕ್ತಕ್ಷೇತ್ರವನ್ನು (ಕಾಶಿ) ಸೇರಿ ಅಲ್ಲಿದ್ದ ಕೋಟಿಶಿವಲಿಂಗ ಗಳನ್ನು ಬಿಲ್ವಾದಿಗಳಿಂದ ಪೂಜಿಸಿದನು. ಆತನ ಜೊತೆಯಲ್ಲಿ ದೇವತೆಗಳೂ ಸಹ ದಯಾನಿಧಿಯಾದ ಪರಮೇಶ್ವರನನ್ನು ಆರಾಧಿಸಿದರು. ಆಗ ವಿಷ್ಣುವು ಭಕ್ತಿಯಿಂದ ಪೂಜಿಸಿದ ಬಳಿಕ ಈ ರೀತಿ ಸ್ತುತಿಸಿದನು. ॥೬೭॥

"ಹಲ್ಲೀಸವೆಂಬ ನೃತ್ಯದಲ್ಲಿ ಪ್ರಿಯಳಾದ ಗಿರಿಜೆಯ ಪತಿಯನ್ನು ನಾನು ವಂದಿಸುವೆನು. ನಾನು ಸ್ಥಾಪಿಸಿರುವ ಶಿವಲಿಂಗದಲ್ಲಿ ಅಧ್ಯಾಸೀನನಾಗಿರುವ ಮಹಾದೇವನನ್ನು ಭಜಿಸುವೆನು. ವಿಕಸಿತ ಪದ್ಮಮಾಲೆಯನ್ನೂ, ಸಂಪೂಜಿತವಾದ ಬಿಲ್ವದಳ ಮತ್ತು ಮಲ್ಲಿಕಾಮಾಲೆಯನ್ನೂ ಧರಿಸಿಕೊಂಡಿರುವ ಶಂಕರನನ್ನು ಸರ್ವದಾ

ನಿಶಾರಾಜಕಲಾಮೌಳಿಂ ದೇವರಾಜಸಮರ್ಚಿತಂ ।
ರಾಜರಾಜಸಖಂ ವಂದೇ ಫಣಿರಾಜಾಂಘ್ರಿಕಂಕಣಂ ॥೭೯॥

ಇತ್ಥಂ ಸ ವಿಷ್ಣುಃ ಸ್ತುತಿಭಿಸ್ತಥಾ ಮಾಂ
ಸ್ತುತ್ವಾ ತಥಾ ಬ್ರಹ್ಮಮುಖಾಮರೇಂದ್ರೈಃ ।
ವಿನಿರ್ಗತೋ ಮತ್ಪದಲೋಲಲೀಲಾ
ಮದ್ಗಾಂಗಸಂಗಾಬ್ಧಿತರಂಗರಂಗಂ ॥೭೦॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಹರಿದ್ವಾರೇಶ ಮಹಿಮಾಯಾಂ ವಿಷ್ಣುತಪೋವರ್ಣನ ಗಂಗಾವಿನಿರ್ಗಮನವಿಷ್ಣುಪ್ರಮುಖ ಸುರಸಂಘಸ್ನಾನವರ್ಣನಂ ನಾಮೈಕೋನತ್ರಿಂಶೋಽಧ್ಯಾಯಃ

---

ಆರಾಧಿಸುವೆನು. ದೇವೇಂದ್ರಸಂಪೂಜಿತನೂ ಕುಬೇರಮಿತ್ರನೂ ಆದ ಚಂದ್ರಶೇಖರ ನನ್ನು ಸ್ತುತಿಸುವೆನು. ಆ ನಾಗಾಭರಣನಾದ ಪರಶಿವನನ್ನೇ ನಾನು ಸದಾ ನಮಸ್ಕರಿಸುವೆನು.'' ॥೬೮-೭೯॥

ಪ್ರಿಯೆ ಗಿರಿಜೆಯೇ, ಈ ರೀತಿ ವಿಷ್ಣುವು ಅನೇಕ ಪ್ರಕಾರವಾಗಿ ನನ್ನನ್ನು ಸ್ತುತಿಸಿದನು. ಅಲ್ಲದೇ ನನ್ನ ಪಾದತಲದಿಂದ ಉದ್ಭವಿಸಿದ ಆ ಗಂಗೆಯನ್ನೂ ಸಹ ಪರಿಪರಿಯಾಗಿ ಶ್ಲಾಘಿಸುತ್ತಾ ದೇವತೆಗಳೊಡನೆ ಅನೇಕಾವರ್ತಿ ಆ ನದಿಯಲ್ಲಿ ಮಿಂದು ಪವಿತ್ರನೂ ಆನಂದಿತನೂ ಆಗಿ ಅನಂತರ ಅಲ್ಲಿಂದ ತನ್ನ ಸ್ಥಳಕ್ಕೆ ತೆರಳಿದನು. ॥೮೦॥

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗನಾಮಕವಾದ ಐದನೆಯ ಅಂಶದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಪಂಚಮಾಂಶೇ

## ತ್ರಿಂಶೋಽಧ್ಯಾಯಃ

### ಪ್ರಯಾಗಗಯಾಯೋಧ್ಯಾ ಮಹಿಮಾವರ್ಣನಂ

॥ ದೇವ್ಯುವಾಚ ॥

ಕಾನಿ ತೀರ್ಥಾನಿ ಪುಣ್ಯಾನಿ ಸಾ ಗಂಗಾಪ್ಲಾವಯಚ್ಛಿವ ।
ತನ್ಮೇ ವದ ಮಹಾದೇವ ನ ಹಿ ತೃಪ್ತಾಸ್ಮಿ ಶಂಕರ ॥೧॥

॥ ಸೂತ ಉವಾಚ ॥

ಸ ದೇವ್ಯಾ ವಚನಂ ಶ್ರುತ್ವಾ ಮಹಾದೇವೋ ಮಹೇಶ್ವರಃ ।
ಪ್ರಾಹ ಗಂಭೀರವಾಕ್ಯಾನಿ ತದಾಪರ್ಣಾಂ ಪ್ರಹರ್ಷಯನ್ ॥೨॥

---

## ಮೂವತ್ತನೆಯ ಅಧ್ಯಾಯ

ಪ್ರಿಯ ಶಂಕರನೇ, ಈ ಪುಣ್ಯಕಥೆಗಳನ್ನು ಕೇಳುತ್ತ ಕೇಳುತ್ತ ನನ್ನ ಆನಂದಕ್ಕೆ ಪಾರವೇ ಇರುವುದಿಲ್ಲ. ಆದುದರಿಂದ ಮತ್ತು ಕೇಳಿ ಆನಂದಿಸಬೇಕೆಂದು ಅಭಿಲಾಷೆ ಯುಂಟಾಗುತ್ತಿರುವುದು. ಮಹಾದೇವನೇ, ಆ ಗಂಗಾನದಿಯು ಯಾವ ತೀರ್ಥಗಳನ್ನು ಹಾದುಹೋದಳು. ಯಾವ ಯಾವ ತೀರ್ಥಗಳನ್ನು ಪವಿತ್ರವನ್ನಾಗಿಯೂ ಪುಣ್ಯ ತಮಗಳನ್ನಾಗಿಯೂ ಮಾಡಿದಳೆಂಬುದನ್ನು ನಮಗೆ ವಿವರಿಸಿ ಹೇಳು. ॥೧॥

ಈ ರೀತಿ ಗಿರಿಜೆಯು ಪ್ರಶ್ನಿಸಲು ಮಹಾದೇವನು ಗಿರಿಜೆಗೆ ಸಂತೋಷ ಪಡಿಸುತ್ತಾ ಮೃದುಗಂಭೀರವಾಗಿ ಈ ರೀತಿ ಹೇಳಿದನು. ॥೨॥

|| ಈಶ್ವರ ಉವಾಚ ||

ಮತ್ಪಾದಮೂಲತೋ ದೇವಿ ಯದಾ ಗಂಗಾ ವಿನಿರ್ಗತಾ ।
ಹರಿದ್ವಾರಾತ್ತದಾ ಪುಣ್ಯಾ ವಿಬುಧೈಶ್ಚೈವ ಸಂಯುತಾ ||೩||

ಕುರುಕ್ಷೇತ್ರಂ ಗತಾ ಗಂಗಾ ತಸ್ಮಾಚ್ಚಾಪಿ ವಿನಿರ್ಗತಾ ।
ಕುರುಕ್ಷೇತ್ರಂಗತಾ ಗಂಗಾ ಸ್ನಾನಾತ್ಪಾಪವಿನಾಶಿನೀ ||೪||

ಪ್ರತಿಪೇದೇ ಮಧುವನಂ ತತ್ರ ತೀರ್ಥೇ ಮನೋಹರೇ ।
ಮುನಿಭಿಸ್ಸಂಸ್ತುತಾ ಸ್ನಾತಾ ದೃಷ್ಟ್ವಾ ಪೀತಾಘಹಾರಿಣೀ ||೫||

ಪ್ರಯಾಗವನಮಾಸಾದ್ಯ ಯತ್ರ ಪೂರ್ವಂ ಪಿತಾಮಹಃ ।
ಅಯಜದ್ಧಯಮೇಧೇನ ಮಾಂ ಮೇಧಪತಿಮೀಶ್ವರಂ ||೬||

ತತ್ರಾಸೀತ್ಸರಿದುತ್ಕೃಷ್ಟಾ ಯತ್ರ ಪ್ರಾಚೀ ಸರಸ್ವತೀ ।
ತತ್ರಾವಭೃಥಮಾಸಾದ್ಯ ಬ್ರಹ್ಮಾ ಪ್ರಾಹ ಸರಸ್ವತೀಂ ||೭||

---

ಪ್ರಿಯೆ ಗಿರಿಜೆ, ನನ್ನ ಪಾದತಲದಿಂದ ಉದ್ಭವಿಸಿ ಆ ಗಂಗಾನದಿಯು ಹರಿದ್ವಾರದಿಂದ ಹೊರಟು ಕುರುಕ್ಷೇತ್ರದಲ್ಲಿ ಹರಿಯುವುದು. ಆ ಗಂಗಾನದಿಯಲ್ಲಿ ಸ್ನಾನಮಾಡುವುದರಿಂದ ಸಕಲ ಪಾಪಗಳೂ ನಾಶವಾಗುವುವು. ||೩-೪||

ಪುನಃ ಕುರುಕ್ಷೇತ್ರದಿಂದ ಹೊರಟ ಆ ಗಂಗೆಯು ಮನೋಹರವಾದ ಮಧುವನಕ್ಷೇತ್ರವನ್ನು ಬಳಸಿ ಹರಿಯುವುದು. ಅಲ್ಲಿ ಪ್ರವಹಿಸಿದ ಆ ನದಿಯ ದರ್ಶನ ದಿಂದಲೂ ಪಾನದಿಂದಲೂ ಪಾಪವನ್ನು ಪರಿಹರಿಸಿಕೊಂಡು ಎಲ್ಲಾ ಮುನಿಗಳೂ ಅಲ್ಲಿ ಆ ನದಿಯನ್ನು ಸ್ತುತಿಸುವರು. ||೫||

ಅಲ್ಲಿಂದ ಮುಂದಕ್ಕೆ ಗಂಗೆಯು ಪ್ರಯಾಗಕ್ಷೇತ್ರವನ್ನು ಬಳಸಿಕೊಂಡು ಅಲ್ಲಿನ ವನಪ್ರದೇಶಗಳಲ್ಲಿ ಪ್ರವಹಿಸಿದಳು. ಆ ಪ್ರಯಾಗದಲ್ಲಿ ಹಿಂದೆ ಬ್ರಹ್ಮನು ಯಜ್ಞಪತಿಯಾದ ನನ್ನ ಸಂಪ್ರೀತಿಗಾಗಿ ಅಶ್ವಮೇಧಯಾಗವನ್ನು ಮಾಡಿದ್ದನು. ||೬||

ಅದೇ ಪ್ರಯಾಗದಲ್ಲಿ ಪುರಾತನಕಾಲದಿಂದಲೂ ಸರಸ್ವತೀನದಿಯು ಹರಿಯು ತ್ತಿದ್ದಳು. ಯಜ್ಞವು ಮುಗಿದ ಬಳಿಕ ಬ್ರಹ್ಮನು ಆ ಸರಸ್ವತೀನದಿಯಲ್ಲಿ ಅವಭೃಥ ಸ್ನಾನವನ್ನು ಮಾಡಿ ಈರೀತಿ ಸರಸ್ವತಿನದಿಯನ್ನು ಕುರಿತು ಹೇಳಿದನು. ||೭||

॥ ಬ್ರಹ್ಮೋವಾಚ ॥

ಸರಸ್ವತಿ ಮಹಾಭಾಗೇ ಸರ್ವದಾ ಸರ್ವಪಾವನಿ ।
ಸರಸಃ ಪಾವನಾಜ್ಜಾತಾ ಪುಣ್ಯಾನ್ಮಾನಸನಾಮಕಾತ್ ॥೮॥

ಮೇರೌ ದೇವಾಸುರೈಃ ಪೂರ್ವಂ ಪ್ರಾರ್ಥಿತಾಸಿ ಮನೋರಮೇ ।
ಅಸ್ಮಿನ್ ದೇಶವರೇ ಪುಣ್ಯೇ ಸರಸಸ್ತ್ವಂ ವಿನಿರ್ಗತಾ ॥೯॥

ತಸ್ಮಾತ್ಸರಸ್ವತೀತ್ಯಾಖ್ಯಾಂ ಗಮಿಷ್ಯಸಿ ಮಹೀತಲೇ ।
ಏಕಾಂಶೇನ ವಹಾತ್ರೈವ ಏಕಾಂಶೇನ ವಸೇರ್ಮಯಿ ॥೧೦॥

ಇತ್ಥಂ ಸಾ ಬ್ರಹ್ಮಣೋ ವಾಕ್ಯಂ ಪ್ರಹಸ್ಯಾಹ ಸರಸ್ವತೀ ॥೧೧॥

॥ ಸರಸ್ವತ್ಯುವಾಚ ॥

ನಾಹಂ ವಸಾಮಿ ಭೂಲೋಕೇ ತ್ವನ್ಮಖಾತ್ಪಾವನಾಯ ಹಿ ।
ಸಮಾನೀತಾಹಮಮಲಾ ತ್ವಯಾ ಯಾಸ್ಯೇ ಪಿತಾಮಹ ॥೧೨॥

---

ಹೇ ಸರಸ್ವತಿ, ನೀನು ಪರಮಪವಿತ್ರಳು. ಪುಣ್ಯಾತ್ಮಳಾದ ನೀನು ಸದಾ ಪಾಪಿಷ್ಠರನ್ನೂ ಸಹ ಶುದ್ಧರನ್ನಾಗಿ ಮಾಡುವೆ. ನೀನು ಪರಮಪುಣ್ಯತಮವಾದ ಮಾನಸಸರೋವರದಿಂದ ಹುಟ್ಟಿರುವೆ. ಆದುದರಿಂದಲೇ ನೀನು ಮಹಾಭಾಗ್ಯವಂತಳಿರುವೆ. ॥೮॥

ಪೂರ್ವಕಾಲದಿಂದಲೂ ಸಹ ಸಕಲ ದೇವದಾನವರೂ ನಿನ್ನನ್ನು ಪ್ರಾರ್ಥಿಸುತ್ತಿರುವರು. ಅವರ ಪ್ರಾರ್ಥನೆಯನ್ನು ಮನ್ನಿಸಿ ನೀನು ಮಾನಸಸರೋವರದಿಂದ ಹುಟ್ಟಿ ಬಂದಿರುವೆ. ಆದ್ದರಿಂದಲೇ ನಿನಗೆ ಲೋಕದಲ್ಲಿ ಸರಸ್ವತಿ ಎಂಬ ಹೆಸರು ಬಂದಿತು. ಈಗ ನೀನು ಒಂದು ಅಂಶದಿಂದ ಈ ಪುಣ್ಯಕ್ಷೇತ್ರದಲ್ಲಿ ಪ್ರವಹಿಸು. ಮತ್ತೊಂದು ಅಂಶದಿಂದ ನನ್ನಲ್ಲಿ ವಾಸಮಾಡು. ॥೯-೧೦॥

ಈರೀತಿ ಬ್ರಹ್ಮನು ಶ್ಲಾಘಾಪೂರ್ವಕವಾಗಿ ಹೇಳಿದ ಮಾತನ್ನು ಕೇಳಿ ಸರಸ್ವತಿಯು ಗರ್ವದಿಂದ ಉಬ್ಬಿದಳು. ಮತ್ತು ಅಲ್ಲಗಳೆಯುತ್ತಾ ಈರೀತಿ ಹೇಳಿದಳು. ॥೧೧॥

ನಾನು ಈ ಭೂಲೋಕದಲ್ಲಿ ವಾಸಿಸಲು ಇಷ್ಟಪಡುವುದಿಲ್ಲ. ನಾನು ಕೇವಲ ನಿನ್ನ ಯಜ್ಞವನ್ನು ಪವಿತ್ರವನ್ನಾಗಿ ಮಾಡಲು ಬಂದಿರುವೆನು. ಆದುದರಿಂದ ಈಗ

ಬ್ರಹ್ಮಲೋಕಂ ಚ ಸಾವಿತ್ರ್ಯಾ ನಿವಸಾಮಿ ತ್ವಯಾ ಸಹ ।
ಸರಸ್ವತ್ಯಾಶ್ಚ ವಚನಾದ್ಬ್ರಹ್ಮಾ ಕ್ರೋಧಾಚ್ಛಶಾಪ ತಾಂ ॥೧೩॥

ಯಸ್ಮಾನ್ಮದ್ವಾಕ್ಯನಿರ್ಘಾತಃ ಕೃತೋ ದೇವಿ ತ್ವಯಾಧುನಾ ।
ಅದೃಶ್ಯಾ ಚಾಸಿ ಭೂಲೋಕೇ ಪಾತಾಲತಲವಾಹಿನೀ ॥೧೪॥

ಭವ ತ್ವಂ ಶಾಪಿತಾ ಮತ್ತಃ ಸ ಇತ್ಥಂ ಶಪ್ತವಾನ್ ಶಿವೇ ।
ಇತ್ಥಂ ಶಪ್ತಾ ತದಾ ಬ್ರಹ್ಮಾ ಪ್ರಯಾಗೇಽಭೂತ್ಸರಸ್ವತೀ ॥೧೫॥

ಯಮುನಾಪಿ ತಥೈವಾಗಾನ್ನೀಲನೀರತರಂಗಿಣೀ ।
ಗಂಗಾಯಮುನಯೋರ್ಮಧ್ಯೇ ಅಂತರ್ಬದ್ಧಾ ಭವತ್ತದಾ ॥೧೬॥

---

ಇನ್ನು ಇಲ್ಲಿ ನಾನಿರುವುದಿಲ್ಲ. ನಿನ್ನೊಡನೆಯೇ ನಾನೂ ಬರುವೆನು. ಸತ್ಯಲೋಕದಲ್ಲಿಯೇ ಸಾವಿತ್ರಿಯೊಡನೆ ವಾಸಿಸುತ್ತಿರಬೇಕೆಂದು ನನ್ನ ಇಷ್ಟವಾಗಿದೆ. ನಿನ್ನೊಡನೆಯೇ ಸದಾ ನಾನು ವಾಸಿಸುವೆನು. ॥೧೨॥

ಈ ಪ್ರಕಾರವಾಗಿ ಹೇಳಿದ ಸರಸ್ವತಿಯ ಮಾತನ್ನು ಕೇಳಿ ಬ್ರಹ್ಮನು ಕೋಪಗೊಂಡನು. ತನ್ನ ಮಾತನ್ನು ಅಲ್ಲಗಳೆದು, ಹೇಳಿದಂತೆ ಮಾಡಲಿಲ್ಲವಾದುದರಿಂದ ಆಕೆಗೆ ಈರೀತಿ ಶಾಪಕೊಟ್ಟನು. ನೀನು ಇದೇ ಭೂಲೋಕದಲ್ಲೇ ಬಿದ್ದಿರು. ಆದರಲ್ಲೂ ಅದೃಶ್ಯಳಾಗಿಯೇ ಇರು. ಯಾರ ಕಣ್ಣಿಗೂ ನೀನು ಕಾಣಿಸಲಾರೆ. ಇದೇ ಭೂಲೋಕದಲ್ಲಿ ನೀನು ಗುಪ್ತಗಾಮಿನಿಯಾಗಿರು. ॥೧೩-೧೪॥

ಇದೇ ನನ್ನ ಶಾಪವಚನವು. ಹೀಗೆಂದು ಬ್ರಹ್ಮನು ಶಪಿಸಲು ಸರಸ್ವತಿಯು ಹತಾಶಳಾಗಿ ಅದೇ ಪ್ರಯಾಗದಲ್ಲೇ ನಿಂತಳು. ॥೧೫॥

ಆ ಪ್ರಯಾಗದಲ್ಲಿ ಪೂರ್ವಕಾಲದಿಂದಲೂ ಯಮುನೆಯು ನೀಲತರಂಗಗಳಿಂದ ಶೋಭಿತಳಾಗಿಯೂ, ಗಂಗೆಯು ಶುಭ್ರತರಂಗಸಂಪನ್ನೆಯಾಗಿಯೂ ಹರಿಯುತ್ತಿದ್ದು ಆ ಎರಡು ನದಿಗಳೂ ಅಲ್ಲಿ ಸಂಗಮವಾಗುವುವು. ಗುಪ್ತಗಾಮಿನಿಯಾದ ಸರಸ್ವತಿಯು ಆ ಎರಡು ನದಿಗಳ ಮಧ್ಯದಲ್ಲಿ ಸೇರಿಕೊಳ್ಳಬೇಕಾಯಿತು. ॥೧೬॥

ಬ್ರಹ್ಮಣಸ್ಸಾ ಮಹೇಶಾನಿ ಪ್ರಯಾಗಮಭಿತಶ್ಶುಭೇ ।
ಸಿತಾಸಿತೇ ತೇ ಸರಿತೌ ದೇವಿ ಯತ್ರೈವ ಸಂಗತೇ ॥೧೭॥

ತತ್ರಾಪ್ಲುತಾ ಜನಾಸ್ಸರ್ವೇ ಬ್ರಹ್ಮಲೋಕಪರಾಯಣಾಃ ।
ತನುಂ ಯಸ್ತ್ಯಜತೇ ತತ್ರ ಸ ಮುಕ್ತೋ ಭವತಿ ಪ್ರಿಯೇ ॥೧೮॥

ತತ್ರಾಕ್ಷಯವಟೋ ನಾಮ ವಿಟಪೈರ್ಬಹುಭಿರ್ವೃತಃ ।
ತತ್ಪ್ರತೀಚ್ಯಾಂ ಮಹೇಶಾನಿ ಪ್ರಯಾಗೇಶೋಽಹಮಾಸ್ಥಿತಃ ॥೧೯॥

ವಿಷ್ಣುನಾರಾಧಿತಶ್ಚಾಹಂ ತೇನ ತುಷ್ಟಃ ಸ್ತುತಸ್ತಥಾ ।
ಪ್ರಯಾಗಮಾಧವೇನಾಹಂ ಪೂಜಿತಸ್ತತ್ರ ಶಂಕರಿ ॥೨೦॥

ಸಂಪೂಜ್ಯ ಮಾಂ ಬಿಲ್ವಪತ್ರೈಸ್ತುಷ್ಟಾವ ಪರಮೇಶ್ವರಂ ॥೨೧॥

॥ ಮಾಧವ ಉವಾಚ ॥

ದುರದೃಷ್ಟವಿನಾಶಕಂ ಮಹೇಶಂ
ಜನಿನಾಶಂ ಪ್ರತಿಬದ್ಧಕಷ್ಟಜಾಲಂ ।

---

ಈರೀತಿ ಬ್ರಹ್ಮಶಾಪದ ದೆಸೆಯಿಂದ ಸರಸ್ವತೀನದಿಯು ಗಂಗಾಯಮುನೆಗಳ ಸಂಗಮದಲ್ಲೇ ನೆಲೆಸಿಕೊಂಡಿರುವಳು. ಅಂಥ ಆ ಪುಣ್ಯಕರವಾದ ತ್ರಿವೇಣಿಗಳ ಸಂಗಮದಲ್ಲಿ ಸ್ನಾನಮಾಡುವ ಜನರು ಸಾಕ್ಷಾತ್ ಬ್ರಹ್ಮಲೋಕವನ್ನೇ ಸೇರುವರು. ಯಾರು ಆ ಪುಣ್ಯಸಂಗಮದಲ್ಲಿ ದೇಹತ್ಯಾಗದಿಂದ ನಿರ್ವಾಣಹೊಂದುವರೋ ಅವರು ಮುಕ್ತಿಯನ್ನೇ ಪಡೆಯುವರು. ॥೧೭-೧೮॥

ಆ ಪ್ರಯಾಗಕ್ಷೇತ್ರದಲ್ಲಿ ಪುಣ್ಯತಮವಾದ ಒಂದು ವಟ (ಆಲ) ವೃಕ್ಷವಿರುವುದು. ಆ ವೃಕ್ಷದ ಪಶ್ಚಿಮದಲ್ಲೇ ಪ್ರಯಾಗೇಶ್ವರನೆಂಬ ಹೆಸರಿನಿಂದ ನಾನು ಇರುವೆನು. ॥೧೯॥

ವಿಷ್ಣುವು ಪ್ರಯಾಗೇಶ್ವರನಾದ ನನ್ನನ್ನು ಆರಾಧಿಸುತ್ತಿದ್ದನು. ಆದ್ದರಿಂದ ಅಲ್ಲಿ ವಾಸಿಸುವ ವಿಷ್ಣುವಿಗೆ ಪ್ರಯಾಗ ಮಾಧವನೆಂದು ಹೆಸರು ಬಂದಿತು. ಆ ಪ್ರಯಾಗ ಮಾಧವನು ಬಿಲ್ವಪತ್ರೆಯೇ ಮೊದಲಾದ ಸಾಮಗ್ರಿಗಳಿಂದ ನನ್ನನ್ನು ಪೂಜಿಸಿ ಈರೀತಿ ಸ್ತುತಿಸಿದನು. ॥೨೦-೨೧॥

"ದೌರ್ಭಾಗ್ಯಗಳನ್ನು ನಾಶಮಾಡುವ ಮಹೇಶನಿಗೆ ಸದಾ ನಮಸ್ಕರಿಸುವೆನು. ಸಕಲ ಸಂಕಷ್ಟಗಳನ್ನೂ ಧ್ವಂಸಮಾಡಿ ಸಂಸಾರಮೋಚಕನಾದ ದೇವದೇವನನ್ನು

ಕನಿಷ್ಠಂ ವರಿಷ್ಠಂ ತಥಾ ಜ್ಯೇಷ್ಠಮೀಶಂ
ವಸಿಷ್ಠಾದಿವಂದ್ಯಂ ನತೋಽಸ್ಮೀಷ್ಟಸಿದ್ಧ್ಯೈ ॥೨೨॥

ಶ್ರೀಮತ್ಪ್ರಯಾಗವನಸುಂದರನೀಲಕಂಠ
ಪಾಹೀಶ ಪಾಪಗಿರಿದಾರಣ ಶೂಲಟಂಕ ।
ಭಕ್ತೇಷ್ಟಕುಂಠದಯ ಕುಂಠಿತವೇದವಾಕ್ಯ
ವೈಕುಂಠಪೂಜಿತಪದಾಗಸುತೋಪಕಂಠ ॥೨೩॥

ಇತ್ಥಂ ಸ್ತುತೋಽಸ್ಮಿ ತೇನೈವ ತತ್ ಸ್ಥಾನೇಶಃ ಕೃತೋ ಮಯಾ ।
ತದುತ್ತರೇಽಹಂ ಸೋಮೇಶಃ ಪೂಜಿತಂ ಸುರಸತ್ತಮೈಃ ॥೨೪॥

ಬಿಲ್ವೈರ್ಮಂದಾರಕುಸುಮೈಃ ಸ್ತುತೋಽಹಂ ವಿಬುಧೈರಪಿ ॥೨೫॥

॥ ದೇವಾ ಊಚುಃ ॥

ಪುರಾರೇ ಭವಾರೇ ಯಮಾರೇ ಪ್ರಸೀದ
ಪ್ರಸೀದಾಧುನಾ ದೇವ ದೇವೇಶ ಶಂಭೋ ।

---

ಪೂಜಿಸುವೆನು. ಜ್ಯೇಷ್ಠನೂ ಶ್ರೇಷ್ಠನೂ ವಸಿಷ್ಠಾದಿಮುನಿವಂದ್ಯನೂ ಆದ ಈಶ್ವರ ನನ್ನು ವಂದಿಸಿ ನನ್ನ ಇಷ್ಟಾರ್ಥಗಳು ಸಿದ್ಧಿಸಲೆಂದು ಪ್ರಾರ್ಥಿಸುವೆನು. ॥೨೨॥

ಓ ನೀಲಕಂಠನೇ, ನೀನು ಈ ಸುಂದರವಾದ ಪ್ರಯಾಗವನದಲ್ಲಿ ವಿರಾಜ ಮಾನನಾಗಿರುವೆ. ಭಕ್ತರಮೇಲಿನ ಅಪಾರವಾದ ದಯೆಯಿಂದ ಅವರ ಸಕಲ ಪಾಪಗಳನ್ನೂ ಸಹ ಶೂಲದಂಡಧಾರಿಯಾದ ನೀನು ಪರಿಹರಿಸುವೆ. ವೇದವಾಕ್ಯ ಗಳಿಂದಲೂ ಅರಿಯಲ್ಪಡದಿರುವ ನಿನ್ನನ್ನು ಇದೋ ವೈಕುಂಠನು ನಮಸ್ಕರಿಸು ತ್ತಿರುವನು. ಗಿರಿರಾಜಪುತ್ರಿಯಿಂದ ಆಲಿಂಗಿತನಾದ ನಿನಗೆ ವಂದನೆ. ॥೨೩॥

ಈರೀತಿ ಪ್ರಯಾಗ ಮಾಧವನು ಸ್ತುತಿಸಲು ನಾನು ಪ್ರಸನ್ನನಾದೆನು. ಅನಂತರ ನನ್ನ ಸಂಮತಿಯಂತೆ ಆತನೂ ಸಹ ಆ ಕ್ಷೇತ್ರದಲ್ಲೇ ಅಧಿಪತಿಯಾದನು. ಆ ಪ್ರಯಾಗ ಮಾಧವನ ಉತ್ತರ ದಿಕ್ಕಿನಲ್ಲಿ ನಾನು ಸೋಮೇಶ್ವರ ಎಂಬ ಹೆಸರಿನಿಂದ ವಾಸಮಾಡುವೆನು. ಆ ಪುಣ್ಯತಮವಾದ ಶಿವಲಿಂಗವನ್ನು ದೇವತೆಗಳು ಸಂಪೂಜಿಸಿ ಈರೀತಿ ಸ್ತುತಿಸಿದರು. ॥೨೪-೨೫॥

ಓ ಶಂಭೋ ದೇವೇಶನೇ, ನೀನು ತ್ರಿಪುರಾಸುರಧ್ವಂಸಿಯೂ ಸಂಸಾರ ಮೋಚಕನೂ ಮೃತ್ಯುಂಜಯನೂ ಆಗಿರುವೆ. ನಿನ್ನ ಚರಿತ್ರೆಯು ಆದ್ಯಂತವಾಗಿ

ಚರಿತ್ರಂ ಪವಿತ್ರ ವಿಚಿತ್ರಂ ತವಾದ್ಯಂ
ತ್ರಿನೇತ್ರಾದ್ಯಧುನಾ ಪಾಪಜಾಲೈಕಹಾರಿನ್ ॥೨೬॥

ಇತ್ಥಂ ಸ್ತುತೋಽಹಮಮರೈರ್ನಿವಸಾಮಿ ಗಿರೀಂಪ್ರಜೇ ।
ಗಂಗಾಯಮುನಯೋಸ್ಸಂಧೌ ಲಿಂಗಂ ಮಂಗಳದಂ ಮಮ ॥೨೭॥

ಯಃ ಪ್ರಯಾಗಂ ಮಹಾತೀರ್ಥಂ ಮಾಘೇ ಮಕರಗೇ ರವೌ ।
ತತ್ರ ಸ್ನಾತ್ವಾ ಮಾಸಮೇಕಂ ವಿಮುಕ್ತಸ್ಸರ್ವಕಿಲ್ಬಿಷೈಃ ॥೨೮॥

ತೀರ್ಥಾಧಿದೇವೋ ಮಾಂ ಭಕ್ತ್ಯಾ ಪ್ರಯಾಗೇಶಂ ಸಮರ್ಚಯನ್ ।
ತತಾಪ ಪರಮಂ ದೇವಿ ತಪ ಉಗ್ರಂ ಸಮಾಸ್ಥಿತಃ ॥೨೯॥

ಮಾಂ ತುಷ್ಟಾವಾಂಬಿಕೇ ತತ್ರ ತೀರ್ಥರಾಜತ್ವಸಿದ್ಧಯೇ ॥೩೦॥

---

ಸಕಲವೂ ಪವಿತ್ರವೂ ವಿಚಿತ್ರವೂ ಆಗಿರುತ್ತದೆ. ಓ ತ್ರಿನಯನನೇ, ನಮ್ಮ ಪಾಪರಾಶಿಯನ್ನು ಪರಿಹರಿಸು. ನಮ್ಮಲ್ಲಿ ದಯೆಗೊಂಡು ನೀನು ಇಲ್ಲಿ ನೆಲಸಿ ಪ್ರಸನ್ನನಾಗು. ॥೨೬॥

ಈರೀತಿ ದೇವತೆಗಳಿಂದ ಸ್ತುತಿಸಲ್ಪಟ್ಟು ನಾನು ಆ ಪ್ರಯಾಗದ ಗಂಗಾ ಯಮುನಾ ಸಂಗಮದಲ್ಲಿ ಆವಾಸಮಾಡುವೆನು. ನಾನು ನೆಲೆಸಿರುವ ಆ ಶಿವಲಿಂಗವು ಪುಣ್ಯತಮವೂ ಮಂಗಳಪ್ರದವೂ ಆಗಿರುವುದು. ॥೨೭॥

ಹೀಗೆ ನನ್ನ ವಾಸಸ್ಥಾನವಾದ ಪ್ರಯಾಗಕ್ಷೇತ್ರದ ತೀರ್ಥಯಾತ್ರೆಯನ್ನು ಯಾವನು ಮಾಡುವನೋ ಅಥವಾ ಮಕರರಾಶಿಯನ್ನು ಸೂರ್ಯನು ಸೇರಿರುವ ಮಾಘಮಾಸದಲ್ಲಿ ಆ ತ್ರಿವೇಣಿ ಸಂಗಮದಲ್ಲಿ ಸ್ನಾನಮಾಡುವನೋ, ಅವನು ಸಕಲ ಪಾಪಗಳನ್ನೂ ಕಳೆದುಕೊಂಡು ಮುಕ್ತನಾಗುವನು. ॥೨೮॥

ಪೂರ್ವದಲ್ಲಿ ತೀರ್ಥರಾಜನು ತನಗೆ ಆ ಪ್ರಯಾಗಕ್ಷೇತ್ರದ ಆಧಿಪತ್ಯವು ಸಿದ್ಧಿಸಬೇಕೆಂದು ಅದರ ಸಾಧನೆಗಾಗಿ ನನ್ನನ್ನು ಕುರಿತು ಉಗ್ರವಾದ ತಪಸ್ಸನ್ನಾಚರಿಸಿದನು. ಆತನು ಪ್ರಯಾಗೇಶ್ವರನಾದ ನನ್ನನ್ನು ಭಕ್ತಿಯಿಂದ ಪೂಜಿಸಿ ಈರೀತಿ ಸ್ತುತಿಸಿದನು. ॥೨೯-೩೦॥

|| ತೀರ್ಥರಾಜ ಉವಾಚ ||

ಶಿವ ಶೈವಜನಾವನೇ ಧುರೀಣ
ಶ್ರುತಿಕಾರಣ ಕಾರಣಾದ್ಯಕರ್ಣ ।
ಫಣಿರಣಿತಪದಾಬ್ಜ ಕಂಕಣ
ಮಮ ಪಾಹಿ ಬಲಾಘಶೋಷಣ ||೩೧||

ತೀರ್ಥಾಧಿದೇವೋ ಮಾಂ ಸ್ತುತ್ವಾ ಮತ್ತಸ್ತೀರ್ಥವರೋಽಭವತ್ ।
ಯಃ ಪ್ರಯಾಗಂ ಸಮಾಸಾದ್ಯ ತ್ರಿರಾತ್ರಂ ಸಮುಪೋಷಿತಃ ||೩೨||

ಶತಜನ್ಮಾರ್ಜಿತಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ।
ಪ್ರಯಾಗೇಶ್ವರಮಭ್ಯರ್ಚ್ಯ ದೃಷ್ಟ್ವಾ ನತ್ವಾ ಮಹೇಶ್ವರಂ ||೩೩||

ಸ್ನಾನದಾನಾರ್ಚನಾತ್ಸಿದ್ಧಿಸ್ತಸ್ಯ ಸ್ಯಾನ್ನಾತ್ರ ಸಂಶಯಃ ।
ತ್ರಿವೇಣೀಸಂಗಮೋ ಯತ್ರ ತತ್ರ ಪಾಪಭಯಂ ಕುತಃ ||೩೪||

---

ಓ ಪರಶಿವನೇ, ಸಕಲ ಜಗತ್ತುಗಳಿಗೂ ಮತ್ತು ವೇದಗಳಿಗೂ ಸಹ ನೀನು ಆದಿಕಾರಣನಿರುವೆ. ನಾಗಾಭರಣಭೂಷಿತನಾದ ನೀನು ಸದಾ ನಿನ್ನ ಭಕ್ತರ ಯೋಗಕ್ಷೇಮದಲ್ಲಿ ಬದ್ಧಕಂಕಣನಾಗಿರುವೆ. ಓ ಪಾಪಹಾರಿಯೇ, ಈಗ ನನ್ನನ್ನೂ ಸಹ ಉದ್ಧರಿಸು. ||೩೧||

ಈರೀತಿ ತೀರ್ಥರಾಜನು ಸ್ತುತಿಸಲು ನಾನು ಸಂತುಷ್ಟನಾದೆನು. ಅನಂತರ ನನ್ನ ಅನುಗ್ರಹದಿಂದ ಅವನು ತೀರ್ಥಾಧಿಪತ್ಯವನ್ನು ಸಹ ಪಡೆದನು. ಹೀಗೆ ಈ ಪ್ರಯಾಗವು ಬಹು ಪ್ರಸಿದ್ಧವಾಗಿರುವುದು. ಈ ಪುಣ್ಯಕ್ಷೇತ್ರದಲ್ಲಿ ಮೂರುದಿನ ಉಪವಾಸ ಮಾಡಿದರೆ ನೂರುಜನ್ಮಗಳಲ್ಲಿ ಸಂಚಿತವಾದ ಪಾಪಗಳಿಂದಲೂ ಖಂಡಿತ ವಾಗಿಯೂ ಮುಕ್ತನಾಗುವನು. ||೩೨||

ತ್ರಿವೇಣೀಸಂಗಮವಾಗಿರುವ ಈ ಪ್ರಯಾಗಕ್ಷೇತ್ರದಲ್ಲಿ ವಾಸಮಾಡುತ್ತಾ ಪ್ರಯಾಗೇಶ್ವರನನ್ನು ಪೂಜಿಸಿ, ಸಂದರ್ಶಿಸಿ, ನಮಿಸುವವರಿಗೆ ಭಯವೆಲ್ಲಿಬಂತು ? ಈ ಕ್ಷೇತ್ರದಲ್ಲಿ ಸ್ನಾನ, ದಾನ, ಪೂಜೆ ಮುಂತಾದ ಯಾವ ಧರ್ಮಕಾರ್ಯಗಳನ್ನು ನಡೆಸಿದರೂ ಶೀಘ್ರವಾಗಿಯೇ ಫಲಸಿದ್ಧಿಯೊದಗುವುದು. ||೩೩-೩೪||

ತತ್ರಾವಸತ್ಸದಾ ವಿಷ್ಣುರ್ವೇಣೀಮಾಧವಸಂಜ್ಞಕಃ ।
ಮಾಂ ಧ್ಯಾಯನ್ ಸರ್ವದಾ ದೇವಿ ಸ್ನಾತಾನಾಂ ಫಲದಾಯಕಃ ॥೩೫॥

ಗಂಗಾ ಚ ಯಮುನಾ ಚೈವ ಯತ್ರ ಗುಪ್ತಾ ಸರಸ್ವತೀ ।
ಪ್ರವಹತ್ಯನಿಶಂ ದೇವಿ ಯಸ್ಯಾಂತೋ ನೈವ ವಿದ್ಯತೇ ॥೩೬॥

ಅಂತರ್ವೇದ್ಯಾಂ ಬ್ರಹ್ಮಣಾಪಿ ಕೃತಂ ಪುಣ್ಯಮನಂತಕಂ ।
ಯೇ ಸ್ನಾತ್ವಾಥ ಪ್ರಯಾಗೇಶಂ ಪಶ್ಯಂತಿ ಚ ಗಣೋತ್ತಮಾಃ ॥೩೭॥

ಸಂಪೂಜ್ಯ ಬಿಲ್ವಪತ್ರೈಶ್ಚ ಮುಕ್ತ ಏವ ನ ಸಂಶಯಃ ।
ಪ್ರಯಾಗಮನ್ಯತೀರ್ಥೇಷು ಯಃ ಸ್ಮರನ್ ಸ್ನಾತಿ ಭಕ್ತಿಮಾನ್॥೩೮॥

---

ಆ ಕ್ಷೇತ್ರದಲ್ಲಿ ವೇಣೀಮಾಧವ ಎಂಬ ಹೆಸರನ್ನು ತಳೆದುಕೊಂಡು ಸಾಕ್ಷಾತ್ ವಿಷ್ಣುವು, ಧರ್ಮಿಷ್ಠರಿಗೆ ಫಲಗಳನ್ನು ಕೊಡಲು ಸದಾ ಜಾಗರೂಕನಾಗಿ ವಾಸಿಸುತ್ತಿರುವನು. ಆ ವೇಣೀಮಾಧವನು ಸ್ವತಃ ನನ್ನನ್ನು ಆರಾಧಿಸುವನಲ್ಲದೇ ಅಲ್ಲಿ ಸ್ನಾನಾದಿ ಪುಣ್ಯಕರ್ಮಗಳನ್ನು ಮಾಡಿದವರಿಗೆ ಇಷ್ಟಾರ್ಥಗಳನ್ನು ಕೊಡುವನು. ॥೩೫॥

ಅದೇ ಸ್ಥಳವಿಶೇಷದಲ್ಲಿ ಗಂಗೆಯೂ ಯಮುನೆಯೂ ಮತ್ತು ಗುಪ್ತಗಾಮಿನಿಯಾದ ಸರಸ್ವತಿಯೂ ಸಹ ಏಕತ್ರ ಸಂಧಿಸಿರುವುದರಿಂದ ಅದು ತ್ರಿವೇಣೀ ಮಹಾಕ್ಷೇತ್ರವಾಗಿರುವುದು. ಅಂಥ ಪುಣ್ಯಕ್ಷೇತ್ರದ ಮಹಿಮೆಗೆ ಪಾರವೆಲ್ಲಿ ಬಂತು? ಅದರ ಮಾಹಾತ್ಮ್ಯೆಯು ಅನಂತವೆನಿಸಿ ಅಪಾರವಾಗಿರುವುದು. ॥೩೬॥

ಈ ಕ್ಷೇತ್ರದಲ್ಲಿರುವ ವೇದಿಕೆಯ ಮೇಲೆ ಬ್ರಹ್ಮನು ಸಹ ಪುಣ್ಯಕರ್ಮವನ್ನು ಮಾಡಿ ಅಪಾರ ಫಲವನ್ನು ಗಳಿಸಿಕೊಂಡಿರುವನು. ಇಂಥ ಪ್ರಯಾಗದಲ್ಲಿ ಯಾರು ಸ್ನಾನದಾನಾದಿಗಳನ್ನು ನಡೆಸುವರೋ ಮತ್ತು ಬಿಲ್ವಾದಿಗಳಿಂದ ಶಿವಾರ್ಚನೆಯನ್ನು ಮಾಡುವರೋ ಅವರು ನಿಸ್ಸಂಶಯವಾಗಿ ಮೋಕ್ಷವನ್ನು ಹೊಂದುವರು. ॥೩೭॥

ಇತರ ಪುಣ್ಯಕ್ಷೇತ್ರಗಳಲ್ಲಿ ಸಹ ಸ್ನಾನವನ್ನು ಮಾಡುವಾಗ ಯಾವನು ಈ ಪ್ರಯಾಗವನ್ನು ಭಕ್ತಿಯಿಂದ ಧ್ಯಾನಿಸುವನೋ, ಅವನು ಅಲ್ಲಿ ಮಾಡಿದ ಸ್ನಾನವು ಸಾಕ್ಷಾತ್ ಗಂಗಾ ಯಮುನೆಗಳ ಸಂಗಮದಲ್ಲಿ ಮಾಡಿದಂತೆಯೇ ಆಗುವುದು.॥೩೮॥

ಸ ಗಂಗಾಯಮುನೋದ್ಭೇದೇ ಸ್ನಾತಿ ನಿತ್ಯಂ ಮಹೇಶ್ವರಿ ।
ಪ್ರಯಾಗೇ ಮಕರೇ ಭಾನೌ ಮಾಘೇ ಸ್ನಾತ್ವಾ ಇನೋದಯೇ॥೩೯॥

ಸ ಸರ್ವಪಾಪಸಂಘೇಭ್ಯೋ ಮುಕ್ತೋ ಮುಕ್ತಿಂ ಪರಾಂ ವ್ರಜೇತ್ ।
ತಸ್ಮಾದ್ವಿನಿರ್ಗತಾ ದೇವಿ ಗಂಗಾ ಪುಣ್ಯಾ ಸರಸ್ವತೀ ॥೪೦॥

ಯಮುನಾ ಚ ಮಹಾದೇವಿ ಬ್ರಹ್ಮಾರಣ್ಯಂ ಸುಶೋಭನಂ ।
ಅವಿಮುಕ್ತಂ ತದಾ ಪ್ರಾಪ್ಯ ಚಕ್ರತೀರ್ಥಂ ಸರಿದ್ವರಾ ॥೪೧॥

ಮಣಿಕರ್ಣೀ ಭವನ್ನಾಮ್ನಾ ಖ್ಯಾತಾ ಗಂಗಾ ಚ ಪಾವನೀ ।
ತಸ್ಮಾದಯೋಧ್ಯಾದ್ವಿಪುಲಾದಾಗಮತ್ಸರಯೂಯುತಾ ॥೪೨॥

ಗಂಗಾಸರಯ್ವೋರ್ಯಸ್ಸಂಧೌ ಸ್ನಾತ್ವಾ ಸಂತರ್ಪ್ಯ ವೈ ಪಿತೄನ್ ।
ಗಂಗಾಯಾಂ ಚೈವ ಪುಣ್ಯಾತ್ಮಾ ಧರ್ಮಾರಣ್ಯಾದಿಕೇಷು ಚ ॥೪೩॥

---

ಸೂರ್ಯನು ಮಕರರಾಶಿಯನ್ನು ಸೇರಿರುವ ಆ ಯೋಗವುಳ್ಳ ಮಾಘಮಾಸದಲ್ಲಿ ಒಂದು ತಿಂಗಳು ಪೂರ್ತಿ ಯಾವನು ಸೂರ್ಯೋದಯ ಸಮಯದಲ್ಲಿ ತ್ರಿವೇಣೀ ಸ್ನಾನವನ್ನು ಮಾಡುವನೋ ಅವನು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಸದ್ಗತಿಯ ಪರಾಕಾಷ್ಠೆಯಾದ ಮುಕ್ತಿಯನ್ನು ಸೇರುವನು. ॥೩೯॥

ಈ ರೀತಿ ಪ್ರಯಾಗದಲ್ಲಿ ಸಂಧಿಸಿ ತ್ರಿವೇಣಿಸಂಗಮವನ್ನು ಮಾಡಿದ ಬಳಿಕ ಗಂಗೆಯೂ ಯಮುನೆಯೂ ಸಹ ಮುಂದಕ್ಕೆ ಪ್ರವಹಿಸುತ್ತಾ ಅವಿಮುಕ್ತಕ್ಷೇತ್ರವನ್ನು ಬಳಸಿಕೊಂಡು ಹರಿದಿದ್ದರಿಂದ ಆ ಕ್ಷೇತ್ರವೂ ಪುಣ್ಯಪವಿತ್ರವಾಗಿರುತ್ತದೆ. ॥೪೦-೪೧॥

ಅಲ್ಲಿಂದ ಮುಂದಕ್ಕೆ ಗಂಗೆಯು ಪ್ರವಹಿಸಿ ಚಕ್ರತೀರ್ಥವನ್ನು ಸೇರಿ ಅಲ್ಲಿ ಮಣಿಕರ್ಣಿಕೆ ಎಂಬ ಹೆಸರನ್ನು ಪಡೆದಳು. ಅಲ್ಲಿಂದ ಮುಂದಕ್ಕೆ ಹೋಗುತ್ತಾ ಅಯೋಧ್ಯೆಯಲ್ಲಿ ಸರಯೂ ನದಿಯೊಡನೆ ಸೇರಿಕೊಂಡು ಮುಂದಕ್ಕೆ ಪ್ರವಹಿಸಿದಳು. ॥೪೨॥

ಆ ಗಂಗಾ ಸರಯೂ ನದಿಗಳ ಸಂಗಮದಲ್ಲಿ ಯಾವನು ಸ್ನಾನಮಾಡಿ ಪಿತೃಗಳಿಗೆ ತಿಲೋದಕವನ್ನು ಕೊಡುವನೋ ಅಥವಾ ಆ ಧರ್ಮಾರಣ್ಯಪ್ರದೇಶಗಳಲ್ಲಿ ಹರಿಯುವ ಗಂಗಾನದಿಯಲ್ಲಿ ಪಿತೃತರ್ಪಣಾದಿಗಳನ್ನು ಮಾಡುವನೋ ಅವನು ಪುಣ್ಯವಂತನಾಗುವನು. ॥೪೩॥

ಫಲ್ಗುರ್ನಾಮ ನದೀ ತತ್ರ ಸ್ನಾನತಃ ಪಾಪನಾಶಿನೀ ।
ಭೃಗೋರಥಾಶ್ರಮಂ ಪ್ರಾಪ್ಯ ಪಿತೄನ್ ತಾರಯತೇ ಸುತಃ ॥೪೪॥

ಗಯಾಕೀಕಟದೇಶಸ್ಥಾ ಪಿತೄಣಾಂ ತೃಪ್ತಿದಾಯಿನೀ ।
ಪಿಂಡಂ ತೃಪ್ತಿಪ್ರದಂ ದೇವಿ ತತ್ರ ದತ್ತಂ ಮಹಾಕ್ಷಯಂ ॥೪೫॥

ಗಯಾಸುರಶಿರಃಸ್ಥಾನೇ ಮತ್ಪಾದಂ ಪ್ರಕಟೀಕೃತಂ ।
ಈಶಾನಸಂಜ್ಞಂ ತತ್ಪಾದಂ ಸುರಾಣಾಂ ಚಾಥ ವೈಷ್ಣವಂ ॥೪೬॥

ಮತ್ಪಾದೇ ಪಿಂಡದಾನೇನ ಮಮ ಲೋಕೇ ಮಹೇಶ್ವರಿ ।
ವಾಸಯೇತ್ಸ್ವಪಿತೄನ್ ಭಕ್ತ್ಯಾ ಪುನರಾವೃತ್ತಿವರ್ಜಿತಂ ॥೪೭॥

ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀಹ್ಯವಂತಿಕಾ ।
ಪುರೀ ದ್ವಾರವತೀ ಚೈವ ಸಪ್ತೈತಾಃ ಪಿತೃತೃಪ್ತಿದಾಃ ॥೪೮॥

---

ಅದೇ ಧರ್ಮಾರಣ್ಯದಲ್ಲಿ ಫಲ್ಗು ಎಂಬ ಪುಣ್ಯನದಿ ಇರುವುದು. ಆ ಭೃಗುಮುನಿಯ ಆಶ್ರಮದ ಮೂಲಕ ಹರಿಯುವ ನದಿಯಲ್ಲಿ ಯಾವ ಪುತ್ರನು ಸ್ನಾನಮಾಡಿ ತರ್ಪಣಕೊಡುವನೋ ಆತನ ಪಿತೃಗಳು ತೃಪ್ತರಾಗುವರು. ॥೪೪॥

ಕೀಕಟ ಎಂಬ ದೇಶದ ಗಯಾಕ್ಷೇತ್ರದಲ್ಲಿ ಪಿಂಡಪ್ರದಾನಮಾಡಿದರೆ ಪಿತೃಗಳಿಗೆ ಅಕ್ಷಯತೃಪ್ತಿಯಾಗುವುದು. ಆದ್ದರಿಂದ ಆ ಕ್ಷೇತ್ರವು ಪಿತೃಗಳಿಗೆ ಅತ್ಯಂತ ಪ್ರಿಯವಾಗಿರುವುದು. ॥೪೫॥

ಗಯನೆಂಬ ಅಸುರನ ಶಿರಃಪ್ರದೇಶದಲ್ಲಿ ನನ್ನ ಪಾದವು ಉದ್ಭವಿಸಿ ವಿರಾಜಿಸುತ್ತಿದೆ. ಆ ನನ್ನ ಪಾದದ ಗುರುತಿಗೆ ಈಶಾನ ಎಂದು ಹೆಸರು. ಅಲ್ಲದೆ ಆ ಗಯೆಯಲ್ಲಿ ಇನ್ನೂ ಅನೇಕ ದೇವತೆಗಳ ಮತ್ತು ವಿಷ್ಣುವಿನ ಪಾದಗಳು ಇರುವುವು. ॥೪೬॥

ಯಾವನು ನನ್ನ ಪಾದದಲ್ಲಿ ಪಿಂಡಪ್ರದಾನ ಮಾಡುವನೋ ಅವನು ತನ್ನ ಪಿತೃಗಳನ್ನು ನನ್ನ ಲೋಕದಲ್ಲಿ ವಾಸಮಾಡಿಸುವನು. ಅಂಥ ಪಿತೃಗಳಿಗೆ ಪುನರ್ಜನ್ಮವೂ ಸಹ ಇರುವುದಿಲ್ಲ. ॥೪೭॥

ಪಿತೃಗಳಿಗೆ ಅಯೋಧ್ಯೆ, ಮಥುರೆ, ಮಾಯಾನಗರೀ, ಕಾಶೀಕ್ಷೇತ್ರ, ಕಾಂಚೀನಗರ, ಅವಂತಿಪತ್ತನ ಮತ್ತು ದ್ವಾರಕಾಪುರೀ ಇವುಗಳು ಅತ್ಯಂತ ಪ್ರಿಯಗಳಾ

ಅಯೋಧ್ಯಾಯಾಂ ಮಮಾಸ್ತ್ಯೇಕಂ ಸುಧೇಶಾಖ್ಯಂ ಮಹೇಶ್ವರಿ ।
ಲಿಂಗಂ ಮಂಗಳದಂ ಪುಣ್ಯಂ ದೃಷ್ಟ್ವಾ ರಘುವರಾರ್ಚಿತಂ ॥೪೯॥

ಬಿಲ್ವಪತ್ರೈಸ್ತಥಾ ಪುಷ್ಪೈಸ್ಸರಯೂಸಂಭವೈರ್ಜಲೈಃ ।
ಸಮಭ್ಯರ್ಚ್ಯ ಪ್ರಣಮ್ಯೇಶಂ ಸ್ತೋತ್ರಮೇತತ್ಪಠೇನ್ನರಃ ॥೫೦॥

ಪಾಪಸಂಘೈರ್ವಿಮುಚ್ಯೇತ ನಾತ್ರ ಕಾರ್ಯಾ ವಿಚಾರಣಾ ॥೫೧॥

ಸುಧಾಧಾರಕಲಾಪಾರಪರಿಪೂರ್ಣೋತ್ತಮಾಂಗಕ ।
ನಮಸ್ತೇಽಸ್ತು ಮಹಾದೇವ ದೀನಬಂಧೋ ಪ್ರಸೀದ ಮೇ ॥೫೨॥

ನಮಸ್ತೇ ದೇವ ದೇವೇಶ ರಾಘವೈಃ ಪರಿಪೂಜಿತ ।
ಭವರೋಗಹರಾಪಾರಪಾಪರಾಶಿವಿನಾಶಕ ॥೫೩॥

---

ಗಿರುತ್ತವೆ. ಆದ್ದರಿಂದ ಅವುಗಳಲ್ಲಿ ಮಾಡುವ ಧರ್ಮಕರ್ಮಗಳಿಂದ ಪಿತೃಗಳಿಗೆ ಅಕ್ಷಯ ತೃಪ್ತಿಯುಂಟಾಗುವುದು. ॥೪೮॥

ಎಲೌ ಪ್ರಿಯೆ ಗಿರಿಜೆ! ಅಯೋಧ್ಯಾನಗರಿಯಲ್ಲಿ ಸಹ ಸುಧೇಶ್ವರ ಎಂಬ ಹೆಸರನ್ನು ಕಳೆದುಕೊಂಡು ಲಿಂಗರೂಪದಿಂದ ವಾಸಿಸುವೆನು. ನಾನಿರುವ ಆ ಶಿವಲಿಂಗವು ಅತ್ಯಂತಮಂಗಳಪ್ರದವೂ ಪುಣ್ಯಕರವೂ ಆಗಿರುವುದು. ಅದೇ ಲಿಂಗವನ್ನೇ ರಘುವಂಶೀಯರಾದ ರಾಜರೆಲ್ಲಾ ಪೂಜಿಸುತ್ತಿದ್ದರು. ಆ ಶಿವಲಿಂಗಕ್ಕೆ ಯಾವನು ಬಿಲ್ವಪತ್ರಾದಿಗಳಿಂದಲೂ ಸರಯೂನದಿಯ ಜಲದಿಂದಲೂ ಪೂಜೆ ಅಭಿಷೇಕ ಮುಂತಾದವುಗಳನ್ನು ಮಾಡುವನೋ, ಮತ್ತು ಸಂದರ್ಶನಮಾಡಿ ಈ ಮುಂದೆ ಹೇಳುವ ಸ್ತೋತ್ರದಿಂದ ಸ್ತುತಿಸುವನೋ ಅವನು ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವನು. ಇದರಲ್ಲಿ ಸ್ವಲ್ಪವೂ ಸಂಶಯವಿರುವುದಿಲ್ಲ. ೪೯-೫೦-೫೧॥

ಓ ಮಹಾದೇವನೇ! ನೀನು ಅಮೃತಕಿರಣನಾದ ಚಂದ್ರನನ್ನು ಮಕುಟವನ್ನಾಗಿ ಶಿರಸ್ಸಿನಲ್ಲಿ ಧರಿಸಿರುತ್ತೀಯೆ. ಓ ದೀನಬಾಂಧವನೇ! ನಿನ್ನನ್ನು ನಮಸ್ಕರಿಸುವೆನು. ನನ್ನಲ್ಲಿ ಪ್ರಸನ್ನನಾಗು. ಓ ದೇವೇಶನೇ! ನಿನ್ನನ್ನೇ ರಘುವಂಶದವರೆಲ್ಲಾ ಪೂಜಿಸಿರುವರು. ಸಂಸಾರವೆಂಬ ಮಹಾರೋಗವನ್ನೂ ಪಾಪರಾಶಿಯನ್ನೂ ಧ್ವಂಸಮಾಡುವವನು ನೀನೇ ಒಬ್ಬನು. ಆದ್ದರಿಂದ ನಾನು ನಿನ್ನನ್ನೇ ಸದಾ ಧ್ಯಾನಿಸಿ ನಮಸ್ಕರಿಸುವೆನು. ॥೫೨-೫೩॥

ಪ್ರಸೀದ ದೇವ ವಿಶ್ವೇಶ ಪರಮೇಶ್ವರ ಶಂಕರ ।
ಶಂಭೋ ಶಾಶ್ವತ ಸರ್ವಜ್ಞ ವಿಶ್ವಾಧಿಕ ಜಗತ್ಪ್ರಭೋ ॥೫೪॥

ನಮಸ್ತೇ ಶಿವ ಕಾಮಾರೇ ಮಯಿ ದೇವ ಕೃಪಾಂ ಕುರು ।
ಇತಿ ಸ್ತುತ್ವಾ ಮಹಾದೇವಂ ಸುಧೇಶಂ ಪರಮೇಶ್ವರಂ ॥೫೫॥

ಸರಯ್ವಾಂ ಯಸ್ಸಕೃತ್ಸ್ನಾತ್ವಾ ಪ್ರಣಮ್ಯಾಥ ಸುಧೇಶ್ವರಂ ।
ಬಿಲ್ವೈಸ್ಸಂಪೂಜ್ಯ ಭಕ್ತ್ಯಾಥ ರುದ್ರಾಧ್ಯಾಯಂ ಪಠನ್ನರಃ ॥೫೬॥

ಮುಕ್ತ ಏವ ಸ ಪಾಪೇಭ್ಯೋ ನಾತ್ರಾಸ್ತಿ ವಿಷಯೋಽಂಬಿಕೇ ॥೫೭॥

ಗಂಗಾತುಂಗತರಂಗಸಂಘವಿಲಸತ್ಫುಲ್ಲೈಃ ಸುಪದ್ಮೋತ್ಪಲೈಃ
ನೀಲಸ್ವಚ್ಛಪತಂಗಪುತ್ರಿಸಹಿತಾ ಯುಕ್ತಾ ಚ ವಾಣ್ಯಾ ತದಾ ।
ಬ್ರಹ್ಮಾದಿತ್ರಿದಶೈರ್ಹರೀಂದ್ರಪವನೈರ್ಯಾತಾ ಪತಿಂ ಸಾಗರಂ
ತೀರೋದ್ಭಾಸಿಮಹರ್ಷಿಸಂಘವನಜಾಪಾರ್ಶ್ವೈಸ್ಸುನ್ಯೈರರ್ಚಿತಾ ॥೫೮॥

---

ಓ ಶಿವ ಶಂಕರ ಮಹಾದೇವನೇ! ನೀನೇ ಸಕಲ ಜಗತ್ತುಗಳಿಗೂ ಅಧಿಪತಿಯಾಗಿರುವೆ. ಶಾಶ್ವತನೂ ಸರ್ವಜ್ಞನೂ ನೀನೆ ಆಗಿರುವೆ. ಮನ್ಮಥಧ್ವಂಸಿಯೇ ! ನಿನಗೆ ಶತಶಃ ವಂದಿಸುವೆನು. ದೀನನಾದ ನನ್ನ ಮೇಲೆ ದಯೆತೋರು, ಪ್ರೀತಿಯಿಂದ ನನ್ನನ್ನು ಕಾಪಾಡಿ ಉದ್ಧರಿಸು. ॥೫೪॥

ಹೀಗೆಂಬ ಸ್ತೋತ್ರದಿಂದ ಸುಧೇಶ್ವರನನ್ನು ಸ್ತುತಿಸಬೇಕು. ಆ ಪುಣ್ಯಕ್ಷೇತ್ರದಲ್ಲಿರುವ ಸರಯೂನದಿಯಲ್ಲಿ ಸ್ನಾನವನ್ನು ಮಾಡಿ, ಸುಧೇಶ್ವರನನ್ನು ಸಂದರ್ಶಿಸಬೇಕು. ರುದ್ರಾಧ್ಯಾಯವನ್ನು ಪಾರಾಯಣಮಾಡುತ್ತಾ ಆ ಸುಧೇಶ್ವರನಿಗೆ ಜಲಬಿಲ್ವಾದಿಗಳಿಂದ ಭಕ್ತಿಪೂರ್ವಕವಾಗಿ ಅಭಿಷೇಕ ಪೂಜಾದಿಗಳನ್ನು ಮಾಡಿದನೆಂದರೆ ಮನುಜನ ಸಕಲ ಪಾಪಗಳೂ ನಷ್ಟವಾಗುವುವು. ಅಂತಹ ಮನುಷ್ಯನು ಸರ್ವಥಾ ಮುಕ್ತಿಯನ್ನೇ ಪಡೆಯುವನು. ಇದರಲ್ಲಿ ಸ್ವಲ್ಪವೂ ಸಂದೇಹವೇ ಇಲ್ಲ. ॥೫೫-೫೬-೫೭॥

ಎಲೌ ಗಿರಿಜೆ! ಈರೀತಿ ನನ್ನ ಪಾದತಲದಿಂದ ಹುಟ್ಟಿದ ಗಂಗೆಯು ಕ್ರಮಕ್ರಮೇಣ ಅಭಿವೃದ್ಧಿಯನ್ನು ಪಡೆಯುತ್ತಲೂ ಉನ್ನತೋನ್ನತವಾದ ತರಂಗಗಳಿಂದಲೂ ಕಮಲಗಳಿಂದಲೂ ಒಪ್ಪುತ್ತಿರುವಳು. ಸೂರ್ಯಪುತ್ರಿಯಾದ ಯಮುನೆಯ ನೀಲಧಾರೆಯೂ ಗುಪ್ತಗಾಮಿನಿಯಾದ ಸರಸ್ವತಿಯೂ ಈ ಗಂಗೆಯೊಡನೆ

ಶುಕಪಿಕಬಕಕಾಕಕೋಕಘೂಕೈಃ
ನಿಭೃತವಿನಾದಿತಕೇಕಿಚಕ್ರವಾಕಪಾಕೈಃ ।
ಗಹನವಿಪಿನವೃಕ್ಷಮಸ್ತಕಸ್ಥೈಃ
ಘನಪಾಷಾಣಕಣಾಶನಾದಿತುಷ್ಟೈಃ ॥೫೯॥

ಕೃತಹುಂಕಾರಕಪೋತಚಾತಕೈಃ ॥೬೦॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಗಂಗಾನಿರ್ಗಮನ ನಿರೂಪಣಂ ಪ್ರಯಾಗಗಯಾಯೋಧ್ಯಾಮಹಿಮಾವರ್ಣನಂ ನಾಮ ತ್ರಿಂಶೋಽಧ್ಯಾಯಃ

---

ಸಂಗಮವನ್ನು ಪಡೆದು ಮತ್ತು ಹೆಚ್ಚು ಮಹತ್ವವನ್ನು ಉಂಟುಮಾಡಿರುವರು. ಆದ್ದರಿಂದಲೇ ಸಕಲ ದೇವದಾನವರೂ ಈ ಗಂಗಾನದಿಯನ್ನು ಸ್ತುತಿಸುವರು. ಪತಿಯ ಬಳಿಗೈದುವ ಸುದತಿಯಂತೆ ಈ ಗಂಗೆಯು ಸಮುದ್ರರಾಜನಲ್ಲಿಗೆ ಹೋಗುತ್ತಿರಲು ಅಕ್ಕಪಕ್ಕದ ತೀರದಲ್ಲಿರುವ ಋಷಿಗಳು ಈ ಗಂಗೆಗೆ ಪುಷ್ಪಾಂಜಲಿಯನ್ನು ಸಮರ್ಪಿಸಿ ಪೂಜಿಸುವರು. ॥೫೮॥

ಆ ಗಂಗಾನದಿಯು ಪ್ರೌಢವಾಗಿಯೂ ಗಂಭೀರವಾಗಿಯೂ ಪ್ರವಹಿಸುತ್ತಿರಲು ಆಯಾಯಾ ತೀರಪ್ರದೇಶದ ದಟ್ಟವಾದ ಆರಣ್ಯದಲ್ಲಿರುವ ಗಿಣಿ, ಕೋಗಿಲೆ, ಬಕಪಕ್ಷಿ, ಕಾಗೆ, ಗೂಬೆ, ನವಿಲು ಚಾತಕ ಚಕ್ರವಾಕ ಮುಂತಾದ ಪಕ್ಷಿಕುಲಗಳು ತಮ್ಮ ಕೋಲಾಹಲವನ್ನೂ ಆ ಪ್ರವಾಹದ ಶಬ್ದದೊಡನೆ ಬೆರಸಿ ಒಂದು ಅಪೂರ್ವವಾದ ಧ್ವನಿಯನ್ನು ಉಂಟುಮಾಡುವುವು. ಅಲ್ಲಿನ ಪಕ್ಷಿಗಳಿಗೆ ಕೆಲವಕ್ಕೆ ಕಲ್ಲೇ ಆಹಾರವಾಗಿರುವುದು. ಕೆಲವು ಧಾನ್ಯ ಕಣಗಳನ್ನೂ ತಿನ್ನುವುವು. ಮತ್ತೆ ಕೆಲವು ಹಣ್ಣು ಹಂಪಲಗಳನ್ನೂ ಸಹ ತಿಂದು ಸಂತುಷ್ಟವಾಗಿ ಧ್ವನಿಗೈಯ್ಯುತ್ತಾ ಗಂಗಾತೀರದ ರಮ್ಯತೆಯನ್ನು ಕ್ಷಣೇ ಕ್ಷಣೇ ಅಭಿವೃದ್ಧಿಪಡಿಸುವುವು. ಎಂದು ಶಿವನು ಪಾರ್ವತಿಗೆ ಗಂಗಾನದಿಯ ಮಹಿಮೆಯನ್ನು ವಿವರಿಸಿದನು. ॥೫೯-೬೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಐದನೆಯ ಅಂಶದಲ್ಲಿ ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಏಕತ್ರಿಂಶೋಽಧ್ಯಾಯಃ

॥ ಶಂಕರ ಉವಾಚ ॥

ಶ್ರೀಗಂಗಾ ಸಾಗರಂ ಗೌರಿ ಪುಣ್ಯಂ ಪಾಪನಿವಾರಣಂ ।
ಗಂಗಾತರಂಗಸಂಘಟ್ಟಭಿನ್ನವಾರ್ಧಿತರಂಗಕಂ ॥೧॥

ತಾಂ ಗಂಗಾಂ ಸಾಗರೋ ದೃಷ್ಟ್ವಾ ತರಂಗಾವಲಿಭಾಸುರಃ ।
ಹಸನ್ ಫೇನಗಣೈರ್ನೃತ್ಯನ್ ಸಮಾಶ್ಲಿಷ್ಯನ್ನಿವ ಪ್ರಿಯಾಂ ॥೨॥

ತರಂಗಹಸ್ತೈರ್ದೇವೇಶಿ ಗರ್ಜನ್ ಕೋಲಾಹಲೈ ರವೈಃ ।
ಗಂಗಾಜಲಾವಿಲತನುಸ್ತದಾಸೀತ್ಸಾಗರೋಂಬಿಕೇ ॥೩॥

---

## ಮೂವತ್ತನೆಯ ಅಧ್ಯಾಯ

ಈರೀತಿ ಗಂಗೆಯು ಎಲ್ಲೆಲ್ಲಿ ಪ್ರವಹಿಸಿದಳೋ ಅಲ್ಲಲ್ಲಿನ ಕ್ಷೇತ್ರಗಳನ್ನೂ ಜನಗಳನ್ನೂ ಸಹ ಪವಿತ್ರ ಪುಣ್ಯತಮಗಳನ್ನಾಗಿ ಮಾಡುತ್ತಾ, ಅಂತ್ಯದಲ್ಲಿ ಸಮುದ್ರ ರಾಜನನ್ನು ಸೇರುವಳು. ಸ್ವಾಭಾವಿಕವಾಗಿಯೇ ಪುಣ್ಯಾತ್ಮನೂ ಪಾಪಹರನೂ ಆಗಿರುವ ಸಮುದ್ರನು ಗಂಗೆಯ ಪ್ರವಾಹ ತರಂಗಗಳಿಂದ ಅಭಿವೃದ್ಧಿಯನ್ನೈದುವನು. ॥೧॥

ಈರೀತಿ, ಸುದತಿಯು ಬರುವ ತೆರದಲ್ಲಿ ತನ್ನ ಬಳಿಗೆ ಬಂದ ಗಂಗೆಯನ್ನು ಸಮುದ್ರರಾಜನೂ ಸಹ ಅತ್ಯಂತ ಪ್ರೀತ್ಯಾದರಪೂರ್ವಕವಾಗಿ ಬರಮಾಡಿಕೊಳ್ಳುವನು. ಅಲ್ಲಿನ ತರಂಗಗಳನ್ನೂ ಅವುಗಳ ಕೋಲಾಹಲ ಶಬ್ದವನ್ನೂ ಶುಭ್ರವಾದ ನೊರೆ

ತತ್ರ ಸಸ್ನುರ್ದೇವಗಣಾಸ್ತಥಾ ಮುನಿಗಣಾಶ್ಶಿವೇ ।
ಬ್ರಹ್ಮವಿಷ್ಣ್ವಾದಯೋ ದೇವಾಃ ಪರಂ ಹರ್ಷಮವಾಪ್ನುವನ್ ॥೪॥

ಸ್ನಾತ್ವಾ ಸಂತರ್ಪ್ಯ ಚ ಪಿತೄನ್ ಭಸ್ಮನೋದ್ಧೂಲ್ಯ ತೇ ತನುಂ ।
ದತ್ವಾ ದಾನಾನಿ ಪುಣ್ಯಾನಿ ಗಾವೋ ಭೂಮಿಂ ತಿಲಂ ಧನಂ ॥೫॥

ಮತ್ಪ್ರೀತ್ಯರ್ಥಂ ಮಹಾದೇವಿ ಬ್ರಾಹ್ಮಣೇಷು ತಪಸ್ವಿಷು ।
ಯತ್ರ ಗಂಗಾಸಾಗರಸ್ಯ ಸಂಗಮೋಽಸ್ತಿ ಮಹೇಶ್ವರಿ ॥೬॥

ತತ್ರ ಸ್ನಾನಂ ಕೃತಂ ಹ್ಯೇತತ್ಫಲದಂ ಸರ್ವಪಾಪಹೃತ್ ।
ಅನ್ಯತ್ರ ವಿಂಶತ್ಕೃಚ್ಛ್ರಾಣಿ ಪುರಭಿದ್ಯಃ ಪ್ರಕಲ್ಪಯತ್ ॥೭॥

---

ಗಳನ್ನೂ ನೋಡಿದರೆ ಸಮುದ್ರನು ಆನಂದದಿಂದ ಉಬ್ಬಿ ಕುಣಿಯುತ್ತಿರುವಂತೆಯೂ ನಗುತ್ತಿರುವಂತೆಯೂ ಗಂಗೆಗೆ ಹಸ್ತಲಾಘವವನ್ನು ಕೊಟ್ಟು ಅಪ್ಪಿಕೊಳ್ಳುತ್ತಿರುವ ನಂತೆಯೂ ಕಾಣುತ್ತಿರುವನು. ॥೨-೩॥

ಆಗ ಗಂಗಾಸಾಗರ ಸಂಗಮದಲ್ಲಿ ದೇವತೆಗಳೆಲ್ಲರೂ ಮಿಂದರು. ಇಂಥ ಪವಿತ್ರ ಸಂಧಿಯು ತಮಗೆ ದೊರೆಕಿತೆಂದು ಅತ್ಯಂತ ಆನಂದಪೂರ್ವಕವಾಗಿ ಬ್ರಹ್ಮ ವಿಷ್ಣು ಮುಂತಾದವರೂ ಸಕಲ ಋಷಿಜನರೂ ಸಹ ಅಲ್ಲಿಗೆ ಹೋಗಿ ಸ್ನಾನಮಾಡಿ ಪರಮಾನಂದಭರಿತರಾದರು. ॥೪॥

ಈ ರೀತಿ ಅತ್ಯಂತ ಉತ್ಸವಪೂರ್ವಕವಾಗಿ ಮಿಂದ ಬಳಿಕ ಅವರೆಲ್ಲರೂ ಭಸ್ಮರುದ್ರಾಕ್ಷಿಗಳನ್ನು ಧರಿಸಿಕೊಂಡು ಪಿತೃಗಳಿಗೆ ತರ್ಪಣತಿಲಾಂಜಲಿಯನ್ನು ಕೊಟ್ಟರು. ಅನಂತರ ಶಿವಪ್ರೀತ್ಯರ್ಥವಾಗಿ ಅನೇಕ ಮಹಾದಾನಗಳಾದ ಗೋದಾನ ಭೂದಾನ ತಿಲದಾನ ದ್ರವ್ಯದಾನ ಮುಂತಾದವುಗಳನ್ನು ತಪಸ್ವಿಗಳೂ ಯೋಗ್ಯರೂ ಆದ ಬ್ರಾಹ್ಮಣರಿಗೆ ಕೊಟ್ಟರು. ॥೫॥

ಆದುದರಿಂದ ಗಂಗಾಸಾಗರಸಂಗಮವು ಅತ್ಯಂತ ಪುಣ್ಯಕರವಾದದ್ದು. ಆ ಸಂಗಮಸ್ಥಳದಲ್ಲಿ ಮಾಡಿದ ಪುಣ್ಯಕರ್ಮಗಳು ಇತರ ಸ್ಥಳಗಳಲ್ಲಿ ಮಾಡಿದ ಕರ್ಮಗಳಿಗಿಂತ ಇಪ್ಪತ್ತು ಪಾಲು ಅಧಿಕ ಫಲವನ್ನು ಕೊಡುವುವು. ಆ ಸಂಗಮದಲ್ಲಿ ಸ್ನಾನಪಾನಾದಿಗಳನ್ನು ಮಾಡಿದರೆ ಸಕಲ ಪಾಪಗಳೂ ದೂರವಾಗುವುವು. ॥೬-೭॥

ತತ್ರಾಸ್ತಿ ಮೇ ಬಿಲ್ವವನಂ ನವಾರುಣದಳಾನ್ವಿತಂ ।
ಕದಂಬನಿಂಬಪ್ರಸವೈರ್ನೀಪಮಂದಾರಸುಂದರಂ ॥೮॥

ತಮಾಲತಿಲಕೋಪೇತಂ ಬಕುಲೋದ್ದಾಲಕೇತಕಂ ।
ತಮಾಲತಾಲಹಿಂತಾಲಸಾಲನೀಲೀವಿರಾಜಿತಂ ॥೯॥

ಗಂಗಾತೀರೇ ಮಹಾನೀರಭೂಮಿತರ್ಪಿತಭೂರುಹಾಃ ।
ನವೋರುಬಿಲ್ವಶಾಖಾಗ್ರಫಲಭಾರಾವನಾಮಿತಂ ॥೧೦॥

ಪುಷ್ಪಸೌರಭ್ಯಮಧುರಂ ಗಂಧಮಾರುತವೀಜಿತಂ ।
ವಸಂತಮುಕುಲೋತ್ಫುಲ್ಲಂ ಮಲ್ಲೀವಲ್ಲೀವಿರಾಜಿತಂ ॥೧೧॥

ಕೇತಕೋದ್ದಾಮರಜಸಾ ಗಂಧೀಕೃತದಿಗಂತರಂ ।
ವೇಣುವೇತ್ರಗಣಚ್ಛನ್ನಂ ನಾನಾಶಕುನಿನಾದಿತಂ ॥೧೨॥

---

ಆ ಸಂಗಮಸ್ಥಳದಲ್ಲಿ ಒಂದು ಬಿಲ್ವವನವುಂಟು. ಆ ವನವನ್ನು ಇಂದ್ರನು ನಿರ್ಮಿಸಿರುವನು. ಅಲ್ಲಿ ಬಿಲ್ವಪತ್ರೆಯು ಯಾವಾಗಲೂ ಸಮೃದ್ಧವಾಗಿ ದೊರೆಯುವುದು. ಬಿಲ್ವವೃಕ್ಷಗಳು ಸದಾ ಚಿಗುರಿಕೊಂಡು ಅಲ್ಲಿ ರಮ್ಯವಾಗಿರುವುವು. ಆ ವನದಲ್ಲಿ ಇತರ ಜಾತಿಯ ಮರಗಳೂ ಇರುತ್ತವೆ. ತಾಳೆ, ಆಲ, ನಿಂಬೆ, ನೇರಳೆ, ಈಚಲ ಅಶೋಕ, ಸಜ್ಜ, ಬಕುಲ ಮುಂತಾದ ನಾನಾಬಗೆಯ ವೃಕ್ಷಗಳೂ ಸಹ ಅಲ್ಲಿ ಬೆಳೆದು ಆ ವನದ ರಮ್ಯತೆಯನ್ನು ಅತ್ಯಧಿಕವಾಗಿ ಮಾಡಿರುವುವು. ॥೮-೯॥

ಆ ಗಂಗಾ ತೀರದ ಶೀತಲವಾದ ಭೂಮಿಯಲ್ಲಿ ಮರಗಳು ಹಚ್ಚನೆ ಹಸುರಾಗಿ ಬೆಳೆದಿರುವುವು. ಬಿಲ್ವವೃಕ್ಷಗಳಲ್ಲಿ ಸಕಲ ಶಾಖೋಪಶಾಖೆಗಳಲ್ಲಿಯೂ ಸಹ ಪತ್ರೆಗಳೂ ಕಾಯಿಗಳೂ ಸಮೃದ್ಧವಾಗಿರುವುದರಿಂದ ಕೊಂಬೆಗಳು ಬಗ್ಗಿರುತ್ತವೆ. ಆ ವನದಲ್ಲಿರುವ ಪುಷ್ಪಗಳ ಸುವಾಸನೆಯು ಬಹಳ ಮನೋಹರವಾಗಿರುತ್ತದೆ. ಅಲ್ಲಿನ ಮಂದಮಾರುತವು ಶರೀರಕ್ಕೆ ಅತ್ಯಂತ ಹಿತಕರವಾಗಿರುತ್ತದೆ. ಆ ವನದಲ್ಲಿ ನಿರ್ಬಾಧವಾಗಿ ಬೆಳೆದಿರುವ ಮಲ್ಲಿಗೆಯೇ ಮೊದಲಾದ ಬಳ್ಳಿಗಳ ಮತ್ತು ಹೂಗಳ ಸೊಬಗು ವರ್ಣನಾತೀತವಾಗಿರುತ್ತದೆ. ॥೧೦-೧೧॥

ಅಲ್ಲಿ ಬೆಳೆದಿರುವ ಕೇತಕೀಪುಷ್ಪಗಳ ಪರಾಗಗಂಧಗಳಿಂದ ಅಖಂಡದಿಗಂತವೂ ಸುವಾಸಿತವಾಗಿರುತ್ತದೆ. ಆ ತೀರದಲ್ಲಿ ಬೆಳೆದ ಬಿದುರುಗಳ ರಮ್ಯತೆಯು ಅಲೌಕಿಕ

ಗಂಗಾಸಾಗರತೀರಸ್ಥಂ ವನಮೇಕಮಭೂನ್ಮಮ ।
ತೀರಸಂಸ್ಥಮಹಾಲಿಂಗಂ ಮಮ ಸರ್ವಾರ್ಥದಾಯಕಂ ॥೧೩॥

ತತ್ರ ಶೈವವರಾಸ್ಸಂತಿ ಗಂಗಾಸಾಗರವಾಸಿನಃ ।
ಭಸ್ಮರುದ್ರಾಕ್ಷಸಂಪನ್ನಾಃ ಪಂಚಾಕ್ಷರಪರಾಯಣಾಃ ॥೧೪॥

ರುದ್ರಲಿಂಗಾರ್ಚನಪರಾಃ ರುದ್ರಾಧ್ಯಾಯಜಪಾದರಾಃ ।
ತದ್ಬಿಲ್ವವನಜಾಪಾರಬಿಲ್ವಪತ್ರೈಸ್ತದಾಂಬಿಕೇ ॥೧೫॥

ಸಾಗರೇಶಂ ಮಹಾಲಿಂಗಂ ದೃಷ್ಟ್ವಾ ನತ್ವಾ ಚ ಭಕ್ತಿತಃ ।
ಬಿಲ್ವಪತ್ರೈಸ್ಸಮಭ್ಯರ್ಚ್ಯ ವಸಂತಿ ನಿಯಮಾ ಹಿ ತೇ ॥೧೬॥

ಗಂಗಾಸಾಗರಮಾಸಾದ್ಯ ಕ್ಷೇತ್ರಮತ್ಯಂತಪುಣ್ಯದಂ ।
ಸೋಽಶ್ವಮೇಧಮವಾಪ್ನೋತಿ ದೃಷ್ಟ್ವಾ ಮಾಂ ಸಾಗರೇಶ್ವರಂ ॥೧೭॥

---

ವಾಗಿರುತ್ತದೆ. ಆ ವನದ ಪಕ್ಷಿಕುಲಗಳ ಕಲಕಲಶಬ್ದವು ಮಂಗಳವಾದ್ಯದಂತೆ ಕೇಳಲು ಸೊಗಸಾಗಿರುವುದು. ಈರೀತಿ ಗಂಗಾಸಾಗರಸಂಗಮದಲ್ಲಿರುವ ಆ ವನದಲ್ಲಿ ಒಂದು ಶಿವಲಿಂಗವಿದೆ. ಅದರಲ್ಲಿ ನನ್ನ ಪೂರ್ಣವಾದ ಸಾನ್ನಿಧ್ಯವಿರುವುದರಿಂದ ಆ ಲಿಂಗವು ಪುಣ್ಯಕರವೂ ಸಕಲೇಷ್ಟಪ್ರದವೂ ಆಗಿರುತ್ತದೆ. ॥೧೨-೧೩॥

ಆ ಗಂಗಾಸಾಗರಸಂಗಮದಲ್ಲಿ ಅನೇಕ ಶಿವಭಕ್ತಾಗ್ರಣಿಗಳು ವಾಸಿಸುವರು. ಅವರೆಲ್ಲರೂ ಪರಮಶಿವಧರ್ಮನಿರತರಾಗಿರುವರು. ಸದಾ ಭಸ್ಮರುದ್ರಾಕ್ಷಿಗಳನ್ನು ಧರಿಸುವರು. ಪಂಚಾಕ್ಷರೀ ಜಪವನ್ನೂ ಶ್ರೀರುದ್ರಾಧ್ಯಾಯದ ಪಾರಾಯಣವನ್ನೂ ಸಹ ಅನವರತವೂ ಮಾಡುವರಲ್ಲದೇ ಸದಾ ಶಿವಪೂಜೆಯಲ್ಲೇ ಆಸಕ್ತರಾಗಿರುವರು. ॥೧೪॥

ಗಂಗಾಸಾಗರ ಸಂಗಮದಲ್ಲಿರುವ ಮಹಾಲಿಂಗವನ್ನು ಆ ಶಿವಭಕ್ತರು ನಿತ್ಯವೂ ನಿಯಮಪೂರ್ವಕವಾಗಿ ಸಂದರ್ಶಿಸುವರು ನಮಿಸುವರು. ಮತ್ತು ಆ ಬಿಲ್ವವನದಿಂದ ಯಥೇಷ್ಟಬಿಲ್ವಪತ್ರೆಗಳನ್ನು ತಂದು ಭಕ್ತಿಯಿಂದ ಪೂಜಿಸುವರು. ॥೧೫-೧೬॥

ಯಾವ ಮನುಜನು ಆ ಗಂಗಾಸಾಗರಸಂಗಮದ ಯಾತ್ರೆಯನ್ನು ಮಾಡಿ ಸಾಗರೇಶ್ವರನಾದ ನನ್ನನ್ನು ಸಂದರ್ಶಿಸುವನೋ ಅವನು ಒಂದು ಅಶ್ವಮೇಧಯಾಗದ ಫಲವನ್ನು ಪಡೆಯುವನು. ॥೧೭॥

ಸಾಗರೇ ಚಾಥ ಗಂಗಾಯಾಃ ಸ್ನಾತ್ವಾ ಪುಣ್ಯಪ್ರದೇಽಂಬಿಕೇ ।
ಬಿಲ್ವಪತ್ರೈಸ್ಸಮಭ್ಯರ್ಚ್ಯ ಸ್ನಾಪ್ಯ ಸಂಗಮವಾರಿಭಿಃ ॥೧೮॥

ತಸ್ಮಾಚ್ಛತಗುಣಂ ಪುಣ್ಯಂ ಗಂಗಾಸಾಗರಮಜ್ಜನಂ ।
ತತ್ರ ಸಂತರ್ಪ್ಯ ಚ ಪಿತೄನ್ ಶ್ರಾದ್ಧಂ ದದ್ಯಾಚ್ಚ ಯೋ ನರಃ ॥೧೯॥

ತಸ್ಯ ವರ್ಷಶತಂ ತೃಪ್ತಾಃ ಪಿತರಸ್ಸಪಿತಾಮಹಾಃ ।
ಏಕಂ ಕೋಟಿಗುಣಂ ಭೋಜ್ಯಂ ಬ್ರಾಹ್ಮಣಂ ಚ ಮಹೇಶ್ವರಿ ॥೨೦॥

ದತ್ವೈಕಾಂ ಗಾಂ ದರಿದ್ರಾಯ ಶತಗೋದಾನಪುಣ್ಯಭಾಕ್ ।
ಯೋ ಲಿಂಗಂ ಸ್ಥಾಪಯೇನ್ನೀರೈರ್ಗಂಗಾಸಾಗರಸಂಭವೈಃ ॥೨೧॥

ಕ್ಷೀರಕುಂಭಶತೈಃ ಸ್ನಾಪ್ಯ ಯತ್ಫಲಂ ತಚ್ಛತಾಧಿಕಂ ।
ತರಂಗಮಾಲಾಕಲಿತಗಂಗಾಸಾಗರಸಂಗಮೇ ॥೨೨॥

---

ಕೇವಲ ಗಂಗಾನದಿಯಲ್ಲಿ ಅಥವಾ ಸಮುದ್ರದಲ್ಲಿ ಸ್ನಾನಮಾಡಿದರೇ ಅಪಾರಪುಣ್ಯಫಲವು ದೊರಕುವುದಿರಬೇಕಾದರೆ ಗಂಗಾಸಾಗರಸಂಗಮದಲ್ಲಿ ಸ್ನಾನವನ್ನು ಮಾಡಿ ಸಂಗಮಜಲದಿಂದ ಬಿಲ್ವಪತ್ರಾದಿಗಳಿಂದ ಸಾಗರೇಶ್ವರನಿಗೆ ಅಭಿಷೇಕ ಪೂಜಾದಿಗಳನ್ನು ಮಾಡಿದಲ್ಲಿ ಎಷ್ಟು ಪುಣ್ಯದೊರೆಯುವುದು ? ಖಂಡಿತವಾಗಿಯೂ ನೂರು ಪಾಲು ಹೆಚ್ಚು ಪುಣ್ಯಫಲ ದೊರೆಯುವುದರಲ್ಲಿ ಸಂದೇಹವೇ ಇಲ್ಲ. ॥೧೮॥

ಆ ಸಂಗಮದಲ್ಲಿ ಪಿತೃಗಳಿಗೆ ಯಾವನು ತರ್ಪಣತಿಲಾಂಜಲಿಯನ್ನು ಕೊಡುವನೋ ಮತ್ತು ಶ್ರಾದ್ಧವನ್ನು ಮಾಡುವನೋ ಆತನ ಪಿತೃಪಿತಾಮಹಾದಿಗಳು ನೂರಾರು ವರ್ಷಪರ್ಯಂತ ಸಂತೃಪ್ತರಾಗುವರು. ಒಬ್ಬ ಬ್ರಾಹ್ಮಣನಿಗೆ ಅಲ್ಲಿ ಭೋಜನಮಾಡಿಸಿದರೆ ಕೋಟಿಬ್ರಾಹ್ಮಣಸಂತರ್ಪಣೆಯನ್ನೇ ಮಾಡಿದಂತಾಗುವುದು. ॥೧೯-೨೦॥

ಸತ್ಪಾತ್ರನಾಗಿರುವ ದರಿದ್ರನಿಗೆ ಈ ಸಂಗಮಸ್ಥಳದಲ್ಲಿ ಒಂದು ಗೋವನ್ನು ದಾನಮಾಡಿದರೆ ನೂರುಗೋದಾನಮಾಡಿದಷ್ಟು ಪುಣ್ಯವು ಲಭಿಸುವುದು. ಈ ಸಂಗಮದಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಿದರಂತೂ ಅನಂತ ಪುಣ್ಯವು ದೊರೆಯುವುದು. ॥೨೧॥

ಸ್ವಪ್ರತಿಷ್ಠಿತವಾದ ಶಿವಲಿಂಗಕ್ಕೆ ಶತಕುಂಭದಲ್ಲಿ ಪೂರ್ಣವಾದ ಕ್ಷೀರದಿಂದಲೂ

ತತ್ತರಂಗೋತ್ಥವಾತೇನ ಪಾಪಭಂಗಃ ಪ್ರಜಾಯತೇ ।
ತತ್ರ ಸ್ನಾತ್ವಾ ತು ಮುನಯೋ ಗ್ರಹಣೇ ಚಂದ್ರಸೂರ್ಯಯೋಃ ॥೨೩॥

ಪಾಪಸಂಘೈರ್ವಿಮುಚ್ಯಂತೇ ಸತ್ಯಮೇವ ಮಹೇಶ್ವರಿ ।
ವ್ಯತೀಪಾತೇ ವೈಧೃತೌ ಚ ಅಯನೇ ಸಂಕ್ರಮೇ ತಥಾ ॥೨೪॥

ಪರ್ವಕಾಲೇಷು ಸರ್ವೇಷು ಪಕ್ಷೇ ಚೈವಾಥ ಪರ್ವಣಿ ।
ಕೃಷ್ಣಾಂಗಾರಚತುರ್ದಶ್ಯಾಂ ಗಂಗಾಸಾಗರಸಂಗಮೇ ॥೨೫॥

ಮಹೋದಧೌ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಪಂಚಭಿಃ ಪಾತಕೈರ್ಘೋರೈರ್ಯಸ್ತತ್ರ ಸ್ನಾತ್ವಾ ಮಹೇಶ್ವರಿ ॥೨೬॥

ಗ್ರಹಣೇ ಭಕ್ತಿಮಾನ್ ಸ್ನಾತ್ವಾ ದತ್ವಾ ಚ ತಿಲಪರ್ವತಂ ।
ಮಲ್ಲಿಂಗಂ ಸಂಪ್ರಪೂಜ್ಯೈವ ಸಾಗರೇಶಂ ವಿಮುಚ್ಯತೇ ॥೨೭॥

---

ಸಂಗಮಜಲಧಾರೆಯಿಂದಲೂ ಅಭಿಷೇಕವನ್ನು ಮಾಡಿದರೆ ಶತಗುಣ ಹೆಚ್ಚು ಪುಣ್ಯ ಫಲವು ಲಭಿಸುವುದು. ॥೨೨॥

ಆ ಸಂಗಮದ ಮೇಲಿಂದ ಬೀಸಿಕೊಂಡು ಬರುವ ವಾಯುವಿನ ಸೇವನೆಯಿಂದಲೇ ಅನೇಕ ಪಾಪಗಳು ಪರಿಹೃತವಾಗುವುವು. ಸೂರ್ಯಚಂದ್ರಗ್ರಹಣ ಸಮಯದಲ್ಲಿ ಮುನಿಗಳು ಆ ಸಂಗಮದಲ್ಲಿ ಸ್ನಾನಮಾಡಿ ಸಕಲ ಪಾಪಗಳನ್ನೂ ಕಳೆದುಕೊಂಡು ಪವಿತ್ರಾತ್ಮರಾಗುವರು. ॥೨೩॥

ವ್ಯತೀಪಾತ ಮತ್ತು ವೈಧೃತಿ ಯೋಗಗಳ ದಿನವೂ, ಉತ್ತರಾಯಣ ದಕ್ಷಿಣಾಯನ ಸಂಕ್ರಮಣಗಳ ದಿನಗಳೂ, ಎಲ್ಲಾ ವರ್ಷ ಮಾಸಪಕ್ಷಗಳ ಪರ್ವದಿನಗಳೂ ಕೃಷ್ಣಚತುರ್ದಶಿಯೂ ಸಹ ಸಂಗಮಸ್ನಾನಕ್ಕೆ ಪ್ರಶಸ್ತವಾದವುಗಳು. ಆ ದಿನಗಳಲ್ಲಿ ಸಮುದ್ರಸ್ನಾನವನ್ನು ಮಾಡಿದರೆ ಮನುಜನು ಸಮಸ್ತ ಪಾಪಗಳಿಂದಲೂ ವಿಮುಕ್ತನಾಗುವನು. ॥೨೪-೨೫॥

ಅತ್ಯಂತ ಭಯಂಕರವಾದ ಪಂಚಮಹಾಪಾಪಗಳನ್ನು ಮಾಡಿದವನಾಗಿದ್ದರೂ ಸಹ ಈ ಸಂಗಮದಲ್ಲಿ ಚಂದ್ರಸೂರ್ಯಗ್ರಹಣಗಳ ದಿನ ಭಕ್ತಿಯಿಂದ ಸ್ನಾನಮಾಡಿ ಸಾಗರೇಶ್ವರನನ್ನು ಪೂಜಿಸಿದಲ್ಲಿ ಆ ಪಾಪಗಳಿಂದ ಬಿಡಲ್ಪಟ್ಟು ಪರಿಶುದ್ಧನಾಗುವನು. ಮತ್ತು ಈ ಕ್ಷೇತ್ರದಲ್ಲಿ ಯಥೇಷ್ಟವಾಗಿ ತಿಲದಾನವನ್ನು ಮಾಡಿದರೂ ಸಹ ಪವಿತ್ರನಾಗುವನು. ॥೨೬-೨೭॥

ಮಹಾದಾನಾನಿ ತತ್ರೈವ ನೃಪೈಃ ಪೂರ್ವಂ ಕೃತಾನಿ ಹಿ ।
ಇಕ್ಷ್ವಾಕುಕುಕ್ಷಿನಾಭಾಗಮಾಂಧಾತೃಸಗರಾದಿಭಿಃ ॥೨೮॥

ಯಯಾತಿನಹುಷಾದ್ಯೈಶ್ಚ ದೇವಿ ಶ್ರದ್ಧಾಪುರಸ್ಸರಂ ।
ಸಾಗರೇಶಸ್ಯ ದೇವಸ್ಯ ಬದ್ಧಸ್ತೈಸ್ಸ ಶಿವಾಲಯಃ ॥೨೯॥

ಪೂಜಿತಸ್ಸಾಗರೇಶೋಽಪಿ ನಾನಾವಿಭವತಸ್ಸುರೈಃ ।
ತತ್ರ ಸ್ನಾತ್ವಾ ಸಾಗರೇಶಂ ಪ್ರಣಮ್ಯ ನಿಯತೋ ನರಃ ॥೩೦॥

ಸ್ತೋತ್ರಮೇತತ್ಪಠನ್ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥೩೧॥

॥ ಸೂತ ಉವಾಚ ॥

ಭಗಘ್ನಂ ಪುರಘ್ನಂ ಮಖಘ್ನಂ ಯಮಘ್ನಂ
ಭಜಾಮ್ಯಂಧಕಘ್ನಂ ಗಜಘ್ನಂ ಸ್ಮರಘ್ನಂ ।
ಉಪೇಂದ್ರಾದಿವಂದ್ಯಂ ಮಹಾಶೈವಹೃದ್ಯಂ
ಮಹಾಗದ್ಯಪದ್ಯೈಃಸ್ತುತಂ ತತ್ತ್ವಮಾದ್ಯಂ ॥೩೨॥

---

ಪೂರ್ವಕಾಲದ ಮಹಾಮಹಾ ರಾಜಾಧಿರಾಜರೂ ಸಹ ಈ ಕ್ಷೇತ್ರದಲ್ಲಿ ಮಹಾದಾನಗಳನ್ನು ಮಾಡಿ ಪುಣ್ಯಸಂಚಯಮಾಡಿಕೊಂಡಿರುವರು. ಇಕ್ಷ್ವಾಕು, ಕುಕ್ಷಿ, ನಾಭಾಗ, ಮಾಂಧಾತೃ, ಸಗರ, ಯಯಾತಿ, ನಹುಷ ಮುಂತಾದ ರಾಜರು ಈ ಸಂಗಮಮಾಹಾತ್ಮ್ಯೆಯ ವಿಷಯದಲ್ಲಿ ಪರಮಶ್ರದ್ಧಾಳುಗಳಾಗಿದ್ದರು. ಅವರೇ ಸಾಗರೇಶ್ವರನ ಶಿವಾಲಯುವನ್ನು ಅದ್ಭುತವಾಗಿ ಕಟ್ಟಿಸಿರುವರು. ॥೨೮-೨೯॥

ಆ ಸಾಗರೇಶ್ವರಲಿಂಗವನ್ನು ಸಕಲ ದೇವತೆಗಳೂ ಸಹ ತಮ್ಮ ತಮ್ಮ ಹಿರಿಮೆಗೆ ಅನುಗುಣವಾಗಿ ಅತ್ಯಂತ ವೈಭವದಿಂದ ಪೂಜಿಸಿರುವರು. ಆದುದರಿಂದ ಇಂಥ ಮಹಿಮಾಪೂರ್ಣವಾದ ಸಂಗಮದಲ್ಲಿ ಯಾವ ಮನುಜನು ನಿಯಮನಿಷ್ಠನಾಗಿ ಸ್ನಾನವನ್ನು ಮಾಡಿ, ಸಾಗರೇಶ್ವರಲಿಂಗಕ್ಕೆ ಪೂಜಾಪ್ರಣಾಮಗಳನ್ನರ್ಪಿಸಿ, ಈ ಸ್ತೋತ್ರವನ್ನು ಹೇಳಿ ಸ್ತುತಿಸುವನೋ ಅವನು ನಿಷ್ಪಾಪನೂ ಪವಿತ್ರನೂ ಆಗುವನು. ಎಂದು ಪರಶಿವನು ಪಾರ್ವತಿಗೆ ಬೋಧಿಸಿದುದನ್ನು, ॥೩೦-೩೧॥

ಸೂತಮಹರ್ಷಿಗಳು ಋಷಿಜನರಿಗೆ ಹೇಳುತ್ತಾ ಹೀಗೆಂದರು. “ ಮಹರ್ಷಿವರ್ಯರೇ, ಅವರು ಸ್ತುತಿಸಿದಂತೆಯೇ ಪರಶಿವನು ಭಗನಾಮಕನಾದ

ಸುವರ್ಣಾಲಾಂ ಪಿಶಂಗಂ ದಯಾಸ್ರಾವ್ಯಪಾಂಗಂ
ಭಜೇ ಲಿಂಗಸಂಗಂ ಪದಾರಕ್ಷಭಂಗಂ ।
ಕ್ಷಯದ್ವೀರವೀಶಂ ಮಹಾಜ್ಞಾನಕೋಶಂ
ಮಹೇಶಂ ಪ್ರಕಾಶಂ ಕರಾಬ್ಜೇ ಹುತಾಶಂ ॥೩೩॥

ಭಜಾಮ್ಯೇಕಮೀಶಂ ಗಲೇ ನೀಲನೀಲಂ
ಮಹಾಶೈವಶೀಲಂ ಜಗತ್ಕೃತ್ಯಲೀಲಂ ।
ಭಜೇ ಕಾಲಕಾಲಂ ಭಜೇ ಲಿಂಗಸಂಗಂ
ಪದಾರಕ್ಷಭಂಗಂ ಹೃದಬ್ಜಾಂತರಂಗಂ ॥೩೪॥

---

ಸೂರ್ಯನನ್ನು ದಕ್ಷಯಜ್ಞದಲ್ಲಿ ನಾಶಮಾಡಿರುವನು. ಅಲ್ಲದೆ ಮಹಾದೇವನು ತ್ರಿಪುರಾಸುರರನ್ನು ಕೊಂದವನು. ಯಮನನ್ನೂ, ದಕ್ಷಯಜ್ಞನನ್ನೂ ಅಪಮಾನಗೊಳಿಸಿದವನು. ಅಂಧಕಾಸುರ, ಗಜಾಸುರ, ಮನ್ಮಥ ಮುಂತಾದ ರಾಕ್ಷಸರನ್ನು ನಿರ್ಮೂಲಗೊಳಿಸಿದವನು. ಇಂತಹ ಮಹಾದೇವನನ್ನು ಉಪೇಂದ್ರಾದಿಗಳು ಸಹ ಸರ್ವದಾ ಸ್ತುತಿಸುತ್ತಿರುವರು. ಗದ್ಯಪದ್ಯಾತ್ಮಕವಾಗಿ ಆ ಶಂಕರನು ಸರ್ವದಾ ಸರ್ವರಿಂದಲೂ ಸ್ತುತಿಸಲ್ಪಡುತ್ತಿರುವನು. ॥೩೨॥

ಮಹಾದೇವನ ಶಿರೋಭಾಗವು ಸುವರ್ಣದ ಜಟೆಯಿಂದ ಪ್ರಕಾಶಿಸುತ್ತಿರುವುದು. ಕಟಾಕ್ಷವೀಕ್ಷಣವು ಪರಶಿವನ ದಯಾರಸವನ್ನು ಎರಚುತ್ತಿರುವುದು. ಪರಶಿವನು ಸರ್ವದಾ ಲಿಂಗಾಂತರ್ವರ್ತಿಯು. ಪಾದಾಕ್ರಾಂತರಾಗಿ ಬಂದವರನ್ನು ತಪ್ಪದೆ ಸಲಹುವವನು. ಸಕಲ ಶತ್ರುಗಳನ್ನೂ ಕ್ಷಣಕಾಲದಲ್ಲಿ ನಾಶಮಾಡುವಷ್ಟು ಶಕ್ತನು. ಅಂತಹ ಅಗ್ನಿನೇತ್ರನೂ, ಅಗ್ನಿಹಸ್ತನೂ ಆದ ಮಹೇಶ್ವರನಿಗೆ ನಾನು ಭಕ್ತಿಯಿಂದ ವಂದಿಸುವೆನು. ॥೩೩॥

ಲೋಕೈಕರಕ್ಷಕನೂ, ನೀಲಕಂಠನೂ, ಮಹಾತ್ಮರಾದ ಶೈವರಲ್ಲಿ ಅನುರಾಗವುಳ್ಳವನೂ, ಜಗದ್ವ್ಯಾಪಾರವನ್ನೇ ತನ್ನ ಲೀಲೆಯನ್ನಾಗಿ ಮಾಡಿಕೊಂಡಿರುವವನೂ ಆದ ಮಹಾದೇವನನ್ನು ಸರ್ವದಾ ಸೇವಿಸುವೆನು. ಮಹಾದೇವನು ಕಾಲನಿಗೂ ಕಾಲನಂತಿರುವವನು. ಮುನಿಜನರ ಹೃದಯಕಮಲದಲ್ಲಿ ಅಡಗಿರುವವನು. ಇಂತಹ ಶಿವಲಿಂಗಾಂತರ್ವರ್ತಿಯಾದ ಮಹಾದೇವನಿಗೆ ವಂದಿಸುವೆನು ಎಂದು ಸದಾ ಶಿವನನ್ನು ಸ್ತುತಿಸಿ ಮುಂದಿನ ಪಾರ್ವತೀಪರಶಿವರ ಸಂವಾದವನ್ನು ಸೂತಮುನಿಯು ಮುಂದುವರಿಸಲಾರಂಭಿಸಿದನು. ॥೩೪॥

ಸ್ತೋತ್ರವರ್ಯೇಣ ಮಾಂ ಭಕ್ತ್ಯಾಸ್ತುವನ್ ಸಾಗರಮೀಶ್ವರಂ ।
ಸರ್ವಾನ್ ಕಾಮಾನವಾಪ್ನೋತಿ ಪಾಪೇಭ್ಯಶ್ಚ ಪ್ರಮುಚ್ಯತೇ ॥೩೫॥

ಅತ್ರೇತಿಹಾಸಂ ವಕ್ಷ್ಯಾಮಿ ಸಾವಧಾನಮನಾಃ ಶೃಣು
ತತ್ರ ಬಿಲ್ವವನೇ ಕಶ್ಚಿದಾಸೀದ್ಭಿಲ್ಲೋ ಧನುರ್ಧರಃ ॥೩೬॥

ಸ ಬಿಲ್ವಭೂರುಹಾಣಾಂ ಚ ಪಾಲಕೋಭೂಚ್ಛುಚಿಸ್ಮಿತೇ ।
ತಸ್ಯಾಪಾರೈಃ ಪುಣ್ಯಬಲೈಃ ಭಿಲ್ಲಸ್ಯಾಪ್ಯಭವನ್ಮತಿಃ ॥೩೭॥

ವನದಂತಿಭಯಾರ್ಥಂ ಚ ಸರ್ವೇ ಕಂಟಕಪಂಕ್ತಿಭಿಃ ।
ವನಸ್ಯಾವರಣಂ ಚಕ್ರೇ ಪ್ರಬಲೈಃ ಕಾಷ್ಠಸಂಗಮೈಃ ॥೩೮॥

ವರಾಹಮಹಿಷೀಣಾಂ ಚ ಗಜಶುಂಡಾರದೈಸ್ತದಾ ।
ವೃಕ್ಷಮೂಲಾನಿ ಭಜ್ಯಂತೇ ಮೃಗಾಣಾಂ ಚ ಭಯಾತ್ತದಾ ॥೩೯॥

ಮತ್ತಾ ಕರಟಿನೋ ಘೋರಾ ಸ್ವಶುಂಡಾವಲಯೋಧೃತಾಂ ।
ನವಾರುಣಾಂ ಬಿಲ್ವಶಾಖಾಂ ಭಕ್ತ್ವಾ ಭುಕ್ತ್ವಾ ಪ್ರಯಾಂತಿ ಚ ॥೪೦॥

---

ಈರೀತಿ ಸಾಗರೇಶ್ವರಸ್ತುತಿಯನ್ನು ಅರಿತು ಯಾರು ನನ್ನನ್ನು ಸ್ತುತಿಸುವರೋ ಅವರಿಗೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವಲ್ಲದೆ ಪಾಪವೆಲ್ಲಾ ನಿವಾರಣೆಯಾಗುವುದು. ದೇವಿಯೇ, ಇದಕ್ಕೆ ಸಂಬಂಧಿಸಿದ ಒಂದು ಹಿಂದಿನ ಇತಿಹಾಸವನ್ನು ಹೇಳುವೆನು ಕೇಳು ಎಂದು ಶಂಕರನು ಒಂದು ಕಥೆಯನ್ನು ಬೋಧಿಸಿದನು. ಬಿಲ್ವವನದಲ್ಲಿ ಒಬ್ಬ ಭಿಲ್ಲನು ಧನುರ್ಧಾರಿಯಾಗಿಯೇ ಸಂಚರಿಸಿ ಆದರಿಂದ ತನ್ನ ಜೀವನವನ್ನು ಸಾಗಿಸುತ್ತಿದ್ದನು. ॥೩೫-೩೬॥

ಆದರೆ ಆತನು ಮುಖ್ಯವಾಗಿ ಬಿಲ್ವವೃಕ್ಷಗಳನ್ನು ಮಾತ್ರ ತಪ್ಪದೆ ರಕ್ಷಿಸುತ್ತಿದ್ದನು. ಯಾವುದೋ ಅಪೂರ್ವ ಪುಣ್ಯವಿಶೇಷದಿಂದ ಆತನಿಗೆ ಆ ಬುದ್ಧಿಯೊದಗಿದ್ದಿತು. ಕಾಡಾನೆಗಳಿಂದ ಬಿಲ್ವವೃಕ್ಷಕ್ಕೆ ಬಾಧೆ ತಟ್ಟದಂತೆ ಆತನು ಮರಗಳ ಸುತ್ತಲೂ ಮುಳ್ಳುಗಳಿಂದಲೂ ಬಲಿಷ್ಠವಾದ ಮರಗಳಿಂದಲೂ ಬೇಲಿಹಾಕಿದ್ದನು. ॥೩೭-೩೮॥

ಕಾಡುಹಂದಿ, ಕಾಡೆಮ್ಮೆ, ಆನೆ ಇವುಗಳು ತಮ್ಮ ತಮ್ಮ ಕೋರೆದಾಡೆಗಳಿಂದ ವೃಕ್ಷಮೂಲಗಳನ್ನು ಕೆದರುತ್ತಿದ್ದುವು. ಮದಿಸಿದ ಆನೆಗಳು ತಮ್ಮ ಉದ್ದವಾದ

ಸ ಪ್ರಾತರ್ಬಿಲ್ವಶಾಖಾಂ ತಾಂ ದೃಷ್ಟ್ವಾ ಹಸ್ತಿವಿಮರ್ದಿತಾಂ ।
ದುಃಖಿತಸ್ಸ ತದಾ ಗೌರಿ ತಸ್ಮಿನ್ನೇವಾಕರೋದ್ವನೇ ॥೪೧॥

ಸ್ವಕುಟೀಂ ಪರ್ಣಕೈಶ್ಶಾಖಿ ಶಾಖಾವ್ರಜಮನೋಹರಾಂ ।
ಪುತ್ರೈಶ್ಚ ಬಾಲಕೈಸ್ಸಾರ್ಧಂ ಪತ್ನ್ಯಾ ತತ್ರಾವಸಚ್ಛಿವೇ ॥೪೨॥

ಕುದ್ದಾಲಪಿಟಕೋದ್ದಾಮಹಸ್ತೋ ನಿತ್ಯಂ ಧನುರ್ಧರಃ
ಹಸ್ತಿಯೂಥಾಂಶ್ಚ ಮಹಿಷಾನ್ ವರಾಹಾಂಸ್ತಾಡಯತ್ಯಪಿ । ॥೪೩॥

ಸ ಶರೈಸ್ತೀಕ್ಷ್ಣಭಾಲೈಶ್ಚ ದಂತಿಕುಂಭೇಷು ಶಾಂಕರಿ ।
ಶೃಂಗಾಂತರೇಷು ಮಹಿಷಾನ್ ದಂಷ್ಟ್ರಾ ಸಂಧಿಷು ಸೂಕರಾನ್॥೪೪

ತದ್ಭಯಾನ್ನೋಪಸರ್ಪಂತಿ ತದ್ಬಿಲ್ವವನಮಂಜಸಾ ।
ಕಂದಮೂಲಫಲೈರೇವ ಜೀವನ್ ಸಕಣಯಾಚಕಃ ॥೪೫॥

---

ಸೊಂಡಲಿನ ತುದಿಯಿಂದ ಕೆಂಪಾದ ಬಿಲ್ವಚಿಗುರುಗಳನ್ನು ಮುರಿದು ತಿಂದು ಹೋಗು ತ್ತಿದ್ದುವು. ॥೩೯-೪೦॥

ಅದನ್ನು ನೋಡಿ ಆ ಭಿಲ್ಲನು ಬಹುದುಃಖಿತನಾಗಿ ಅಂದಿನಿಂದ ಮೊದಲು ಅಲ್ಲಿಯೇ ಒಂದು ಪರ್ಣಶಾಲೆಯನ್ನು ಕಟ್ಟಿಕೊಂಡು ಸಂಸಾರಸಮೇತವಾಗಿ ವಾಸಮಾಡಲಾರಂಭಿಸಿದನು. ॥೪೧-೪೨॥

ಗುದ್ದಲಿ, ಮಂಕರಿ ಮುಂತಾದುವುಗಳನ್ನು ಹಿಡಿದು ಆ ಮರಗಳಿಗೆ ಪಾತಿಯನ್ನು ನಿರ್ಮಿಸುವನು. ಆನೆಗಳ ತಂಡಕ್ಕೂ ಹಂದಿ ಎಮ್ಮೆಗಳ ಗುಂಪಿಗೂ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸುವನು. ಕುಂಭಸ್ಥಳಗಳಿಗೆ ಹೊಡೆದು ಆನೆಗಳನ್ನೂ, ಕೋಡುಗಳ ಮಧ್ಯಕ್ಕೆ ಹೊಡೆದು ಎಮ್ಮೆಗಳನ್ನೂ, ಕೋರೆ ಹಲ್ಲುಗಳನ್ನು ಮುರಿದು ಕಾಡುಹಂದಿಗಳನ್ನೂ ಓಡಿಸುವನು. ಇವನ ಭಯಕ್ಕಾಗಿಯೇ ಆ ಪ್ರಾಣಿಗಳು ಅಲ್ಲಿಗೆ ಬರುವುದನ್ನು ಬಿಟ್ಟುಬಿಟ್ಟವು. ಆ ಭಿಲ್ಲನು ಹಾಗೆ ಪ್ರಾಣಿ ಭಯಂಕರನಾಗಿದ್ದರೂ, ತಾನು ಮಾತ್ರ ಕಂದ, ಮೂಲ, ತೃಣಧಾನ್ಯ ಇವುಗಳನ್ನೇ ಭಕ್ಷಿಸುತ್ತಾ ಕಾಲಕಳೆಯುತ್ತಿದ್ದನು. ॥೪೩-೪೪-೪೫॥

ಸಕುಟುಂಬಸ್ತದಾ ತಸ್ಥೌ ತಸ್ಮಿನ್ ಬಿಲ್ವಾಘು ಕಾನನೇ ।
ಸೂಕ್ಷ್ಮಮಾರ್ಗಃ ಕೃತಸ್ತೇನ ಗಮನಾಗಮನೇ ತದಾ ॥೪೬॥

ತಮಾಮಂತ್ರ್ಯೈವ ಮುನಯೋ ಗೃಹ್ಣಂತಿ ನವಪಲ್ಲವಾನ್ ।
ಬಿಲ್ವಮೂಲೇಷು ಲಿಂಗಾನಿ ಸ್ಥಾಪಯಿತ್ವಾರ್ಚಯಂತಿ ಹಿ ॥೪೭॥

ಕೋಮಲೈರ್ಬಿಲ್ವಪತ್ರೈಶ್ಚ ತ್ರಿಕಾಲಂ ಭುವನೇಶ್ವರಿ ।
ತ್ರಿಯಂಬಕಮಹಾಮಂತ್ರೈಶ್ಶೈವಾಸ್ಸಂಪೂಜಯಂತ್ಯಮೇ ॥೪೮॥

ತಾನ್ ದೃಷ್ಟ್ವಾ ಸತತಂ ಭಿಲ್ಲಸ್ತುಷ್ಟಿಮಾಪ್ನೋತಿ ನಿತ್ಯಶಃ ।
ತೇ ಭಿಲ್ಲಂ ಪೂಜಯಂತ್ಯೇನ ವಾಗ್ಭಿಶ್ಚ ಕಣದಾನತಃ ॥೪೯॥

ಸ ಭಿಲ್ಲಃ ಶೈವಸಂಗತ್ಯಾ ಬಿಲ್ವಾನಾಂ ಪಾಲನೇನ ಚ ।
ಮಮ ಪ್ರಿಯತರೋ ನಿತ್ಯಮಭೂತ್ಸ ಗಿರಿಕನ್ಯಕೇ ॥೫೦॥

ಬಿಲ್ವಮೂಲಾನಿ ಸರ್ವಾಣಿ ಕುದ್ದಾಲೈರ್ಬಾಲಕೈಸ್ಸಹ ।
ಖಾತ್ವಾ ತನ್ಮೂಲದೇಶೇಷು ಕ್ರಿಮಿಪಷ್ಟಾಂಶ್ಚ ಪಲ್ಲವಾನ್ ॥೫೧॥

---

ಹಾಗೆಯೇ ಆ ಬಿಲ್ವಕಾನನದಲ್ಲಿ ಆ ಭಿಲ್ಲನು ಸಕುಟುಂಬನಾಗಿ ವಾಸಿಸುತ್ತಾ, ಬಂದವರು ಸಂಚರಿಸುವುದಕ್ಕಾಗಿ ಸಣ್ಣ ಕಾಲುದಾರಿಯೊಂದನ್ನು ಮಾಡಿಕೊಂಡಿದ್ದನು. ಅಲ್ಲಿಗೆ ಬಂದ ಸಕಲ ಮಹರ್ಷಿಗಳೂ ಅವನ ಅಪ್ಪಣೆಯನ್ನು ಪಡೆದೇ ಶಿವಲಿಂಗಾರ್ಚನೆಗಾಗಿ ಬಿಲ್ವಪತ್ರೆಗಳನ್ನು ಸ್ವೀಕರಿಸುತ್ತಿದ್ದರು. ॥೪೬-೪೭॥

ಅಲ್ಲದೆ ಅದೇ ವನದಲ್ಲಿ ಶಿವಪೂಜಕರನೇಕಮುನಿಗಳು ಅವನಲ್ಲಿಗೆ ಬಂದು ಬಿಲ್ವಪತ್ರೆಗಳನ್ನು ಸಂಗ್ರಹಿಸಿಕೊಂಡು ತ್ರಿಕಾಲವೂ ತಪ್ಪದೆ ಶಿವಲಿಂಗಾರ್ಚನೆ ಮಾಡುವರು. ಅದನ್ನು ನೋಡಿ ಆ ಭಿಲ್ಲನು ತನ್ನ ಮನಸ್ಸಿನಲ್ಲಿಯೇ ಆತ್ಮಾನಂದಪಡುವನು. ಇಂತಹ ಭಿಲ್ಲನನ್ನು ನೋಡಿ ಅವರೂ ತೃಪ್ತರಾಗಿ ಕೆಲವು ಧಾನ್ಯಗಳನ್ನು ಕೊಟ್ಟು ಸಂತೋಷದಿಂದ ಮಾತನಾಡಿ ಮುಂದೆ ಹೋಗುತ್ತಿದ್ದರು. ॥೪೮-೪೯॥

ಭಿಲ್ಲನಾದರೋ ನಿತ್ಯವೂ ತಪ್ಪದೆ ಬಿಲ್ವವೃಕ್ಷಗಳ ಪಾಲನ ಸಂವರ್ಧನದಲ್ಲಿಯೇ ತೊಡಗಿದ್ದನು. ಪ್ರತಿದಿನವೂ ತನ್ನ ಮಕ್ಕಳೊಡನೆ ತಾನು ಬಿಲ್ವಮೂಲದಲ್ಲಿ ಕುಳಿತು ಗುದ್ದಲಿಯಿಂದ ಆ ಪಾತಿಯನ್ನು ಅಗೆದು ಅಲ್ಲಿರುವ ಪುಳುಗಳನ್ನೂ, ಹುಳುಗಳಿಂದ

ಘರ್ಮಕಾಲೇಷು ತತ್ಪತ್ನೀ ಜಲಮಾದಾಯ ಭೂರಿಶಃ ।
ಘಟೈಸ್ತದಾ ಮಹಾದೇವಿ ಕರೋತಿ ವನಪಾಲನಂ ॥೫೨॥

ಕರೋತಿ ಜಲದಾನಂ ಸಾ ಬಾಲಾ ಬಿಲ್ವಪ್ರರೋಹಣೇ ।
ಕ್ರಿಮಿದಷ್ಟಾನಿ ಪತ್ರಾಣಿ ಲೂತಾ ತಂತುವೃತಾನ್ಯಪಿ ॥೫೩॥

ಛಿತ್ವಾ ಛಿತ್ವಾ ಪಾತಯತೀ ಬಿಲ್ವಭೂರುಹಪಾಲಿಕಾ ।
ತನ್ಮೂಲೇಷು ಮಹಾಶೈವಾಃ ಶಿವಮಂತ್ರಜಪೋತ್ಸುಕಾಃ ॥೫೪॥

ವಸಂತಿ ನಿಯತಾಹಾರಾಃ ಶಿವಲಿಂಗಾರ್ಚಕಾಶ್ಶಿವೇ ।
ಬಿಲ್ವಪತ್ರೈಶ್ಚ ಕುಸುಮೈಃ ರುದ್ರಾಧ್ಯಾಯಾಭಿಷೇಚನೈಃ ॥೫೫॥

ಪೂಜಯಂತ್ಯೇವ ಗೌರೀಶಂ ತನ್ಮೂಲೇಷು ಮಹೇಶ್ವರಿ ।
ರುದ್ರಾಧ್ಯಾಯಜಲೈಶ್ಶೀತೈಸ್ತನ್ಮೂಲಂ ಸೇಚಯಂತಿ ತೇ ॥೫೬॥

ಸಾಯಾಂತೇ ದೀಪಯಂತ್ಯೇವ ಶಿವಲಿಂಗಂ ನಿರೀಕ್ಷಿತುಂ ।
ಶಿವಲಿಂಗಾನಿ ತುಂಗಾನಿ ಬಿಲ್ವಯುಕ್ತಾನಿ ಶಂಕರಿ ॥೫೭॥

---

ದಷ್ಟವಾದ ಚಿಗುರುಗಳನ್ನೂ ತೆಗೆದುಹಾಕಿ ಬಿಲ್ವಸೇವೆ ಮಾಡುತ್ತಿದ್ದನು. ಆದರಿಂದ ಆತನು ನನಗೆ ಆತ್ಯಂತ ಪ್ರಿಯಕರನೆನಿಸಿದನು. ॥೫೦-೫೧॥

ಅವನ ಹೆಂಡತಿಯು ಬೇಸಗೆಯಲ್ಲಿ ಆ ಗಿಡಗಳಿಗೆ ನೀರನ್ನು ಗಡಿಗೆಗಳಿಂದ ತಂದು ಹಾಕುತ್ತಿದ್ದಳು. ಅವನ ಮಗಳೊಬ್ಬಳು ತಾನೂ ಬಿಲ್ವವೃಕ್ಷಗಳಿಗೆ ನೀರೆರೆಯುತ್ತಾ, ಹುಳುಹತ್ತಿದ, ಕೂದಲಿನಿಂದ ಸುತ್ತುವರಿದ, ಬಿಲ್ವಪತ್ರೆಗಳನ್ನೆಲ್ಲಾ ಕಿತ್ತೆಸೆಯುವಳು. ॥೫೨-೫೩॥

ಅಂತಹ ಬಿಲ್ವಭೂರುಹಗಳ ಬುಡದಲ್ಲಿ ಅನೇಕರು ಶಿವಲಿಂಗಾರ್ಚಕರು, ಶಿವಮಂತ್ರವನ್ನೇ ಜಪಿಸುತ್ತಾ, ಆಹಾರನಿಯಮದಿಂದ ಕೂಡಿದವರಾಗಿ ಬಿಲ್ವಪತ್ರೆಗಳು, ಸುಗಂಧಮಯವಾದ ಪುಷ್ಪಗಳು, ರುದ್ರಾಧ್ಯಾಯಪರಿಪೂತವಾದ ಶುದ್ಧೋದಕ ಇವುಗಳಿಂದ ಶಿವಲಿಂಗವನ್ನು ಪೂಜಿಸುವರು. ॥೫೪-೫೫॥
ಅಲ್ಲದೆ ಬಿಲ್ವಮೂಲದಲ್ಲಿ ಶಿವನು ನೆಲಸಿರುತ್ತಾನೆಂಬ ಭಾವನೆಯಿಂದ ಅನೇಕರು ರುದ್ರಾಧ್ಯಾಯಪೂರ್ವಕವಾಗಿ ಅಲ್ಲಿಗೆ ನೀರನ್ನೆರೆಯುವರು. ಹಾಗೆಯೇ ಸಾಯಂಕಾಲ

ದ್ರಷ್ಟುಮಭ್ಯುದ್ಯತಾಃ ಸರ್ವೇ ದೀಪದೀಪ್ತಿವಿರಾಜಿತಂ ।
ತತ್ರ ಬ್ರಹ್ಮಾದಯೋ ದೇವಾ ನಾರದಾದ್ಯಾ ಮಹರ್ಷಯಃ ॥೫೮॥

ದ್ರಷ್ಟುಂ ಗಚ್ಛಂತಿ ನಿಯತಾಃ ಬಿಲ್ವಮೂಲೇ ಶಿವಾರ್ಚನಂ ।
ಶಿವಲಿಂಗೇಷು ತುಂಗೇಷು ಮಹಾಶ್ಚೈವಕೃತಂ ತದಾ ॥೫೯॥

ಸ್ತುವಂತಿ ನೃತ್ಯಂತಿ ಹಸಂತಿ ದೃಷ್ಟ್ವಾ
ಭುಂಜಂತಿ ಪಶ್ಯಂತಿ ಮಹೇಶಲಿಂಗಂ ।
ಜಿಘ್ರಂತಿ ನೈವೇದ್ಯಮಪಾರಪುಣ್ಯಹಂ
ಶಿವಾಂಘ್ರಿಪುಣ್ಯಾನಿ ಸುರಾ ಮುನೀಶ್ವರಾಃ ॥೬೦॥

ದೃಷ್ಟ್ವಾ ತ್ರಿಪುಂಡ್ರೋಜ್ಜ್ವಲಮಸ್ತಕಾನಿ
ಸುಗಂಧಲಿಪ್ತಾನಿ ಮನೋಹರಾಣಿ ।
ಸುಬಿಲ್ವಮೂಲೇಷು ಚ ಸಂಸ್ಥಿತಾನಿ
ಸಂಪೂಜ್ಯ ಜನ್ಮಾನಿ ಕೃತಾರ್ಥಯಂತಿ ॥೬೧॥

---

ವಾಗುತ್ತಲೂ ಪ್ರತಿ ವೃಕ್ಷದ ಕೆಳಭಾಗದಲ್ಲಿಯೂ ದೀಪಗಳನ್ನಿಟ್ಟು ಅಲ್ಲಿರುವ ದೊಡ್ಡ ದೊಡ್ಡ ಶಿವಲಿಂಗಗಳನ್ನು ನೋಡಿ ಆನಂದಿಸುತ್ತಿದ್ದರು. ॥೫೬-೫೭॥

ಹಾಗೆ ವಿಜೃಂಭಣೆಯಿಂದ ಅಲ್ಲಿ ನಡೆಯುವ ಶಿವಲಿಂಗಾರ್ಚನೆಯನ್ನು ನೋಡಬೇಕೆಂಬ ಕುತೂಹಲದಿಂದ ಬ್ರಹ್ಮಾದಿ ದೇವತೆಗಳೂ, ನಾರದರೇ ಮೊದಲಾದ ಮಹರ್ಷಿಗಳೂ ಬಂದು ನೆರೆಯುತ್ತಿದ್ದರು. ಮತ್ತು ಅವರು ಅಲ್ಲಿರುವ ದೊಡ್ಡ ದೊಡ್ಡ ಶಿವಲಿಂಗಗಳನ್ನೂ ಅವುಗಳಿಗೆ ನಡೆಯುವ ಪೂಜಾದಿಗಳನ್ನೂ ನೋಡಿ ಆನಂದಿಸುತ್ತಿದ್ದರು. ॥೫೮-೫೯॥

ಮನದಣಿಯುವಂತೆ ನೋಡಿ ತೃಪ್ತರಾಗುತ್ತಿದ್ದರು. ತಾವೂ ಸ್ತುತಿಸುತ್ತಿದ್ದರು. ನೈವೇದ್ಯವಾದ ಶಿವಪ್ರಸಾದದ ಗಂಧವನ್ನು ಆಘ್ರಾಣಿಸುವರು. ಶಿವಪಾದ ಪೂಜೆಯಿಂದ ಸಂಪಾದಿಸಿದ ಸುಕೃತಗಳಿಂದ ಶೋಭಿಸುವ ಭಕ್ತರನ್ನು ನೋಡಿ ಆ ಋಷಿಜನರೂ, ದೇವತೆಗಳೂ ಸಂತೋಷಪಡುವರು. ॥೬೦॥

ಬಿಲ್ವಬುಡದಲ್ಲಿ ಭಸ್ಮತ್ರಿಪುಂಡ್ರಗಳಿಂದಲೂ, ಸುಗಂಧ ವಸ್ತುಗಳಿಂದಲೂ ಪ್ರಕಾಶಿಸುತ್ತಿರುವ ಶಿವಲಿಂಗಗಳನ್ನು ನೋಡಿ ಭಕ್ತಿಯಿಂದರ್ಚಿಸಿ ತಮ್ಮ ಜನ್ಮಗಳನ್ನು ಸಾರ್ಥಕಪಡಿಸಿಕೊಳ್ಳುವರು. ॥೬೧॥

ದೃಷ್ಟ್ವಾ ಲಿಂಗಾನ್ಯುಮೇಶಪ್ರಿಯವರಜನಿತಾಪಾರಪಾಪೈರ್ವಿಹೀನಾಃ ।
ಪ್ರಾಪ್ತಾಃಪ್ರಾಣಾತ್ಯಯೇಽಪಿ ಪ್ರಿಯಮಮರವರೈ ರ್ಬಿಲ್ವಮೂಲೇಷುಸಂಸ್ಥಾಃ ॥೬೨॥

॥ ಸೂತ ಉವಾಚ ॥

ಇತ್ಯೇವಂ ಸ್ತುತಿಭಿಸ್ಸ್ತುವಂತಿ ಸತತಂ ಶದ್ಬಿಲ್ವಮೂಲಾರ್ಚಕಾನ್ ।
ಲಿಂಗೇ ಶಾಂಗೇ ಮಹೇಶಂ ಜನಿಮೃತಿಜಮಹಾದುಃಖನಾಶಾಯ ಶೈವಾಃ ॥೬೩॥

ಸ ಶೈವಪೂಜಿತಾಪಾರಲಿಂಗಾನಿ ವನಪಾಲಕಃ ।
ಪ್ರಣಮ್ಯ ದಾರತನಯೈಃ ಸಂಸ್ತೌತಿ ಪರಮಾರ್ಥತಃ ॥೬೪॥

॥ ಭಿಲ್ಲ ಉವಾಚ ॥

ಬಾಲಬಿಲ್ವತರುಪೋಷಣಶೀಲಂ
ಹಸ್ತಲಗ್ನಕಿಣ ಫಾಲಕುದಾಲಂ ।
ತ್ವಂ ವನಾಧಿಪತಿರೀಶ ಪಾಹಿ ಮಾಂ
ಜಂತುಭಿಃ ಪ್ರಬಲಪಾಪರಾಶಿಭಿಃ ॥೬೫॥

---

ಆ ದೇವತೆಗಳು ಭಕ್ತಿಯಿಂದರ್ಚಿತವಾದ ಶಿವಲಿಂಗವನ್ನು ದರ್ಶನಮಾಡಿ ಶಿವಾನುಗ್ರಹದಿಂದ ತಮ್ಮ ಪಾಪಗಳನ್ನೆಲ್ಲಾ ಕಳೆದುಕೊಂಡು ಬಿಲ್ವಮೂಲದಲ್ಲಿ ನಿಂತಿರುವ ಶಿವಲಿಂಗವನ್ನೇ ಮರಣಾಂತವಾಗಿ ಧ್ಯಾನಿಸುತ್ತಾ ಕಾಲಕಳೆಯುವರು. ॥೬೨॥

ಹಾಗೆ ಅಲ್ಲಿ ದೇವತೆಗಳೂ, ಋಷಿಗಳೂ, ಮನುಜರೂ ಸರ್ವದಾ ಶಿವಲಿಂಗವನ್ನೇ ಧ್ಯಾನಿಸುತ್ತಾ, ಜನನಮರಣರೂಪವಾದ ಸಕಲ ದುಃಖಗಳನ್ನೂ ನಾಶಮಾಡುವ ಶಿವಾರ್ಚನೆಯಿಂದಲೇ ಎಲ್ಲರೂ ಆನಂದವನ್ನನುಭವಿಸುವರು. ॥೬೩॥

ಆ ಭಿಲ್ಲನಾದರೋ ಹಾಗೆ ಸರ್ವರೂ ಅಲ್ಲಿಗೆ ಬಂದು ಅರ್ಚಿಸಿದ ಶಿವಲಿಂಗಗಳನ್ನು ನೋಡುತ್ತಾ, ಸಕುಟುಂಬನಾಗಿ ಆ ಶಿವಮೂರ್ತಿಗಳಿಗೆ ವಂದಿಸುತ್ತಾ ಈರೀತಿ ಭಕ್ತಿಭಾವಭರಿತನಾಗಿ ಸ್ತುತಿಸುವನು. ॥೬೪॥

“ವನಾಧಿಪತಿಯಾದ ಶಂಭುವೇ, ನಾನು ಸರ್ವದಾ ನಿನಗೆ ಪ್ರಿಯಕರಗಳಾದ ಬಿಲ್ವವೃಕ್ಷಗಳನ್ನು ಬೆಳೆಸುವುದರಲ್ಲಿ ನಿರತನಾಗಿರುವೆನು. ಅಲ್ಲದೆ ಅವುಗಳ ಪಾತಿಗಳನ್ನು ಕೆತ್ತಿ ಸರಿಮಾಡುವ ಕೆಲಸದಲ್ಲಿ ಸದಾ ಗುದ್ದಲಿಯನ್ನು ಹಿಡಿದು

ಪಾಹಿ ಬಿಲ್ವವನಮೀಶ್ವರ ಶಂಭೋ
ಹಸ್ತಿಹಸ್ತಮೃದಿತಂ ನವಶಾಖಂ ।
ದಂತಿಕೃತ್ತಿವಸ ನಾಮವ ಶಂಭೋ
ಬಂಧುರಾಲಕೆ ದಯಸ್ವ ಮಯ್ಯಪಿ ॥೬೬॥

ಹರ ಹರ ಮುರಭಿತ್ಪ್ರಪೂಜಿತಾಂಘ್ರೇ
ಸ್ಮರಹರ ಕುರು ಮಯ್ಯಕಿಂಚನೇ ದಯಾಂ ।
ಹರಹರ ಗುರು ತಾಪಭಾರಂ
ಗರಧರ ಶಂಕರ ಚಂದ್ರಶೇಖರ ॥೬೭॥

॥ ಈಶ್ವರ ಉವಾಚ ॥

ಇತ್ಥಂ ಶೈವಜನಾನ್ವಿತಂ ಸವಿಪಿನೇ ಭಿಲ್ಲೋಽಪಿ ಬಿಲ್ವೀವನೇ
ಧ್ಯಾತ್ವಾ ಮತ್ಪದಪಂಕಜಂ ವಿಧಿನುತಂ ಬಿಲ್ವಾದಿಸನ್ಮಾಲಿಭಿಃ ।
ಗಂಗಾಸಾಗರಸಂಗಮೇ ವಿನಿವಸನ್ಮಲ್ಲಿಂಗಸಂಪೂಜಕೋ
ಬಿಲ್ವಾದ್ಯೈರ್ಗಣನಾಯಕೈಃ ಸ ಸುತರಾಂ ಮುಕ್ತೋ ಭವತ್ಯದ್ರಿಜೇ ॥೬೮॥

---

ದುಡಿಯುವುದರಿಂದ ನನ್ನ ಕೈ ಮತ್ತು ಹಣೆ ಇವು ಜಡ್ಡುಗಟ್ಟಿಹೋಗಿವೆ. ಪ್ರಕೃತ ಆ ವೃಕ್ಷಗಳಿಗೆ ಕಂಟಕಗಳಂತೆ ಆಗಾಗ ಬಂದೊದಗುವ ಪಾಪಿಕ್ರಿಮಿಗಳನ್ನು ತಡೆಗಟ್ಟಿ ನನ್ನ ಕಾರ್ಯವನ್ನು ಸುಗಮಗೊಳಿಸು. ॥೬೫॥

ಗಜಚರ್ಮಾಂಬರಧಾರಿಯೇ, ಈ ನನ್ನ ಬಿಲ್ವವೃಕ್ಷಗಳ ವನವನ್ನು ರಕ್ಷಿಸು. ಆನೆಗಳ ಸೊಂಡಲಿನಿಂದ ಮುರಿದುಹೋಗುವ ಬಿಲ್ವವೃಕ್ಷಗಳನ್ನು ಕಾಪಾಡುತ್ತಾ ತನ್ಮೂಲಕ ನನಗೆ ದಯೆಯನ್ನು ನೀಡಿ ಉದ್ಧರಿಸು. ॥೬೬॥

ಪರಮೇಶ್ವರನೇ, ವಿಷ್ಣುವಿನಿಂದ ಪೂಜಿತವಾದ ಪಾದಪದ್ಮವುಳ್ಳವನೇ, ಮದನಾರಿಯೇ, ದರಿದ್ರನಾದ ನನ್ನಲ್ಲಿ ದಯೆಯನ್ನಿಡು. ಸಂಸಾರದ ದುಃಖಪರಂಪರೆಗಳನ್ನು ದೂರಮಾಡು. ವಿಷಧಾರಿಯೇ, ಶಂಕರನೇ, ಚಂದ್ರಶೇಖರನೇ, ನನ್ನನ್ನು ಸಲಹು." ॥೬೭॥

ಎಲೌ ದೇವಿಯೇ, ಹೀಗೆ ಗಂಗಾಸಾಗರ ಸಂಗಮದಲ್ಲಿರುವ ತನ್ನ ಬಿಲ್ವವನದಲ್ಲಿ ಅನೇಕ ಶಿವಾರ್ಚಕರು ಬಂದು ನನ್ನನ್ನು (ಶಿವಲಿಂಗವನ್ನು) ಬಿಲ್ವಾದಿಗಳಿಂದಲೂ, ಪುಷ್ಪರಾಶಿಯಿಂದಲೂ ಪೂಜಿಸುತ್ತಿರುವರು. ಅಂತಹ ಶಿವಲಿಂಗವನ್ನು

ಯೋ ಬಿಲ್ವಚ್ಛದಪೂತಲಗ್ನಪವನೈಃ ಸಂಶ್ಲಿಷ್ಟಗಾತ್ರಾನ್ ದ್ವಿಜಾನ್
ತನ್ಮೂಲೇ ಸುಖಶೀತಲೇ ಪಿತೃಗಣಾನ್ ಸಂಭೋಜಯೇತ್ ಷಡ್ರಸೈಃ ।
ತಸ್ಯಾನ್ನಂ ಶತವರ್ಷತೃಪ್ತಿಜನಕಂ ಭೂಯಾತ್ ಪಿತ್ರೂಣಾಂಮುದೇ
ತಚ್ಛರ್ವಾರ್ಪಿತತರ್ಪಿತಾನ್ನಪಿತರಸ್ತುಷ್ಯಂತಿ ಹೃಷ್ಯಂತಿ ಚ ॥೬೯॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಗಂಗಾಸಾಗರ ಸಂಗಮ
ಮಾಹಾತ್ಮ್ಯೇ ಸಗರೇಶ್ವರಬಿಲ್ವವನವರ್ಣನಂ ನಾಮ
ಏಕತ್ರಿಂಶೋಧ್ಯಾಯಃ

---

ಯಾರು ಭಕ್ತಿಯಿಂದಾರಾಧಿಸುವರೋ ಅಂತಹವರು ಶಾಶ್ವತವಾದ ಮುಕ್ತಿಯನ್ನು ಸಂಪಾದಿಸುವರೆಂಬುದರಲ್ಲಿ ಸಂಶಯವಿಲ್ಲ. ॥೬೮॥

ಯಾರು ತಮ್ಮ ಪಿತೃತೃಪ್ತ್ಯರ್ಥವಾಗಿ ಬಿಲ್ವವೃಕ್ಷಗಳ ಛಾಯೆಯಲ್ಲಿ ಶ್ರೇಷ್ಠರಾದ ಬ್ರಾಹ್ಮಣರನ್ನು ಕೂರಿಸಿ ಭೋಜನಮಾಡಿಸುವರೋ, ಅಂತಹವರ ಪಿತೃದೇವತೆಗಳು ನೂರಾರುವರ್ಷಪರ್ಯಂತವಾಗಿ ಶಿವಾನುಗ್ರಹದಿಂದ ಮೃಷ್ಟಾನ್ನವನ್ನು ಭುಂಜಿಸುತ್ತಾ ತಮ್ಮ ಕಾಲವನ್ನು ಸ್ವರ್ಗದಲ್ಲಿ ಕಳೆಯುವರು. ಆ ಪಿತೃದೇವತೆಗಳ ತೃಪ್ತಿಯಿಂದ ತಾನೂ ಸಹ ತೃಪ್ತನಾಗಿ ಆನಂದಾಂಬುಧಿಯಲ್ಲಿ ಮುಳುಗಿ ಸಂತೋಷಪಡುವನು. ಎಂದು ಶಂಕರನು ಬಿಲ್ವಮಹಿಮೆಯನ್ನು ದೇವಿಗೆ ಬೋಧಿಸಿದನು. ॥೬೯॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಭರ್ಗನಾಮಕವಾದ ಪಂಚಮಾಂಶದಲ್ಲಿ ಸಗರೇಶ್ವರ
ಬಿಲ್ವವರ್ಣನವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ದ್ವಾತ್ರಿಂಶೋಽಧ್ಯಾಯಃ

॥ ದೇವ್ಯುವಾಚ ॥

ಕುರುಕ್ಷೇತ್ರಂ ಗತಾ ಗಂಗಾ ಉತ್ಕೃಷ್ಟೇತಿ ತ್ವಯೋದಿತಂ ।
ಕುರುಕ್ಷೇತ್ರಸ್ಯ ಮಹಿಮಾಂ ವದ ಸರ್ವಸುರೋತ್ತಮ ॥೧॥

॥ ಸೂತ ಉವಾಚ ॥

ಇತ್ಥಂ ದೇವ್ಯಾ ಮಹಾದೇವಃ ಪೃಷ್ಟೋ ವಚನಮಬ್ರವೀತ್ ।
ಶೃಣು ದೇವಿ ಕುರುಕ್ಷೇತ್ರಮಹಿಮಾಂ ಮತ್ಕೃಪಾಬಲಾತ್ ॥೨॥

ಕುರುಸಂವರಣೋ ನಾಮ ರಾಜಾಭೂತ್ಸೋಮವಂಶಜಃ ।
ಸ ರಾಜ್ಯಂ ಪ್ರಾಪ್ಯ ಮೇಧಾವೀ ವನೇಽಸ್ಮಿನ್ ಪಾವನೇ ಮಮ ॥೩॥

---

## ಮೂವತ್ತೆರಡನೆಯ ಅಧ್ಯಾಯ

ಹಾಗೆ ಬಿಲ್ವಮಹಿಮೆಯನ್ನು ವಿಸ್ತರಿಸಿ ಹೇಳಿದ ಪತಿಯನ್ನು ಕುರಿತು ಮತ್ತೆ ಗಿರಿಜೆಯು “ದೇವದೇವನೇ, ಕುರುಕ್ಷೇತ್ರದಲ್ಲಿ ಹರಿಯುವ ಗಂಗಾನದಿಯು ಅತಿ ಪವಿತ್ರವಾದುದೆಂದು ಹೇಳಿದೆಯಲ್ಲವೆ? ಆ ಕುರುಕ್ಷೇತ್ರಕ್ಕೆ ಅಷ್ಟು ಮಹಿಮೆಯೊದಗಲು ಕಾರಣವೇನು? ದಯೆಯಿಂದ ನನಗೆ ಆ ವಿಷಯವನ್ನು ತಿಳಿಸಬೇಕು” ಎಂದು ಪ್ರಾರ್ಥಿಸಲು, ಆಗ ಪರಶಿವನು ಪತ್ನಿಯನ್ನು ಕುರಿತು ಕುರುಕ್ಷೇತ್ರ ಮಹಿಮೆಯನ್ನು ವಿವರಿಸಲಾರಂಭಿಸಿದನು. ॥೧-೨॥

“ದೇವಿಯೇ, ಹಿಂದೆ ಕುರುಸಂವರಣನೆಂಬ ಚಂದ್ರವಂಶದ ರಾಜನೊಬ್ಬ

ನಾನಾದ್ರುಮಶತೋಪೇತಂ ಫಲಪುಷ್ಪವಿರಾಜಿತಂ ।
ಆಶ್ರಮಂ ತಂ ದ್ವಿಜೈರ್ಯುಕ್ತಂ ಪ್ರಶಾಂತಂ ಹರಿಮೇಧಸಃ ॥೪॥

ಪ್ರಶಾಂತವೈರೈರ್ಮುನಿಭಿರ್ಮೃಗೈರನ್ಯೋನ್ಯವತ್ಸಲೈಃ ।
ತದ್ವನಂ ಸ ನೃಪೋ ಗತ್ವಾ ದದರ್ಶ ಹರಿಮೇಧಸಃ ॥೫॥

ದೃಷ್ಟ್ವಾ ಮುನಿವರಂ ರಾಜಾ ಪ್ರಣತಃ ಪಾದಯೋಸ್ತದಾ ।
ನಿಷಸಾದ ತದುದ್ದಿಷ್ಟೋ ವಿಷ್ಟರೇ ನೃಪಸತ್ತಮಃ ॥೬॥

ತಂ ಪೂಜಯಿತ್ವಾ ರಾಜಾನಂ ಹರಿಮೇಧಾಮುನಿಸ್ತದಾ ।
ಪ್ರಾಹ ತಂ ವಿನಯೋಪೇತಂ ರಾಜಾನಂ ಪ್ರಾಂಜಲಿಸ್ಥಿತಂ ॥೭॥

ಸೋಮಾನ್ವಯಸುಧಾಸಿಂಧುಚಂದ್ರಸ್ತ್ವಮಸಿ ಪಾರ್ಥಿವ ।
ಏಕಾಕೀ ವಿಪಿನೇ ಘೋರೇ ಕಥಂ ಮಾಂ ಸಮುಪಾಗತಃ ॥೮॥

ಸ್ವಸೈನ್ಯವರ್ಜಿತೋ ರಾಜಾ ಗಜವಾಜಿಸಮಾಕುಲಃ ।
ತದಾ ಮುನಿಂ ಸ ವಿನಯಾತ್ಪ್ರಾಹ ರಾಜಾ ಕೃತಾಂಜಲಿಃ ॥೯॥

---

ನಿದ್ದನು. ಆತನು ಧರ್ಮದಿಂದ ರಾಜ್ಯವಾಳುತ್ತಿದ್ದನು. 'ಆತನು ಒಂದುಸಾರಿ ಹರಿಮೇಧಸ್ಸೆಂಬ ಮಹಾಮುನಿಯ ಆಶ್ರಮಕ್ಕೆ ಹೋದನು. ಆ ತಪೋವನವು ಫಲಪುಷ್ಪಭರಿತಗಳಾದ ಅನೇಕ ವೃಕ್ಷಗಳಿಂದ ನಿಬಿಡವಾಗಿದ್ದಿತು. ಅಲ್ಲಿ ಪ್ರಾಣಿಗಳು ತಮ್ಮ ಪೂರ್ವವೈರವನ್ನು ಮರೆತು ಪರಸ್ಪರ ಸ್ನೇಹದಿಂದಿದ್ದುವು. ॥೩-೪॥

ಅಂತಹ ಶಾಂತಮಯವಾದ ಆಶ್ರಮದಲ್ಲಿ ವಿರಾಜಿಸುತ್ತಿದ್ದ ಹರಿಮೇಧಸ್ಸೆಂಬ ಋಷಿಯನ್ನು ನೋಡಿ ರಾಜನು, ಆತನಿಗೆ ನಮಸ್ಕರಿಸಿ, ಅವನ ಅಪ್ಪಣೆಯಂತೆ ತಾನೂ ಪಕ್ಕದಲ್ಲಿ ಕುಳಿತುಕೊಂಡರು. ॥೫-೬॥

ಅಷ್ಟು ವಿಧೇಯತೆಯಿಂದ ಅಂಜಲಿಬದ್ಧನಾಗಿ ನಮಸ್ಕರಿಸಿ ಕುಳಿತ ರಾಜನನ್ನು ಕುರಿತು ಹರಿಮೇಧಸ್ಸು "ಎಲೈ ಸೋಮವಂಶವೆಂಬ ಸಮುದ್ರಕ್ಕೆ ಚಂದ್ರನಂತಿರುವ ರಾಜಶ್ರೇಷ್ಠನೇ, ನೀನು ಈಗ ಒಬ್ಬೊಂಟಿಗನಾಗಿ ಇಂತಹ ಘೋರವಾದ ಅರಣ್ಯಕ್ಕೆ ಬಿಜಯಮಾಡಲು ಕಾರಣವೇನು ? ಯಾವ ಉದ್ದೇಶದಿಂದ ನೀನು ಇಲ್ಲಿಗೆ ಬಂದಿದ್ದೀಯೆ ? " ಎಂದು ಪ್ರಶ್ನೆಮಾಡಿದನು. ॥೭-೮॥

ಬೇಟೆಗಾಗಿ ಆನೆ, ಕುದುರೆ, ಮುಂತಾದ ಸೈನ್ಯದೊಡನೆ ಕಾಡಿಗೆ ಬಂದು ಸೈನಿಕರಿಂದ ಬೇರ್ಪಟ್ಟು ಒಂಟಿಯಾಗಿ ಅಲ್ಲಿಗೆ ಬಂದಿದ್ದ ರಾಜನು ಋಷಿಯೊಡನೆ

ಮೃಗಯಾ ವ್ಯಪದೇಶೇನ ಭವಂತಂ ದ್ರಷ್ಟುಮಾಗತಃ ।
ದೃಷ್ಟ್ವಾ ತ್ವಾಂ ಮುನಿಶಾರ್ದೂಲ ಧನ್ಯೋಽಸ್ಮ್ಯದ್ಯ ಕೃಪಾಂಕುರು ॥೧೦॥

ನಿವಾಸೋ ಮಮ ಧರ್ಮ್ಯೋಽಹಿ ದೇಶಃ ಕಶ್ಚಿದ್ವಿಧೀಯತಾಂ ।
ಪಶವ್ಯಶ್ಚ ಸದೌಷಧ್ಯಃ ಪ್ರಭೂತಸಲಿಲೋ ಮಹಾನ್ ॥೧೧॥

ಮಾನ್ಯಸ್ತ್ವಂ ಮುನಿಶಾರ್ದೂಲ ಧ್ಯಾತ್ವಾ ದಿವ್ಯೇನ ಚಕ್ಷುಷಾ ।
ಇತ್ಥಂ ಸಂವರಣಪ್ರೋಕ್ತಂ ವಚಶ್ಶ್ರುತ್ವಾ ತದಾ ಋಷಿಃ ॥೧೨॥

ರಾಜಾನಂ ಸ ತದಾ ಪ್ರಾಹ ವಿನಯಾನತಕಂಧರಂ ॥೧೩॥

॥ ಮುನಿರುವಾಚ ॥

ಶೃಣು ವೃತ್ತಂ ಪುರಾಶ್ಚರ್ಯಂ ರಾಜನ್ ಮತ್ತಃ ಪ್ರವರ್ತಿತಂ ।
ತಪ್ತವಾನಸ್ಮಿ ಸುಮಹತ್ತಪೋ ದೀರ್ಘಂ ಪುರಾ ಮಮ ॥೧೪॥

ಏತಸ್ಮಿನ್ನೇವ ವಿಪಿನೇ ಸದಾ ಮುನಿಜನಾವೃತೇ ।
ಭಸ್ಮೋದ್ಧೂಲಿತಸರ್ವಾಂಗೋ ರುದ್ರಸೂಕ್ತಜಪಾದರಃ ॥೧೫॥

---

ಹೀಗೆಂದನು "ಮಹರ್ಷಿಯೇ, ನಾನು ಬೇಟೆಯ ನೆಪದಿಂದ ಇಲ್ಲಿಗೆ ಬಂದೆನು. ತಮ್ಮನ್ನು ಇಲ್ಲಿ ದರ್ಶನಮಾಡಿದ ಮೇಲೆ ನನಗೆ ಅತಿಶಯವಾದ ಆನಂದವುಂಟಾಗಿ ಇಲ್ಲಿಯೇ ಕುಳಿತೆನು. ಈಗ ನಾನು ಧನ್ಯ. ನನ್ನಲ್ಲಿ ತಾವು ದಯೆಯಿಡಬೇಕು.॥೯-೧೦॥

ಮಹರ್ಷಿಯೇ, ನನಗೆ ಈಗ ಧರ್ಮಭೂಯಿಷ್ಠವೂ, ಪಶು, ವನಸ್ಪತಿ, ಜಲ ಇವುಗಳಿಂದ ತುಂಬಿ ತುಳುಕಾಡುತ್ತಿರುವುದೂ ಆದ ಒಂದು ಸ್ಥಳವನ್ನು ನಿನ್ನ ದಿವ್ಯಜ್ಞಾನದಿಂದ ತಿಳಿದು ಹೇಳುವವನಾಗು. ಜ್ಞಾನಿಯೂ, ಪೂಜ್ಯನೂ ಆದ ನಿನಗೆ ಮಾತ್ರ ಅದು ತಿಳಿಯುವುದು. ದಯೆಯಿಟ್ಟು ಅಷ್ಟು ಅನುಗ್ರಹಿಸಬೇಕೆಂದು ಕೇಳಿಕೊಳ್ಳಲು, ಆಗ ಆ ಮಹರ್ಷಿಯು ರಾಜನೊಡನೆ ಹೀಗೆಂದನು. ॥೧೧-೧೨-೧೩॥

"ಎಲೈ ರಾಜನೇ, ಒಂದು ಆಶ್ಚರ್ಯಕರವಾದ ಸಂಗತಿಯನ್ನು ಹೇಳುವೆನು ಕೇಳು. ಹಿಂದೆ ನಾನು ಒಂದಾನೊಂದು ಅರಣ್ಯದ ಮುನಿಜನನಿಬಿಡವಾದ ಪ್ರದೇಶ ವೊಂದರಲ್ಲಿ ಕುಳಿತು ಘೋರವಾದ ತಪಸ್ಸನ್ನಾಚರಿಸಿದೆನು. ತಪಶ್ಚರ್ಯಾಕಾಲದಲ್ಲಿ ನಾನು ಭಸ್ಮದಿಂದ ಸರ್ವಾಂಗವನ್ನೂ ಲೇಪಿಸಿಕೊಂಡು, ರುದ್ರಸೂಕ್ತವನ್ನೇ ಸರ್ವದಾ ಜಪಿಸುತ್ತಾ ತದೇಕಧ್ಯಾನದಿಂದ ಶಂಕರನನ್ನು ಸೇವಿಸಿದೆನು. ॥೧೪-೧೫॥

ರುದ್ರಾಕ್ಷಮಾಲಾಭರಣೋ ರುದ್ರಲಿಂಗಾರ್ಚಕಸ್ಸದಾ ।
ಪಂಚಾಕ್ಷರಪರೋ ನಿತ್ಯಂ ನಿವಸಾಮಿ ಋತೂನ್ ಬಹೂನ್ ॥೧೬॥

ಪಂಚಾಗ್ನಿಮಧ್ಯನಿರತಃ ಪಂಚಾಸ್ಯಧ್ಯಾನತತ್ಪರಃ ।
ತಪೋಯುಕ್ತಂ ತದಾ ಮಾಂ ಹಿ ವೇದವೇದ್ಯೋ ಮಹೇಶ್ವರಃ ॥೧೭॥

ಪ್ರಾದುರಾಸೀದ್ವೃಷಾರೂಢಃ ಸಾಂಬಿಕಶ್ಚ ತ್ರಿಲೋಚನಃ ।
ಗಣವೃಂದೈಃ ಪರಿವೃತೋ ನಾನಾಲಂಕಾರಭೂಷಿತಃ ॥೧೮॥

ಪ್ರಣಮ್ಯ ತತ್ಪದದ್ವಂದ್ವಂ ಭಕ್ತ್ಯಾ ಚಾಹಂ ತಮಸ್ತುವಂ ॥೧೯॥

॥ ಹರಿಮೇಧಾ ಉವಾಚ ॥

ಶಂಭೋ ಮತ್ತೇಭಕುಂಭಸ್ಥಗಿತಮಹಾವೃತ (?)
ರಂಭಾಮಣದ್ವಂದ್ವತಾಪಸ್ಮಾರಶಿಕ್ಷಾಕ್ಷಪಿತ
ಕಲುಷ ಪಾಪಾಕ್ಷ ಪಾದಾದಿವಂದ್ಯ ।
ದ್ವಂದ್ವಾತೀತಾನ್ಯಯೇಶ ಶ್ರುತಿಶಿಖರಗತಾ
ಕಾಶ ಕೇಶಾತ್ರಯೇಶ ಧೀರೋದ್ವೃತ್ತ
ಕರಾಗ್ರಕೋಲನಮಿಷಾದಾಂದೋಲಿತಸ್ತೇ ಗಿರಿಃ ॥೨೦॥

---

ರುದ್ರಾಕ್ಷಿಮಾಲೆಗಳನ್ನು ಅಲಂಕರಿಸಿಕೊಂಡು ಶಿವಲಿಂಗವನ್ನೇ ಪೂಜಿಸುತ್ತಾ ಶಿವಪಂಚಾಕ್ಷರಿಯನ್ನು ಜಪಿಸುತ್ತಾ, ಪಂಚಾಗ್ನಿಮಧ್ಯದಲ್ಲಿ ಘೋರವಾಗಿ ಬಹುಕಾಲ ತಪಸ್ಸನ್ನಾಚರಿಸಿದ ನನ್ನನ್ನು ಮಹೇಶ್ವರನು, ಕರುಣೆಯಿಂದ ನೋಡಿ ಒಡನೆಯೇ ಪ್ರತ್ಯಕ್ಷನಾದನು. ॥೧೬-೧೭॥

ಆಗ ಪರಶಿವನು ವೃಷಭಾರೂಢನಾಗಿ ಪಾರ್ವತಿಯೊಡನೆಯೂ, ಅನೇಕ ಗಣಗಳೊಡನೆಯೂ ಕೂಡಿ ನನ್ನ ಕಣ್ಣುಗಳಿಗೆ ಗೋಚರಿಸಿದನು. ಒಡನೆಯೇ ನಾನು ಅತ್ಯಂತ ಭಯಾಶ್ಚರ್ಯಗಳಿಂದ ಕೂಡಿ ಭಕ್ತಿಪೂರ್ವಕವಾಗಿ ಶಂಭುವನ್ನು ಈರೀತಿ ಸ್ತುತಿಸಿದೆನು. ॥೧೮-೧೯॥

"ಮಹಾದೇವನೇ, ಐರಾವತದ ಕುಂಭಸ್ಥಳದಮೇಲೆ ಕುಳಿತು ನಿನ್ನ ಪ್ರಸಾದ ಸ್ವೀಕಾರದಲ್ಲಿ ದರ್ಪವನ್ನು ತೋರಿಸಿದ ಇಂದ್ರನ ಗರ್ವವನ್ನೂ, ಜನರನ್ನು ಮೋಹ ಬಲೆಗೆ ಸಿಕ್ಕಿಸಿ ಎಳೆಯುವುದರಲ್ಲಿ ಅತ್ಯಂತ ನಿಪುಣನಾದ ಮನ್ಮಥನ ದರ್ಪವನ್ನೂ,

ಭೀತಾಂ ಬಾಹುಲತೇನ ಕಂಠಮಿಲನಾಜ್ಞಾತಕ್ರೋಧಂ ತ್ವಾಂ ಶಿವಂ
ತ್ವತ್ಪಾದಾಗ್ರನಿಘರ್ಷನಿಮ್ನಗಿರಿರಾಣ್ಮೂಲಸ್ಥಿತೈಃ ಸ್ವೈಃ ಕರೈಃ ।
ದೇವಂ ಸ್ತೌತಿ ತದಾರ್ತನಾದವಿವಶೋ ವೇದೈಸ್ತ್ವಪಾ ರಾವಣಃ ॥೨೦॥
ಸಂಭ್ರಾಜಂ ತ್ವಾಮಧ್ವರಾಣಾಂ ಮಹೇಶಂ ಹೋತಾರಂ ತ್ವಾ ಸತ್ಯಯುಜಂ ರೋದಸ್ಯೋಃ ।
ವಿಭ್ರಾಜಂ ತ್ವಂ ದೇವಮೀಹಾನತೋಽಸ್ಮಿ ತಾಮ್ರಂ ಶಂಭುಂ ವಿಶ್ವಮೀಶಾನ ಮಾಪ್ಯಂ ॥೨೧॥
ಇತಿ ಮತ್ಸ್ತೋತ್ರಜಾಲೇನ ತುಷ್ಟಃ ಕಷ್ಟಹರಶ್ಶಿವಃ ।
ಪ್ರಾಹ ಮಾಂ ಪ್ರಣತಂ ದೇವೋ ನೀಲಕಂಠೋ ಮಹೇಶ್ವರಃ ॥೨೩॥

---

ನಾಶಮಾಡಿ ಅವರಿಂದಲೇ ನೀನು ಮತ್ತೆ ಪೂಜಿತನಾದೆಯಲ್ಲವೇ! ಶೀತೋಷ್ಣ, ಸುಖದುಃಖ ಮುಂತಾದ ದ್ವಂದ್ವವಾದ ಷಡೂರ್ಮಿಗಳಿಗೆ ಸಿಕ್ಕದಿರುವವನೂ, ಸದಾ ಕೈಲಾಸಪರ್ವತಾಗ್ರದಲ್ಲಿ ವ್ಯೋಮಕೇಶನೆನಿಸಿ ಪ್ರಕಾಶರೂಪದಿಂದ ತೋರಿಬರುವವನೂ ಆದ ಮಹೇಶ್ವರನೇ, ನಿನ್ನನ್ನೇ ನಾನು ಮೊರೆಹೊಕ್ಕಿರುವೆನು. ನಿನ್ನ ವರಬಲದಿಂದ ಕೊಬ್ಬಿದ ರಾವಣನು ನಿನ್ನ ಪರ್ವತವನ್ನೇ ಕೈಯಿಂದ ಹಿಡಿದು ಅಲುಗಿಸಿದಾಗ ಪಾರ್ವತಿಯು ಹೆದರಿದ್ದನ್ನು ನೋಡಿ ನಿನ್ನ ಪಾದಾಗ್ರದಿಂದ ಪರ್ವತವನ್ನು ಅಮುಕಿ ರಾವಣನ ಕೈಗಳು ಜಜ್ಜಿಹೋಗುವಂತೆ ಮಾಡಿದೆಯಲ್ಲವೆ! ॥೨೦॥

ಆಗ ಬೆಟ್ಟದ ಬುಡದಲ್ಲಿ ಕೈಸಿಕ್ಕಿಸಿಕೊಂಡು ನರಳುವ ರಾವಣನು ಆರ್ತನಾದ ಮಾಡುತ್ತಾ ವೇದಸ್ತವದಿಂದ ನಿನ್ನನ್ನು ಬಹುಕಾಲ ಸ್ತುತಿಸಿ, ಆಮೇಲೆ ರಾವಣನು ಅಹಂಕಾರದಿಂದ ನಿರ್ಮುಕ್ತನಾದನಲ್ಲವೆ! ಮಹೇಶ್ವರನೇ, ನೀನು ಯಾಗದಲ್ಲಿ ಸೋಮಪಾನಮಾಡುವ ದೇವತೆಗಳಿಗೆ ಅಧಿಪತಿಯೆನಿಸಿದ್ದರೂ, ಹೋತಾ (ಸ್ತುತಿಸುವವನು) ಎನಿಸಿ, ದ್ಯಾವಾಭೂಮಿಯನ್ನೆಲ್ಲಾ ತನ್ನ ಕಾಂತಿಯಿಂದ ಆವರಿಸಿ ಸರ್ವತ್ರ ಪ್ರಕಾಶಿಸುವವನೂ ನೀನೇ ಆಗಿದ್ದೀಯಲ್ಲವೇ! ಮಹಾದೇವನೇ, ಇಂತಹ ಮಹಾ ಮಹಿಮನಾದ ನಿನಗೆ ಮನಸಾ ವಂದಿಸುವೆನು.'' ॥೨೧-೨೨॥

ಹಾಗೆ ನಾನು ಪ್ರಾರ್ಥನೆಮಾಡಿದುದನ್ನು ಕೇಳಿ ಕರುಣಾಸಾಗರನಾದ ಶಂಕರನು, ನಮಸ್ಕಾರಮಾಡುತ್ತಿದ್ದ ನನ್ನೊಡನೆ ಹೀಗೆಂದನು. ॥೨೩॥

॥ ಈಶ್ವರ ಉವಾಚ ॥

ಶೃಣು ವಿಪ್ರಾನಯಾ ಸ್ತುತ್ಯಾ ಭಕ್ತ್ಯಾ ತುಷ್ಟೋsಸ್ಮಿ ಸಾಂಪ್ರತಂ ।
ಲಿಂಗೇಸ್ಮಿನ್ ಸಂವಸಾಮ್ಯದ್ಯ ತ್ವಯಾ ಬಿಲ್ವಾದಿಪೂಜಿತೇ ॥೨೪॥

ಕುರುಜಾಂಗಲಮೇತಚ್ಚ ಪುಣ್ಯಂ ಚೈವ ಭವಿಷ್ಯತಿ ।
ಕುರುಕ್ಷೇತ್ರೇಶ್ವರಶ್ಚಾಹಂ ಲಿಂಗೇ ನಿತ್ಯಂ ವಸಾಮ್ಯಹಂ ॥೨೫॥

ಗಂಗಾಪಿ ಪರತೋ ವಿಪ್ರ ಕ್ಷೇತ್ರಂ ಸಂಪ್ಲಾವಯಿಷ್ಯತಿ ।
ಕುರುಕ್ಷೇತ್ರೇ ಕೃತಂ ಪುಣ್ಯಂ ಮಹಚ್ಚೈವ ಭವಿಷ್ಯತಿ ॥೨೬॥

ಸೋಮವಂಶೇ ಕುರುರ್ನಾಮ್ನಾ ಭವಿಷ್ಯತಿ ನೃಪಾತ್ಮಜಃ ।
ಸ ಯದಾ ತ್ವಾಂ ಸಮಾಗತ್ಯ ಪರಿಪೃಚ್ಛತ್ಯನಾಮಯಂ ॥೨೭॥

ತಸ್ಮೈ ಮದುಕ್ತಿಸರ್ವಸ್ವಂ ಬ್ರೂಹಿ ತ್ವಂ ವದ ತಾಂ ವರ ।
ಸ ಚಾತ್ರ ನಗರಂ ಶ್ರೇಷ್ಠಂ ರಾಜಾ ವಿಸ್ತಾರಯಿಷ್ಯತಿ ॥೨೮॥

ಪ್ರಾಕಾರಪರಿಘೋಪೇತಂ ನಾನಾಸೌಧವಿರಾಜಿತಂ ।
ಶಸ್ತ್ರಾಸ್ತ್ರಯಂತ್ರಶೋಭಾಢ್ಯಂ ಚಾತುರ್ವರ್ಣ್ಯಜನಾಶ್ರಯಂ ॥೨೯॥

---

ಎಲೈ ಬ್ರಾಹ್ಮಣನೇ, ನಿನ್ನ ಸ್ತುತಿಗೆ ಬಹುವಾಗಿ ಮೆಚ್ಚಿರುವೆನು. ನಿನ್ನ ಕೋರಿಕೆಯಂತೆ ನಾನು ನಿನ್ನಿಂದ ಪೂಜಿತವಾದ ಈ ಶಿವಲಿಂಗದಲ್ಲಿ ಸ್ಥಿರವಾಗಿ ನೆಲೆಸುವೆನು. ಈ ಪ್ರದೇಶವು ಇನ್ನು ಮುಂದೆ ಕುರುಜಾಂಗಲಕ್ಷೇತ್ರವೆಂದೂ ಈ ಶಿವಲಿಂಗವು ಕುರುಕ್ಷೇತ್ರೇಶ್ವರನೆಂದೂ ಪ್ರಸಿದ್ಧಿಪಡೆಯಲಿ. ॥೨೪-೨೫॥

ಇನ್ನು ಮುಂದೆ ಗಂಗಾನದಿಯೂ ಇಲ್ಲಿಯೇ ಹರಿದು ಇದನ್ನು ಮತ್ತೂ ಪವಿತ್ರಗೊಳಿಸುವುದು. ಕುರುಕ್ಷೇತ್ರದಲ್ಲಿ ಆಚರಿಸಿದ ಸತ್ಕರ್ಮಗಳು ಜನರಿಗೆ ವಿಶೇಷ ಪುಣ್ಯಪ್ರದಗಳಾಗಲಿ. ಮುಂದೆ ಸೋಮವಂಶದಲ್ಲಿ ಕುರುವೆಂಬ ರಾಜನು ಜನಿಸುವನು. ಆತನು ಒಂದು ಸಾರಿ ನಿನ್ನಲ್ಲಿಗೆ ಬಂದು ಕುಶಲಪ್ರಶ್ನೆ ಮಾಡುವನು. ಆಗ ನಾನು ಹೇಳಿದ ಈ ವಿಷಯಗಳನ್ನೆಲ್ಲಾ ಅವನಿಗೆ ತಿಳಿಸು. ಆತನು ಇಲ್ಲಿ ದೊಡ್ಡ ರಾಜ್ಯವೊಂದನ್ನು ಕಟ್ಟುವನು. ॥೨೬-೨೭-೨೮॥

ಆ ನಗರಕ್ಕೆ ಅನೇಕ ಕೋಟೆಕೊತ್ತಲಗಳನ್ನು ಏರ್ಪಡಿಸುವನು. ಅನೇಕ ಉಪ್ಪರಿಗೆ ಮನೆಗಳನ್ನೂ ಶಸ್ತ್ರಾಸ್ತ್ರಯಂತ್ರಾಗಾರಗಳನ್ನೂ ಅಸಂಖ್ಯಾತವಾಗಿ

ವಿಪಣಾಪಣಸಂಧಾನಚತ್ವರಂ ವನಶೋಭಿತಂ ।
ಮಮ ಲಿಂಗಾಲಯಂ ಪುಣ್ಯಂ ಸಪ್ರಾಕಾರಂ ಸಗೋಪುರಂ ॥೩೦॥

ನಾನಾಮಂಟಪಶೋಭಾಢ್ಯಂ ಕುರುಕ್ಷೇತ್ರೇಶ್ವರಸ್ಯ ಮೇ ।
ನಾನಾವಾಹನಶೋಭಾಢ್ಯಂ ಮಹಾರಥವರೈರ್ಯುತಂ ॥೩೧॥

ಕಾರಯಿಷ್ಯತಿ ಭೂಪಾಲಸ್ತತ್ರ ಕಾಲಂ ಪ್ರತೀಕ್ಷತಾಂ ॥೩೨॥

॥ ಮುನಿರುವಾಚ ॥

ಕಾಲಪ್ರತೀಕ್ಷಾ ಹಿ ಮಯಾ ಶಿವಾಜ್ಞಾಪರಿಪಾಲಕಃ ।
ನಿವಸಾಮಿ ಮಹಾಬಾಹೋ ಕ್ಷೇತ್ರೇಽಸ್ಮಿನ್ ಕುರುಜಾಂಗಲೇ ॥೩೩॥

ಲಿಂಗಮೇತನ್ಮಹೇಶಸ್ಯ ಭೂರಿ ಬಿಲ್ವೈಃ ಸಮರ್ಚಯನ್ ।
ಮುನಿಭಿಶ್ಶಾಂಭವೈರೇಭಿರ್ಭವನ್ಮಾರ್ಗಪ್ರತೀಕ್ಷಣಃ ॥೩೪॥

---

ನಿರ್ಮಿಸುವನು. ಆದರಲ್ಲಿ ಚಾತುರ್ವರ್ಣ್ಯದವರೂ ತಮ್ಮ ತಮ್ಮ ಧರ್ಮಗಳನ್ನು ತಪ್ಪದೆ ನಡೆಸುವರು. ಆ ನಗರವು ಅನೇಕ ಅಂಗಡೀಬೀದಿಗಳ ಸಾಲುಗಳಿಂದಲೂ, ಉದ್ಯಾನವನಗಳಿಂದಲೂ ತುಂಬಿ ಮನೋಹರವಾಗಿರುವುದು. ಆ ನಗರಮಧ್ಯದಲ್ಲಿ ಪ್ರಾಕಾರದಿಂದಲೂ ಗೋಪುರಗಳಿಂದಲೂ ಕೂಡಿ ಈ ಶಿವಲಿಂಗಾಲಯವು ಬಹುವಾಗಿ ಶೋಭಿಸುವುದು. ॥೨೯-೩೦॥

ಈ ಶಿವಾಲಯವು ಅನೇಕ ಮಂಟಪಗಳಿಂದಲೂ, ವಿಧವಿಧವಾದ ವಾಹನಗಳಿಂದಲೂ, ರಥಗಳಿಂದಲೂ ಕಂಗೊಳಿಸುವುದು. ಆರೀತಿ ರಾಜನೂ ಸಹ ಈ ಶಿವಾಲಯ ನಿರ್ಮಾಣಕ್ಕೆ ಪ್ರೋತ್ಸಾಹಕೊಡುವನು. ಅಲ್ಲಿನವರೆಗೂ ನೀನು ಇಲ್ಲಿಯೇ ಇರು ಎಂದು ಮಹೇಶ್ವರನು ನನಗೆ ಆಜ್ಞಾಪಿಸಿರುವನು. ॥೩೧-೩೨॥

ಮಹಾರಾಜನೇ, ಶಿವನ ಆಜ್ಞೆಯಂತೆ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿದ್ದೆನು. ಇಲ್ಲಿನ ವರೆಗೂ ಇದೇ ಕುರುಜಾಂಗಲಕ್ಷೇತ್ರದಲ್ಲಿ ಈ ಶಿವಲಿಂಗವನ್ನು ಬಿಲ್ವಪತ್ರಾದಿಗಳಿಂದ ಅರ್ಚಿಸುತ್ತಾ ಶಿವಪೂಜಕರಾದ ಅನೇಕ ಮಹರ್ಷಿಗಳಿಂದ ಕೂಡಿ ಕಾಲಕಳೆದೆನು. ॥೩೩-೩೪॥

ಲಿಂಗಂ ಮಂಗಲದಂ ಪಶ್ಯ ವಸುಧಾಧೀಶಾದ್ಯಕಷ್ಟಾಪಹಂ
ದೃಷ್ಟಂ ಜನ್ಮಜರಾದಿರೋಗಜನಿತಾ ಮೃತ್ವಾದ್ಯದಿ(?) ದುಃಖೋತ್ಕರಂ ।
ಹಂತ್ಯೇವಾಪದಮುತ್ತಮಂ ಶಿವಜನೈಃ ಸಂಪೂಜಿತಂ ಕಷ್ಟಹೃತ್
ತುಷ್ಟಸ್ತ್ವಯ್ಯಖಿಲಾಘಹಾರಕಹರೋಽತ್ಯುತ್ಕೃಷ್ಟಾಂ ವಿಮುಕ್ತಿಂ ತ್ವಯಿ ॥೩೫॥

ದಾಸ್ಯತ್ಯೇವ ಸದಾ ಹಿ ಭಾಗ್ಯಮತುಲಂ ಜುಷ್ಟಂ ಸ ವೈ ಶಂಕರಃ ॥೩೬॥

ಇತಃ ಪರಂ ಭವಾನ್ ರಾಜಾ ಕಾರ್ಯಸ್ಯಾಸ್ಯ ಪರಾಯಣಂ ।
ಇತ್ಥಂ ಮುನಿವಚೋ ವೀಚಿಜಾತಾನಂದಕುತೂಹಲಃ ॥೩೭॥
ಕುರುಸ್ತಮಾಹ ವಿನಯಾದ್ಧರಿಮೇಧಂ ದ್ವಿಜೋತ್ತಮಂ ॥೩೮॥

॥ ರಾಜೋವಾಚ ॥

ಕಥಂ ಜಾಂಗಲಮೇತದ್ಧಿ ಮಮ ವಾಸಾಯ ಕಲ್ಪತೇ ।
ನಾನಾಮೃಗಗಣಾಕೀರ್ಣಂ ನಾನಾಶಾರ್ದೂಲಸೇವಿತಂ ॥೩೯॥

---

ಎಲೈ ರಾಜನೇ, ಇಲ್ಲಿರುವ ಮಂಗಳಪ್ರದವಾದ ಶಿವಲಿಂಗವನ್ನು ನೋಡು. ಇದು ಆರಾಧಕರ ಕಷ್ಟಪರಂಪರೆಗಳನ್ನು ಹೋಗಲಾಡಿಸುವುದಲ್ಲದೆ, ಅವರಿಗೆ ಒದಗಿ ಬರುವ ಮುಪ್ಪು, ರೋಗ ಮುಂತಾದ ಸಕಲ ದುಃಖಗಳನ್ನೂ ನಿವಾರಿಸುವುದು. ಅಲ್ಲದೆ ಈ ಶಿವಲಿಂಗವನ್ನು ಸಕಲ ಮುನಿಜನರೂ ಪೂಜಿಸಿ ತಮ್ಮ ಪೂರ್ವಜನ್ಮದ ಪಾಪರಾಶಿಯನ್ನೆಲ್ಲಾ ಕಳೆದುಕೊಂಡಿರುವರು. ಸರ್ವವಿಪನ್ನಾಶಕವಾದ ಅಂತಹ ಶಿವಲಿಂಗಾರ್ಚನೆಯಿಂದ ನೀನೂ ಜಾಗ್ರತೆ ಮುಕ್ತಿಯನ್ನು ಸಂಪಾದಿಸುವೆ. ॥೩೫॥

ಪರಶಿವನು ತುಷ್ಟನಾದರೆ ನಿನಗೆ ಸಕಲ ಸನ್ಮಂಗಳಗಳನ್ನೂ ದಯಪಾಲಿಸುವನು. ಆದ್ದರಿಂದ ಎಲೈ ರಾಜನೇ, ಇನ್ನು ಮುಂದೆ ಈ ನಗರನಿರ್ಮಾಣಕಾರ್ಯದಲ್ಲಿ ಆಸಕ್ತನಾಗು" ಎಂದು ಹೇಳಿದ ಋಷಿಯ ಮಾತುಗಳನ್ನು ಕೇಳಿ ಕುರುರಾಜನು ವಿನಯದಿಂದಲೂ, ಕುತೂಹಲದಿಂದಲೂ ಕೂಡಿದವನಾಗಿ ಹರಿಮೇಧಸ್ಸೆಂಬ ಆ ಋಷಿಯೊಡನೆ ಹೀಗೆಂದನು. ॥೩೬-೩೭-೩೮॥

"ಮಹರ್ಷಿಯೇ, ಅನೇಕ ಮೃಗಗಣಗಳಿಂದಲೂ, ವ್ಯಾಘ್ರವೇ ಮೊದಲಾದ ಘಾತುಕಜಂತುಗಳಿಂದಲೂ ನಿಬಿಡವಾಗಿರುವ ಈ ಗೊಂಡಾರಣ್ಯವು ನನ್ನ ವಾಸಕ್ಕೆ ಅನುಕೂಲವಾಗುವಂತೆ, ರಮ್ಯನಗರಿಯಾಗುವುದು ಹೇಗೆ? ಅದನ್ನು ಸಾಧಿಸಲು

ಸುರಮ್ಯಂ ಚತ್ವರೋಪೇತಂ ನಗರಂ ಮುನಿಸತ್ತಮ ।
ಕಥಮೇತದ್ಭವೇದ್ಭದ್ರಂ ಉಪಾಯಶ್ಚಾತ್ರ ಕಥ್ಯತಾಂ ॥೪೦॥

ಸಮುನಿಸ್ತಂ ಕುರುಂ ಪ್ರಾಹ ದೇವವಾಕ್ಯಂ ಮುನಿಸ್ತದಾ ॥೪೧॥

॥ ಮುನಿರುವಾಚ ॥

ತಪಸಾ ಸಾಧಯೇತ್ಸರ್ವಂ ಶಿವಾದ್ದೇವೋತ್ತಮೋತ್ತಮಾತ್ ।
ಇತ್ಯುಕ್ತ್ವಾ ತಂ ನೃಪಂ ವಿಪ್ರೋ ದೀಕ್ಷಯಿತ್ವಾ ವಿಧಾನತಃ ॥೪೨॥

ಪ್ರಾಹ ಪಂಚಾಕ್ಷರಂ ಮಂತ್ರಂ ರಾಜಾನಂ ಭಸ್ಮಭೂಷಣಂ ।
ಜಜಾಪ ಶತರುದ್ರೀಯಂ ಕುರುಕ್ಷೇತ್ರೇಶಮರ್ಚಯನ್ ॥೪೩॥

ಬಿಲ್ವಪತ್ರೈಸ್ತಥಾ ಪುಷ್ಪೈರ್ಧೂಪೈರ್ದೀಪೈರ್ಮನೋಹರೈಃ ।
ನೈವೇದ್ಯೈಃ ಪಾಯಸಾಪೂಪೈಃ ಸಪನ್ನಂ ಕಲ್ಪಯನ್ ನೃಪಃ ॥೪೪॥

ತನ್ನೈವೇದ್ಯೈಃ ಶಾಂಭವಾನಾಂ ಭೋಜನಾನಿ ತದಾ ವ್ಯಧಾತ್ ।
ಪ್ರದಕ್ಷಿಣನಮಸ್ಕಾರೈಃ ಸ್ತೋತ್ರೈಶ್ಚ ವಿವಿಧೈರಪಿ ॥೪೫॥

ಪ್ರಣಮ್ಯ ದೇವಂ ತುಷ್ಟಾವ ಸ ನೃಪೋ ಮುನಿನಾ ಸಹ ॥೪೬॥

---

ಉಪಾಯಾಂತರವೇನಾದರೂ ಇರುವುದೇ ?" ಎಂದು ರಾಜನು ಮತ್ತೆ ಪ್ರಶ್ನಿಸಲು ಆಗ ಆ ಋಷಿಯು ಹಿಂದೆ ಹೇಳಿದ್ದ ಮಹಾದೇವನ ಮಾತನ್ನೇ ಮತ್ತೆ ಆತನ ತಿಳಿವಳಿಕೆ ಗಾಗಿ ಹೇಳತೊಡಗಿದನು. ॥೩೯-೪೦-೪೧॥

"ರಾಜನೇ, ನೀನು ಆ ಕಾರ್ಯವನ್ನು ಶಿವನ ಅನುಗ್ರಹದಿಂದಲೇ ಸಂಪಾದಿಸ ಬೇಕು. ಅದೊಂದೇ ಉಪಾಯ" ಎಂದು ಹೇಳಿ ಒಡನೆಯೇ ಹರಿಮೇಧಸ್ಸು ಆ ರಾಜ ನಿಗೆ ಶಿವಪಂಚಾಕ್ಷರೀಮಂತ್ರವನ್ನೂ,ಶತರುದ್ರೀಯಮಂತ್ರವನ್ನೂ ಉಪದೇಶಿಸಿಕೊಟ್ಟು ವಿಧಿವತ್ತಾದ ದೀಕ್ಷೆಯಿಂದ ತಪಸ್ಸನ್ನಾಚರಿಸಲು ಪ್ರಾರಂಭಮಾಡಿಸಿದನು.॥೪೨-೪೩॥

ರಾಜನಾದರೋ ಋಷಿಯ ಅಪ್ಪಣೆಯಂತೆಯೇ ಶಿವಲಿಂಗವನ್ನು ರುದ್ರಮಂತ್ರ ಗಳಿಂದ ಅಭಿಷೇಕಮಾಡಿ, ಬಿಲ್ವಪತ್ರೆ, ಪುಷ್ಪ, ಧೂಪ, ದೀಪ ಮುಂತಾದ ಉಪಚಾರ ಗಳಿಂದಲೂ, ಪಾಯಸ, ಕಡುಬು, ಅನ್ನ ಮುಂತಾದ ವಸ್ತುಗಳ ನೈವೇದ್ಯದಿಂದಲೂ ವಿಧವಿಧವಾದ ಸ್ತುತಿವಚನಗಳಿಂದಲೂ, ಪ್ರದಕ್ಷಿಣಾದಿಗಳಿಂದಲೂ ಮಹಾದೇವ ನನ್ನು ತೃಪ್ತಿಗೊಳಿಸಿದನು. ॥೪೪-೪೫-೪೬॥

ಸ್ತುತಿಸುತವಿಬುಧಾದಿಪಾದ್ಯಪಾದಂ
ದಮಿತಾನೇಕಸುರದ್ರುಹೋರುಪಾದಂ ।
ಯಮಿಮಾನಸಪದ್ಮಲೀಲಪಾದಂ
ಭಜ ದಕ್ಷಾಧ್ವರನಾಶನೇ ಸುದಕ್ಷಂ ॥೪೭॥

ವೀಕ್ಷಾಶಿಕ್ಷಿತಮನ್ಮಥಂ ಸುರಗಣಾಧ್ಯಕ್ಷಂ ಮಹೋಕ್ಷಾಂಗಕಂ ।
ಕುಕ್ಷಿಸ್ಥಾಖಿಲಲೋಕಪಾಲಮುಮಯಾ ಧ್ಯಾಯೇನ್ಮೃಗಾಕ್ಷೀಕ್ಷಯಂ ॥೪೮॥

॥ ಸೂತ ಉವಾಚ ॥

ಇತ್ಥಂ ಸ ರಾಜಾ ವಿವಿಧಂ ಸ್ತುತಿಭಿಃ ಸಪರ್ಯಯಾ ಪೂಜ್ಯ ಮಹೇಶಲಿಂಗಂ ।
ಸ್ತುವನ್ಮುನೀನಾಂ ಪುರತೋ ದದರ್ಶ ಗೌರ್ಯಾ ವೃಷಸ್ಕಂಧಗತಂ ತದಾ
ಮಾಂ ॥೪೯॥

---

ಮತ್ತೂ ಹೀಗೆ ಸ್ತುತಿಸಿದನು. “ ಎಲೈ ಮನಸ್ಸೇ, ಸಕಲ ದೇವತೆಗಳಿಂದಲೂ ದೇವತಾಸಾರ್ವಭೌಮರಿಂದಲೂ ಅತಿಶಯವಾಗಿ ಸ್ತುತಿಸಲ್ಪಟ್ಟ ಮಹಾದೇವನ ಪಾದಕಮಲಗಳನ್ನು ಸರ್ವದಾ ಭಜಿಸು. ಆ ಪಾದಗಳು ಸುರದ್ರೋಹಿಗಳಾದ ರಾಕ್ಷಸರನ್ನೆಲ್ಲಾ ಮೆಟ್ಟಿ ಧ್ವಂಸಮಾಡಿರುವುವು. ಮತ್ತು ಜಿತೇಂದ್ರಿಯರಾದ ಅನೇಕ ಮಹರ್ಷಿಗಳ ಮನಸ್ಸಿನಲ್ಲಿ ಸ್ಥಿರವಾಗಿ ನೆಲಸಿರುವುವು. ದಕ್ಷಬ್ರಹ್ಮನ ಯಾಗನಾಶಕ್ಕೆ ಅತ್ಯಂತ ಸಮರ್ಥವಾದುವು. ಅಂತಹ ಪರಶಿವನ ಪಾದದ್ವಂದ್ವಗಳನ್ನು ಸರ್ವದಾ ಭಜಿಸುತ್ತಿರು. ॥೪೭॥

ಮಹಾದೇವನು ತನ್ನ ದೃಷ್ಟಿಮಾತ್ರದಿಂದಲೇ ಮನ್ಮಥನನ್ನು ನಾಶಗೊಳಿಸಿರುವನು. ಆತನೇ ದೇವದೇವನು, ವೃಷಭಾರೂಢನು, ಸಮಸ್ತ ಲೋಕಗಳನ್ನೂ ತನ್ನ ಹೃದಯಕುಹರದಲ್ಲಿ ಅಡಗಿಸಿಕೊಂಡಿರುವವನು. ಮೃಗಾಕ್ಷಿಯೆನಿಸಿದ ಪಾರ್ವತಿಗೆ ನೆಲೆಮನೆಯಂತೆ ತೋರುವವನು. ಇಂತಹ ಮಹಾದೇವನನ್ನು ನಾನು ಸರ್ವದಾ ಧ್ಯಾನಮಾಡುವೆನು ” ಎಂದು ಸ್ತುತಿಸಿದನು. ॥೪೮॥

ಎಲೈ ಮಹರ್ಷಿಗಳೇ, ಹೀಗೆ ಆ ರಾಜನು ನಾನಾವಿಧವಾದ ಸ್ತುತಿವಚನಗಳಿಂದ ಮಹೇಶ್ವರನನ್ನು ಧ್ಯಾನಿಸಲು, ಅವನ ತಪಸ್ಸಿಗೂ ಸ್ತೋತ್ರಕ್ಕೂ ಮೆಚ್ಚಿದ

ಇತಿ ಶ್ರೀ ಶಿವರಹಸ್ಯೇ ಪಂಚಮಾಂಶೇ ಭರ್ಗಾಖ್ಯೇ ಕುರುಕ್ಷೇತ್ರ ಕಥಾವರ್ಣನೇ ಋಷಿರಾಜಸಂವಾದೇ ಶಿವಪ್ರತ್ಯಕ್ಷದರ್ಶನಂ ನಾಮ ದ್ವಾತ್ರಿಂಶೋಽಧ್ಯಾಯಃ

---

ಪರಶಿವನು ಸಕಲ ಮುನಿಜನರೂ ನೋಡುತ್ತಿರುವಂತೆಯೇ ವೃಷಭಾರೂಢನಾಗಿ ಆ ರಾಜನಿಗೆ ಪ್ರತ್ಯಕ್ಷನಾದನು ಎಂದು ಸೂತಮಹರ್ಷಿಗಳು ಸಕಲ ಋಷಿಜನರಿಗೂ ಹೇಳಿದರು. ||೪೯||

ಇಲ್ಲಿಗೆ ಶ್ರೀ ಶಿವರಹಸ್ಯದ ಐದನೆಯ ಅಂಶದಲ್ಲಿ ಕುರುಕ್ಷೇತ್ರ ಕಥಾವರ್ಣನೆಯನ್ನು ವಿವರಿಸುವ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ತ್ರಯಸ್ತ್ರಿಂಶೋಽಧ್ಯಾಯಃ

|| ರಾಜೋವಾಚ ||

ಜಯಪ್ರಮಥಮಂದಾರ ವಿಶ್ವಾಧಿಕ ಮಹೇಶ್ವರ ।
ಜಯ ವೇದಾಂತಸಂವೇದ್ಯ ಕಾಮಾಂತಕ ಜಗತ್ಪ್ರಭೋ ||೧||

ಜಯದೇವಾದಿ ದೇವೇಶ ಪ್ರಪನ್ನಂ ಪಾಹಿ ಮಾಂ ಶಿವ ।
ಜಯ ಭಕ್ತಜನಾಧಾರ ಜಯ ಸರ್ವಾಂಗಸುಂದರ ||೨||

ಜಯ ವೈದ್ಯೋತ್ತಮ ವ್ಯೋಮಕೇಶಾಶಾವಸನಾವ್ಯಯ ।
ಜಯ ಭೂತಪತೇ ಶಂಭೋ ಕರುಣಾವರುಣಾಲಯ ||೩||

---

## ಮೂವತ್ತುಮೂರನೆಯ ಅಧ್ಯಾಯ

ಸರ್ವಮುನಿಗಳ ಎದುರಿನಲ್ಲಿಯೂ ಸಪರಿವಾರನಾಗಿ ಪ್ರತ್ಯಕ್ಷನಾದ ಮಹೇಶ್ವರನನ್ನು ನೋಡಿ ಆ ಕುರುರಾಜನು ಈರೀತಿ ಸ್ತೋತ್ರಮಾಡಿದನು “ಪ್ರಮಥಗಣಗಳಿಗೆ ಮಂದಾರವೃಕ್ಷದಂತೆ ಇಷ್ಟಾರ್ಥಪ್ರದನಾದವನೇ, ಲೋಕೈಕೇಶ್ವರನೇ, ಜಯಶೀಲನಾಗು. ಸಕಲ ಉಪನಿಷತ್ತುಗಳಿಂದಲೂ ಸ್ತುತ್ಯನೆನಿಸಿ ಕಾಮಾರಿಯಾಗಿರುವ ಜಗತ್ಪ್ರಭುವೇ, ನೀನೇ ಸರ್ವೋತ್ಕೃಷ್ಟನಾಗಿರು. ದೇವಾದಿವಂದಿತನೇ, ಭಕ್ತಜನರಕ್ಷಕನೇ, ಸರ್ವಾಂಗಸುಂದರನೇ, ನಿನಗೆ ಜಯವಾಗಲಿ. ||೧-೨||

ಭವರೋಗವೈದ್ಯನೇ, ವ್ಯೋಮ-ಕೇಶನೇ, ದಿಗಂಬರನೇ, ನಾಶರಹಿತನೇ ನಿನಗೆ ಜಯವಾಗಲಿ. ಸಕಲ ಪ್ರಾಣಿಗಳಿಗೂ ಒಡೆಯನೆನಿಸಿ, ದಯಾಸಮುದ್ರ

ಜಯಾಪರ್ಣಾಪತೇಶಾನ ಸ್ವರ್ಣವರ್ಣಾಂಬರಾಯುತ ।
ಜಯ ವಾತಾಶಿಪರ್ಣಾಶಿ ಹೃದಯಾಂತರಗ ಪ್ರಭೋ ॥೪॥

ಪಾಹಿ ಪಾಹಿ ಮಹಾದೇವ ರಕ್ಷ ಮಾಂ ಶಶಿಶೇಖರ ॥೫॥

॥ ಈಶ್ವರ ಉವಾಚ ॥

ಇತಿ ರಾಜ್ಞಾ ತದಾ ದೇವಿ ಕುರುಣಾ ಸಂಸ್ತುತೋಽಸ್ಮ್ಯಹಂ ।
ತಸ್ಮೈ ದತ್ತೋ ವರೋ ದೇವಿ ಪುರಂ ಭವತು ಜಾಂಗಲಂ ॥೬॥

ವಿಶ್ವಕರ್ಮಾ ತದೈವಾಗಾನ್ಮಯಾ ಸಂಸ್ಮಾರಿತೋಽಂಬಿಕೇ ।
ಪ್ರಾಂಜಲಿಃ ಕಿಂಕರೋಮೀತಿ ಸ್ಥಿತೋ ಮತ್ಸನ್ನಿಧೌ ತತಃ ॥೭॥

ಅಸ್ಯ ರಾಜ್ಞೋ ಯಥಾಕಾಮಂ ಪ್ರಾಕಾರಪರಿಖಾವೃತಂ ।
ಪ್ರಾಸಾದಮಾಲಾವಿತತಂ ಗೋಪುರಾಟ್ಟಾಲತೋರಣಂ ॥೮॥

---

ನಾಗಿರುವ ಪರಶಿವನೇ ನಿನಗೆ ಮಂಗಳವಾಗಲಿ. ಕೇವಲ ಅನಿಲಾಹಾರದಿಂದಲೂ, ಪರ್ಣಾಹಾರದಿಂದಲೂ ಜೀವಿಸಿ ತಪಶ್ಚರ್ಯೆಯಿಂದಿರುವ ತಪಸ್ವಿಗಳ ಹೃದಯಾಂತರಾಳದಲ್ಲಿ ವಾಸಿಸುವ ಮಹಾದೇವನೇ, ನೀನು ಸರ್ವೋತ್ಕೃಷ್ಟನೆನಿಸು. ಚಂದ್ರಶೇಖರನೇ, ಪಾರ್ವತೀಪತಿಯೇ, ಸುವರ್ಣವಸ್ತ್ರಧಾರಿಯೆ, ಮಹೇಶ್ವರನೇ ನಮ್ಮನ್ನು ಸಲಹು " ||೩-೪-೫||

ಹೀಗೆ ಸ್ತುತಿಸಿದುದನ್ನು ಕೇಳಿ ಶಂಕರನು ತೃಪ್ತಿಪಟ್ಟು ಕುರುರಾಜನಿಗೆ ವರಕೊಟ್ಟ ವಿಧಾನವನ್ನು ಶಂಕರನೇ ಪಾರ್ವತಿಗೆ ವಿವರಿಸಲಾರಂಭಿಸಿದನು. " ದೇವಿಯೇ, ನಾನು ಆ ಕುರುರಾಜನ ಮನೋಭಿಪ್ರಾಯವನ್ನರಿತು, ' ಅಯ್ಯಾ ರಾಜನೇ ನಿನ್ನ ಕೋರಿಕೆಯಂತೆ ಈ ಜಾಂಗಲವು (ಅರಣ್ಯವು) ಈಗಲೇ ಪುರವಾಗಿ ಪರಿಣಮಿಸಲಿ ' ಎಂದು ವರವಿತ್ತು ವಿಶ್ವಕರ್ಮನನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡೆನು. ವಿಶ್ವಕರ್ಮನು ಒಡನೆಯೇ ಬಂದು ನಿಂತು ಕೈಜೋಡಿಸಿ ಅಪ್ಪಣೆಯೇನು ? ಎಂದು ಕೇಳಿಕೊಂಡನು. ||೬-೭||

ಆಗ ನಾನು (ಈಶ್ವರನು) ವಿಶ್ವಕರ್ಮನನ್ನು ಕುರಿತು " ಎಲೈ ದೇವಶಿಲ್ಪಿಯೇ, ಈ ರಾಜನ ಇಷ್ಟದಂತೆ ಈ ಅರಣ್ಯವನ್ನು ನಗರವನ್ನಾಗಿ ಪರಿವರ್ತಿಸು. ಕುರುಕ್ಷೇತ್ರೇಶ್ವರಾಲಯವನ್ನು, ಅನೇಕ ಪ್ರಾಕಾರಗಳಿಂದಲೂ, ಮಂಟಪಗಳಿಂದಲೂ, ಗೋಪುರಗಳಿಂದಲೂ ಸುಂದರವಾಗಿರುವಂತೆ ನಿರ್ಮಿಸು. ಇವನ ನಗರವು ಕೋಟೆಕೊತ್ತಲ

ಕುರುಕ್ಷೇತ್ರೇಶ್ವರಸ್ಯಾಸ್ಯ ಗರ್ಭಾಗಾರಂ ಮನೋರಮಂ ।
ಪ್ರಾಕಾರೈರ್ಮಂಟಪೈಶ್ಚೈವ ವಿಸ್ತೃತಂ ಗೋಪುರೈರಪಿ ॥೯॥

ಧನಧಾನ್ಯಸುಸಂಪೂರ್ಣಂ ಗೋಗಜಾಶ್ವಾದಿಸಂವೃತಂ ।
ನರನಾರೀಗಣಾಕೀರ್ಣಂ ವಿಪಣಾಪಣಶೋಭಿತಂ ॥೧೦॥

ಯಂತ್ರಶಸ್ತ್ರಾರ್ಗಲೈರ್ಯುಕ್ತಂ ಕುರೋರಸ್ಯಪುರಂ ಕುರು ।
ಇತ್ಯುಕ್ತ್ವಾ ವಿಶ್ವಕರ್ಮಾಣಂ ಕುರೋರ್ವೀಕ್ಷಯತಶ್ಶಿವಃ ॥೧೧॥

ಲಿಂಗೇಂತರ್ಧಿಯಯೌ ದೇವೋ ಮುನೇಸ್ತಸ್ಯಾಪಿ ಪಶ್ಯತಃ ।
ತದಾಜ್ಞಯೈವ ದೇವಸ್ಯ ವಿಶ್ವಕರ್ಮಾ ಚ ತತ್ರ ಹಿ ॥೧೨॥

ಪ್ರಾಕಾರಪರಿಘೋಪೇತಂ ಪುರಮಿಂದ್ರಪುರಂ ಯಥಾ ।
ಪತಾಕಾತೋರಣೋಪೇತಂ ನಾನಾಪ್ರಾಸಾದಸಂಕುಲಂ ॥೧೩॥

ಕ್ಷಣಾದ್ಬಭೌ ಪುರಂ ರಮ್ಯಂ ಕುರೋಸ್ತತ್ಕುರುಜಾಂಗಲಂ ।
ಆಲಯಂ ದೇವದೇವಸ್ಯ ಕುರುಕ್ಷೇತ್ರೇಶ್ವರಸ್ಯ ಚ ॥೧೪॥

---

ಗಳಿಂದಲೂ, ಉಪ್ಪರಿಗೆಯ ಮನೆಗಳ ಸಾಲುಗಳಿಂದಲೂ ರಂಜಿಸುವಂತಿರಲಿ. ಪ್ರತಿ ಮನೆಯಲ್ಲಿಯೂ ಧನಧಾನ್ಯಸಮೃದ್ಧಿಯೂ ಸ್ತ್ರೀಪುರುಷರ ಸಮೂಹವೂ ಕಾಣುವಂತಿರಲಿ. ಗಜಾಶ್ವಾದಿಗಳೂ ಅಂಗಡಿ ಮುಂಗಟ್ಟುಗಳೂ ಈ ನಗರದಲ್ಲಿ ವಿಹರಿಸುತ್ತಿರಲಿ. ॥೮-೯-೧೦॥

ಯಂತ್ರಾಗಾರಗಳೂ, ಶಸ್ತ್ರಗೃಹಗಳೂ ಕುರುನಗರದಲ್ಲಿ ವಿಶೇಷವಾಗಿರಲಿ. ಈರೀತಿ ನಗರನಿರ್ಮಾಣಮಾಡು" ಎಂದು ಆಜ್ಞಾಪಿಸಿ ಕುರುವಿನ ಎದುರಿನಲ್ಲಿಯೇ, ಅದೇ ಲಿಂಗದಲ್ಲಿ ಅಂತರ್ಧಾನನಾದೆನು. ನನ್ನ ಅಪ್ಪಣೆಯಂತೆಯೇ ದೇವಶಿಲ್ಪಿಯಾದ ವಿಶ್ವಕರ್ಮನು ಒಂದು ಪುರವನ್ನು ಕ್ಷಣಕಾಲದಲ್ಲಿ ನಿರ್ಮಿಸಿದನು. ॥೧೧-೧೨॥

ಅದು ಇಂದ್ರನ ಅಮರಾವತಿಯಂತೆ, ಕೋಟೆ ಕಂದಕಗಳಿಂದಲೂ, ಧ್ವಜ ಪತಾಕೆಗಳಿಂದಲೂ, ತೋರಣಸಮೂಹಗಳಿಂದಲೂ, ಉಪ್ಪರಿಗೆ ಮನೆಗಳ ಸಾಲುಗಳಿಂದಲೂ ರಂಜಿಸುತ್ತಿತ್ತು. ಹೀಗೆ ಕುರುಕ್ಷೇತ್ರೇಶ್ವರಾಲಯವೂ, ಕುರುನಗರವೂ, ಆ ಕುರುಜಾಂಗಲಕ್ಷೇತ್ರದಲ್ಲಿ ಕ್ಷಣಕಾಲದಲ್ಲಿ ನಿರ್ಮಿತವಾದವು. ॥೧೩-೧೪॥

ಸ ಮಂಟಪಂ ಚ ಪ್ರಾಕಾರಂ ಗೋಪುರೈರ್ದಿಕ್ಷು ಶೋಭಿತಂ ।
ಕುರುಃ ಸರಾಜಾ ತತ್ರಾಸೀದ್ವಿಪ್ರೇಂದ್ರೇಣ ಶಶಾಸ ತತ್ ॥೧೫॥

ತಂ ಗಂಗಾ ಪ್ಲಾವಯಾಮಾಸ ಯಮುನಾ ಪರಿಘಾಕೃತೀ ।
ತತ್ಪುರಸ್ಮಾತ್ಸಮಭವತ್ಕುರುಕ್ಷೇತ್ರಸ್ಯ ಸತ್ತಮಾಃ ॥೧೬॥

ಹಸ್ತಿರ್ನಾಮಾಥ ತತ್ಪೌತ್ರಸ್ತೇನಾಪಿ ಪ್ರಥಿತಾ ಪುರೀ ।
ಹಸ್ತಿನಾಪುರಮಿತ್ಯಾಖ್ಯಾಂ ಪ್ರಾಪ ತತ್ಪುರಮುತ್ತಮಂ ॥೧೭॥

ಕುರುಕ್ಷೇತ್ರಂ ಪ್ರಯಾಗಂ ಚ ಗಯಾಂ ಚೈವಾವಿಮುಕ್ತಕಂ ।
ಏತತ್ಪ್ರಧಾನಂ ಕ್ಷೇತ್ರಾಣಾಮುತ್ಕೃಷ್ಟಂ ಪ್ರಾಹ ಶಂಕರಃ ॥೧೮॥

ಸ್ಯಮಂತಪಂಚಕಂ ತೀರ್ಥಂ ಕುರುಕ್ಷೇತ್ರೇ ಮಹೇಶ್ವರಿ ।
ರಾಮೇಣ ಪಿತೃತೃಪ್ತ್ಯರ್ಥಂ ಹ್ರದಾಃ ಪಂಚೈವ ಕಲ್ಪಿತಾಃ ॥೧೯॥

ತತ್ರ ಸ್ನಾತ್ವಾ ನರೋ ಯಸ್ತು ಪಿತ್ರೂನ್ ಸಂತರ್ಪಯೇದ್ಯಪಿ ।
ಕುರುಕ್ಷೇತ್ರಗತಂ ವಾರಿ ಪಿತರಃ ಪ್ರಾರ್ಥಯಂತಿ ಹಿ । ॥೨೦॥

---

ಅನೇಕ ಮಂಟಪಗಳೂ, ಪ್ರಾಕಾರಗಳೂ, ನಾನಾ ಗೋಪುರಗಳೂ ಆ ನಗರದಲ್ಲಿ ಶೋಭಿಸಲಾರಂಭಿಸಿದುವು. ಆ ನಗರದಲ್ಲಿ ರಾಜನು ಬ್ರಾಹ್ಮಣ ಶ್ರೇಷ್ಠನೆನಿಸಿದ ಮಂತ್ರಿಯೊಡನೆ ಧರ್ಮದಿಂದ ರಾಜ್ಯವಾಳುತ್ತಿದ್ದನು. ಪರಶಿವನ ಅಪ್ಪಣೆಯಂತೆ ಗಂಗಾನದಿಯು ಅಲ್ಲಿ ಹರಿದು ನಗರವನ್ನೆಲ್ಲಾ ಪವಿತ್ರಗೊಳಿಸಿತು. ಯಮುನೆಯು ಆ ಕುರುಕ್ಷೇತ್ರಪುರಕ್ಕೆ ಕಂದಕದಂತಾಯಿತು. ॥೧೫-೧೬॥

ಅವನ ಮೊಮ್ಮಗನೆನಿಸಿದ ಹಸ್ತಿ ಎಂಬುವನು ಆ ನಗರವನ್ನು ಬಹಳವಾಗಿ ಅಭಿವೃದ್ಧಿಗೆ ತಂದನು. ಅಂದಿನಿಂದ ಆ ನಗರವು ಹಸ್ತಿನಾಪುರವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಒಟ್ಟಿನಲ್ಲಿ ಕುರುಕ್ಷೇತ್ರವು, ಪ್ರಯಾಗ, ಗಯೆ, ಅವಿಮುಕ್ತಕ್ಷೇತ್ರವೆನಿಸಿದ ಕಾಶಿ, ಮುಂತಾದ ಉತ್ತಮವಾದ ಕ್ಷೇತ್ರಗಳಂತೆ ಪ್ರಸಿದ್ಧಿಗೊಂಡಿದೆ. ಎಂದು ಶಂಕರನೇ ಪಾರ್ವತಿಗೆ ತಿಳಿಸಿದನು. ॥೧೭-೧೮॥

ಪರಶುರಾಮನು ತಮ್ಮ ಪಿತೃಗಳ ತೃಪ್ತ್ಯರ್ಥವಾಗಿ ಸ್ಯಮಂತಪಂಚಕವೆಂಬ ಐದು ತೀರ್ಥಗಳನ್ನು ಕುರುಕ್ಷೇತ್ರದಲ್ಲಿ ನಿರ್ಮಿಸಿದನು. ಅಲ್ಲಿ ಸ್ನಾನಮಾಡಿ ಪಿತೃತರ್ಪ

ತತ್ರ ಶ್ರಾದ್ಧಾನಿ ದೇಯಾನಿ ನರೈಃ ಪರ್ವಣಿ ಪರ್ವಣಿ ।
ಅಮಾ ವಿಷುವಸಂಕ್ರಾಂತೌ ರಾಹುಗ್ರಸ್ತೇ ದಿವಾಕರೇ ॥೨೧॥

ಸೋಮೇ ಚಾಥ ವ್ಯತೀಪಾತೇ ಕುರುಕ್ಷೇತ್ರಗತೋ ನರಃ ।
ಸಂತರ್ಪ್ಯ ತಾರಯೇದೇವ ಸ್ವಪಿತೄನ್ನಾತ್ರ ಸಂಶಯಃ ॥೨೨॥

ಕುರುಕ್ಷೇತ್ರೇಶ್ವರಂ ಭಕ್ತ್ಯಾ ಸ್ನಾಪ್ಯ ತತ್ತೀರ್ಥವಾರಿಭಿಃ ।
ಬಿಲ್ವಪತ್ರೈಸ್ಸಮಭ್ಯರ್ಚ್ಯ ನಿವೇದ್ಯಾಥ ಸುಪಾಯಸಂ ॥೨೩॥

ಉಪೋಷಿತೋ ನರಸ್ತತ್ರ ಶತವರ್ಷತಪಃಫಲಂ ।
ಪ್ರಾಪ್ನೋತಿ ಮನುಜೋ ಗೌರಿ ಗಯಾಪಿಂಡಾಚ್ಛತಾಧಿಕಂ ॥೨೪॥

ಕುರುಕ್ಷೇತ್ರಗತಾ ಗಂಗಾ ಸ್ನಾತಾ ಪೀತಾ ಮಹಾಘಹೃತ್ ।
ದರ್ಶನಾದೇವ ತಸ್ಯಾಸ್ತು ಮುಕ್ತೋ ಭವತಿ ಪಾಪತಃ ॥೨೫॥

---

ಣಮಾಡಿದವರ ಪಿತೃದೇವತೆಗಳು ತೃಪ್ತರಾಗುವರು. ಪಿತೃದೇವತೆಗಳು ಸರ್ವದಾ ಕುರುಕ್ಷೇತ್ರಗತವಾದ ನೀರನ್ನು ತರ್ಪಣೋದಕವನ್ನಾಗಿ ಅಪೇಕ್ಷಿಸುವರು. ॥೧೯-೨೦॥

ಕುರುಕ್ಷೇತ್ರದಲ್ಲಿ ಪ್ರತಿಪರ್ವತಿಥಿಗಳಲ್ಲಿಯೂ ಪಿತೃಶ್ರಾದ್ಧಮಾಡಬೇಕು. ಅಮಾವಾಸ್ಯೆ, ಮೇಷ ಮತ್ತು ತುಲಾಸಂಕ್ರಮಣಕಾಲ, ಸೂರ್ಯಚಂದ್ರಗ್ರಹಣಕಾಲ, ವ್ಯತೀಪಾತ ಮುಂತಾದ ಪುಣ್ಯಕಾಲಗಳಲ್ಲಿ ಯಾರು ಕುರುಕ್ಷೇತ್ರದಲ್ಲಿ ಪಿತೃಶ್ರಾದ್ಧ ಮಾಡುವರೋ ಅವರಿಂದ ಅವರ ಪಿತೃಗಳು ನಿಜವಾಗಿಯೂ ಮುಕ್ತರಾಗುವರು. ಅದರಲ್ಲಿ ಸಂಶಯವಿಲ್ಲ. ॥೨೧-೨೨॥

ಕುರುಕ್ಷೇತ್ರಕ್ಕೆ ಹೋಗಿ, ಅಲ್ಲಿ ಕುರುಕ್ಷೇತ್ರೇಶ್ವರ ಲಿಂಗಕ್ಕೆ ಗಂಗೋದಕ ದಿಂದ ಅಭಿಷೇಕಮಾಡಿ, ಪರಮಾನ್ನಾದಿಗಳನ್ನು ನಿವೇದಿಸಿ ಭಕ್ತಿಯಿಂದ ಸ್ತುತಿಸಿ ದವರು, ನೂರು ವರ್ಷತಪಸ್ಸನ್ನಾಚರಿಸಿದ ಫಲವನ್ನು ಹೊಂದುವರು. ಅಲ್ಲಿ ಪಿಂಡ ಪ್ರದಾನಮಾಡಿದರೆ ಗಯಾಶ್ರಾದ್ಧದ ಶತಾಧಿಕವಾದ ಫಲವು ಲಭಿಸುವುದು. ಕುರುಕ್ಷೇತ್ರಸ್ಥವಾದ ಗಂಗಾನದಿಯನ್ನು ನೋಡಿದರೂ, ಅದರಲ್ಲಿ ಸ್ನಾನಮಾಡಿದರೂ, ಅಥವಾ ಪಾನಮಾಡಿದರೂ, ಮನುಷ್ಯರ ಪಾಪರಾಶಿಯು ನಿರ್ಮೂಲವಾಗಿ, ಸದ್ಯೋ ಮುಕ್ತಿಯು ದೊರಕುವುದು. ॥೨೩-೨೪-೨೫॥

ಕಿಂ ಪುನಸ್ಸ್ನಾನದಾನಾರ್ಚ್ಯಾ ಶಿವದರ್ಶನತಶ್ಶಿವೇ ।
ದೇವಾಃ ಸ್ತುವಂತಿ ಮಾಂ ತತ್ರ ಬ್ರಹ್ಮಾದ್ಯಾ ಮುನಿಸತ್ತಮಾಃ ॥೨೬॥

ತತ್ಸ್ತುತಿಂ ಶೃಣು ದೇವೇಶಿ ಮತ್ತಃ ಪಾಪಾಪಹಾರಿಣೀಂ ॥೨೭॥

॥ ಬ್ರಹ್ಮಾದಯ ಊಚುಃ ॥

ಕಾಶೀಕೃತಾನಂದವನ ಪ್ರಸೀದ
ಶಂಭೋ ತ್ವಮಾನಂದಘನೋ ಉದಾರಃ ।
ಸುರಾವನಃ ಸಂಸ್ತುತಪಾಕಶಾಸನಃ
ಸುಪಾವನೋ ವಿಪ್ರನತೋ ಹುತಾಶನಃ ॥೨೮॥

ಸನಾತನನತಾವನತ್ರಿಪುರದಕ್ಷಸಂತ್ರಾಸನ
ಸುಧಾಶನಗಣಾವನಃ ಸ್ತುತಸುದ್ಯೈವಪಂಚಾನನ ।
ಗರಾಶನ ಹುತಾಶನಪ್ರಬಲನೇತ್ರಫಾಲಾನನ
ಮಹಾಘಭಯನಾಶನ ಸ್ಮರಶರಾದಿಧಾರಾಶನ ॥೨೯॥

---

ಅಲ್ಲಿಯ ಶಿವದರ್ಶನದಿಂದ ಒದಗುವ ಪುಣ್ಯರಾಶಿಯು ಮತ್ತಾವ ತೀರ್ಥದ ಸ್ನಾನದಿಂದಾಗಲಿ, ದಾನ, ಅರ್ಚನೆ ಮುಂತಾದ ಯಾವ ಕ್ರಿಯೆಗಳಿಂದಾಗಲಿ ಲಭಿಸಲಾರದು. ಅದಕ್ಕಾಗಿಯೇ ಅಲ್ಲಿ ಬ್ರಹ್ಮಾದಿದೇವತೆಗಳು ನನ್ನನ್ನು ಬಹುವಾಗಿ ಸ್ತುತಿಸಿರುವರು. ಸರ್ವಪಾಪನಿವಾರಕವಾದ ಅವರ ಸ್ತುತಿಕ್ರಮವನ್ನು ಹೇಳುವೆನು. ದೇವಿಯೇ, ಸಾವಧಾನದಿಂದ ಕೇಳು. ॥೨೬-೨೭॥

"ಮಹಾದೇವನೇ, ನೀನು ಕಾಶೀನಗರದಲ್ಲಿ ಆನಂದವೆಂಬ ಒಂದು ವನವನ್ನೇ ನಿರ್ಮಾಣಮಾಡಿರುವೆ. ಅಲ್ಲದೆ ನೀನು ನಿಜವಾಗಿಯೂ ಆನಂದಸ್ವರೂಪನೆನಿಸಿದವನು. ಸಕಲ ದೇವತೆಗಳನ್ನೂ ಇಂದ್ರನನ್ನೂ ಸಂರಕ್ಷಿಸಿದವನು. ಇಂದ್ರನಿಂದ ಹೊಗಳಿಸಿಕೊಂಡಿರುವವನು. ಅತ್ಯಂತ ಪರಿಶುದ್ಧನೆನಿಸಿ ಜ್ಞಾನಿಗಳಿಗೂ ಪೂಜ್ಯನಾಗಿ ಅಗ್ನಿರೂಪಿಯಾಗಿರುವ ಮಹಾದೇವನೇ, ನಮ್ಮನ್ನು ರಕ್ಷಿಸು. ॥೨೮॥

ಅನಾದಿಸಿದ್ಧರಾದ ಮಹರ್ಷಿಗಳಿಂದ ನಮಸ್ಕೃತನಾದವನು ನೀನು. ತ್ರಿಪುರಾಸುರರನ್ನೂ, ದಕ್ಷಬ್ರಹ್ಮನನ್ನೂ ಹೆದರಿಸಿ ಓಡಿಸಿದವನು ನೀನು. ಅಮೃತಪಾನ ಮಾಡಿದಂತಹ ದೇವತೆಗಳನ್ನೆಲ್ಲಾ ರಕ್ಷಿಸಿದ ಮಹಾದೇವನೇ, ನಿನ್ನ ಸದ್ಯೋಜಾತಾದಿ

ನೀಲಲೋಹಿತ ಭವಾಂತಕ ಪುರಾಂತಕ
ಸ್ತ್ರಾತ ಭೂತಜಗತಾಂ ಯಮುನಾತಃ ।
ಪೂಷದಂತಹನನಾದಿ ಕರಾಂತ
ದುಃಖಿತಾನವ ಸದಾ ಭವ ಧೂಕ ॥೩೦॥

ಇತ್ಥಂ ಬ್ರಹ್ಮಾದಯೋ ದೇವಿ ಮಾಂ ಸ್ತುವಂತಿ ಸದಾಂಬಿಕೇ ।
ಕುರುಕ್ಷೇತ್ರೇಶ್ವರಂ ದೃಷ್ಟ್ವಾ ಯಃ ಸ್ನಾತ್ವಾ ತತ್ಸರೋಂಭಸಿ ॥೩೧॥

ಗಂಗಾಯಾಂ ತ್ರಿದಿನಂ ದೇವಿ ಸರ್ವಪಾಪೈಃ ಪ್ರಮುಚ್ಯತೇ ।
ಪುರಾ ದೇವಾಸುರೈಸ್ಸಾಕಂ ಯುಯುಧುಶ್ಶಕ್ರಪೂರ್ವಕಾಃ ॥೩೨॥

ವಾಹನೈಶ್ಚ ಗಜೈರಶ್ವೈರಥಾರ್ಭಟಿಗಣಾರವೈಃ ।
ಮೃದಂಗಶಂಖಜಾರಾವೈರ್ದುಂದುಭೀನಾಂ ಚ ನಿಸ್ವನೈಃ ॥೩೩॥

---

ಪಂಚವದನಗಳೂ ಸಕಲ ದೇವತೆಗಳಿಂದ ಸ್ತುತಿಸಲ್ಪಟ್ಟವೆಯಲ್ಲವೆ? ವಿಷವನ್ನು ಕಂಠದಲ್ಲಿ ಧರಿಸಿ ಅಗ್ನಿಯನ್ನೇ ಹಣೆಯಲ್ಲಿಟ್ಟು ಮನ್ಮಥನೇ ಮೊದಲಾದವರ ಬಾಣಪರಂಪರೆಗಳನ್ನು ನುಂಗಿಹಾಕಿದ ಮಹಾದೇವನೇ, ನಮ್ಮನ್ನು ಸಲಹು. ॥೨೯॥

ವಿಷಕಂಠನೇ, ಸಂಸಾರದುಃಖಗಳಿಗೂ, ತ್ರಿಪುರಗಳಿಗೂ, ಯಮನಂತಿರುವವನೇ, ಸಕಲ ಜಗತ್ತಿಗೆ ತಂದೆಯಂತೆಯೂ, ಯಮನನ್ನು ರಕ್ಷಿಸುವುದರಲ್ಲಿ ತಾಯಿಯಂತೆಯೂ ಇದ್ದು ಪ್ರಪಂಚವನ್ನು ನಡೆಸುವವನೇ, ನೀನು ದಕ್ಷಬ್ರಹ್ಮನ ಯಾಗದಲ್ಲಿ ಪೂಷದೇವತೆಯ ದಂತಭಂಗಮಾಡಿದೆಯಲ್ಲವೆ? ಭವರೋಗವೈದ್ಯನೇ, ಸದಾ ದುಃಖಿತರಾದ ನಮ್ಮನ್ನು ಕರುಣಾಪಾಂಗದಿಂದ ನೋಡಿ ಸಲಹು." ॥೩೦॥

ಎಲೌ ದೇವಿಯೇ, ಈರೀತಿ ಬ್ರಹ್ಮಾದಿದೇವತೆಗಳು ವಿಧವಿಧವಾಗಿ ಸ್ತುತಿಸಿದ ಈ ಕುರುಕ್ಷೇತ್ರೇಶ್ವರಲಿಂಗವನ್ನು ಯಾರು ದರ್ಶನಮಾಡಿ ಅಲ್ಲಿಯೇ ಇರುವ ಗಂಗಾ ಸರೋವರದಲ್ಲಿ ಸ್ನಾನಮಾಡಿ ಮೂರು ದಿವಸ ಕಾಲಕಳೆಯುವರೋ ಅವರ ಸಕಲ ಪಾಪಗಳೂ ನಿವಾರಣೆಯಾಗುವುವು. ಇದಕ್ಕೆ ನಿದರ್ಶನವೊಂದನ್ನು ಹೇಳುವೆನು ಕೇಳು. ಹಿಂದೆ ದೇವರಾಕ್ಷಸರು ಒಂದುಸಾರಿ ಘೋರವಾಗಿ ಯುದ್ಧಮಾಡಿದರು. ॥೩೧-೩೨॥

ಆ ಯುದ್ಧದಲ್ಲಿ ಅನೇಕ ಆನೆಗಳು, ಕುದುರೆಗಳು, ರಥಗಳು, ಸೈನಿಕರು ಕಿಕ್ಕಿರಿದು ನೆರೆದಿದ್ದರು. ಮೃದಂಗ, ಶಂಖ, ದುಂದುಭಿ ಮುಂತಾದುವುಗಳ

ನಮುಚಿಪ್ರಮುಖಾ ದೈತ್ಯಾ ಬಲಾದ್ಯಾಃ ಸುಮಹಾಬಲಾಃ ।
ಭುಸುಂಡೀಶಸ್ತ್ರಧಾರಾಭಿರ್ಮುಸಲೈರ್ಲಗುಡೈಸ್ತಥಾ ॥೩೪॥

ಧನುರ್ಭಿಃ ಶರವರ್ಷಾಭಿಸ್ಸಮವರ್ಷನ್ ಪರಸ್ಪರಂ ।
ಏಕದ್ವಿತ್ರಿಶತೈರ್ಘೋರೈಶ್ಯೈರೈಸ್ತೇ ಚಿಚ್ಛಿದುಸ್ಸದಾ ॥೩೫॥

ಪರಸ್ಪರಂ ದೇವದೈತ್ಯಾಶ್ಚಾನ್ಯೋನ್ಯಸಮುರೋದ್ಧತಾಃ ।
ಪರಾಜಿತಾಸ್ತದಾ ದೈತ್ಯಾ ದೇವೈಸ್ಸಂತಾಡಿತಾ ಭೃಶಂ ॥೩೬॥

ಮಮಂಥುಶ್ಚ ಪುನರ್ದೇವಾನ್ ಸಮಾರಾಧ್ಯ ತದಾ ಶಿವಂ ।
ಏವಂ ಪುನಃಪುನರ್ಯುದ್ಧಂ ಸ್ವರ್ಗಾರ್ಥಮಭವಚ್ಛಿವೇ ॥೩೭॥

ಕುರುಕ್ಷೇತ್ರಗತಾ ಭೂಮಿರ್ಯುದ್ಧಭೂಮಿರ್ಮಹೇಶ್ವರಿ ।
ದ್ವಾಪರಾಂತೇ ಚ ಭವಿತಾ ನೃಪಾಣಾಂ ವಿಗ್ರಹೋ ಮಹಾನ್ ॥೩೮॥

---

ಆರ್ಭಟವು ಮೊರೆಯುತ್ತಿದ್ದಿತು. ನಮುಚಿ, ಬಲಾಸುರ ಮುಂತಾದ ಶೂರ ರಾಕ್ಷಸರು ಭುಸುಂಡಿಯೇ ಮೊದಲಾದ ಶಸ್ತ್ರಗಳಿಂದಲೂ, ಅಸ್ತ್ರಗಳಿಂದಲೂ, ಮುಸಲ, ಲಗುಡ ಮೊದಲಾದ ಗದಾಯುಧವಿಶೇಷಗಳಿಂದಲೂ ಕೂಡಿದವರಾಗಿ ಯುದ್ಧಸಿದ್ಧರಾಗಿದ್ದರು. ॥೩೩-೩೪॥

ಅನಂತರ ದೇವರಾಕ್ಷಸರು ಅನೇಕ ಬಾಣಪರಂಪರೆಗಳಿಂದಲೂ, ಧನುಸ್ಸು ಗಳಿಂದಲೂ ಎದುರಾಳಿಗಳನ್ನು ನೋಯಿಸುತ್ತಾ ಕತ್ತರಿಸುತ್ತಾ ಭಯಂಕರವಾಗಿ ಯುದ್ಧಮಾಡಿದರು. ಕೊನೆಗೆ ಎಲ್ಲಾ ರಾಕ್ಷಸರೂ ದೇವತೆಗಳ ಏಟನ್ನು ತಾಳಲಾರದೆ ಒಡನೆಯೇ ಸೋತು ಓಡಿಹೋದರು. ॥೩೫-೩೬॥

ರಾಕ್ಷಸರು ಅಷ್ಟಕ್ಕೆ ಬಿಡದೆ ಮತ್ತೆ ಈಶ್ವರನನ್ನು (ನನ್ನನ್ನು) ಆರಾಧಿಸಿ ಶಕ್ತಿ ಯನ್ನು ಸಂಪಾದಿಸಿ ಯುದ್ಧಸನ್ನದ್ಧರಾದರು. ಹೀಗೆ ಮತ್ತೆ ಮತ್ತೆ ದೇವರಾಕ್ಷಸರು ಸ್ವರ್ಗಲೋಕಪ್ರಾಪ್ತಿಗಾಗಿ ಅಲ್ಲಿ ಯುದ್ಧಮಾಡಿದರು. ಅಷ್ಟೇ ಅಲ್ಲದೆ ಮುಂದೆ ದ್ವಾಪರಯುಗದಲ್ಲಿ ಪಾಂಡವಕೌರವರಿಗೆ ಭಯಂಕರವಾದ ಯುದ್ಧವು ಕುರುಕ್ಷೇತ್ರ ದಲ್ಲಿಯೇ ನಡೆಯುವುದು. ॥೩೭-೩೮॥

ಕಾನೀನಾಂತಾನ್ ಪುರಸ್ಕೃತ್ಯ ವಿಷ್ಣುರ್ಭಾರಂ ಭುವಶ್ಶಿವೇ ।
ಹರಿಷ್ಯತಿ ಮಯಾಜ್ಞಪ್ತಃ ಕೃಷ್ಣೋ ನಾಮ್ನಾ ಭವಿಷ್ಯತಿ ॥೩೯॥

ಕುರುನಾಮ್ನಾಥ ಸಂಜ್ಞಾ ವೈ ತ್ವಿದಂ ಕ್ಷೇತ್ರವರಂ ಪ್ರಿಯೇ ।
ಮತ್ಪ್ರಸಾದಾತ್ಪುರಾ ಪ್ರಾಪ್ಯ ಕುರುಕ್ಷೇತ್ರೇಶಮರ್ಚಯತ್ ॥೪೦॥

ತತ್ರ ಸಂತಿ ಮಹಾಸಿದ್ಧಾಃ ಗಂಗಾ ಚ ಸರಿದುತ್ತಮಾ ।
ನಿವಸಂತಿ ಕುರುಕ್ಷೇತ್ರೇ ಶಿವತುಷ್ಟಿಪ್ರದೇ ಶುಭೇ ॥೪೧॥

ಸ್ಯಮಂತಪಂಚಕಂ ತೀರ್ಥಂ ಪಿತೃತೃಪ್ತಿಪ್ರದಾಯಕಂ ।
ಪುರಾ ಭಾರ್ಗವರಾಮೇಣ ಕ್ಷತ್ರಮುತ್ಸಾದಿತಂ ಶಿವೇ ॥೪೨॥

ಕ್ಷತ್ರೋತ್ಥರುಧಿರೈಃ ಪೂರ್ಣಾನ್ ಹ್ರದಾನ್ ಪಂಚ ಪ್ರಕಲ್ಪಯತ್ ।
ತತ್ತೀರತೀರ್ಥೇ ಯಃ ಪಿಂಡಂ ಪಿತೃಭ್ಯೋ ದಾಸ್ಯತಿ ಪ್ರಿಯೇ ॥೪೩॥

ತರ್ಪಯೇತ್ ತದ್ಧ್ರದೋತ್ಥಾಭಿರದ್ಭಿಃ ಪ್ರೀಣಾತಿ ವೈ ಪಿತೄನ್ ।
ತಸ್ಯ ಸ್ಯುಃ ಪಿತರಸ್ತೃಪ್ತಾ ಯಾವದಾಭೂತಸಂಪ್ಲವಂ ॥೪೪॥

---

ಆಗ ವಿಷ್ಣುವು ನನ್ನ ಅಪ್ಪಣೆಯಂತೆ ಭೂಭಾರವನ್ನು ಕಮ್ಮಿಮಾಡಲೋಸುಗ ಕರ್ಣಾರಿಯಾದ ಅರ್ಜುನನೇ ಮೊದಲಾದವರೊಡಗೂಡಿ ಕೃಷ್ಣನೆಂಬ ಹೆಸರಿನಿಂದ ದೊಡ್ಡ ಯುದ್ಧಮಾಡಿಸುವನು. ಆ ಕ್ಷೇತ್ರವು ನನ್ನ ಅನುಗ್ರಹ ಬಲದಿಂದ ಕುರುಕ್ಷೇತ್ರವೆಂಬ ಹೆಸರನ್ನು ಪಡೆದು ಪ್ರಸಿದ್ಧಿಗೊಳ್ಳುವುದು. ॥೩೯-೪೦॥

ಶಿವಪ್ರೀತಿಕರವಾದ ಆ ಕುರುಕ್ಷೇತ್ರದಲ್ಲಿ ಅನೇಕ ಸಿದ್ಧಪುರುಷರೂ ಪವಿತ್ರವಾದ ಗಂಗಾನದಿಯೂ ಶೋಭಿಸುತ್ತಿರುವುದು. ಮತ್ತು ಪರಶುರಾಮನು ಕ್ಷತ್ರಿಯರನ್ನೆಲ್ಲಾ ನಾಶಮಾಡಿ ಅವರ ರಕ್ತದಿಂದಲೇ ಪಿತೃತೃಪ್ತಿಯನ್ನುಂಟುಮಾಡುವನು. ಹಾಗೆಯೇ ನಿರ್ಮಾಣಮಾಡಿದ ಸ್ಯಮಂತಪಂಚಕವೆಂಬ ಐದು ಕೊಳಗಳು ಸದಾ ವಿರಾಜಿಸುತ್ತಿವೆ. ॥೪೧-೪೨॥

ಅಂತಹ ಪವಿತ್ರವಾದ ಸ್ಯಮಂತಪಂಚಕದ ತೀರ್ಥದಲ್ಲಿ ಯಾರು ತಮ್ಮ ಪಿತೃತೃಪ್ತ್ಯರ್ಥವಾಗಿ ಪಿಂಡಪ್ರದಾನಮಾಡುವರೋ, ಅವರ ಪಿತೃಗಳು ತೃಪ್ತರಾಗುವರಲ್ಲದೆ, ಅವರಿಗೆ ಪ್ರಳಯ ಪರ್ಯಂತವಾಗಿ ಸ್ವರ್ಗಲೋಕವಾಸವು ಲಭಿಸಿ ಅವರು ನಿತ್ಯತೃಪ್ತರೆನಿಸುವರು. ॥೪೩-೪೪॥

ತತ್ರೈಕಾಂ ಗಾಂ ದರಿದ್ರಾಯ ದತ್ವಾ ಗೋಶತಪುಣ್ಯಭಾಕ್ ।
ಅಲ್ಪಂ ತತ್ರೈವ ಯದ್ದತ್ತಂ ತನ್ಮಹಜ್ಜಾಯತೇ ಪ್ರಿಯೇ ॥೫೫॥

ಪಿತೃತೃಪ್ತಿಪ್ರದಂ ತೀರ್ಥಂ ಪುರಾ ರಾಮೇಣ ವೈ ಕೃತಂ ।
ತತ್ರೈವ ತದ್ಧ್ರದಾಃ ಪಂಚ ಸ್ನಾತ್ವಾ ಪಿತೃಗಣಾಂಸ್ತಥಾ ॥೫೬॥

ಶ್ರಾದ್ಧೈಃ ಸಂಪ್ರೀಣಯನ್ ಪುತ್ರಃ ಪುತ್ರತ್ವಂ ತಸ್ಯ ಸಿದ್ಧ್ಯತಿ ।
ಅತ್ರೈವ ಗಾಥಾಂ ಗಾಯಂತಿ ಪಿತರಃ ಪುತ್ರಿಣಸ್ತಥಾ ॥೫೭॥

ಅಪಿ ನಃ ಸ್ವಕುಲೇ ಭೂಯಾದ್ಯೋ ಗಯಾಯಾಂ ಚ ಪಿಂಡದಃ ।
ಕುರುಕ್ಷೇತ್ರೇ ಸ ವೈ ಪುತ್ರಃ ಹ್ರದೇ ರಾಮಕೃತೇ ಹಿ ಸಃ ॥೫೮॥

॥ ಈಶ್ವರ ಉವಾಚ ॥

ದೃಷ್ಟ್ವಾ ಮಾಂ ಚೈವ ಪುಣ್ಯಾತ್ಮಾ ಕುರುಕ್ಷೇತ್ರೇಶ್ವರಂ ಶಿವೇ ।
ಧನ್ಯೋ ಭವತಿ ಪೂತಾತ್ಮಾ ಸತ್ಯಂ ಸತ್ಯಂ ನ ಸಂಶಯಃ ॥೫೯॥

---

ಆ ಕ್ಷೇತ್ರದಲ್ಲಿ ಒಂದು ಗೋದಾನವನ್ನು ದರಿದ್ರರಿಗೆ ದಾನಮಾಡಿದರೂ ನೂರು ಗೋದಾನ ಮಾಡಿದಷ್ಟು ಫಲವು ಲಭಿಸುವುದು. ಹೆಚ್ಚೇನು ? ಆ ಕ್ಷೇತ್ರದಲ್ಲಿ ಯಾವ ವಸ್ತುವನ್ನು ದಾನಮಾಡಿದರೂ ಅದು ವಿಶೇಷ ಪುಣ್ಯಪ್ರದವಾಗುವುದು. ಇದರಲ್ಲಿ ಸಂಶಯವಿಲ್ಲ. ಭೂಲೋಕದಲ್ಲಿ ಪುತ್ರನಾಗಿ ಜನಿಸಿದವನು ತನ್ನ ಪಿತೃ ಋಣವನ್ನು ಕಳೆದುಕೊಳ್ಳಬೇಕಾದರೆ ಸ್ಯಮಂತಪಂಚಕದಲ್ಲಿ ಪಿತೃಪ್ರೀತ್ಯರ್ಥವಾಗಿ ಸ್ನಾನತರ್ಪಣಾದಿಗಳನ್ನು ನಡೆಸಲೇಬೇಕು. ॥೫೫-೫೬॥

ಆಗಲೇ ಅವನಿಗೆ ನಿಜವಾಗಿ ಪುತ್ರತ್ವವು ಸಿದ್ಧಿಸುವುದು. ಪಿತೃದೇವತೆಗಳು ತಮ್ಮ ಮಕ್ಕಳಿಂದ ಈ ಕ್ರಿಯೆಯನ್ನೇ ಸರ್ವದಾ ಅಪೇಕ್ಷಿಸುವರು. ಅಲ್ಲದೆ ನಮ್ಮ ವಂಶದಲ್ಲಿ ಯಾರಾದರೂ ಗಯಾಶ್ರಾದ್ಧಮಾಡುವ ಮಗನೂ, ಪರಶುರಾಮಕೃತವಾದ ಸ್ಯಮಂತಪಂಚಕದಲ್ಲಿ ಪಿಂಡಪ್ರದಾನಮಾಡುವ ಪುತ್ರನೂ ಜನಿಸುವನೇ ಎಂದು ಸರ್ವದಾ ಅವರು ಹಾರೈಸುವರು. ॥೫೭-೫೮॥

ಆದ್ದರಿಂದ ಮನುಷ್ಯರು ಆ ಕುರುಕ್ಷೇತ್ರಕ್ಕೆ ಹೋಗಿ ಅಲ್ಲಿ ಪಿತೃಕಾರ್ಯವನ್ನು ನೆರವೇರಿಸಿ, ಅಲ್ಲಿರುವ ಶಿವಲಿಂಗವನ್ನು ದರ್ಶನಮಾಡಿದರೆ ನಿಜವಾಗಿಯೂ ಅವರು ಸುಕೃತಿಗಳೆನಿಸುವರು. ದೇವಿಯೇ, ಇದೇ ಕುರುಕ್ಷೇತ್ರದ ಮಹಿಮೆ. ಇದನ್ನು

ಇತ್ಥಂ ಕುರುಕ್ಷೇತ್ರಗತಂ ಮಹಿಮಾನಂ ತವೋದಿತಂ ।
ಶ್ರುತ್ವೈವ ಸರ್ವಪಾಪೇಭ್ಯೋ ಮುಕ್ತೋ ಭವತಿ ನಾನ್ಯಥಾ ॥೫೦॥

ತಸ್ಮಾತ್ಕುರುಕ್ಷೇತ್ರಪರಾಯಣಾನಾಂ
ತತ್ರೈವ ವಾಸೋ ಮಮ ಭಕ್ತಿದಾಯಕಃ ।
ಲಭೇತ ವೈ ಪುಣ್ಯಯುತೋ ಮಹೇಶ್ವರಿ
ತಪಸ್ಸ್ಥಲಂ ತಂ ಮುನಿಭಿಃ ಪ್ರಶಸ್ಯಂ ॥೫೧॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಕುರುಕ್ಷೇತ್ರ ನಿರ್ಮಾಣ
ಕಥಾವೈಭವವರ್ಣನಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ಕೇಳಿದವರಿಗೂ ಸಹ ವಿಶೇಷ ಪುಣ್ಯವುಂಟು. ಆ ಕುರುಕ್ಷೇತ್ರದ ವಾಸವು ಶಿವಭಕ್ತಿಯನ್ನು ಹೆಚ್ಚಿಸತಕ್ಕದ್ದಾಗುವುದು. ಒಟ್ಟಿನಲ್ಲಿ ಮಹೇಶ್ವರಿಯೇ, ಆ ಕ್ಷೇತ್ರವನ್ನು ಪುಣ್ಯಸ್ಥಲವೆಂದೂ, ತಪಸ್ಸಿಗೆ ಯೋಗ್ಯವಾದ ಪ್ರದೇಶವೆಂದೂ ಮುನಿಜನಗಳು ಸದಾ ಹೊಗಳುತ್ತಿರುವರು ಎಂದು ಪರಶಿವನು ಪಾರ್ವತಿಗೆ ಕುರುಕ್ಷೇತ್ರ ಮಹಿಮೆಯನ್ನು ವಿವರಿಸಿದನು. ॥೪೯-೫೦-೫೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಐದನೆಯ ಅಂಶದಲ್ಲಿ ಕುರುಕ್ಷೇತ್ರ ನಿರ್ಮಾಣಕಥನವೆಂಬ
ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

ಭರ್ಗಾಖ್ಯೇ

ಪಂಚಮಾಂಶೇ

## ಚತುಸ್ತ್ರಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ತತ್ಪ್ರತೀಚ್ಯಾಂ ಮಹಾದೇವಿ ಪ್ರಭಾಸಂ ನಾಮ ವಿಶ್ರುತಂ ।
ಪ್ರಭಾಸೇ ವೇಣಿಕಾ ನಾಮ ನದೀ ಪುಣ್ಯಪ್ರದಾ ಶುಭಾ ॥೧॥

ತತ್ರ ಶೈವವರಾ ನಿತ್ಯಂ ಭಸ್ಮನೋದ್ಧೂಲನೇ ರತಾಃ ।
ತ್ರಿಪುಂಡ್ರಫಾಲಾಸ್ಸತತಂ ಅನ್ಯಪುಂಡ್ರವಿವರ್ಜಿತಾಃ ॥೨॥

ರುದ್ರಾಕ್ಷಕವಚಾಸ್ಸರ್ವೇ ಪಂಚಾಕ್ಷರಪರಾಯಣಾಃ ।
ರುದ್ರಾಧ್ಯಾಯಾರ್ಥಕಥನಪ್ರವಣಾಃ ಶರಣಾ ಮಯಿ ॥೩॥

---

## ಮೂವತ್ತನಾಲ್ಕನೆಯ ಅಧ್ಯಾಯ

ಮಹೇಶ್ವರನು ಗಿರಿಜೆಗೆ ಪ್ರಭಾಸಕ್ಷೇತ್ರದ ಮಹಿಮೆಯನ್ನು ವಿವರಿಸಲು ಆರಂಭಿಸಿ ದೇವಿಯನ್ನು ಕುರಿತು ಹೀಗೆಂದನು. "ಮಹಾದೇವಿಯೇ, ಕುರುಕ್ಷೇತ್ರದ ಪಶ್ಚಿಮಭಾಗದಲ್ಲಿ ಪ್ರಭಾಸವೆಂಬ ಹೆಸರಿನ ಕ್ಷೇತ್ರವೊಂದಿರುವುದು. ಅಲ್ಲಿ ಅತಿ ಪವಿತ್ರವಾದ ವೇಣಿಕೆಯೆಂಬ ನದಿಯು ಪ್ರವಹಿಸುವುದು. ಅಲ್ಲಿ ಅನೇಕ ನನ್ನ ಭಕ್ತರು ಭಸ್ಮೋದ್ಧೂಲಿತಗಾತ್ರರಾಗಿ, ಭಸ್ಮ ತ್ರಿಪುಂಡ್ರಗಳನ್ನೇ ಧರಿಸುತ್ತಾ, ಮತ್ತಾವ ಚಿಹ್ನೆಯನ್ನೂ ಅಂಗೀಕರಿಸದೆ ವಾಸಿಸುತ್ತಿರುವರು. ॥೧-೨॥

ಸರ್ವದಾ ರುದ್ರಾಕ್ಷಿಯ ಕವಚವನ್ನೇ ಧರಿಸಿ, ಶಿವಪಂಚಾಕ್ಷರೀ, ರುದ್ರಾಧ್ಯಾಯ ಇವುಗಳನ್ನೇ ಪಠಿಸುತ್ತಾ ಸರ್ವದಾ ಶಿವಧ್ಯಾನಪರಾಯಣರಾಗಿ, ಬಿಲ್ವ

ಮಮ ಲಿಂಗಾರ್ಚಕಾಸ್ಸರ್ವೇ ಬಿಲ್ವಪತ್ರಾದಿಸಾಧನೈಃ ।
ಶೈಶ್ಶಿವಾನರ್ಪಿತಂ ವಾರಿ ಫಲಂ ಚ ನೋಪಭುಜ್ಯತೇ ॥೪॥

ಷಟ್ ಸಹಸ್ರಂ ಮುನೀಂದ್ರಾಣಾಂ ಪ್ರಭಾಸೇ ಸಮವಸ್ಥಿತಂ ।
ತತ್ರ ಮಂಕಣಕೋ ನಾಮ ಪುರಾ ಸಿದ್ಧೋಽಭವನ್ಮುನಿಃ ॥೫॥

ತೇನ ಸಿದ್ಧೇಶ್ವರಂ ಲಿಂಗಂ ತ್ರಿಕಾಲೇಷು ಸಮರ್ಚಿತಂ ।
ಬಿಲ್ವಪತ್ರೈಶ್ಚ ಕಲ್ಹಾರೈರ್ನೀಲನೀಲೋತ್ಪಲೈರಪಿ ॥೬॥

ನೈವೇದ್ಯೈಃ ಫಲಮೂಲಾದಿಕಲ್ಪಿತೈಃ ಪರಮೇಶ್ವರಿ ।
ಸದಾ ಮಮಾರಾಧನಕೃತ್ ಸ ಮಾಂ ತುಷ್ಟಾವ ಶಂಕರಿ ॥೭॥

ಸಿದ್ಧೇಶಂ ಸರ್ವಸಿದ್ಧೀನಾಮಾಕರಂ ಭುವನೇಶ್ವರಿ ॥೮॥

॥ ಮಂಕಣ ಉವಾಚ ॥

ಸಿದ್ಧೇಶ ಸಿದ್ಧಗಣಪೂಜ್ಯಪದಾಬ್ಜಯುಗ್ಮ
ಮಧ್ಯೇ ತಮೋಕಮನಿಶಂ ದಯಯಾ ದದಸ್ವ ।
ಮುಗ್ಧೇಂದುಚೂಡ ಮಯಿ ಸಿದ್ಧಗಣಂ ತ್ವದೀಯೈಃ
ಸಿದ್ಧೋಽಸ್ಮಿ ಮೋಚಯ ಮಹಾಘಪಾಶಬದ್ಧಂ ॥೯॥

---

ಪತ್ರಾದಿ ಸಾಧನಗಳಿಂದ ಲಿಂಗಪೂಜೆ ಮಾಡುತ್ತಾ ಕಾಲಕಳೆಯುವರು. ಅವರು ಶಿವಾರ್ಪಣೆಮಾಡದ ಹಣ್ಣನ್ನಾಗಲಿ, ನೀರನ್ನಾಗಲಿ ಸೇವಿಸುತ್ತಿರಲಿಲ್ಲ. ॥೩-೪॥

ಅಂತಹ ಋಷಿಗಳು ಪ್ರಭಾಸಕ್ಷೇತ್ರದಲ್ಲಿ ಆರುಸಾವಿರಮಂದಿಯಿರುವರು. ಅವರಲ್ಲಿ ಮಂಕಣಕನೆಂಬ ಸಿದ್ಧಮುನಿಯೊಬ್ಬನು ಸಿದ್ಧೇಶ್ವರನೆಂಬ ಹೆಸರಿನ ಶಿವಲಿಂಗವನ್ನು ನಿತ್ಯವೂ, ಬಿಲ್ವ, ಕಲ್ಹಾರ, ಕಮಲ ಮುಂತಾದ ವಸ್ತುಗಳಿಂದ ಪೂಜಿಸುತ್ತಿದ್ದನು. ॥೫-೬॥

ಫಲಮೂಲಾದಿಗಳನ್ನು ತಂದು ನಿವೇದನವನ್ನಾಗಿ ಸಮರ್ಪಿಸುವನು. ಅದೇ ರೀತಿ ಸರ್ವಸಿದ್ಧಿಪ್ರದವಾದ ಸಿದ್ಧೇಶ್ವರನನ್ನು ಭಯಭಕ್ತಿಯಿಂದ ಪೂಜಿಸಿ ಹೀಗೆ ಧ್ಯಾನಿಸುವನು. ॥೭-೮॥

"ಸಿದ್ಧಪುರುಷರಿಂದ ಪೂಜಿತವಾದ ಪಾದಕಮಲವುಳ್ಳ ಸಿದ್ಧೇಶ್ವರನೇ, ಚಂದ್ರಚೂಡನೇ; ನಿನ್ನ ಸಹಸ್ರಾರುಸಂಖ್ಯೆಯ ಸಿದ್ಧಗಣಗಳಲ್ಲಿ ನನ್ನನ್ನೂ ಒಬ್ಬನನ್ನಾಗಿ

ಬುದ್ಧಿಂ ಪ್ರಸಾರಯ ಮಹೇಶ ಸುಖಾಯ ಶಂಭೋ
ತ್ವತ್ಪಾದಪೂಜನವಿಧೌ ದೃಢಭಕ್ತಿಯುಕ್ತಾಂ।
ಸಕ್ತಾಂ ಸುದಾರತನಯಾದಿಧನಾದಿಕೇಷು
ಧಾನ್ಯೇಷು ಗೋಷು ಗೃಹವರ್ಗಗಣೇಷು ಮುಕ್ತಿಂ ॥೧೦॥

ದೇಹಿ ಪ್ರಸೀದ ಪರಮೇಶ್ವರ ಪಂಚವಕ್ತ್ರ
ಲೋಕೇಶಮೇತಿ ನಿಖಿಲಂ ಸಹ ಭೂತವರ್ಗೈಃ।
ವೈಮಾನಿಕಾಶ್ಚ ಸಕಲಾಃ ಸಸುರಾಶ್ಚ ಲೋಕಾಃ
ಕಾಲಂ ತ್ವಯೀಶ ಬಡವಾಮುಖಸಂನಿಭೇಬ್ಧಿಃ ॥೧೧॥

ಹರಿಬ್ರಹ್ಮರುದ್ರೇಂದ್ರಸಾಮ್ರಾಜ್ಯಜಾಲಂ
ನಿಕೃಷ್ಟಂ ತದುತ್ಕೃಷ್ಟಕೃಷ್ಟೈಕನಿಷ್ಠಂ।
ಮಮೇಶಾನಲಿಂಗಾರ್ಚನಧ್ಯಾನತುಷ್ಟ
ಸ್ಯ ಲಕ್ಷ್ಮಸ್ಥಲೀಕ್ಷ್ಮಾಯಿತಾ ದೇವವರ್ಗಾಃ ॥೧೨॥

---

ಸ್ವೀಕರಿಸು. ನನ್ನ ಪಾಪರಾಶಿಯಿಂದ ಒದಗುವ ಬಂಧನಗಳನ್ನೆಲ್ಲಾ ತಪ್ಪಿಸಿ ಕಾಪಾಡು. ಇಗೋ ನಿನಗೆ ವಂದಿಸುವೆನು. ॥೯॥

ಮಹಾದೇವನೇ, ನಮ್ಮ ಮನಸ್ಸು ಸದಾ ಮಕ್ಕಳು, ಧನ, ಧಾನ್ಯ, ಗೋವು, ಮನೆಮುಂತಾದ ಕ್ಷಣಿಕವಸ್ತುಗಳನ್ನೇ ಚಿಂತಿಸುತ್ತಾ ಮೋಹಗೊಂಡಿರುವುದು. ಅಂತಹ ಚಿತ್ತವು ಸರ್ವದಾ ನಿನ್ನ ಪಾದಪೂಜೆಯಲ್ಲಿ ತೊಡಗುವಂತೆ ವರವನ್ನು ಕೊಡು. ನಿನ್ನಲ್ಲಿ ಅನನ್ಯಸಾಧಾರಣವಾದ ಭಕ್ತಿಯನ್ನು ನನಗೆ ದಯಪಾಲಿಸು. ॥೧೦॥

ಪರಮೇಶ್ವರನೇ, ಐದು ಮುಖಗಳಿಂದ ರಂಜಿತನಾದವನೇ, ಲೋಕದಲ್ಲಿ ಸಮಸ್ತ ಪ್ರಾಣಿವರ್ಗವೂ ನಿನ್ನ ಆರಾಧನೆಯಿಂದಲೇ ಶಾಂತಿಯನ್ನು ಪಡೆಯಬೇಕಲ್ಲವೇ ? ಸಮಸ್ತ ಸುರರೂ, ನರರೂ, ರಾಕ್ಷಸರೂ ತಮ್ಮ ಆಯುಸ್ಸು ಕಳೆದ ನಂತರ ಸಮುದ್ರದ ನೀರು ಬಡಬಾಗ್ನಿಯಲ್ಲಿ ಅಡಗಿಹೋಗುವಂತೆ ನಿನ್ನಲ್ಲಿಯೇ ಐಕ್ಯಹೊಂದುವರು. ಅಂತಹ ವಿಶ್ವವ್ಯಾಪಿಯಾದವನು ನೀನಲ್ಲವೇ ? ॥೧೧॥

ಪರಶಿವನೇ, ಪ್ರಪಂಚದಲ್ಲಿ ವಿಷ್ಣು, ಬ್ರಹ್ಮ, ರುದ್ರ, ಇಂದ್ರ ಇವರ ಐಶ್ವರ್ಯವು ನಿನ್ನ ಅಷ್ಟೈಶ್ವರ್ಯಗಳ ಮುಂದೆ ಕ್ಷಣಿಕವೆನಿಸುವುದಲ್ಲವೆ! ಐಶ್ವರ್ಯಗಳಿಗೆಲ್ಲಾ ಐಶ್ವರ್ಯವನ್ನು ಕಲ್ಪಿಸಿಕೊಡುವವನು ನೀನೇ ಆಗಿರುವೆ. ಅಷ್ಟೇಕೆ! ನಿನ್ನ ಶಿವಲಿಂಗಾರ್ಚನೆ

ಇತಿ ಮಂಕಣಕೇನೇಶಿ ಸಂಸ್ತುತೋಽಹಂ ಮುದಾ ತದಾ ।
ತಮಾಹೂಯ ಮುನಿಸ್ಸಿದ್ಧಂ ಸಿದ್ಧಯಸ್ತೇ ಭ(?)ವಂಸ್ತ್ವಮೂಃ ॥೧೩॥

ಇತಿ ಮತ್ತೋ ವರಂ ಲಬ್ಧ್ವಾ ಸ ತು ಮಂಕಣಕೋ ದ್ವಿಜಃ ।
ಸ್ವಕರಾತ್ಪಯಸೋ ಧಾರಾ ನಿಸ್ಸೃತಾ ದದೃಶೇಂಬಿಕೇ ॥೧೪॥

ಸಿದ್ಧಿಃ ಪ್ರಾಪ್ತೇತಿ ಚ ಮಯಾ ತಸ್ಯ ಹರ್ಷೋ ಜನಿದ್ರುತಂ ।
ನನರ್ತ ಸಿದ್ಧಲಿಂಗಾಗ್ರೇ ಕರತಾಲೈಸ್ಸಶಾಂಭವಃ ॥೧೫॥

॥ ಮಂಕಣ ಉವಾಚ ॥

ಸ್ವಾಮಿನ್ನನ್ನಪತೇ ಧನಾಧಿಪಪತೇ ಹೇ ಶೈಲಕನ್ಯಾಪತೇ
ಹೇ ಕಾಮಾಂತಕ ಹೇ ಪುರಾಂತಕ ಮಹಾದೇವೇಶ ಮಾಂ ಪಾಲಯ ।
ಹೇ ವಿಶ್ವೇಶ್ವರ ಭರ್ಗದೇವ ಭಗವನ್ ಹೇ ಚಾರುಚಾಮೀಕರ
ಸ್ಫಾರಾಕಾರಶರೀರಶೋಭಿತ ಮಹಾಸಿದ್ಧೇಶ ಸಿದ್ಧಿಪ್ರದ ॥೧೬॥

---

ಯಲ್ಲಿ ಮನಸ್ಸಿಟ್ಟ ಭಕ್ತನಿಗೆ ಇತರ ಸಕಲ ದೇವತೆಗಳೂ ಒಂದೊಂದು ಸೊಳ್ಳೆಯಂತೆ ಕಂಡುಬರುತ್ತಾರೆ. ಅಂತಹ ಮಹಾಮಹಿಮನು ನೀನಾಗಿರುವೆ.'' ॥೧೨॥

ಹಾಗೆ ಪ್ರಾರ್ಥಿಸಿದ ಮಂಕಣಕನನ್ನು ಕರೆದು "ಎಲೌ ದೇವಿಯೇ, ನಾನು ಆಗ ಅವನಿಗೆ ಸಕಲ ಸಿದ್ಧಿಗಳೆಲ್ಲಾ ಸಿದ್ಧಿಸಲಿ ಎಂದು ವರವಿತ್ತೆನು. ಹಾಗೆ ನನ್ನಿಂದ ವರವನ್ನು ಪಡೆದ ಮಂಕಣಕನು ನೋಡುತ್ತಿರುವಾಗಲೇ ಅವನ ಕೈಯ್ಯಿಂದ ಕ್ಷೀರಧಾರೆಯು ಆವಿರ್ಭವಿಸಿತು. ॥೧೩-೧೪॥

ಒಡನೆಯೇ ನಾನು ಸಕಲ ಸಿದ್ಧಿಗಳನ್ನೂ ಪಡೆದೆನೆಂದು ಆ ಮಂಕಣಕನು ಹರ್ಷನಿರ್ಭರನಾಗಿ, ಆ ಸಿದ್ಧಲಿಂಗದ ಮುಂಭಾಗದಲ್ಲಿ ಚಪ್ಪಾಳೆ ತಟ್ಟುತ್ತಾ ಕುಣಿದಾಡಲಾರಂಭಿಸಿದನು. ॥೧೫॥

ಅನ್ನ, ಧನ ಮುಂತಾದ ಸಕಲ ವಸ್ತುಗಳಿಗೂ ಪತಿಯೆನಿಸಿ ಮನ್ಮಥನನ್ನೂ, ತ್ರಿಪುರಗಳನ್ನೂ ನಾಶಮಾಡಿದ ಉಮಾಪತಿಯೇ, ನನ್ನನ್ನು ಇದೇರೀತಿ ರಕ್ಷಿಸುತ್ತಿರು. ವಿಶ್ವೇಶ್ವರನೇ, ಲೋಕರಕ್ಷಕನೇ, ಸುವರ್ಣದಂತೆ ಹೊಳೆಯುವ ಶರೀರವುಳ್ಳ ಸಿದ್ಧೇಶನೇ, ನನಗೆ ಇದೇರೀತಿ ಸಕಲ ಸಿದ್ಧಿಗಳನ್ನೂ ಒದಗಿಸುತ್ತಿರು. ॥೧೬॥

ಹೇ ಭೀಮಾಮರನಾಥಕಾಖಿಲಮಹಾಪಾಪೋರುತಾಪಂ ಹರ
ಹೇ ರುದ್ರೋಗ್ರಾಮಿತಶಂಕರ ತ್ರಿಪುರಜಾಪಾರವ್ಯಥಾಂ ಸಂಹರ ।
ಹೇ ಕಾಲಾಂತಕ ಕಾಲಕಾಲ ಭವಹನ್ ಕಾಲಾದ್ಭಯಂ ಸಂಹರ
ಹೇ ಗಂಗೋತ್ತಮಸಂಗರಂಗಿತಜಟಾ ಭಾರಾರ್ಧಚಂದ್ರಸ್ಫುರ ॥೧೭॥

ಕರ್ಪೂರಗೋಜ್ಜ್ವಲ ಭೂತಿಭೂಷ ಭಗವನ್ ಮಾಂ ಸರ್ವದಾ ಪಾಲಯ
ಹೇ ಭೋಗೀಶ್ವರ ಕಂಕಣಪ್ರಮಥಸಾನಾಥ ಪ್ರಸೀದಾಧುನಾ ।
ಹೇ ವಿಶ್ವಾಂತಕ ವಿಶ್ವಮೇತದಧುನಾ ತ್ವತ್ತೋ ವಿಭೋ ನಿಸ್ಸೃತಂ
ಪಾಹಿ ತ್ವಂ ಪರಮೇಶ್ವರೇಶ ಕೃಪಯಾ ತ್ವನ್ಮಾಯಯಾ ಕಲ್ಪಿತಂ ॥೧೮॥

ಹೇ ಲಿಂಗಾರ್ಚನಜಾತನಂದಿತನಿಜಾನಂದೈಕಮೋದಪ್ರದ ।
ಹೇ ಬಿಲ್ವಾದಿದಳೋತ್ತಮಾಂಗ ಭಗವನ್ ಮತ್ಸಿದ್ಧಿದಾತಾರ್ಚನೇ ॥೧೯॥

---

ಭಯಂಕರಸ್ವರೂಪಿಯಾದ ಶಂಕರನೇ, ದೇವೇಂದ್ರನೇ ಮೊದಲಾದ ಸಕಲ ದೇವತೆಗಳ ಪಾಪವನ್ನೆಲ್ಲಾ ನಾಶಮಾಡಿದ ಮಹಾದೇವನೇ, ನನ್ನ ದುರಿತವನ್ನು ಹೋಗಲಾಡಿಸು. ತ್ರಿಪುರಾಸುರರಿಂದ ಒದಗಿಡ ಹಿಂಸೆಗಳನ್ನೆಲ್ಲಾ ದೂರಮಾಡಿದ ಮಹೇಶ್ವರನೇ, ನಮ್ಮ ತೊಂದರೆಗಳನ್ನೆಲ್ಲಾ ಜಾಗ್ರತೆ ಪರಿಹರಿಸು. ಕಾಲಾಂತರನೆನಿಸಿದ ನೀನು ನಮಗೆ ಒದಗುವ ಯಮನ ಬಾಧೆಯನ್ನು ಪರಿಹರಿಸುವವನಾಗು. ಪವಿತ್ರವಾದ ಗಂಗೆಯನ್ನೂ ಚಂದ್ರನನ್ನೂ ಶಿರದಲ್ಲಿ ಧರಿಸಿರುವ ಮಹಾದೇವನೇ, ನನಗೆ ಸುಜ್ಞಾನವನ್ನು ದಯಪಾಲಿಸಿ ಅನುಗ್ರಹಿಸು. ॥೧೭॥

ಮಹಾದೇವನೇ, ನೀನು ಕರ್ಪೂರದಂತೆ ಶುಭ್ರವಾಗಿ ಹೊಳೆಯುವ ವಿಭೂತಿಯಿಂದ ಭೂಷಿತನಾಗಿರುವೆ. ಸರ್ಪಾಭರಣನಾಗಿ ಪ್ರಮಥಗಣಗಳಿಗೆಲ್ಲಾ ಒಡೆಯನೆನಿಸಿರುವೆ. ಲೋಕನಾಶಕನೂ, ಲೋಕಪಾಲಕನೂ ನೀನೇ ಅಲ್ಲವೇ. ಪರಶಿವನೇ, ನಿನ್ನ ಮಾಯೆಯಿಂದಲೇ ಅಲ್ಲವೆ ಈ ಜಗತ್ತು ಹೀಗೆ ಪ್ರತಿಬಿಂಬಿಸುತ್ತಿರುವುದು. ಅಂತಹ ಮಾಯಾಪ್ರಪಂಚಕ್ಕೆ ಸೇರಿದ ನನ್ನನ್ನು ದಯೆಯಿಂದ ಕಾಪಾಡು. ॥೧೮॥

ಪರಮೇಶ್ವರನೇ, ನಿನ್ನನ್ನು ಅರ್ಚಿಸಿದ ಮಾತ್ರದಿಂದಲೇ ನಿನ್ನ ಭಕ್ತರಿಗೆ ಅತಿಶಯವಾದ ಮತ್ತು ಶಾಶ್ವತವಾದ ಆನಂದವನ್ನು ದಯಪಾಲಿಸುವೆ. ಬಿಲ್ವದಳ

ಇತ್ಥಂ ನನರ್ತ ಸ ಮುನಿಃ ಸಿದ್ಧಿವಿಸ್ಮಾಯಿತಸ್ಸದಾ ।
ತೇನ ನೃತ್ತೇನ ಸಕಲಂ ಜಗನ್ನೃತ್ಯಪರಂ ಭವೇತ್ ॥೨೦॥

ಸೋದ್ವಿಗ್ನಾಸ್ತ್ರಿದಶಾಸ್ಸರ್ವೇ ಮುನಿಂ ತೇ ದದೃಶುಸ್ತದಾ ।
ನಿಮೀಲಿತಾಕ್ಷಂ ಧ್ಯಾಯಂತಂ ಸಾನಂದಜನಲೋಚನಂ ॥೨೧॥

ಬ್ರಹ್ಮೋಪೇಂದ್ರಾದಿವಿಬುಧಾನ್ನೈವ ಪಶ್ಯತ್ತದಾಂಬಿಕೇ ।
ಸಿದ್ಧೇಶ್ವರಾಗ್ರತಸ್ಸರ್ವೇ ಸ್ತುವಂತಂ ಮಾಂ ಸುರಾಸ್ತದಾ ॥೨೨॥

ಸದಾ ಸಬ್ರಹ್ಮಕಾಸ್ಸರ್ವೇ ಸಿದ್ಧೇಶಂ ಮಾಂ ಪ್ರಣಮ್ಯ ಚ ।
ಬಿಲ್ವೈಸ್ಸಂಪೂಜ್ಯ ಮಾಂ ಸರ್ವೇ ಪ್ರಾರ್ಥಯಂತಿ ತದಾ ಸುರಾಃ ॥೨೩॥

ಭೋ ಶಂಭೋ ತ್ರಿಪುರಾಂತಕಾಂಧಕಮಹಾದೇವೇಶ ವಿಶ್ವಾಧಿಕ
ವಿಶ್ವಾಶಾಸ್ಯ ದಯಾನಿಧೇ ತ್ರಿಜಗತಾಂ ನಾಥ ಪ್ರಸೀದಾವ ನಃ ।
ಭೋ ಭರ್ಗಾಮರಧೀರವೀರಭಗವನ್ ಪಾಹೀಂದುಮೌಳೇ ಸುರಾನ್
ನೃತ್ಯೇ ತೇನ ಮುನೀಶ್ವರೇಣ ಭುವನಂ ನೃತ್ಯನ್ನಿನಶ್ಯೇದ್ಧ್ರುವಂ ॥೨೪॥

---

ದಿಂದ ಶೋಭಿತವಾದ ಮೌಳಿಭಾಗವುಳ್ಳವನೇ, ನನಗೆ ಸಕಲ ಸಿದ್ಧಿಯನ್ನೂ ಅನುಗ್ರಹಿಸಿದ ಮಹಾದೇವನೇ, ನಿನಗೆ ನಮಸ್ಕಾರ. ॥೧೯॥

ಹಾಗೆ ನರ್ತನಮಾಡುತ್ತಾ ಆ ಮುನಿಯು ತನಗೆ ದೊರೆತ ಸಿದ್ಧಿಗೆ ಆಶ್ಚರ್ಯ ಪಡುತ್ತಾ, ಪರಶಿವನ ಧ್ಯಾನದಲ್ಲಿಯೇ ಲೀನನಾಗಿ ಕುಳಿತನು. ಆಗ ದೇವತೆಗಳೆಲ್ಲರೂ ಆಶ್ಚರ್ಯದಿಂದ ಅಲ್ಲಿಗೆ ಬಂದು, ಕಣ್ಣುಮುಚ್ಚಿ ಆನಂದಬಾಷ್ಪಾವಳಿಯಿಂದ ಕೂಡಿ ಕುಳಿತಿರುವ ಆ ಮುನಿಯನ್ನು ನೋಡಿ ಸಂತೋಷಪಟ್ಟರು. ॥೨೦-೨೧॥

ಆಗಲೂ ಆ ಮುನಿಯು ಎದುರಿಗೆ ಬಂದು ನಿಂತಿರುವ ಬ್ರಹ್ಮೋಪೇಂದ್ರಾದಿಗಳನ್ನು ಲಕ್ಷಿಸಲಿಲ್ಲ. ಆಗ ಬ್ರಹ್ಮಾದಿದೇವತೆಗಳೆಲ್ಲಾ ಸಿದ್ಧೇಶ್ವರನ ಎದುರಿಗೆ ನಿಂತು, ಶಿವಲಿಂಗಕ್ಕೆ ವಂದಿಸಿ, ಬಿಲ್ವದಳಗಳಿಂದ ಪೂಜಿಸಿ ಈ ರೀತಿಯಾಗಿ ಸ್ತುತಿಸಲಾರಂಭಿಸಿದರು. ॥೨೨-೨೩॥

"ಶಂಭುವೇ, ಮಹಾದೇವನೇ, ತ್ರಿಪುರಗಳನ್ನು ನಾಶಮಾಡಿ ಪ್ರಪಂಚವನ್ನು ಕಾಪಾಡಿದವನೇ, ದಯಾಸಮುದ್ರನೇ, ತ್ರಿಜಗತ್ಪತಿಯೇ ನಮ್ಮನ್ನು ಕಾಪಾಡು.

ಅಯಂ ಮಂಕಣಕಃ ಸಿದ್ಧಃ ಸಿದ್ಧೇಶ ತವದರ್ಶನಾತ್ ।
ಸಿದ್ಧಿಂ ಪರಮಿಕಾಂ ಪ್ರಾಪ್ತಸ್ತೇನ ನೃತ್ಯತಿ ಮೋಹಿತಃ ॥೨೫॥

ತನ್ನಿವಾರಯ ದೇವೇಶ ಲೋಕಾನಾಂ ಸ್ಥಿತಿಹೇತವೇ ।
ತದ್ಬ್ರಹ್ಮಣೋ ವಚಶ್ಶ್ರುತ್ವಾ ಸಿದ್ಧರೂಪ್ಯಹಮಾಗತಃ ॥೨೬॥

ಜಟಾಮಂಡಲಶೋಭಾಂಗೇ ತ್ರಿಪುಂಡ್ರನಿಟಿಲೋಲ್ಲಸತ್ ।
ರುದ್ರಾಕ್ಷಹಾರವಲಯಕಂಕಣಾದ್ಯೈಶ್ಚ ಶೋಭಿತಃ ॥೨೭॥

ಭಸಿತೋದ್ಧೂಲಿತವಪುಃ ಸ್ವರ್ಣವೇತ್ರಲಸತ್ಕರಃ ।
ಶಂಖಖಡ್ಗಾದಿಕಲಿತಕುಂಡಲೈಃ ಶೋಭಿವಕ್ತ್ರಕಃ ॥೨೮॥

ಪಾದುಕಾವಿಲಸತ್ಪಾದೋ ಮೇಖಲಾಂ ಪಾದಲಂಬಿನೀಂ ।
ದಂಡಧೇನೂ ಡಮರುಕಾಂ ನಾದಯನ್ ಡಂಬರೋಂಬರಂ ॥೨೯॥

---

ಭರ್ಗರೂಪಿಯಾದ ಸಕಲ ಪ್ರಪಂಚವನ್ನೂ ರಕ್ಷಿಸಿ, ನಾಟ್ಯದಲ್ಲಿ ತೃಪ್ತಿಗೊಳಿಸಿದ ಈ ಮುನಿಯನ್ನು ಕಾಪಾಡಿದ ಚಂದ್ರಶೇಖರನೇ, ನಮ್ಮನ್ನು ರಕ್ಷಿಸು. ॥೨೪॥

ಈ ಮಂಕಣಕನೆಂಬ ಸಿದ್ಧಪುರುಷನು ನಿನ್ನನ್ನು ಸಾಕ್ಷಾತ್ಕರಿಸಿಕೊಂಡು, ಪರಾಸಿದ್ಧಿಯನ್ನು ಪಡೆದು ನರ್ತನದಲ್ಲಿಯೇ ಆಸಕ್ತನಾಗಿರುವನು. ಆತನು ಮತ್ತೆ ಸಾಮಾನ್ಯಯೋಗಿಯಂತೆ ಇರಲಿ. ಆತನ ಉಪದೇಶಬಲದಿಂದ ನಾನು ಲೋಕವನ್ನು ರಕ್ಷಿಸುವೆನು ಎಂಡು ಬ್ರಹ್ಮನು ಪ್ರಾರ್ಥಿಸಲು, ಅದರಂತೆ ನಾನು (ಈಶ್ವರನು) ಅದೇ ಸಿದ್ಧಪುರುಷನ ವೇಷದಿಂದಲೇ ಅಲ್ಲಿ ಅವರಿಗೆ ಗೋಚರನಾದೆನು. ॥೨೫-೨೬॥

ಹಾಗೆ ಬಂದ ಸಿದ್ಧಪುರುಷನು ಜಟಾಮಂಡಲದಿಂದಲೂ, ಹಣೆಯಲ್ಲಿ ವಿರಾಜಿಸುವ ತ್ರಿಪುಂಡ್ರಗಳಿಂದಲೂ, ರುದ್ರಾಕ್ಷಮಾಲೆಗಳಿಂದಲೂ, ಕೈಯಲ್ಲಿ ವಿರಾಜಿಸುವ ಸುಂದರವದನದಿಂದಲೂ ಶೋಭಿಸುತ್ತಿದ್ದನು. ॥೨೭-೨೮॥

ಆತನ ಕಾಲಿನಲ್ಲಿ ಪಾದುಕೆಯೂ, ಸೊಂಟದಲ್ಲಿ ನೀಳವಾದ ಒಡ್ಯಾಣವೂ ವಿರಾಜಿಸುತ್ತಿದ್ದಿತು. ಸಿದ್ಧವೇಷಧಾರಿಯಾದ ನಾನು ದಂಡ, ಡಮರುಕ ಇವುಗಳನ್ನು ಹಿಡಿದು, ಡಮರುಗಧ್ವನಿಮಾಡುತ್ತಾ ಅವರಿಗೆ ಗೋಚರಿಸಿದೆನು. ॥೨೯॥

ಪಾದಕಂಕಣಭೂತೇನ ಫಣಿನಿಶ್ವಾಸಪೂತ್ಕೃತಿಃ ।
ವೈನತೇಯಮಹಾಪಕ್ಷೈಃ ಕೃತಾಪೀಡೋ ಮಹೇಶ್ವರಿ ॥೩೦॥

ತಸ್ಯಾಗ್ರತಃ ಸ್ಥಿತೋ ದೇವಿ ಸಿದ್ಧೇಶೋಽಹಂ ಮುನೇಸ್ತದಾ ।
ಸ ಮುನಿರ್ವಿಸ್ಮಯಾವಿಷ್ಟೋ ಮಾಂ ಪ್ರಣಮ್ಯ ತದಾ ಸ್ಥಿತಃ ॥೩೧॥

ಪಶ್ಯತಸ್ತಸ್ಯ ಮೇಂಗುಷ್ಠೋ ದೇವಿ ಸಂತಾಡಿತೋ ಮಯಾ ।
ತಸ್ಮಾಚ್ಚ ಭಸ್ಮನೋ ರಾಶಿರುದಭೂತ್ಪರ್ವತೋಪಮಃ ॥೩೨॥

ದೇವಾ ಮಂಕಣಕಶ್ಚೈವಾದ್ಭುತಂ ದದೃಶುಸ್ತದಾ ।
ಭಸ್ಮರಾಶಿಂ ತದಾ ಸರ್ವೇ ಸಮುದ್ಧೂಲ್ಯ ಸ್ವಕಾಂಗಕಂ ॥೩೩॥

ಪ್ರಣೇಮುರ್ಮಾಂ ತದಾ ದೇವಿ ಸಿದ್ಧೇಶಂ ವಿನಯಾತ್ತದಾ ।
ನೃತ್ತಾದುಪಾರಮದ್ವಿಪ್ರೋ ಮಯಾ ಪ್ರೋಕ್ತಸ್ಸಮಂಕಣಃ ॥೩೪॥

ಗಚ್ಛ ಮಂಕಣಸಿದ್ಧಿಸ್ತೇ ಮತ್ಪ್ರಸಾದಾತ್ಪರಾ ತವ ।
ನೈವಂ ತೇ ವಿಸ್ಮಯೋ ಭೂಯಾದೇತಲ್ಲಿಂಗಂ ಹಿ ಸಿದ್ಧಿದಂ ॥೩೫॥

---

ಅಲ್ಲದೆ ನನ್ನ ಆಕಾರದ ಪಾದಭಾಗದಲ್ಲಿ ಸರ್ಪವು ಬಳೆಯಾಗಿದ್ದು, ಎದುರಿನಲ್ಲಿ ನಿಂತಿದ್ದ ವಿಷ್ಣುವಾಹನನಾದ ಗರುಡನ ರೆಕ್ಕೆಗಳಿಂದ ಎದ್ದ ವಾಯುವನ್ನೇ ಸ್ವೀಕರಿಸುತ್ತಾ ಬುಸುಗುಟ್ಟುತ್ತಿದ್ದಿತು. ಇಂತಹ ಆಕಾರದಲ್ಲಿ ನಾನು ಆ ಮುನಿಯ ಎದುರಿನಲ್ಲಿ ಹೋಗಿ ನಿಂತೆನು. ನನ್ನನ್ನು ನೋಡಿದೊಡನೆಯೇ ಆ ಮುನಿಯು ಆಶ್ಚರ್ಯಚಕಿತನಾಗಿ ನನಗೆ ನಮಸ್ಕರಿಸಿ ಎದ್ದು ನಿಂತನು. ॥೩೦-೩೧॥

ಹಾಗೆ ಅವನು ನನ್ನನ್ನು ನೋಡುತ್ತಿರುವಾಗಲೇ ನಾನು ಒಂದು ಸಾರಿ ನನ್ನ ಪಾದಾಂಗುಷ್ಠದಿಂದ ನೆಲವನ್ನು ಕೆರೆದೆನು. ಒಡನೆಯೇ ಅಲ್ಲಿ ಒಂದು ಭಸ್ಮರಾಶಿಯು ಉದ್ಭವಿಸಿತು. ಅದನ್ನು ನೋಡಿ ಮಂಕಣಕನೂ, ಸಕಲ ದೇವತೆಗಳೂ ಆಶ್ಚರ್ಯದಿಂದ ಕೂಡಿದರು. ॥೩೨-೩೩॥

ಒಡನೆಯೇ ಎಲ್ಲರೂ ನನಗೂ ಸಿದ್ಧೇಶನಿಗೂ ಭಕ್ತಿಪೂರ್ವಕವಾಗಿ ವಂದಿಸಿದರು. ನನ್ನ ಅಪ್ಪಣೆಯಂತೆ ಮಂಕಣಕನು ನಾಟ್ಯವನ್ನೂ ನಿಲ್ಲಿಸಿದನು. ಅವನನ್ನು ನೋಡುತ್ತಾ ಆಗ ನಾನು ಹೀಗೆ ಹೇಳಿದೆನು. "ಎಲೈ ಮಂಕಣಸಿದ್ಧೇಶನೇ, ನನ್ನ

ಪ್ರಭಾಸೇ ಪಾವನೇಕ್ಷೇತ್ರೇ ಯೋ ವಾ ಕೋವಾಪಿ ಮಾನವಃ ।
ನಿಯತಃ ಸಂವಸೇದತ್ರ ತಸ್ಯ ಸಿದ್ಧಿಃ ಪರಾ ಭವೇತ್ ॥೩೬॥

ಸಿದ್ಧಿಪ್ರದಮಿದಂ ಲಿಂಗಂ ಸಿದ್ಧೇಶಾಖ್ಯಂ ತು ಕಾಮದಂ ।
ದರ್ಶನಾದಸ್ಯ ಲಿಂಗಸ್ಯ ಸರ್ವಾಃ ಸಿದ್ಧ್ಯಂತಿ ಸಿದ್ಧಯಃ ॥೩೭॥

ಪ್ರಭಾಸೇ ಮತ್ಪ್ರಸಾದೇನ ಸಿದ್ಧಲಿಂಗಮುದೀಕ್ಷ್ಯ ಚ ।
ಮತ್ಸಾಯುಜ್ಯಮವಾಪ್ನೋತಿ ದೇವಿ ನಿತ್ಯಂ ವದಾಮಿ ತೇ ॥೩೮॥

ಪುರಾ ಜಯಂತಃ ಶಕ್ರಸ್ಯ ತನಯೋ ಮೋಹಮಾಸ್ಥಿತಃ ।
ಐರಾವತಸುತಂ ನಾಗಂ ಸಮಾರುಹ್ಯ ಜವಾತ್ತದಾ ॥೩೯॥

ಸಮಾಗತೋ ದೇವಗಣೈರ್ಮಧ್ಯೇ ಮಾರ್ಗಂ ದ್ವಿಜಸ್ಯ ಹಿ ।
ಗೋವತ್ಸೋ ಮರ್ದಿತಃ ಪಾದೈಸ್ತೇನೋನ್ಮತ್ತೇನ ಹಸ್ತಿನಾ ॥೪೦॥

ಶತರ್ಚಾನಃ ಶಶಾಪೈನಂ ಜಯಂತಂ ಪಾಕಶಾಸನಿಂ ।
ಶ್ವಿತ್ರೀ ಭವೇತಿ ಚ ತದಾ ಶಾಪಾತ್ ಶ್ವಿತ್ರ್ಯಭವತ್ತದಾ ॥೪೧॥

---

ಅನುಗ್ರಹದಿಂದ ನೀನು ಇನ್ನೂ ಪ್ರಭಾವಶಾಲಿಯೆನಿಸುವೆ. ಆಶ್ಚರ್ಯಪಡಬೇಡ. ಈ ಶಿವಲಿಂಗವು ಸಕಲರಿಗೂ ಇಷ್ಟಾರ್ಥಸಿದ್ಧಿಯನ್ನು ಕೊಡತಕ್ಕುದು. ॥೩೪-೩೫॥

ಈ ಪಾವನತಮವಾದ ಪ್ರಭಾಸಕ್ಷೇತ್ರದಲ್ಲಿ ಯಾವನೇ ಆಗಲಿ ವಾಸ ಮಾಡುತ್ತಾ ಈ ಸಿದ್ಧೇಶಲಿಂಗವನ್ನು ದರ್ಶನಮಾಡಿದರೆ ಅವರಿಗೆ ಜೀವನದಲ್ಲಿ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು ಎಂಬುದರಲ್ಲಿ ಸಂದೇಹವಿಲ್ಲ. ॥೩೬-೩೭॥

ಈ ಪ್ರಭಾಸಕ್ಷೇತ್ರಕ್ಕೆ ಬಂದು ಈ ಸಿದ್ಧಲಿಂಗವನ್ನು ನೋಡಿ ಪೂಜಿಸಿದವನು ನಿಜವಾಗಿಯೂ ನನ್ನ ಸಾಯುಜ್ಯವನ್ನು ಪಡೆಯುವನು. ಹಿಂದೆ ಒಂದಾನೊಂದು ಕಾಲದಲ್ಲಿ ಇಂದ್ರನ ಮಗನಾದ ಜಯಂತನು ಅಹಂಕಾರದಿಂದ ಐರಾವತದ ಮರಿಯಾದ ನಾಗವೆಂಬ ಆನೆಯನ್ನು ಹತ್ತಿ ಬರುತ್ತಿರುವಾಗ ದಾರಿಯಲ್ಲಿ ಅದರ ಕಾಲಿಗೆ ಒಂದು ಹಸುವಿನ ಕರುವು ಸಿಕ್ಕಿ ಜಜ್ಜಿಹೋಯಿತು. ॥೩೮-೩೯-೪೦॥

ಅದನ್ನು ನೋಡಿ ಶತರ್ಚಾನ ಋಷಿಯು ಇಂದ್ರಪುತ್ರನಾದ ಜಯಂತನಿಗೆ 'ನೀನು ಕುಷ್ಠರೋಗದವನಾಗು' ಎಂದು ಶಪಿಸಿದನು. ಅದರಂತೆಯೇ ಜಯಂತನು

ಇಂಪ್ರವಿಂದ್ರಂ ಗುರುಂ ಗತ್ವಾ ತತ್ಸರ್ವಂ ಶಾಪಕಾರಿತಂ ।
ಜಯಂತಃ ಪ್ರಾಹ ದುಃಖೇನ ಪ್ರಣಮ್ಯ ಪಿತರಂ ಗುರುಂ ॥೪೨॥

॥ ಜಯಂತ ಉವಾಚ ॥

ಅಜ್ಞಾನಾದ್ಯೌವನೋನ್ಮಾದಾದ್ಧಸ್ತಿಪಾದವಿಮರ್ದಿತಃ ।
ತರ್ಣಕಸ್ತಸ್ಯ ವಿಪ್ರಸ್ಯ ಕ್ರುದ್ಧೋ ಮಯಿ ಶತಾರ್ಚನಃ ॥೪೩॥

ತಸ್ಯಾಘನಿಷ್ಕೃತಿಂ ಬ್ರೂತಂ ಯುವಾಂ ಯದ್ಬ್ರೂತ ತದ್ಧಿತಂ ।
ಕರಿಷ್ಯಾಮಿ ನ ಸಂದೇಹಃ ಸುಖೋಪಾಯಂ ವದಾಧುನಾ ॥೪೪॥

ಜಯಂತವಾಕ್ಯಂ ತಚ್ಛ್ರುತ್ವಾ ಶಕ್ರಸ್ಯಾನುಮತೇ ತದಾ ।
ಬೃಹಸ್ಪತಿಸ್ತದಾ ಪ್ರಾಹ ಪ್ರಭಾಸಂ ಕ್ಷೇತ್ರಮುತ್ತಮಂ ॥೪೫॥

ಸಿದ್ಧೇಶ್ವರಂ ಪ್ರಣಮ್ಯಾಥ ಸ್ನಾತ್ವಾ ವೇಣಾನದೀಜಲೇ ।
ಸಂವತ್ಸರಂ ವಸ ಪ್ರೀತ್ಯಾ ಜಪ ರುದ್ರಂ ಮಹೇಶ್ವರಂ ॥೪೬॥

---

ಕುಷ್ಠಿಯಾದನು. ಆಗ ದುಃಖದಿಂದ ಜಯಂತನು ತಂದೆಯನ್ನೂ ಗುರುವನ್ನೂ ವಂದಿಸಿ ತನಗೆ ಬಂದಿರುವ ಕಷ್ಟಗಳನ್ನೆಲ್ಲಾ ಹೇಳಿಕೊಂಡನು. ॥೪೧-೪೨॥

ಅಲ್ಲದೆ ತಾನು ಅವಿವೇಕದಿಂದಲೂ, ಅಜ್ಞಾನದಿಂದಲೂ, ತಿಳಿಯದೆ ಶತರ್ಚಿಯೆಂಬ ಬ್ರಾಹ್ಮಣನ ಕರುವನ್ನು ಆನೆಯ ಕಾಲಿನಿಂದ ತುಳಿಸಿದನೆಂದೂ, ಆ ಪಾಪಪರಿಹಾರಕ್ಕಾಗಿ ಅವರಿಬ್ಬರೂ ಏನನ್ನು ಹೇಳಿದರೂ ಮಾಡುವೆನೆಂದೂ ತನಗೆ ಸುಖವಾಗಿ ರೋಗನಿವಾರಣೆಯಾಗುವ ಮಾರ್ಗವನ್ನು ತಿಳಿಸಬೇಕೆಂದೂ ಪ್ರಾರ್ಥಿಸಿಕೊಂಡನು. ॥೪೩-೪೪॥

ಜಯಂತನ ಆ ಮಾತುಗಳನ್ನು ಕೇಳಿ ಇಂದ್ರನ ಅಪ್ಪಣೆಯಂತೆ ಬೃಹಸ್ಪತ್ಯಾಚಾರ್ಯನು ಹೀಗೆ ಬೋಧಿಸಿದನು "ಅಯ್ಯಾ ಜಯಂತನೇ, ಭೂಲೋಕದಲ್ಲಿ ಪ್ರಭಾಸ ಕ್ಷೇತ್ರವೆಂಬ ಉತ್ತಮ ಕ್ಷೇತ್ರವೊಂದಿರುವುದು. ಅಲ್ಲಿರುವ ಸಿದ್ಧೇಶ್ವರಲಿಂಗವನ್ನು ಭಕ್ತಿಯಿಂದರ್ಚಿಸಿ, ವೇಣಾನದಿಯಲ್ಲಿ ಸ್ನಾನಮಾಡುತ್ತಾ ಸರ್ವದಾ ರುದ್ರಾಧ್ಯಾಯವನ್ನೇ ಜಪಿಸುತ್ತಾ, ಒಂದು ವರ್ಷಪರ್ಯಂತ ವಾಸಮಾಡುವುದಾದರೆ, ನಿನಗೆ ಈಶ್ವರಾನುಗ್ರಹವು ಒದಗುವುದು. ॥೪೫-೪೬॥

ಬಿಲ್ವಪತ್ರೈಃ ಸಮಭ್ಯರ್ಚ್ಯ ಮುಕ್ತೋ ಭವಸಿ ನಾನ್ಯಥಾ ।
ತದಾ ಗುರುವಚಶ್ಶ್ರುತ್ವಾ ಜಯಂತಸ್ತೌ ಪ್ರಣಮ್ಯ ಚ ॥೪೭॥

ಇಂದ್ರೇಣ ಚಾಭ್ಯನುಜ್ಞಾತಃ ಪ್ರಭಾಸೇ ಮಾಂ ಸಮಾಗತಃ ।
ಸ್ನಾತ್ವಾ ವೇಣಾನದೀತೋಯೇ ತಪಸ್ತಪ್ಯತ ದುಷ್ಕರಂ ॥೪೮॥

ಭಸ್ಮತ್ರಿಪುಂಡ್ರರುದ್ರಾಕ್ಷಮಾಲಾಲಂಕೃತವಿಗ್ರಹಃ ।
ನಮಸ್ಕಾರೈರ್ಮಹಾದೇವಂ ರುದ್ರಾಧ್ಯಾಯೇನ ಶಂಕರಂ ॥೪೯॥

ಶಕ್ರಾತ್ಮಜಸ್ತದಾ ಗೌರಿ ಸಿದ್ಧೇಶಾಖ್ಯಂ ತದಾ ಮುದಾ ।
ಬಿಲ್ವಪತ್ರೈಸ್ಸಮಭ್ಯರ್ಚ್ಯ ಪ್ರದಕ್ಷಿಣಪುರಸ್ಸರಂ ॥೫೦॥

ಸ್ತುವನ್ ಜಪನ್ ಸದಾ ಧ್ಯಾಯನ್ಮಾಂ ನಿರೀಕ್ಷ್ಯ ಚ ಭಕ್ತಿತಃ ।
ತುಷ್ಟಾವಾಥ ಜಯಂತೋ ಮಾಂ ಪ್ರಣಿಪತ್ಯ ಕೃತಾಂಜಲಿಃ ॥೫೧॥

॥ ಜಯಂತ ಉವಾಚ ॥

ಸಿದ್ಧೀನಾಂ ನಿಲಯಸ್ತ್ವಮೀಶ ದಯಯಾಗಸ್ಕೃತಂ ಪಾಹಿ ಮಾಂ
ವಿಶ್ವಾಧೀಶ್ವರ ವಿಶ್ವನಾಥ ಭಗವನ್ ಶ್ರೀ ಚಂದ್ರಚೂಡ ಪ್ರಭೋ ।

---

ಆ ಶಿವಲಿಂಗವನ್ನು ಸರ್ವದಾ ಬಿಲ್ವಪತ್ರಾದಿಗಳಿಂದ ಅರ್ಚಿಸಿದರೆ ನಿನಗೆ ನಿಜವಾಗಿಯೂ ಪಾಪಮುಕ್ತಿಯು ದೊರಕುವುದು ಎಂದು ಹೇಳಿದ ಗುರುವಿನ ಮಾತನ್ನು ಕೇಳಿ ಜಯಂತನು ತಂದೆಯ ಅಪ್ಪಣೆಯನ್ನು ಪಡೆದು ಪ್ರಭಾಸಕ್ಷೇತ್ರಕ್ಕೆ ಬಂದು ವೇಣಾನದಿಯಲ್ಲಿ ಸ್ನಾನಮಾಡಿ ಘೋರವಾದ ತಪಸ್ಸಿಗೆ ಆರಂಭಿಸಿದನು. ॥೪೭-೪೮॥

ಆಕಾಲದಲ್ಲಿ ಜಯಂತನು ಭಸ್ಮರುದ್ರಾಕ್ಷಿಗಳನ್ನು ಧರಿಸಿ ಮಹಾದೇವನನ್ನು ರುದ್ರಾಧ್ಯಾಯದಿಂದ ಸ್ತುತಿಸುತ್ತಾ, ಬಿಲ್ವಪತ್ರಾದಿಗಳಿಂದ ಅರ್ಚಿಸುತ್ತಾ ಸರ್ವದಾ ಪ್ರದಕ್ಷಿಣನಮಸ್ಕಾರಾದಿಗಳಿಂದ ಮಹೇಶ್ವರನನ್ನು (ನನ್ನನ್ನು) ಪೂಜಿಸುತ್ತಿದ್ದನು. ॥೪೯-೫೦॥

ಮತ್ತು ಯಾವಾಗಲೂ ನನ್ನನ್ನೇ ಧ್ಯಾನಿಸುತ್ತಾ ಹೀಗೆ ಪ್ರಾರ್ಥಿಸತೊಡಗಿದನು. ॥೫೧॥

"ಮಹಾದೇವನೇ, ನೀನು ಸರ್ವಸಿದ್ಧಿಪ್ರದನು, ಸಕಲ ಲೋಕಗಳಿಗೂ ಒಡೆಯನೆನಿಸಿದವನು. ಚಂದ್ರಶೇಖರನಾಗಿ, ಬ್ರಹ್ಮಾದಿಸಕಲದೇವತಾ ಸಮೂಹದಿಂದಲೂ

ತ್ವಂ ಶಕ್ರಾದಿಸುರಾಸುರಾರ್ಚಿತಪದೋ ನಿರ್ದ್ವಂದ್ವನಿತ್ಯೋ ವಿಭು
ರ್ಗುಪ್ತೋ ಮೂಢಧಿಯಾಂ ಸುಸೂಕ್ಷ್ಮಕಧಿಯಾ
ಪಶ್ಯಂತಿ ಯಂ ಯೋಗಿನಃ ॥೫೨॥

ಸಾಂದ್ರಾನಂದಮಯಂ ದಯಾಮಯತನುಂ
ಪ್ರಾಪ್ತೋಽಸ್ಮಿ ಪಾದಂ ತವ ।
ಮಾಂ ಸದ್ಯಃ ಸುಖಯಾಶು
ಪಾಹಿ ದಯಯಾ ಸಿದ್ಧೇಶ ಭದ್ರಂ ಕುರು ॥೫೩॥

॥ ಈಶ್ವರ ಉವಾಚ ॥

ಇತಿ ಸಂಪ್ರಾರ್ಥಿತಸ್ತೇನ ಜಯಂತೇನ ಮನೋರಮೇ ।
ತಸ್ಮಾತ್ ಶ್ವಿತ್ರಾದ್ವಿನಿರ್ಮುಕ್ತೋ ನತ್ವಾ ಶಕ್ರಂ ಮುದಾ ಗತಃ ॥೫೪॥

ಇತ್ಥಂ ಪ್ರಭಾಸಕ್ಷೇತ್ರಸ್ಯ ಮಹಿಮಾನಂ ತವೋದಿತಂ ।
ಸಿದ್ಧಿಪ್ರದಮಿದಂ ಕ್ಷೇತ್ರಂ ಸಿದ್ಧೇಶಸ್ಯಾಸ್ಯ ದರ್ಶನಾತ್ ॥೫೫॥

---

ಪೂಜಿತನಾದವನು, ಯೋಗಿಗಳು ನಿನ್ನನ್ನು ತಮ್ಮ ಸೂಕ್ಷ್ಮದೃಷ್ಟಿಯಿಂದ ಅವಲೋಕಿಸಿ ಅಜ್ಞಾನವನ್ನು ಕಳೆದುಕೊಂಡು ಸಾಕ್ಷಾತ್ಕರಿಸಿಕೊಳ್ಳುವರು ಅಂತಹ ಪವಿತ್ರತಮನಾದ ನೀನು ಪಾಪಿಷ್ಠನಾದ ನನ್ನ ಸಕಲಾಪರಾಧವನ್ನೂ ಮನ್ನಿಸು. ॥೫೨॥

ಮಹೇಶ್ವರನೇ, ನಿನ್ನ ಪಾದಗಳು ಆನಂದಪ್ರದವಾದವುಗಳು, ದಯಾಮೂರ್ತಿಗಳು. ಅಂತಹ ಪಾದದ್ವಂದ್ವವನ್ನು ನಾನು ಈಗ ಆಶ್ರಯಿಸಿರುವೆನು. ಸಿದ್ಧೇಶನೇ, ಅಂತಹ ನನ್ನನ್ನು ದಯೆಯಿಂದ ರಕ್ಷಿಸು. ಈಗ ನಿನ್ನನ್ನೇ ನಾನು ಮೊರೆಹೊಕ್ಕಿರುವೆನು." ॥೫೩॥

ಎಂದು ಜಯಂತನು ವಿಧವಿಧವಾಗಿ ಪ್ರಾರ್ಥಿಸಿ ಕೊನೆಗೆ ತನಗೆ ಬಂದಿದ್ದ ಕುಷ್ಠರೋಗದಿಂದ ನಿವೃತ್ತಿಪಡೆದನು ಎಂದು ಶಂಕರನು ಪಾರ್ವತಿಗೆ ವಿವರಿಸುತ್ತಾ ಪ್ರಭಾಸಕ್ಷೇತ್ರದ ಮಹಿಮೆಯನ್ನೂ ಸಿದ್ಧೇಶಲಿಂಗದ ದರ್ಶನಫಲವನ್ನೂ ವಿವರಿಸಿ ತಿಳಿಸಿದನು. ॥೫೪-೫೫॥

|| ಸೂತ ಉವಾಚ ||

ಶಿವಪ್ರಣತಿಸಂಭವಂ ಫಲಮಪಾರಪುಣ್ಯಾಧಿಕಂ
ನ ತತ್ ಕ್ರತುಶತಾರ್ಜಿತೈಃ ಫಲಗಣೈರ್ನಗಣ್ಯಂ ಭವೇತ್ ।
ಅನಂತಮಹಿಮಾಸ್ಪದಂ ವಿವಿಧಪಾತಕೋಚ್ಛೇದಕಂ
ಶಿವದ್ರುಹಿ ಜನೇ ಸದಾ ನ ಖಲು ವಾಚ್ಯಮೇತದ್ದ್ವಿಜೈಃ ||೫೭||

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಪ್ರಭಾಸಕ್ಷೇತ್ರ
ಮಹಿಮಾವರ್ಣನೇ ಜಯಂತಸ್ಯ ಶ್ವಿತ್ರಿರೋಗನಿವಾರಣಂ ನಾಮ
ಚತುಸ್ತ್ರಿಂಶೋಽಧ್ಯಾಯಃ

---

ಎಲೈ ಋಷಿವರ್ಯರೇ, ಹಾಗೆ ಶಿವನಮಸ್ಕಾರದಿಂದ ಒದಗುವ ಸುಕೃತ ವಿಶೇಷವು ಅನೇಕ ಯಾಗಗಳಿಂದಲೂ, ಇತರ ಪುಣ್ಯಪ್ರದವಾದ ಯಾವ ಕರ್ಮಾಚರಣೆಯಿಂದಲೂ ಸುಲಭವಾಗಿ ದೊರೆಯಲಾರದು. ಶಿವದರ್ಶನವು ಅನಂತ ಮಹಿಮೆಯನ್ನು ಒಳಗೊಂಡಿರುವುದು. ಸಮಸ್ತ ಪಾಪನಿವಾರಕವಾದದ್ದು. ಇದರ ಮಹಿಮೆಯನ್ನು ಶಿವದ್ವೇಷಿಗಳಾದವರಿಗೆ ಎಂದೂ ಹೇಳಬಾರದು ಎಂದು ಸೂತ ಮಹರ್ಷಿಗಳು ಸಕಲ ಋಷಿಜನರಿಗೂ ಹೇಳಿದರು. ||೫೭||

ಇಲ್ಲಿಗೆ ಶ್ರೀ ಶಿವರಹಸ್ಯದ ಭರ್ಗಾಖ್ಯದಲ್ಲಿ ಐದನೆಯ ಅಂಶದಲ್ಲಿ ಪ್ರಭಾಸಕ್ಷೇತ್ರ ಮಹಿಮೆಯನ್ನು ವರ್ಣಿಸುವ ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಪಂಚತ್ರಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಶೃಣು ದೇವಿ ಕಥಾಮೇಕಾಂ ಬ್ರಹ್ಮಣಃ ಪರಮಾದ್ಭುತಾಂ ।
ಯಾಂ ಶ್ರುತ್ವಾ ಮಯಿ ವಿಂದಂತೇ ಭಕ್ತಿಃ ಸರ್ವಾರ್ಥದಾಯಿನೀ॥೧॥

ಸತ್ಯಲೋಕೇ ಸ್ಥಿತೋಬ್ರಹ್ಮಾ ಯಿಯಕ್ಷುರಭವಚ್ಛಿವೇ ।
ಸ್ವಹಸ್ತಪದ್ಮಂ ಧಾತಾ ಸಃ ಪಾತಯಾಮಾಸ ಭೂತಲೇ ॥೨॥

ಕ್ಷೇತ್ರಾಣಾಮುತ್ತಮಂ ತನ್ಮೇ ಪುಷ್ಕರೇ ಪುಷ್ಕರಂ ತದಾ ।
ತತ್ರ ಮೇ ಸಂಸ್ಥಿತಂ ಪೂರ್ವಂ ಪುಷ್ಕರೇಶ್ವರಸಂಜ್ಞಿತಂ ॥೩॥

---

## ಮೂವತ್ತೈದನೆಯ ಅಧ್ಯಾಯ

ಮತ್ತೆ ಪರಶಿವನು ಪಾರ್ವತಿಗೆ ಶಿವಕ್ಷೇತ್ರದ ಮಹಿಮೆಯನ್ನು ವಿವರಿಸುತ್ತಾ ಹೀಗೆಂದನು "ದೇವಿಯೇ, ಬ್ರಹ್ಮನ ಅದ್ಭುತವಾದ ಒಂದು ಕಥೆಯನ್ನು ಕೇಳು. ಅದರ ಶ್ರವಣದಿಂದ ಶಿವಭಕ್ತಿಯು ಭಕ್ತರಿಗೆ ಹೆಚ್ಚುವುದು. ಹಿಂದೆ ಒಂದು ಸಾರಿ ಬ್ರಹ್ಮನು ಸತ್ಯಲೋಕದಲ್ಲಿಯೇ ನಿಂತು ಒಂದು ಅಶ್ವಮೇಧಯಾಗ ಮಾಡಬೇಕೆಂಬುದಾಗಿ ಅಪೇಕ್ಷಿಸಿ ನನ್ನ ಕೈಯ್ಯಲ್ಲಿದ್ದ ಒಂದು ಕಮಲವನ್ನು ಭೂಲೋಕಕ್ಕೆ ಹಾಕಿದನು. ॥೧-೨॥

ಅದು ಪುಷ್ಕರೇಶ್ವರನೆಂದು ಪ್ರಸಿದ್ಧಿಗೊಂಡಿದ್ದ ಶಿವಕ್ಷೇತ್ರದಲ್ಲಿ ಬಂದು ಅಲ್ಲಿದ್ದ ಶಿವಲಿಂಗದ ಮೇಲೆಯೇ ಬಿದ್ದಿತು. ಆ ಪವಿತ್ರವಾದ ಲಿಂಗವು ಬಿದಿರುಮೆಳೆಗಳ ಮತ್ತು ವಿವಿಧವೃಕ್ಷಗಳ ಮಧ್ಯಭಾಗದಲ್ಲಿ ವಿರಾಜಿಸುತ್ತಿದ್ದಿತು. ॥೩-೪॥

|| ವಾಣ್ಯುವಾಚ ||

ಲಿಂಗಂಮಂಗಳದಂ ಪುಣ್ಯಂ ತಸ್ಮೌಲೌ ನಳಿನಂ ಪತತ್ ।
ವೇಣುಗುಲ್ಮಾವೃತಂ ಭದ್ರಂ ನಾಃನಾವೃಕ್ಷಸಮನ್ವಿತಂ ||೪||

ತತ್ರಾಂತರೇ ಭವದ್ವಾಣೀ ಶ್ರುತ್ವಾ ವಾಣೀಪತಿಸ್ತದಾ ||೫||

ಏತದ್ವಿಧಾತಃ ಕ್ಷೇತ್ರಾಣಾಮುತ್ತಮಂ ಪುಷ್ಕರಂ ಶಿವಂ ।
ಯಜತೋ ದೇವಯಜನಂ ತವ ಭೂಯಾತ್ಸುಪಾವನಂ ||೬||

ಪುಷ್ಕರಂ ತೇ ಯತಃ ಪುಣ್ಯಂ ಪತಿತಂ ಪುಷ್ಕರಂ ಹಿ ತತ್ ।
ಅತ್ರ ಲಿಂಗಮಿದಂ ಶ್ರೇಷ್ಠಂ ದೇವದೇವಸ್ಯ ಶೂಲಿನಃ ||೭||

ಪಶ್ಯ ಸಂಪೂಜಯಾ ತತ್ರ ಕಾರ್ತಿಕೋಽಯಂ ಸುಪಾವನಃ ।
ಮಾಸೋಽಯಂ ಪುಣ್ಯನಿಲಯಃ ಗಂಗೇಯಂ ಪಾವನೀ ಸರಿತ್ ||೮||

ಕಾರ್ತಿಕೇ ಸೋಮವಾರೇಷು ಪುಷ್ಕರೇ ಪುಷ್ಕರೇಶ್ವರಂ ।
ಯಸ್ಸಮರ್ಚಯಿತಾ ರಾತ್ರೌ ಬಿಲ್ವೈಃ ದ್ರೋಣೈಶ್ಚ ಘುರ್ಘುರೈಃ ||೯||

ತಸ್ಯ ಪುಣ್ಯಸ್ಯ ನಾಂತೋಽಸ್ತಿ ಸ ಚ ಶಂಕರವಲ್ಲಭಃ ।
ತದಾ ವಾಣೀವಚಶ್ಶ್ರುತ್ವಾ ವಿಶ್ವಕರ್ಮಾಣಮಾಹ್ವಯತ್ ||೧೦||

---

ಆ ಲಿಂಗದಮೇಲೆ ಪದ್ಮವು ಬಿದ್ದೊಡನೆಯೇ ಒಂದು ಅಶರೀರವಾಣಿಯಾಯಿತು "ಬ್ರಹ್ಮನೇ, ನಿನ್ನ ಕೈಯಿಂದ ಜಾರಿದ ಹೂವು ಪುಷ್ಕರಕ್ಷೇತ್ರದಲ್ಲಿರುವ ಶಿವಲಿಂಗದ ಮೇಲೆ ಬಿದ್ದಿದೆ. ಈಶ್ವರಾರಾಧಕನಾದ ನಿನ್ನ ಉದ್ದೇಶವು ಈಗ ಸಾರ್ಥಕವಾಯಿತು. ನಿನ್ನ ಪುಷ್ಕರವು (ಕಮಲ) ಪುಷ್ಕರಕ್ಷೇತ್ರಕ್ಕೇ ಬಿದ್ದು, ಪವಿತ್ರವಾದ ಪುಷ್ಕರೇಶ್ವರನ ಶಿರದಲ್ಲಿ ಬಂದು ನಿಂತಿದೆ. ||೫-೬-೭||

ಎಲೈ ಬ್ರಹ್ಮನೇ, ಯೋಚಿಸಿ ನೋಡು, ಪವಿತ್ರವಾದ ಕಾರ್ತಿಕಮಾಸವು ಈಗ ಒದಗಿದೆ. ಇಲ್ಲಿಯೇ ಪವಿತ್ರಗಂಗೆಯೂ ಹರಿಯುತ್ತಿರುವುದು. ಕಾರ್ತಿಕ ಸೋಮವಾರದ ದಿನ ಯಾರು ರಾತ್ರಿಯ ವೇಳೆಯಲ್ಲಿ ಈ ಪುಷ್ಕರಕ್ಷೇತ್ರದ ಪುಷ್ಕರೇಶ್ವರನನ್ನು ಬಿಲ್ವಪತ್ರಾದಿಗಳಿಂದ ಪೂಜಿಸುವರೋ, ಅವರಿಗೆ ಅನಂತವಾದ ಪುಣ್ಯವು ಲಭಿಸುವುದು. ಇದು ಶಿವಪ್ರೀತಿಕರವಾದ ಕ್ಷೇತ್ರ. ಇಂತಹ ಕ್ಷೇತ್ರಕ್ಕೆ ಬಂದು ನೀನು ಶಿವಪೂಜೆ

ಬ್ರಹ್ಮಣಾ ಸ್ಮೃತಮಾತ್ರಸ್ಸಃ ವಿಶ್ವಕರ್ಮಾ ತತೋ ವಿಧಿಂ ।
ಪ್ರಾಹ ಕಿಂ ಕರವಾಣೀತಿ ಕ್ಷೇತ್ರಂ ವಿಸ್ತಾರಯೇತಿ ತಂ ॥೧೧॥

ವ್ಯಧಾದ್ವೇಧಾ ತದಾ ಶಾಲಾಂ ಆಶ್ರಮಂ ಸರಿತಸ್ತಟೇ ।
ಮಂಟಪಂ ಗೋಪುರಂ ದಿವ್ಯಂ ಪುಷ್ಕರೇಶಸ್ಯ ಶೂಲಿನಃ ॥೧೨॥

ತದ್ಬ್ರಹ್ಮಣೋ ವಚಶ್ಶ್ರುತ್ವಾ ನಾನಾಶಿಲ್ಪಸಮನ್ವಿತಃ ।
ಶಾಲಾಂ ನಿರ್ಮಾಪಯಾಮಾಸ ನಾನಾಮಂಟಪಶೋಭಿತಾಂ ॥೧೩॥

ಭಕ್ಷ್ಯೈರ್ಭೋಜ್ಯೈ ಸ್ತಥೈವಾನ್ನೈಃ ಸೂಪಾಪೂಪೈರ್ಮನೋರಮೈಃ ।
ವಾಸಸಾಂ ರಾಶಯಸ್ತತ್ರ ಬ್ರಾಹ್ಮಣಾವಸಥಾದಯಃ ॥೧೪॥

ಪುಷ್ಕರೇಶ್ವರಲಿಂಗಸ್ಯ ಚಕ್ರೇ ಸೋಽಪಿ ಶಿವಾಲಯಂ ।
ಪ್ರಾಕಾರಗೋಪುರೋಪೇತಮಾಶ್ರಮೈಃ ಸುಮನೋಹರಂ ॥೧೫॥

ತತ್ಪಿತಾಮಹವಾಕ್ಯೇನ ವಿಶ್ವಕರ್ಮಾಥ ಶಿಲ್ಪಿರಾಟ್ ।
ವಿಜ್ಞಾಪ್ತುಮಥ ಬ್ರಹ್ಮಾಣಂ ಸತ್ಯಲೋಕಂ ಗತಸ್ತದಾ ॥೧೬॥

---

ಮಾಡುವವನಾಗು” ಎಂಬ ಈ ಅಶರೀರವಾಣಿಯ ಮಾತುಗಳನ್ನು ಕೇಳಿ ಬ್ರಹ್ಮನು, ಒಡನೆಯೇ ವಿಶ್ವಕರ್ಮನನ್ನು ಧ್ಯಾನಿಸಿಕೊಂಡನು. ॥೮-೯-೧೦॥

ಕೂಡಲೇ ವಿಶ್ವಕರ್ಮನು ಬಂದು ಏನಪ್ಪಣೆಯೆಂದು ಕೈಜೋಡಿಸಿ ನಿಂತನು. ಬ್ರಹ್ಮನು ಅವನಿಗೆ ಆ ಪುಷ್ಕರಕ್ಷೇತ್ರವನ್ನು ವಿಸ್ತಾರಪಡಿಸಿ, ಅಲ್ಲಿ ಪುಷ್ಕರೇಶನಿಗೆ ದಿವ್ಯಮಂಟಪವನ್ನೂ ಗೋಪುರವನ್ನೂ ನಿರ್ಮಿಸುವವನಾಗು ಎಂದನುಜ್ಞೆಕೊಟ್ಟನು. ॥೧೧-೧೨॥

ಹಾಗೆಂದ ಬ್ರಹ್ಮನ ಅಪ್ಪಣೆಯಂತೆ ವಿಶ್ವಕರ್ಮನು ಅನೇಕ ಶಿಲ್ಪಕಲೆಗಳಿಂದ ಒಪ್ಪುವ ದಿವ್ಯಮಂಟಪವನ್ನು ನಿರ್ಮಾಣಮಾಡಿ, ಅಲ್ಲಿ ಮನೋಹರವಾದ ಭಕ್ಷ್ಯ ಭೋಜ್ಯಗಳ ರಾಶಿಯನ್ನೂ, ನಾನಾವಿಧವಾದ ವಸ್ತ್ರಗಳ ರಾಶಿಯನ್ನೂ ತರಿಸಿ ಹಾಕಿಸಿ, ಒಂದು ಬ್ರಾಹ್ಮಣರ ವಾಸಕ್ಕೆಂದು ಅಗ್ರಹಾರವನ್ನೇ ನಿರ್ಮಾಣಮಾಡಿ ಬಿಟ್ಟನು. ॥೧೩-೧೪॥

ಹಾಗೆಯೇ ಅತ್ಯಾಶ್ಚರ್ಯಕರವಾದ ಪುಷ್ಕರೇಶಾಲಯವನ್ನೂ, ಅದಕ್ಕೆ ಪ್ರಾಕಾರ, ಗೋಪುರ ಮುಂತಾದುವುಗಳನ್ನೂ ನಿರ್ಮಿಸಿ, ಅದೆಲ್ಲವನ್ನೂ ಬ್ರಹ್ಮನಿಗೆ ಅರಿಕೆಮಾಡ

ತತ್ರ ಸಂತಿ ಮಹಾಶೈವಾಃ ಪುಷ್ಕರೇಶಸಮರ್ಚಕಾಃ ।
ಬಿಲ್ವಪತ್ರಾದಿಭಿಸ್ಸಮ್ಯಕ್ತೇ ಸರ್ವೇ ಭಸ್ಮಭೂಷಣಾಃ ॥೧೭॥

ರುದ್ರಾಕ್ಷಹಾರವಲಯತ್ರಿಪುಂಡ್ರಪರಿಶೋಭಿತಾಃ ।
ನಿವಸಂತಿ ಮಹಾಶೈವಾಃ ಪುಷ್ಕರೈಃ ಪುಷ್ಕರೇಶ್ವರಂ ॥೧೮॥

ಸಮರ್ಚಯಂತಿ ನಿಯತಂ ಭಕ್ತ್ಯಾ ಬಿಲ್ವೈಶ್ಚ ಕೋಮಲೈಃ ।
ತತ್ಕತ್ಕಾಲೇನ ದೇವೇಶಿ ಪುಷ್ಕರಂ ಮೇ ಸುರಾಸುರೈಃ ॥೧೯॥

ಸಮಾಗತೋ ಮುದಾ ಯಷ್ಟುಂ ಅಶ್ವಮೇಧೇನ ತತ್ರ ಹಿ ।
ಋಷಿಭಿಸ್ಸಹ ಪತ್ನ್ಯಾ ಚ ದೃಷ್ಟ್ವಾ ನತ್ವಾ ಮಹೇಶ್ವರಂ ॥೨೦॥

॥ ಬ್ರಹ್ಮೋವಾಚ ॥

ಶಂಭೋ ಗಾಥಪತಿರ್ಭವಾನ್ ಪಶುಪತಿರ್ಮೇಧಾಪತಿಸ್ತ್ವಂ ಪತಿಃ
ಸೋಮಸ್ಸೌಮ್ಯಯುತೋ ಮದೀಯಮಧುನಾ ಸೋಮಂ ಪಿಬಸ್ವಾಧ್ವರೇ ।
ಮಹ್ಯಂ ದೇವ ದಯಾಂನಿಧೇಹಿ ಸತತಂ ಶ್ರೀಪುಷ್ಕರೇಶಪ್ರಭೋ
ಪೂರ್ಣಂ ಚ ಶ್ರಿಯಮೀಶ್ವರಪ್ರತಿಪದಂ ಚಾಯುಶ್ಶತಂ ಮೇ ಸ್ತುಹಿ ॥೨೧॥

---

ಲೋಸುಗ ಸತ್ಯಲೋಕಕ್ಕೆ ಹೋದನು. ಆಗ ಅಲ್ಲಿ ಪುಷ್ಕರೇಶ್ವರನನ್ನು ಬಿಲ್ವಪತ್ರಾದಿಗಳಿಂದ ಅರ್ಚನೆಮಾಡಬೇಕೆಂದು ಅನೇಕ ಈಶ್ವರಭಕ್ತರು ಪೂಜಾದ್ರವ್ಯಗಳಿಂದ ಸಿದ್ಧರಾಗಿ ನಿಂತಿದ್ದರು. ॥೧೫-೧೬-೧೭॥

ಅವರೆಲ್ಲರೂ ಭಸ್ಮರುದ್ರಾಕ್ಷಹಾರಗಳಿಂದ ಅಲಂಕೃತರಾಗಿದ್ದರು. ತ್ರಿಪುಂಡ್ರಗಳಿಂದ ಶೋಭಿತರಾಗಿದ್ದರು. ಅನೇಕ ಕಮಲಗಳಿಂದ ಶಿವಲಿಂಗವನ್ನು ಅರ್ಚಿಸಲು ಸಿದ್ಧರಾಗಿದ್ದರು. ಅದೇ ರೀತಿ ದೇವಾಸುರರೆಲ್ಲರೂ ಅಲ್ಲಿಗೆ ಬಂದು ಕಾಲನಿಯಮವನ್ನು ಅನುಸರಿಸಿ ಶಿವಾರಾಧನೆ ಮಾಡತೊಡಗಿದರು. ಅದೆಲ್ಲಾ ಆದ ಮೇಲೆ ಬ್ರಹ್ಮನು ಅಶ್ವಮೇಧಯಾಗಮಾಡಬೇಕೆಂದು ಪತ್ನಿಯೊಡಗೂಡಿ, ಆ ಶಿವಕ್ಷೇತ್ರಕ್ಕೆ ಇಳಿದು ಬಂದನು. ಅಲ್ಲಿ ಪುಷ್ಕರೇಶ ಲಿಂಗವನ್ನು ನೋಡಿ ಅದಕ್ಕೆ ಭಕ್ತಿಯಿಂದೆರಗಿದನು. ॥೧೮-೧೯-೨೦॥

" ಪುಷ್ಕರೇಶಸ್ವಾಮಿಯೇ, ನೀನು ಭಕ್ತರಿಗೆ ಸೌಖ್ಯಪ್ರದನೆನಿಸಿರುವೆ. ಅಜ್ಞಾನಿಗಳಿಗೆಲ್ಲಾ ನೀನೇ ಒಡೆಯನೆನಿಸಿದವನು. ಸೌಮ್ಯಭಾವದಿಂದ ಕೂಡಿ ನಾನು ಈಗ

ವಾಜ್ಯೈಃ ಶಾಂಭವಪುಂಗವಾನ್ ಹಿ ಭಜತೋ ಮಾತ್ವಾವಧೀರ್ದುಷ್ಕೃತಂ
ಮಾರಾತೀರ್ಜಹಿ ರಂಗಯಜ್ಞಮಧುನಾ ರಕ್ಷಾಂಸಿ ನಸ್ಸಂಹರ ।
ಯಾ ಮೇ ಪ್ರಜಾ ಅಮೃತಾಸ್ಸಂತು ಸರ್ವಾಃ ನಾರೀ ನರಾ ಗೋಗಣಾಶ್ಚಾಪಿ
ಶಂಭೋ
ಮೇಷಾಶ್ವಾದಿಪಶೂನ್ನಿವೇದ್ಯ ಭವನೇ ತ್ವತ್ತಃ ಪಶೂನಾಂ ಪತೇ ॥೨೨॥
ಲಬ್ಧ್ವಾಜ್ಞಾಂ ನಿಯುನಜ್ಮಿ ವೇದವಚಸಾ ತ್ವಂ ಮೇಧ್ಯಸತ್ರಾವನಃ ॥೨೩॥
ಇತ್ಥಂ ಮಾಂ ಸ ಶಿವೇ ಸ್ತುತ್ವಾ ಆಜುಹಾವ ಸರಸ್ವತೀಂ ।
ಮಾನಸಸ್ಸರಸಸ್ತಸ್ಮಾತ್ ಬ್ರಹ್ಮಾಹೂತಾ ಸರಸ್ವತೀ ॥೨೪॥

---

ಈ ಯಾಗದಲ್ಲಿ ನಿನ್ನನ್ನು ಉದ್ದೇಶಿಸಿ ಕೊಡುವ ಸೋಮರಸವನ್ನು ಸ್ವೀಕರಿಸುವವನಾಗು. ಪರಶಿವನೇ, ನಿನ್ನ ದಯಾಪಾತ್ರನಾದ ನನಗೆ ಸಂಪೂರ್ಣವಾದ ಆಯುಸ್ಸನ್ನೂ, ಇಷ್ಟಾರ್ಥಸಿದ್ಧಿಯನ್ನೂ, ಶಿವಸಾಯುಜ್ಯವನ್ನೂ ಕರುಣಿಸುವವನಾಗು. ॥೨೧॥

ಮಹಾದೇವನೇ, ಪಶುಪತಿಯೇ, ಈಗ ನಾನು ಮಾಡಲಿರುವ ಅಶ್ವಮೇಧ ಯಜ್ಞದ ಫಲವಾಗಿ ನನ್ನ ದುಷ್ಕೃತ್ಯಗಳನ್ನೆಲ್ಲಾ ಹೋಗಲಾಡಿಸು. ನನ್ನ ಈ ಯಜ್ಞವನ್ನು ಸಾಂಗಗೊಳಿಸು. ಇದಕ್ಕೆ ವಿಘ್ನವಾಗಿ ಬರುವ ದುಷ್ಟರಾಕ್ಷಸರನ್ನೆಲ್ಲಾ ಸಂಹರಿಸು. ನನ್ನಿಂದ ಸೃಷ್ಟವಾಗಿರುವ ಪ್ರಜಾಕೋಟಿಗೆಲ್ಲಾ ಶಾಶ್ವತಸುಖವನ್ನು ಅನುಗ್ರಹಿಸು. ಸ್ತ್ರೀಪುರುಷರು, ಪಶುಪಕ್ಷಿಗಳು, ದನಕರುಗಳು, ಮೊದಲಾದುವುಗಳೆಲ್ಲಾ ನಿನ್ನ ದಯೆಯನ್ನು ಸಂಪಾದಿಸಿ ಸುಖದಿಂದಿರುವಂತೆ ಕರುಣಿಸು. ॥೨೨॥

ಮಹೇಶ್ವರನೇ, ಹೀಗೆ ಮೊದಲು ವೇದವಾಕ್ಯನಿಂದ ನಿನ್ನನ್ನು ಸ್ತುತಿಸಿ ನಿನ್ನ ಅಪ್ಪಣೆಯನ್ನು ಪಡೆದು ನಾನು ಯಾಗಾರಂಭಮಾಡುವೆನು. ಅದನ್ನು ರಕ್ಷಿಸುವ ಭಾರ ನಿನ್ನದು ಎಂದು ಬ್ರಹ್ಮನು ನನ್ನನ್ನು ಬಹುವಾಗಿ ಸ್ತುತಿಸಿ, ತನ್ನ ನಿರ್ಮಲವಾದ ಮನಸ್ಸಿನಿಂದ ಸರಸ್ವತಿಯನ್ನು ಆಹ್ವಾನಿಸಿ ಮಾನಸ ಸರೋವರದಿಂದ ನದೀರೂಪವಾಗಿ ಅಲ್ಲಿಗೆ ಬರಲು ಅಪ್ಪಣೆಮಾಡಿದನು. ॥೨೩-೨೪॥

ಪ್ಲಾವಯಾಮಾಸ ತದ್ದೇಶಂ ಪಯೋಭಿಸ್ಸಾಧುಶೀತಲೈಃ ।
ಪುಷ್ಕರಂ ಸಾ ಸಮಾಗತ್ಯ ಗಂಗಯಾ ಸಂಗತಾ ತದಾ ॥೨೫॥

ಸರಸ್ವತ್ಯಾಶ್ಚ ಗಂಗಾಯಾಃ ಸಂಬಂಧೋಽಹ್ಯಭವತ್ತದಾ ।
ಬ್ರಾಹ್ಮಣೈಶ್ಚ ಮಹೇಶಾನಿ ಋತ್ವಿಗ್ಭಿಸ್ಸ ಪಿತಾಮಹಃ ॥೨೬॥

ದೀಕ್ಷಿತಸ್ಸಹ ಪತ್ನ್ಯಾ ಚ ವಿಷ್ಣ್ವಾದಿಸುರಸತ್ತಮೈಃ ।
ಮುಕ್ತಸ್ಸತುರಗಸ್ತಸ್ಯ ಪೃಥಿವೀಂ ಸಂಚಚಾರ ಚ ॥೨೭॥

ಪುನಃ ಕಾಲೇ ತದಾ ದೇವಿ ಪ್ರವರ್ಗ್ಯೈರ್ಜುಹುವುರ್ದ್ವಿಜಾಃ ।
ಸಂಚಿತೋಽಗ್ನಿರ್ದ್ವಿಜೈಸ್ತಸ್ಯ ಸಹಿರಣ್ಯೇಽಷ್ಟಕೋಽಂಬಿಕೇ ॥೨೮॥

ಸ್ವಾದ್ವನ್ನೋ ವಾ ಸಮಾಯುಕ್ತೋ ನಾನಾಶ್ಚರ್ಯಕಲೋಽಭವತ್ ।
ಭುಂಜತಾಂ ವಿಪ್ರಸಂಘಾನಾಂ ನಾನಾಭಕ್ಷ್ಯಸಮನ್ವಿತಂ ॥೨೯॥

ನಾಸೀದತೋ ಮಹೇಶಾನಿ ತತ್ರ ಹೃಷ್ಟೋ ಭವಜ್ಜನಃ ।
ವೇದಘೋಷೋ ದ್ವಿಜಾನಾಂ ಹಿ ನಾನಾವಾದ್ಯರವೋ ಮಹಾನ್॥೩೦॥

---

ಆದೇರೀತಿ ಸರಸ್ವತಿಯು ಗುಪ್ತಗಾಮಿನಿಯಾಗಿ ಬಂದು ಅಲ್ಲಿ ಗಂಗಾನದಿಯೊಡನೆ ಸೇರಿದಳು. ಅಂತಹ ಪವಿತ್ರೋದಕದಿಂದ ಆ ಪುಷ್ಕರಕ್ಷೇತ್ರವನ್ನೆಲ್ಲಾ ಸಾರಿಸಿ ಅನೇಕ ಬ್ರಾಹ್ಮಣರನ್ನೂ ಋತ್ವಿಕ್ಕುಗಳನ್ನೂ ಸಹಾಯಕ್ಕೆ ತೆಗೆದುಕೊಂಡು ಬ್ರಹ್ಮನು ಸತ್ರಾರಂಭಮಾಡಿದನು. ॥೨೫-೨೬॥

ಆಗಲೇ ಬಂದ ವಿಷ್ಣ್ವಾದಿ ಸಕಲ ದೇವತೆಗಳ ಎದುರಿನಲ್ಲಿ ಪತ್ನಿಯೊಡನೆ ಯಾಗದೀಕ್ಷೆಯನ್ನು ವಹಿಸಿದನು. ಕೂಡಲೇ ಎಲ್ಲರೂ ಸೇರಿ ಯಾಗದಕುದುರೆಯನ್ನು ವಿಧಿವತ್ತಾಗಿ ಭೂಮಂಡಲಸಂಚಾರಾರ್ಥವಾಗಿ ಬಿಟ್ಟರು. ಅನಂತರ ಪ್ರವರ್ಗ್ಯ (ಯಾಗವಿಶೇಷ) ವೆಂಬ ಮಂತ್ರದಿಂದ ಅಗ್ನಿಯಲ್ಲಿ ಹೋಮಕಾರ್ಯವನ್ನು ನೆರವೇರಿಸಿ ಬ್ರಾಹ್ಮಣರಿಗೆಲ್ಲಾ ಹಿರಣ್ಯದಾನಾದಿ ಸಕಲ ದಾನಗಳನ್ನೂ ನೆರವೇರಿಸಿದರು. ॥೨೭-೨೮॥

ಬ್ರಾಹ್ಮಣರ ಗುಂಪಿಗೆ ಮೃಷ್ಟಾನ್ನಸಂತರ್ಪಣೆಯು ನೆರವೇರಿತು. ನಾನಾ ಭಕ್ಷ್ಯಭೋಜ್ಯಗಳಿಂದಲೂ ಭೂರಿದಕ್ಷಿಣೆಯಿಂದಲೂ ಅಲ್ಲಿ ನೆರೆದಿದ್ದವರೆಲ್ಲಾ ಸಂತೋಷ

ಮೃದಂಗದುಂದುಭಿರವೈರ್ನನೃತುಶ್ಚಾಪ್ಸರೋವರಾಃ ।
ವಿದ್ಯಾಧರಾಃ ಕಿಂಪುರುಷಾಃ ನಾರದಾದ್ಯಾ ಮಹರ್ಷಯಃ ॥೩೧॥

ಸರ್ವೇ ಸಮಾಗತಾಸ್ತತ್ರ ಪಿತಾಮಹಮುಖೋತ್ಸವಂ ।
ಯೂಪಾಸ್ತಥೋಚ್ಛ್ರಿತಾಸ್ಸರ್ವೇ ಹಿರಣ್ಯಸ್ರಾವಿಣಃ ಶಿವೇ ॥೩೨॥

ತತೋಽಶ್ವಃ ಪ್ರಾವಿಶತ್ಪತ್ನೀ ತಸ್ಮಿನ್ ಕರ್ಮಣಿ ನಾಗತಾ ।
ಮಂಡಯಂತಿ ಸ್ವಕಾಂಗಾನಿ ದೇವಪತ್ನೀಭಿರಾದರಾತ್ ॥೩೩॥

ವಿಲಂಬಿತಾಯಾಂ ಸಾವಿತ್ರ್ಯಾಮಾಜುಹಾವಾತ್ರಿರಾದರಾತ್ ॥೩೪॥

॥ ಅತ್ರಿರುವಾಚ ॥

ಪತ್ನೀವಾನ್ ವೇಧಸೋಽಸ್ಯಾದ್ಯ ಯಜ್ಞೋಽಯಂ ಭವಿತಾ ತ್ವಯಾ ।
ಕಿಂ ವಿಲಂಬೇನ ಸಾವಿತ್ರಿ ಮಾ ತೇ ಭೂತ್ಕಾಲವಿಪ್ಲವಃ ॥೩೫॥

---

ಪಟ್ಟರು. ಬ್ರಾಹ್ಮಣರ ವೇದಘೋಷ, ನಾನಾ ವಾದ್ಯಘೋಷ ಇವು ಆ ಯಾಗ ಮಂಟಪವನ್ನು ಮತ್ತಷ್ಟು ಶೋಭಾಯಮಾನವನ್ನಾಗಿ ಮಾಡಿದ್ದುವು. ॥೨೯-೩೦॥

ಅಪ್ಸರಸ್ತ್ರೀಯರು ಮೃದಂಗವಾದ್ಯಾದಿಗಳೊಡಗೂಡಿ ನರ್ತನಮಾಡಿದರು. ವಿದ್ಯಾಧರರೂ, ಕಿಂಪುರುಷರೂ, ನಾರದಾದಿ ಮಹರ್ಷಿಗಳೂ ದೇವರ ನಾಮಗಳನ್ನು ಹಾಡಿದರು. ಹಾಗೆ ಸಕಲ ದೇವತೆಗಳೂ ಬ್ರಹ್ಮನ ಯಾಗಶಾಲೆಗೆ ಬಂದು ನೆರೆದರು. ಆಗ ಹಿರಣ್ಯಗರ್ಭನಾದ ಬ್ರಹ್ಮನು ಹಿರಣ್ಯವರ್ಣವನ್ನು ಸುರಿಸುವಂತಹ ಯೂಪಸ್ತಂಭ ವನ್ನು ರಚಿಸಿದನು. ॥೩೧-೩೨॥

ಒಡನೆಯೇ ಕುದುರೆಯೂ ಯಾಗಮಂಟಪಕ್ಕೆ ಬಂದಿತು. ಆದರೆ ಪತ್ನಿಯಾದ ಸಾವಿತ್ರಿಯು ಮಾತ್ರ ತಾನು ದೇವತಾಸ್ತ್ರೀಯರೊಡಗೂಡಿ ಅಲಂಕಾರಮಾಡಿಸಿ ಕೊಳ್ಳುವುದರಲ್ಲಿ ನಿರತಳಾಗಿದ್ದುದರಿಂದ ಮಂಟಪಕ್ಕೆ ಬರಲು ಸಾವಕಾಶಮಾಡಿದಳು. ಒಡನೆಯೇ ಅಧ್ವರ್ಯುವಾಗಿದ್ದ ಅತ್ರಿಮಹರ್ಷಿಯೇ ಅಲ್ಲಿಗೆ ಹೋಗಿ ಹೀಗೆಂದನು. ॥೩೩-೩೪॥

"ಸಾವಿತ್ರಿಯೇ, ಬ್ರಹ್ಮನು ಪತ್ನೀಸಮೇತನಾಗಿ ಮಾಡುವ ಈ ಯಜ್ಞಕ್ಕೆ ನೀನು ಸಾವಕಾಶಮಾಡುತ್ತಿರುವೆ. ಇದು ನ್ಯಾಯವಲ್ಲ. ನಿನ್ನಿಂದ ಕಾಲವು ಮಿಂಚಿ ಹೋಗುತ್ತಿರುವುದು. ಎಂದು ಹೇಳಿದ ಅತ್ರಿಯ ಮಾತುಗಳನ್ನು ಕೇಳಿ ಸಾವಿತ್ರಿಯು

ಇತ್ಥಂ ಸಾತ್ರಿವಚಶ್ಶ್ರುತ್ವಾ ಯಯೌ ತತ್ಸದಸುಂಬಿಕೇ ।
ಏತಸ್ಮಿನ್ನಂತರೇ ಕ್ರುದ್ಧಃ ಶಕ್ರಮಾಹೂಯ ಸೋಽಜ್ವಲಃ ॥೩೬॥

॥ ಬ್ರಹ್ಮೋವಾಚ ॥

ಗಚ್ಛ ಗಚ್ಛಾಧುನಾ ಶಕ್ರ ಪತ್ನೀಮನ್ಯಾಂ ನಿಯೋಜಯ ।
ಅಂಗತ್ವಂ ವೇದವಾಕ್ಯೇನ ಅಪರಾಹ್ವಯಜಾಮಿತಾಂ ॥೩೭॥

ಶ್ರುತ್ವಾ ಸ ಬ್ರಹ್ಮಣೋ ವಾಕ್ಯಂ ಶಕ್ರೋ ಗಚ್ಛನ್ನಿರೀಕ್ಷಿತುಂ ।
ತತ್ರಾಭೀರಸುತಾಂ ಕಾಂಚಿಜ್ಜಗೃಹೇ ರೂಪಸಂಯುತಾಂ ॥೩೮॥

ಭೂಷಣೈರ್ಮಂಡಯಿತ್ವಾ ತಾಂ ತತ್ಸದಸ್ಸಮುಪಾನಯತ್ ।
ಅಧ್ವರ್ಯುರ್ಮತ್ರಿಂ ಕ್ರೋಧೇನ ದೀಕ್ಷಯೇತಿ ತದಾವಿಧಿಃ ॥೩೯॥

ಪ್ರಾಹ ಸಂಶ್ರುಣ್ವತಾಂ ತತ್ರ ಸುರಾಣಾಂ ತದ್ದ್ವಿಜೋಽಬ್ರವೀತ್ ॥೪೦॥

---

ಸದಸ್ಸಿಗೆ ಬರಲು ಸಿದ್ಧಳಾಗುತ್ತಿದ್ದಳು. ಅಷ್ಟರಲ್ಲಿಯೇ ಬ್ರಹ್ಮನು ಪತ್ನಿಯ ಮೇಲೆ ಕೋಪಿಸಿಕೊಂಡು ಇಂದ್ರನನ್ನು ಕರೆದು ಹೀಗೆ ಅಪ್ಪಣೆಯಿತ್ತನು. ॥೩೫-೩೬॥

'ಎಲೈ ಇಂದ್ರನೇ, ನನ್ನ ಪತ್ನಿಯು ಬಹು ಸಾವಕಾಶಮಾಡುತ್ತಿರುವಳು. ನೀನು ಈಗಲೇ ಹೋಗಿ ಬೇರೆ ಕನ್ಯೆಯೊಬ್ಬಳನ್ನು ಹುಡುಕಿ, ವೇದವಾಕ್ಯದಿಂದ ಪತ್ನಿಯನ್ನಾಗಿಸಿ ಇಲ್ಲಿಗೆ ಕರೆದುಕೊಂಡು ಬಾ. ಅವಳೊಡನೆಯೇ ಈಗ ಯಾಗ ಮಾಡುವೆನು' ಹೀಗೆ ಅಪ್ಪಣೆಯಿತ್ತ ಬ್ರಹ್ಮನಿಗೆ ವಂದಿಸಿ ಇಂದ್ರನು ಅದರಂತೆಯೇ ಕನ್ಯಾನ್ವೇಷಣಮಾಡಿ ರೂಪಲಕ್ಷಣಯುಕ್ತಳಾದ ಒಬ್ಬಳು ಶೂದ್ರಸ್ತ್ರೀಯನ್ನು ಕರೆತಂದನು. ॥೩೭-೩೮॥

ಆಕೆಯನ್ನು ಅಲಂಕಾರಗಳಿಂದ ಅಲಂಕರಿಸಿ ಸಭೆಗೆ ಕರೆತಂದನು. ಬ್ರಹ್ಮನು ಅಧ್ವರ್ಯುವಾಗಿ ಕುಳಿತಿದ್ದ ಅತ್ರಿಮಹರ್ಷಿಯನ್ನು ನೋಡಿ ಇವಳಿಗೆ ಯಾಗದೀಕ್ಷೆಯನ್ನು ಕೊಡು ಎಂದು ಹೇಳಲು ಆಗ ಆ ಅತ್ರಿಮಹರ್ಷಿಯು ಹೀಗೆಂದನು. ॥೩೯-೪೦॥

|| ಅತ್ರಿರುವಾಚ ||

ಮಾ ತೇನ್ಯಥಾದ್ಯ ಕರ್ತವ್ಯಂ ಸಾವಿತ್ರ್ಯಪಿ ಸಮಾಗತಾ ।
ದೀಕ್ಷಿತಸ್ಯ ನ ವೈ ಮನ್ಯುರಿತಿ ವೇದಾನುಶಾಸನಂ ||೪೧||

ತದತ್ರಿಣೋ ವಚೋ ಬ್ರಹ್ಮಾ ಸಮುಲ್ಲಂಘ್ಯಾತ್ರಿಮಾಹ ಹಿ ।
ದೀಕ್ಷಯಸ್ವೇತಿ ಚ ಪುನಃ ಕ್ರೋಧಾಮರ್ಷಸಮನ್ವಿತಃ ||೪೨||

ತಾಮತ್ರಿರ್ದೀಕ್ಷಯಾಮಾಸ ಬ್ರಹ್ಮಣೋನುಮತೇಸ್ತದಾ ।
ತಯಾ ಸ ತುರಗೋ ವಿಪ್ರೈಸ್ತತ್ರ ಸಂವೇಶಿತಶ್ಶಿವೇ ||೪೩||

ಏತಸ್ಮಿನ್ನಂತರೇ ಕ್ರುದ್ಧಾ ಸಾವಿತ್ರೀ ತಂ ಸುರೇಶ್ವರಂ ।
ಶಶಾಪ ಕುಪಿತಾ ದೇವಮತ್ರಿಂ ಬ್ರಹ್ಮಾಣಮೇವ ಚ ||೪೪||

|| ಸಾವಿತ್ರ್ಯುವಾಚ ||

ಪರಾಜಿತೋ ದೈತ್ಯವರ್ಗೈರ್ನಿಶ್ರೀಕಶ್ಚ ಭವಿಷ್ಯಸಿ ।
ನಹುಷೋ ಭವಿತಾ ಶಕ್ರಃ ಶಚೀ ತಮುಪತಿಷ್ಠತಾಂ ||೪೫||

---

"ಪರಬ್ರಹ್ಮನೇ, ಹಾಗೆ ಮಾಡಬೇಡ. ಇಗೋ ಸಾವಿತ್ರಿಯು ಇನ್ನೇನು ಬಂದಳು. ಯಾಗದಲ್ಲಿ ದೀಕ್ಷಿತನಾದವನಿಗೆ ಕೋಪವು ತಕ್ಕುದಲ್ಲ. ಹಾಗೆಂದು ವೇದಗಳು ಸಾರುತ್ತಿವೆ" ಎಂದು ಎಷ್ಟು ಹೇಳಿದರೂ ಕೇಳದೆ ಬ್ರಹ್ಮನು ಕೋಪದಿಂದ "ನೀನು ದೀಕ್ಷೆಕೊಡು" ಎಂದು ಗರ್ಜಿಸಿದನು. ||೪೧-೪೨||.

ಆಗ ಬ್ರಹ್ಮನ ಅನುಮತಿಯತೆ ಅತ್ರಿಮಹರ್ಷಿಯು ಆ ಶೂದ್ರಸ್ತ್ರೀಗೆ ದೀಕ್ಷೆಯನ್ನು ಕೊಡಿಸಿದನು. ಆಕೆಯೇ ಆ ಅಶ್ವಮೇಧದ ಕುದುರೆಯನ್ನು ತಂದು ಯೂಪಸ್ತಂಭಕ್ಕೆ ಕಟ್ಟಿದಳು. ಅಷ್ಟರಲ್ಲಿಯೇ ಸಾವಿತ್ರೀದೇವಿಯು ಅಲ್ಲಿಗೆ ಬಂದು ಅದನ್ನೆಲ್ಲಾ ನೋಡಿ ಕುಪಿತಳಾಗಿ, ಇಂದ್ರನನ್ನೂ ಬ್ರಹ್ಮನನ್ನೂ ಅತ್ರಿಯನ್ನೂ ಏಕಕಾಲದಲ್ಲಿ ಶಪಿಸಿದಳು. ||೪೩-೪೪||

ಮೊದಲು ಇಂದ್ರನನ್ನು ಕುರಿತು "ಎಲೈ ಇಂದ್ರನೇ, ನೀನು ರಾಕ್ಷಸರಿಂದ ಪರಾಜಿತನಾಗಿ, ರಾಜ್ಯಭ್ರಷ್ಟನಾಗು. ನಹುಷನೆಂಬುವನು ಇಂದ್ರನಾಗಿ ನಿನ್ನ

ತದಾತ್ರಿಂ ಸಾ ಶಶಾಪೈವಂ ಸಾವಿತ್ರೀ ಕ್ರೋಧಮೂರ್ಛಿತಾ ॥೪೬॥

॥ ಸಾವಿತ್ರ್ಯುವಾಚ ॥

ಆತ್ರೇಯಾ ಬ್ರಾಹ್ಮಣಾಸ್ಸರ್ವೇ ನಿಶ್ರೀಕಾಶ್ಛೋಂಛಜೀವಿನಃ ।
ಅತ್ರೇ ತ್ವಂ ಭವಿತಾ ಪುತ್ರೈರ್ವಿಹೀನೋ ಮಮ ವಾಕ್ಯತಃ ॥೪೭॥

ಅಸಂಘಾತೋ ದ್ವಿಜಾನಾಂ ಹಿ ಭೂಯಾದೇವ ನ ಸಂಶಯಃ ।
ಸ್ವಭರ್ತಾರಂ ತದಾ ಪ್ರಾಹ ಕ್ರೋಧಾಚ್ಛ ಕ್ಷೂಂಷಿ ವರ್ತಯನ್ ॥೪೮॥

ನ ಪ್ರತಿಷ್ಠಾ ಭವೇದ್ಧಾತಸ್ತವ ಲೋಕೇಷು ದುರ್ಹೃದಃ ।
ಹರೇಣ ತೇದ್ಯದುಷ್ಟೇನ ಶಿರಶ್ಛಿನ್ನಂ ಭವಿಷ್ಯತಿ ॥೪೯॥

ಸಾವಿತ್ರೀ ವಿಷ್ಣುಮಾಹೇತ್ಥಂ ದಹ್ಯಮಾನಾ ಸುರಾಸುರಾನ್ ।
ಯಸ್ಮಾದಾಭೀರಕನ್ಯಾಂ ತಾಂ ದೃಷ್ಟ್ವೋಪೇಕ್ಷಿತವಾನಸಿ ॥೫೦॥

---

ಹೆಂಡತಿಯನ್ನು ಆತನು ಪರಿಗ್ರಹಿಸಲಿ'' ಎಂದು ಶಾಪವಿತ್ತಳು. ಹಾಗೆಯೇ ಅತ್ಯಂತ ಕೋಪದಿಂದ ಅತ್ರಿಯನ್ನೂ ಹೀಗೆ ಶಪಿಸಿದಳು. ||೪೫-೪೬||

" ಎಲೈ ಅತ್ರಿಯೇ, ನಿನ್ನ ವಂಶದ (ಗೋತ್ರದ) ಬ್ರಾಹ್ಮಣರೆಲ್ಲಾ ತೇಜಸ್ಸಿಲ್ಲದವರಾಗಿ ಉಂಛವೃತ್ತಿಯಿಂದ ಜೀವಿಸುವ ದರಿದ್ರರಾಗಲಿ. ನೀನೂ ಸಹ ಪುತ್ರಹೀನನಾಗಿ ದುಃಖಪಡು" ಹಾಗೆ ಅತ್ರಿಯನ್ನು ಶಪಿಸಿ, ಅತ್ಯಂತ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ತನ್ನ ಪತಿಯ ಕಡೆಗೆ ತಿರುಗಿದಳು. ||೪೭-೪೮||

ಒಡನೆಯೇ ಕೋಪದಿಂದ " ಧಾತೃವೇ, ನಿನಗೆ ಭೂಲೋಕದಲ್ಲಿ ಪೂಜ್ಯತೆಯು ದೊರಕದೇ ಹೋಗಲಿ. ಕಾರಣಾಂತರದಿಂದ ಕೋಪಿಸಿಕೊಂಡ ಹರನು ನಿನ್ನ ತಲೆಯನ್ನು ಕಡಿದು ಹಾಕುವನು '' ಎಂದು ಶಾಪವಿತ್ತಳು. ಹಾಗೆಯೇ ವಿಷ್ಣುವಿನ ಕಡೆಗೆ ತಿರುಗಿ " ವಿಷ್ಣುವೇ ನೀನು ಪ್ರತ್ಯಕ್ಷವಾಗಿದ್ದೂ, ಶೂದ್ರಸ್ತ್ರೀಯ ಸಂಬಂಧಕ್ಕೆ ಅನುಮತಿಯಿತ್ತಿರುವೆ. ||೪೯-೫೦||

ತಸ್ಮಾದಾಭೀರವಂಶಸ್ತ್ವಂ ಭವಿತಾ ದ್ವಾಪರೇ ಭವಾನ್ ।
ಚಾಕ್ಷುಷೇ ಭವಿತಾ ಯಜ್ಞೇ ದಕ್ಷಸ್ಯ ಸುಮನೋಹರಃ ॥೫೧॥

ತತ್ರ ರುದ್ರೇಣ ದೇವಾಶ್ಚ ಋಷಯೋಽಪಿ ಸುದಂಡಿತಾಃ ।
ಭವಂತಿ ಮಮ ಶಾಪೇನ ನಾತ್ರ ಕಾರ್ಯಾ ವಿಚಾರಣಾ ॥೫೨॥

ಇತ್ಯುವಾಚ ಚ ಸಾವಿತ್ರೀ ತಸ್ಥೌ ಚಿತ್ರಾರ್ಪಿತೈವ ಸಾ ।
ಸರ್ವೇ ಶಪ್ತಾಃ ಸುಸಂತಪ್ತಾಃ ಖಿನ್ನಾ ಬ್ರಹ್ಮಸದೋ ಗತಾಃ ॥೫೩॥

ತಾಂ ವಿಷ್ಣುಸ್ಸಾಂತ್ವಯಾಮಾಸ ಸರ್ವೇಷಾಂ ಸುರಸಂಸದಿ ॥೫೪॥

॥ ವಿಷ್ಣುರುವಾಚ ॥

ನೈವಂ ಶಪ ವಿಶಾಲಾಕ್ಷೀ ಭರ್ತಾ ತೇ ಪದ್ಮಸಂಭವಃ ।
ಭರ್ತುಃ ಪ್ರಿಯಹಿತೇ ಯುಕ್ತಾ ಯಾ ಸಾವಿತ್ರೀ ಪತಿವ್ರತಾ ॥೫೫॥

ತ್ವಂ ವೇತ್ಸಿ ಸರ್ವಧರ್ಮಾಣಾಂ ಸಾರಂ ವೇತ್ಸಿ ನ ಸಂಶಯಃ ।
ತ್ವಯಾ ಸಹಾಯಂ ಕಲ್ಯಾಣಿ ದೀಕ್ಷಾಂ ಪಾರಮಿಕಾಂ ಗತಃ ॥೫೬॥

---

ಆದಕ್ಕಾಗಿ ನೀನು ದ್ವಾಪರಯುಗದಲ್ಲಿ ಶೂದ್ರ (ಗೊಲ್ಲರ) ಜಾತಿಯಲ್ಲಿ ಜನಿಸುವವನಾಗು. ಚಾಕ್ಷುಷಮನ್ವಂತರದಲ್ಲಿ ನಡೆಯುವ ದಕ್ಷನ ಯಜ್ಞದಲ್ಲಿ ಇಲ್ಲಿ ನೆರೆದಿರುವ ದೇವತೆಗಳಿಗೂ ಋಷಿಗಳಿಗೂ ರುದ್ರದೇವನು ಬಂದು ಶಿಕ್ಷೆಯನ್ನು ವಿಧಿಸುವನು. ಈ ನನ್ನ ಶಾಪವು ಎಂದೂ ನಿಮಗೆ ತಪ್ಪಲಾರದು ಎಂದು ಸಮಷ್ಟಿಯಾಗಿ ಅಲ್ಲಿದ್ದವರನ್ನೆಲ್ಲಾ ಏಕಕಾಲದಲ್ಲಿಯೇ ಶಪಿಸಿದಳು. ॥೫೧-೫೨॥

ಹಾಗೆ ಶಾಪವಿತ್ತು ಸಾವಿತ್ರಿಯು ಚಿತ್ರದ ಬೊಂಬೆಯಂತೆ ಸುಮ್ಮನೇ ಕ್ರೋಧಾವಿಷ್ಟಳಾಗಿ ನಿಂತುಬಿಟ್ಟಳು. ಆ ಸಭೆಯಲ್ಲಿದ್ದವರೆಲ್ಲರೂ ಶಾಪಗ್ರಸ್ತರಾಗಿ ವ್ಯಥೆಪಡುತ್ತಿದ್ದರು. ಆಗ ಸಭೆಯಲ್ಲಿ ವಿಷ್ಣುವು ಎದ್ದು ಸಾವಿತ್ರಿಯನ್ನು ಹೀಗೆ ಸಮಾಧಾನಪಡಿಸಿದನು. ॥೫೩-೫೪॥

ಎಲೌ ಸಾವಿತ್ರೀದೇವಿಯೇ, ಈ ರೀತಿ ನೀನು ಪತಿಯಾದ ಬ್ರಹ್ಮನಿಗೆ ಶಾಪಕೊಡಬಾರದು. ಪತಿವ್ರತೆಯಾದ ನೀನೇ ಪತಿಗೆ ಹೀಗೆ ಶಾಪಕೊಡುವುದು ಯುಕ್ತವಲ್ಲ. ನೀನು ಸಕಲ ಧರ್ಮಗಳ ಸಾರವನ್ನೆಲ್ಲಾ ಗ್ರಹಿಸಿರುವವಳು. ನಿನ್ನಿಂದಲೇ ಬ್ರಹ್ಮನು ಈ ಯಜ್ಞದೀಕ್ಷೆಯನ್ನು ಸಮಾಪ್ತಿಗೊಳಿಸಬೇಕಾಗಿದೆ. ॥೫೫-೫೬॥

ಅಶ್ವಮೇಧೋ ಮಹಾಯಜ್ಞಃ ಪುಷ್ಕರೇಷು ಪ್ರವರ್ತತೇ ।
ಪ್ರಿಯೋತ್ಯಂತಂ ಮಹೇಶಸ್ಯ ಋತ್ವಿಗ್ಭಿಶ್ಚ ಯಥಾವಿಧಿ ॥೫೭॥

ಧರ್ಮಪತ್ನೀ ತಥಾ ಜ್ಯೇಷ್ಠಾ ಸರ್ವಧರ್ಮಪ್ರವರ್ತಿನೀ ।
ತವೇಯಂ ಸಖಿ ಭಾವೇನ ವರ್ತತಾಂ ಲೋಕಸುಂದರೀ ॥೫೮॥

ಇತ್ಯುಕ್ತ್ವಾ ತಾಂ ತದಾ ಕನ್ಯಾಂ ಗಾಯತ್ರೀ ಪಾದಯೋರ್ನತಾಂ ।
ವಿಷ್ಣುವಾಕ್ಯಗತಾಮರ್ಷಾ ಸಾವಿತ್ರೀ ಪರಿಷಸ್ವಜೇ ॥೫೯॥

ಬ್ರಹ್ಮಣೇ ಚ ವರೋ ದತ್ತಃ ಸಾವಿತ್ರ್ಯಾ ಸಾಂತ್ವಿತೋ ವಿಧಿಃ ॥೬೦॥

॥ ಸಾವಿತ್ರ್ಯುವಾಚ ॥

ಯಚ್ಛಿನ್ನಂ ತೇ ಭವೇಚ್ಛೀರ್ಷಂ ಭೂಯಾಲ್ಲೋಕಹಿತಾಯ ಹಿ ।
ಕಾರ್ತಿಕ್ಯಾಂ ಪುಷ್ಕರೇ ಬ್ರಹ್ಮನ್ ತವ ಭೂಯಾನ್ಮಹೋತ್ಸವಃ ॥೬೧॥

ಇತ್ಯುಕ್ತ್ವಾ ಪ್ರವಿಶಚ್ಛಾಲಾಂ ತಯಾ ಚಾಭೀರಕನ್ಯಯಾ ।
ಪುಷ್ಕರೇಷ್ವಭವದ್ಯಜ್ಞಃ ಸ್ವಾದ್ವನ್ನೋ ಬಹುದಕ್ಷಿಣಃ ॥೬೨॥

---

ಲೋಕಸುಂದರಿಯೇ, ಈಗ ಈಶ್ವರನಿಗೆ ಬಹುಪ್ರಿಯವೆನಿಸಿರುವ ಈ ಪುಷ್ಕರ ಕ್ಷೇತ್ರದಲ್ಲಿ ಅಶ್ವಮೇಧಮಹಾಯಜ್ಞವು ಅನೇಕ ಋತ್ವಿಕ್ಕುಗಳಿಂದ ಕೂಡಿ ಶಿವ ಪ್ರೀತ್ಯರ್ಥವಾಗಿ ನಡೆಯುತ್ತಲಿದೆ. ನೀನು ಬ್ರಹ್ಮನಿಗೆ ಸರ್ವಧರ್ಮಪ್ರವರ್ತಕಳಾದ ಜ್ಯೇಷ್ಠಪತ್ನಿಯೆನಿಸಿರುವೆ. ಇಂತಹ ನೀನು ಸ್ನೇಹಭಾವದಿಂದ ಈ ಕಾರ್ಯವನ್ನು ಸುಗಮವಾಗಿ ಆಗಗೊಳಿಸು. ॥೫೭-೫೮॥

ಹೀಗೆ ಹೇಳಿ ಆ ಶೂದ್ರಕನ್ಯೆಯನ್ನು ಅವಳ ಪಾದಗಳಿಗೆ ನಮಸ್ಕರಿಸುವಂತೆ ಹೇಳಿದನು. ಇವುಗಳಿಂದ ಸಮಾಧಾನಚಿತ್ತಳಾದ ಸಾವಿತ್ರಿಯು ಆ ಶೂದ್ರಸ್ತ್ರೀ ಯನ್ನು ಆಲಿಂಗಿಸಿಕೊಂಡು, ಬ್ರಹ್ಮನನ್ನು ಈ ರೀತಿಯಾದ ವರದಿಂದ ಸಮಾಧಾನ ಪಡಿಸಿದಳು. ॥೫೯-೬೦॥

" ಬ್ರಹ್ಮನೇ, ಒಂದುವೇಳೆ ನಿನ್ನ ತಲೆಯನ್ನು ಈಶ್ವರನು ಕಡಿದರೂ, ಆ ಸಮಯವನ್ನೇ ಒಂದು ದೊಡ್ಡ ಉತ್ಸವಕಾಲವನ್ನಾಗಿ ಮಾಡಿಕೊಂಡು ನಿನ್ನ ಪೂಜೆಯು ಕಾರ್ತಿಕಮಾಸದಲ್ಲಿ ಈ ಪುಷ್ಕರಕ್ಷೇತ್ರದಲ್ಲಿ ನಡೆಯಲಿ " ಎಂದು

॥ ಈಶ್ವರ ಉವಾಚ ॥

ತತಸ್ಸ ವವೃಧೇ ಯಜ್ಞೋ ಬ್ರಹ್ಮಣಃ ಪರಮೇಷ್ಠಿನಃ ।
ತಸ್ಮಿನ್‌ಕ್ಷೇತ್ರೇ ಪುಷ್ಕರೇ ಚ ಯೇ ಸ್ಥಿತಾಃ ಶಾಂಭವೋತ್ತಮಾಃ॥೬೩॥

ನೈವ ಸಂಪೂಜಿತಾಸ್ತೇನ ದಾನಮಾನಾಸನಾದಿಭಿಃ ।
ತೇ ಪುಷ್ಕರೇಶಮಾಸಾದ್ಯ ತುಷ್ಟುವುಶ್ಶರಣಾಗತಾಃ ॥೬೪॥

॥ ಶಾಂಭವಾ ಊಚುಃ ॥

ಶ್ರೀಪುಷ್ಕರೇಶ ತವ ಭಾಗವತಾನ್ಯತೋಽಸ್ಮಾನ್
ವಿಪ್ರಾಂಶ್ಚ ಶಾಂಭವವರಾನಪಹಾಯ ದರ್ಪಾತ್ ।
ವಿಶ್ವೇಶ್ವರಸ್ತವ ಮಹಾನತಿಪ್ರಾರ್ಚಕಾಂಶ್ಚ
ಬ್ರಹ್ಮಾಪ್ಯಯಂ ಧನಗಣೈಃ ಸ್ವಹಿತೋರುಗೋಭಿಃ ॥೬೫॥

ವಿಪ್ರಾನ್ ಸಮರ್ಚಯತಿ ನೈವ ಭವತ್ಪ್ರಪನ್ನಾನ್
ತಸ್ಮಾನ್ಮಹೇಶಶರಣಾನಪಹಾಯ ಕಷ್ಟಂ ।

---

ವರವಿತ್ತು ಆ ಶೂದ್ರಕನ್ಯೆಯೊಡನೆ ತಾನೂ ಸಹ ಯಾಗಶಾಲೆಯನ್ನು ಪ್ರವೇಶಿಸಿ ಬಹು ಭೂರಿದಕ್ಷಿಣೆಗಳಿಂದಲೂ ಮೃಷ್ಟಾನ್ನ ಸಂತರ್ಪಣೆಗಳಿಂದಲೂ ನಡೆಯ ಬೇಕಾದ ಯಾಗವನ್ನು ವಿಜೃಂಭಣೆಯಿಂದ ಮುಂದುವರಿಸಿ ಮುಗಿಸಿದಳು.॥೬೧-೬೨॥

ಆದರೆ ಅಷ್ಟು ದೊಡ್ಡದಾಗಿ ಎಲ್ಲರಿಗೂ ಸತ್ಕಾರಾದಿಗಳು ನಡೆದರೂ, ಆ ಪುಷ್ಕರಕ್ಷೇತ್ರದಲ್ಲಿದ್ದ ಈಶ್ವರಭಕ್ತರನ್ನು ಯಾವರೀತಿಯಲ್ಲಿಯೂ ಯಾರೂ ಆದರಿಸ ಲಿಲ್ಲ. ಅದನ್ನು ನೋಡಿ ಆ ಶೈವರೆಲ್ಲರೂ ವ್ಯಥೆಗೊಂಡು ಪುಷ್ಕರೇಶ್ವರನ ಸನ್ನಿಧಿಗೆ ಬಂದು ಈರೀತಿ ಸ್ತೋತ್ರಮಾಡಿದರು. ॥೬೩-೬೪॥

"ಮಹೇಶ್ವರನೇ, ನಿನ್ನ ಪ್ರಿಯಭಕ್ತರಾದ ನಾವು ಎಷ್ಟೇ ನಿಯಮದಿಂ ದಿದ್ದಾಗ್ಯೂ ಈ ಬ್ರಹ್ಮನು ನಮ್ಮನ್ನು ಬಿಟ್ಟು ಎಲ್ಲಾ ವಿಪ್ರರನ್ನೂ ಧನಕನಕಾದಿಗಳಿಂದ ತೃಪ್ತಿಪಡಿಸಿರುವನು. ನಿನ್ನ ಅತ್ಯಂತ ಪ್ರಿಯಭಕ್ತರಾದ ನಮ್ಮನ್ನೆಲ್ಲಾ ತಿರಸ್ಕರಿಸಿ ತನ್ನ ಅಹಂಕಾರವನ್ನು ಇಲ್ಲಿ ತೋರ್ಪಡಿಸಿರುವನು. ॥೬೫॥

ತ್ವತ್ಪಾದಸಂಸೇವನಜಾತಹರ್ಷಾನ್
ಕಿಂ ಭಾಗ್ಯಜಾತನಿಕರೈಶ್ಚ ವಿನಶ್ವರೈರ್ನಃ ॥೬೬॥

ತದ್ಗರ್ವಪರ್ವತಮಹಾಕುಲಿಶಸ್ತ್ವಮೀಶ ।
ಶಂಭೋ ಸದಾ ಶಾಂಭವದಾನತುಷ್ಟಃ ॥೬೭॥

ಇತಿ ವಿಪ್ರೈಸ್ತದಾ ದೇವಿ ಸ್ತುತೋಽಹಂ ಭಸ್ಮಭೂಷಣಃ ।
ದಿಗಂಬರಃ ಶೂಲಕರಃ ಪಾದುಕಾವಿಲಸತ್ಪರಃ ॥೬೮॥

ಬ್ರಾಹ್ಮಂ ಕಪಾಲಮಾದಾಯ ತಚ್ಚ ಯಜ್ಞಸದಂ ಗತಃ ।
ನಿವಾರಿತಾ ಬ್ರಹ್ಮಗಣೈಃ ಸದಾಹಮತಿರಸ್ಕೃತಃ ॥೬೯॥

ಹುಂಕಾರೇಣಾಥ ತಾನ್ ಸರ್ವಾನ್ ಭರ್ತ್ಸನೇತ್ರಯುಗೇನ ಚ ।
ಮತ್ತದ್ವಿರದಸಂಕಾಶೋ ಗತಸ್ತತ್ಸುರಸಂಸದಂ ॥೭೦॥

---

ನಿನ್ನ ಅತ್ಯಂತ ಭಕ್ತರೆನಿಸಿದ ನಮ್ಮನ್ನೂ, ನಿನ್ನ ಪಾದಸೇವನದಿಂದ ಆನಂದವನ್ನನುಭವಿಸುವ ಶೈವರನ್ನೂ ಬ್ರಹ್ಮನು ಸಂಪೂರ್ಣವಾಗಿ ತಿರಸ್ಕರಿಸಿರುವನು. ಒಂದು ವೇಳೆ ಆ ಬ್ರಹ್ಮನು ನಮಗೆ ದಕ್ಷಿಣೆ ಮೊದಲಾದುವುಗಳನ್ನೂ ಕೊಡದಿದ್ದರೆ ಅದರಿಂದ ನಮಗೆ ವ್ಯಥೆಯಿಲ್ಲ. ಐಶ್ವರ್ಯವೆಲ್ಲಾ ನಶ್ವರವಾದವುಗಳು. ಅದಕ್ಕಾಗಿ ನಾವು ವ್ಯಥೆಪಡುವುದಿಲ್ಲ. ಅವನ ತಿರಸ್ಕಾರಕ್ಕೆ ದುಃಖಿಸುವೆವು. ॥೬೬॥

ಮಹಾದೇವನೇ, ಆ ಬ್ರಹ್ಮನ ಗರ್ವವೆಂಬ ಪರ್ವತವನ್ನು ಭೇದಿಸುವ ವಜ್ರಾಯುಧವು ನೀನೇ ಅಲ್ಲವೆ? ನಿನ್ನ ಭಕ್ತರಿಗೆ ಬರುವ ಮರ್ಯಾದೆಯಿಂದ ನೀನು ತೃಪ್ತಿಪಡುವವನಲ್ಲವೆ! ಎಂದು ಆ ಶಾಂಭವರೆಲ್ಲರೂ ನನ್ನನ್ನು ವಿನಯಪೂರ್ವಕವಾಗಿ ಪ್ರಾರ್ಥಿಸಿದರು. ಆಗ ನಾನು (ಶಂಕರನು) ಅವರಿಂದ ಸ್ತುತಿಸಲ್ಪಟ್ಟವನಾಗಿ ಒಡನೆಯೇ ಭಸ್ಮಭೂಷಣವಾದ ದಿಗಂಬರ ವೇಷದಿಂದ ತ್ರಿಶೂಲವನ್ನು ಕೈಯ್ಯಲ್ಲಿ ಹಿಡಿದು ಪಾದುಕಾಧಾರಿಯಾಗಿ ಆ ಯಾಗಶಾಲೆಗೆ ಪ್ರಯಾಣಮಾಡಿದೆನು. ॥೬೭-೬೮॥

ಆಗ ಬ್ರಹ್ಮಗಣಗಳು ಎಷ್ಟೇ ತಡೆದರೂ ಒಂದನ್ನೂ ಲಕ್ಷ್ಯಮಾಡದೆ ಬ್ರಹ್ಮಕಪಾಲವನ್ನು ಹಿಡಿದು, ಹುಂಕಾರಮಾಡುತ್ತಾ, ಅದರಿಂದ ಎಲ್ಲರನ್ನೂ ನಡುಗುವಂತೆ ಮಾಡಿ, ಮದ್ದಾನೆಯಂತೆ ಆ ದೇವಸಭೆಯನ್ನು ಹೊಕ್ಕೆನು. ॥೬೯-೭೦॥

ಕೇಚಿದೂಚುರಹೋನ್ಮತ್ತಃ ಕ್ವಾಯಂ ಯಜ್ಞಃ ಸಧೃಕ್ವತು ।
ನಗ್ನಃ ಸದಾ ಶುಚಿಃ ಕಷ್ಟಂ ಕಪಾಲೋದ್ಯತ್ಕರಃ ಕಥಂ ॥೭೧॥

ಶ್ವಭಿಸ್ಸಮಾವೃತಃ ಪಾಪಃ ಹಾ ಕಷ್ಟಂ ಕಿಮುಪಸ್ಥಿತಂ ।
ವಿಪ್ರಾಣಾಂ ವದತಾಂ ತತ್ರ ಸುರಾಣಾಂ ಚ ಮಹೇಶ್ವರಿ ॥೭೨॥

ತದನಾದೃತ್ಯ ವಾಕ್ಯಾನಿ ಬ್ರಹ್ಮಾಣಂ ಪ್ರತ್ಯುಪಸ್ಥಿತಃ ।
ಋತ್ವಿಗ್ಭಿಶ್ಚ ಸದಸ್ಯೈಶ್ಚ ವಿಷ್ಣ್ವಾದಿವಿಬುಧೈರ್ವೃತಂ ॥೭೩॥

ತಮವೋಚಂ ಮಹಾದೇವಿ ಧರ್ಮ್ಯಮುಪ್ರಾಕೃತಂ ವಚಃ ॥೭೪॥

॥ ಈಶ್ವರ ಉವಾಚ ॥

ಅಹೋ ಧರ್ಮ್ಯೋ ಮಹಾಯಜ್ಞಃ ಪುಷ್ಕರೇ ತು ಪ್ರವರ್ತತೇ ।
ಸ್ವಾದ್ವನ್ನಶ್ಚಾಶ್ವಮೇಧೋಯಂ ಬ್ರಾಹ್ಮ್ಯೋಯಂ ಬಹುದಕ್ಷಿಣಃ ॥೭೫॥

ಶ್ರುತ್ವಾಹಂ ಕ್ಷುಧಯಾವಿಷ್ಟೋ ಭೋಕ್ತುಮಭ್ಯಾಗತಃ ಸದಂ ।
ಇತಿ ಮದ್ವಚನಂ ಶ್ರುತ್ವಾ ಬ್ರಹ್ಮಾ ಪ್ರಾಹ ತದಾಂಬಿಕೇ ॥೭೬॥

---

ಆಗ ಕೆಲವರು ನನ್ನ ಸ್ವರೂಪವನ್ನರಿಯದೆ “ ಇದು ಏನು ? ಯಾವನೋ ದಿಗಂಬರನಾಗಿ ಕಪಾಲವನ್ನು ಕೈಯ್ಯಲ್ಲಿ ಹಿಡಿದು ನಾಯಿಗಳಿಂದ ಕೂಡಿಕೊಂಡು ಯಾಗಸಭೆಯನ್ನು ಪ್ರವೇಶಿಸಿರುವನು. ಅಯ್ಯೋ ಅನಾಹುತವಾಯಿತಲ್ಲಾ ! ಸಭೆಯು ಅಪವಿತ್ರವಾಯಿತಲ್ಲಾ ! ” ಎಂದು ಕೂಗಿಕೊಂಡರು. ॥೭೧-೭೨॥

ಆ ಮಾತುಗಳನ್ನು ಲಕ್ಷ್ಯಮಾಡದೆ ನಾನು ಮುಂದುವರಿದು ವಿಷ್ಣ್ವಾದಿ ದೇವತೆಗಳಿಂದಲೂ, ಋತ್ವಿಕ್ಕುಗಳಿಂದಲೂ ಕೂಡಿ ಕುಳಿತಿರುವ ಬ್ರಹ್ಮನ ಸಮೀಪಕ್ಕೆ ಹೋದೆನು. ಒಡನೆಯೇ ಅವನನ್ನು ಕುರಿತು ಧರ್ಮಭೂಯಿಷ್ಠವೂ, ಯುಕ್ತಿಯುಕ್ತವೂ ಆದ ಕೆಲವು ಮಾತುಗಳನ್ನಾಡಿದೆನು. ॥೭೩॥

“ ಬ್ರಹ್ಮದೇವನೇ, ಈ ಪವಿತ್ರವಾದ ಪುಷ್ಕರಕ್ಷೇತ್ರದಲ್ಲಿ ಅನ್ನದಾನಾದಿಗಳಿಂದ ದೊಡ್ಡ ಯಾಗವನ್ನು ನೀನು ನಡೆಸುತ್ತಿರುವೆಯೆಂದು ನಾನು ಕೇಳಿದೆನು. ನಾನಾದರೋ ಬಹಳವಾದ ಹಸಿವಿನಿಂದ ಬಳಲಿರುವೆನು. ಭೋಜನ ಮಾಡುವ ಅಪೇಕ್ಷೆಯು ನನಗೆ ಬಹಳವಾಗಿದೆ. ನನಗೆ ಭೋಜನ ಮಾಡಿಸು ” ಎಂದು ಕೇಳಿಕೊಂಡೆನು. ಆ ನನ್ನ ಮಾತನ್ನು ಕೇಳಿ ಬ್ರಹ್ಮನು ಹೀಗೆಂದನು. ॥೭೫-೭೬॥

॥ ಬ್ರಹ್ಮೋವಾಚ ॥

ಯಜ್ಞೇಯಂ ಕ್ಷ್ನಿಚ್ಛ್ರಮೈರ್ಹೀನೋ ಯಥಾ ಜೋಷಂ ಜುಷಸ್ವ ಮೇ।
ಅನ್ನಂ ಚ ವಿವಿಧಂ ಭಿಕ್ಷೋ ವಾಸಾಂಸ್ಯುಚ್ಚಾವಚಾನಿ ಚ ॥೭೭॥

ತಚ್ಛ್ರುತ್ವಾ ಬ್ರಹ್ಮಣೋ ವಾಕ್ಯಂ ಶ್ರುತ್ವಾ ಹರ್ಷಾತ್ಪುನರ್ವಿಧಿಂ।
ಅವೋಚಂ ಶ್ರುಣ್ವತಾಂ ತೇಷಾಂ ವಿಪ್ರಾಣಾಂ ಸಸುರೈಸ್ಸಹ ॥೭೮॥

ಸರಸ್ವತ್ಯಾಮಥ ಸ್ನಾತ್ವಾ ದೃಷ್ಟ್ವಾ ಶ್ರೀಪುಷ್ಕರೇಶ್ವರಂ।
ಪಶ್ಚಾದ್ಭೋಕ್ಷ್ಯೇದ್ಯ ನಿಯಮೋ ಮಯಾ ಸ್ವೀಕೃತ ಏವ ಹಿ ॥೭೯॥

ಯಾಸ್ಯಾಮೀತಿ ತದಾ ವೇಧಾಃ ಕಪಾಲಂ ಸ್ಥಾಪಿತಂ ಮಯಾ।
ತಥೈವಾಂತರ್ಹಿತಃ ಸೌಮ್ಯೇ ಸುರಾಣಾಂ ತತ್ರ ಪಶ್ಯತಾಂ ॥೮೦॥

ವಿಸ್ಮಿತಾಶ್ಚಾಭವನ್ ಸರ್ವೇ ಭೂಸುರಾಸ್ತೇ ಸುರೈಸ್ಸಹ।
ಇದಮೂಚುರ್ವಚಸ್ಸರ್ವೇ ಕಪಾಲಂ ಸ್ಥಾಪಿತಂ ಕ್ವನು ॥೮೧॥

ಅಶುಚ್ಯಂತರ್ಬಹಿರ್ವೇದ್ಯಾಂ ತ್ಯಜಂತು ಪರಿಚಾರಕಾಃ।
ಇತ್ಥಂ ಶ್ರುತ್ವಾ ತತ್ಕಪಾಲಂ ತ್ಯಕ್ತ್ವಂ ಬ್ರಹ್ಮಗಣೈಶ್ಶಿವೇ ॥೮೨॥

---

"ಎಲೈ ಭಿಕ್ಷುವೇ, ಈ ನನ್ನ ಯಾಗದಲ್ಲಿ ಯಾರಿಗೂ ಹಸಿವು ಬಾಯಾರಿಕೆಗಳಿರಕೂಡದು. ನಾನಾ ವಿಧವಾದ ಅನ್ನವೂ, ಭಕ್ಷ್ಯಭೋಜ್ಯಗಳೂ ರಾಶಿರಾಶಿಯಾಗಿ ಬಿದ್ದಿರುವುವು. ವಸ್ತ್ರರಾಶಿಯಂತೂ ಹೇರಳವಾಗಿರುವುದು. ನೀನು ಸಂತೋಷದಿಂದ ಏನನ್ನು ಬೇಕಾದರೂ ಸ್ವೀಕರಿಸು" ಎಂದು ಹೇಳಿದನು. ಅದನ್ನು ಕೇಳಿ ಸಕಲರೆದುರಿನಲ್ಲಿಯೂ ಈ ರೀತಿಯಾಗಿ ಮಾತನಾಡಿದೆನು. ॥೭೭-೭೮॥

ಬ್ರಹ್ಮದೇವನೇ, ನಾನು ಈಗಲೇ ಹೋಗಿ ಸರಸ್ವತೀ ನದಿಯಲ್ಲಿ ಸ್ನಾನ ಮಾಡಿ, ಪುಷ್ಕರೇಶನನ್ನು ದರ್ಶನಮಾಡಿ ಅನಂತರ ಭೋಜನಮಾಡುವೆನು. ಇದು ನನ್ನ ನಿತ್ಯನಿಯಮವಾಗಿದೆ. ಎಂದು ಹೇಳಿ, ಆ ನನ್ನ ಕಪಾಲವನ್ನು ಅಲ್ಲಿಯೇ ಇಟ್ಟು ಎಲ್ಲರೂ ನೋಡುತ್ತಿರುವಂತೆಯೇ ಮಾಯವಾದೆನು. ॥೭೯-೮೦॥

ಅಲ್ಲಿದ್ದವರೆಲ್ಲರೂ ಆಶ್ಚರ್ಯಚಕಿತರಾದರು. ಮತ್ತು ಅಶುಚಿಭೂತವಾದ ಕಪಾಲವೊಂದು ಇಲ್ಲಿಯೇ ನಿಂತುಹೋಯಿತಲ್ಲಾ ಎಂದು ಎಲ್ಲರೂ ಯೋಚಿಸುತ್ತಾ, ಅಲ್ಲಿದ್ದ

ಪುನಸ್ತದ್ವೃಶಂ ತತ್ರ ತಥೈವ ಸಮುವಸ್ಥಿತಂ ।
ಶ್ರಾಂತಾಸ್ತೇ ಬ್ರಹ್ಮಪುರುಷಾಃ ಕಪಾಲವಹನಾದುಮೇ ॥೮೩॥

ನಾಂತೋ ನ ದೃಶ್ಯತೇ ತತ್ರ ಕಪಾಲಾನಾಂ ಚ ರಾಶಯಃ ।
ಏವಂ ತೇ ವಿಸ್ಮಯಾವಿಷ್ಟಾಃ ಹರಿಬ್ರಹ್ಮಾದಯಸ್ತದಾ ॥೮೪॥

॥ ಬ್ರಹ್ಮಾದ್ಯಾ ಊಚುಃ ॥

ದೃಷ್ಟ್ವಾಶ್ಚರ್ಯಕರಂ ತಸ್ಯ ಮಹೇಶಸ್ಯ ವಿಚೇಷ್ಟಿತಂ ।
ತುಷ್ಟುವುರ್ಮಾಂ ತದಾ ದೇವಿ ಬ್ರಹ್ಮಾದ್ಯಾ ವಿಬುಧಾಸ್ತದಾ ॥೮೫॥

ತ್ವಂ ರಾಜಾ ಮಖಭಾಜ್ಮಹೇಶ ಸತತಂ ತ್ವಾಮಾಹ್ವಯಂತೇಧ್ವರೇ
ಸಾಮ್ನಾ ಋಗ್ಗಣಯಾಜುಷೈಃ ಪ್ರತಿಪದಂ ರುದ್ರೋಗ್ನಿರಿತ್ಯಾಹ ಹಿ ।
ತ್ವನ್ಮಾಯಾಧಿಗಮೇನ ಮೋಹಮತಯಃ ಸರ್ವಾಮರೈಸ್ತುಲ್ಯತಾಂ
ದೃಷ್ಟ್ವಾ ತ್ವಾಮಧಿಗಮ್ಯ ಕಷ್ಟಮಖಿಲಂ ತ್ಯಕ್ತ್ವಾ ಪ್ರಮೋದಾಮಹೇ ॥೮೬॥

---

ಪರಿಚಾರಕರನ್ನು ಕರೆದು ಈ ಕಪಾಲವನ್ನು ತೆಗೆದುಕೊಂಡು ದೂರ ಬಿಸಾಕಿರಿ ಎಂದು ಆಪ್ಪಣೆ ಮಾಡಿದರು. ಅದರಂತೆಯೇ ಬ್ರಹ್ಮಗಣಗಳಲ್ಲಿ ಕೆಲವರು ಅಲ್ಲಿಗೆ ಬಂದು ಕಪಾಲವನ್ನು ತೆಗೆದುಕೊಂಡು ಹೋದರು. ॥೮೧-೮೨॥

ಮತ್ತೊಂದು ಅಂತಹದೇ ಒಂದು ಕಪಾಲವು ಅಲ್ಲಿ ಪುನಃ ಕಾಣಿಸಿಕೊಂಡಿತು. ಅದನ್ನೂ ಒಯ್ದರು. ಮತ್ತೊಂದು ಗೋಚರಿಸಿತು. ಅದನ್ನೂ ಎಸೆದರು. ಹೀಗೆ ಅನೇಕ ಕಪಾಲಗಳ ರಾಶಿಗಳು ಮೇಲೆ ಮೇಲೆ ಕಂಡುಬಂದವು. ಅದರಿಂದ ಎಲ್ಲರೂ ಆಶ್ಚರ್ಯಭರಿತರಾದರು. ॥೮೪॥

ಆಗ ಅವರಿಗೆ ಇದು ಈಶ್ವರನ ಚಮತ್ಕಾರವೆಂಬುದು ಅರ್ಥವಾಯಿತು. ಒಡನೆಯೇ ಬ್ರಹ್ಮಾದಿ ಸಕಲ ದೇವತೆಗಳೆಲ್ಲರೂ ನನ್ನನ್ನು ಈರೀತಿ ಸ್ತುತಿಸಿದರು. ॥೮೫॥

" ಮಹೇಶ್ವರನೇ, ನೀನೇ, ಈ ಸಮಸ್ತ ಯಾಗಗಳಿಗೂ ಅಧಿಪತಿಯೆನಿಸಿರುವೆ. ನಿನ್ನನ್ನು ಋಗ್ಯಜುಸ್ಸಾಮವೇದಗಳೂ ಸರ್ವದಾ ಸ್ತುತಿಸುತ್ತಿರುವುವು. ರುದ್ರನಾಮಕವಾದ ಅಗ್ನಿಯೇ ಇಲ್ಲಿಯ ಮುಖ್ಯದೇವತೆ. ನಿನ್ನ ಮಾಯೆಗೆ ಸಿಲುಗಿ ನಾವೆಲ್ಲರೂ

ಅಹೋ ದೇವ ಮುಗ್ಧೇಂದುಚೂಡ ಪ್ರಸೀದ
ನಿಷಾದಾದಿ ಬರ್ಹಿಸ್ತ್ವಮೀಶಾನ ತುಷ್ಟಃ ।
ಪ್ರಕೃಷ್ಟಂ ಮಹಾಕೃಷ್ಟಜಾಲಂ ಮಮಾಘಂ
ಹರಸ್ವೇಶ ಶಂಭೋ ಪ್ರಸೀದ ಪ್ರಸೀದ ॥೮೭॥

ಯಯಾ ಮಾಯಯಾ ಮೋಹಮಾಯಾಂತಿ ಸರ್ವೇ
ತವಾಂಕೇ ನಿಷಣ್ಣಾ ಭವಾನೀತಿ ಗೀತಾ ।
ಭವಾನ್ ಮಾಯಿಮಾಯೀ ಭವಾನಾದಿಕರ್ತಾ
ಭವತ್ತೋಽಖಿಲಂ ಜಾತಮೇತದ್ವಿಚಿತ್ರಂ ॥೮೮॥

ಇತ್ಥಂ ಸ್ತುತೋಽಹಂ ದೇವೇಶಿ ತೈಸ್ತದಾ ದರ್ಶಿತಂ ಮಯಾ
ರೂಪಂ ತ್ರಿಲೋಚನಂ ಸಾಂಬಂ ನೀಲಗ್ರೀವಂ ತ್ರಿಶೂಲಿನಂ ॥೮೯॥

ಪುನಃ ಪ್ರಣೇಮುರ್ಮಾಂ ದೃಷ್ಟ್ವಾ ಬ್ರಹ್ಮಾವಿಷ್ಣುಸುರಾ ದ್ವಿಜಾಃ ।
ತದಾ ಪ್ರಾಂಜಲಯಸ್ಸರ್ವೇ ಮಾಂ ಸ್ತುವಂತಿ ತದಾಂಬಿಕೇ ॥೯೦॥

---

ಒಂದೇ ರೀತಿಯಿಂದ ಅಜ್ಞಾನಿಗಳೆನಿಸಿರುವೆವು. ನಿನ್ನ ಸ್ವರೂಪವನ್ನು ತಿಳಿಯದೇ ಹೋದೆವು. ಮಹಾದೇವನೇ, ಇಂತಹ ಮಹಾಮಹಿಮನಾದ ನಿನ್ನನ್ನು ನೋಡಿ ನಾವೆಲ್ಲರೂ ಈಗ ಧನ್ಯರಾದೆವು. ನಮ್ಮ ಕಷ್ಟಗಳೆಲ್ಲಾ ಸಂಪೂರ್ಣವಾಗಿ ನಾಶವಾದವು.॥೮೬॥

ಮಹಾದೇವನೇ, ಶಂಭುವೇ, ಚಂದ್ರಶೇಖರನೇ, ನಮಗೆ ಪ್ರಸನ್ನನಾಗು. ನಿಷಾದರೇ ಮೊದಲಾದವರಿಂದ ನೆರವೇರಿಸಲ್ಪಡುವ ಪೂಜೆಯಿಂದಲೂ ನೀನು ಪ್ರಸನ್ನನಾಗುವೆಯಲ್ಲವೆ! ಅನೇಕ ಜನ್ಮಗಳಿಂದ ಕೂಡಿಹಾಕಿಕೊಂಡಿರುವ ನಮ್ಮ ಅಜ್ಞಾನರಾಶಿಯನ್ನೆಲ್ಲಾ ಹೋಗಲಾಡಿಸುವವನಾಗು. ॥೮೭॥

ಲೋಕವನ್ನೆಲ್ಲಾ ಸೃಷ್ಟಿಸುವ ಮತ್ತು ಪ್ರಪಂಚರೂಪಕ್ಕೆ ನಿನ್ನನ್ನು ಎಳೆದೊಯ್ಯುವ ಮಾಯೆಯು ಭವಾನೀರೂಪದಿಂದ ನಿನ್ನ ತೊಡೆಯಮೇಲೆಯೇ ಇರುವಳಲ್ಲವೆ! ಆದರೆ ನೀನು ಮಾತ್ರ ಆ ಮಾಯೆಗೆ ಅಧೀನನಾಗುವನಲ್ಲ. ಅಂತಹ ಮಾಯೆಯನ್ನು ಸೃಜಿಸುವನೂ ನೀನೇ ಆಗಿರುವೆ. ನಿನ್ನಿಂದಲೇ ಈ ಜಗತ್ತು. ಆದರೆ ನೀನು ಮಾತ್ರ ಜಗತ್ತಿಗೆ ಒಳಪಡುವುದಿಲ್ಲವಲ್ಲವೆ!" ॥೮೮॥

ಹೀಗೆ ಸ್ತುತಿಸಲ್ಪಟ್ಟ ನಾನು ಅವರಿಗೆ ಪ್ರಸನ್ನನಾಗಿ, ತ್ರಿಲೋಚನಗಳಿಂದಲೂ, ನಾಗಭೂಷಣಗಳಿಂದಲೂ ಅಲಂಕೃತವಾದ ನನ್ನ ರೂಪವನ್ನು ತೋರ್ಪಡಿಸಿದೆನು.

॥ ಬ್ರಹ್ಮಾದ್ಯಾ ಊಚುಃ ॥

ವಿಶ್ವಾಧಿಕಸ್ತ್ವಂ ಭಗವಾನ್ ಮಹರ್ಷಿ
ರ್ಹಿರಣ್ಯಗರ್ಭಂ ಜಾಯಮಾನಂ ಚ ಪಶ್ಯೇಃ ।
ಸ ತ್ವಂ ದೇವಃ ಶುಭಯಾ ಮಾಂ ಹಿ ಬುದ್ಧ್ಯಾ
ನಿಯೋಜಯಸ್ವಾಶು ಮಹೇಶ ಶಂಭೋ ॥೯೧॥

ತ್ವತ್ತಃ ಪರಂ ನಾಪರಮಸ್ತಿ ಕಿಂಚಿತ್
ತ್ವತ್ತೋ ನಾಣೀಯಾನ್ ನ ಸಮುಶ್ಚಾಧಿಕೋ ವಾ ।
ವೃಕ್ಷ ಇವ ತ್ವಂ ಸ್ಥಾಣುರೀಶಶ್ಚ ನಿತ್ಯೋ
ತ್ವಯಾ ಪೂರ್ಣಂ ಜಗದೇತದ್ವಿಚಿತ್ರಂ ॥೯೨॥

ನ ಜಾನಂತಿ ವೇದಾ ನ ಜಾನಂತಿ ದೇವಾ
ನ ಜಾನಂತಿ ತ್ವಾಮಾತ್ಮಸಂಸ್ಥಂ ಮಹೇಶಂ ।

---

ಆಗ ಅವರೆಲ್ಲರೂ ನನ್ನನ್ನು ಬಹಳ ಭಯಭಕ್ತಿಗಳಿಂದ ಈ ರೀತಿಯಾಗಿ ಸ್ತುತಿಸಿದರು. ॥೮೯-೯೦॥

"ಮಹೇಶ್ವರನೇ, ನೀನು ವಿಶ್ವಾಧಿಕನು. ನಿನ್ನಿಂದಲೇ ಸಕಲಲೋಕಗಳೂ ಉತ್ಪನ್ನವಾಗಿರುವುವು. ಹಿರಣ್ಯಗರ್ಭನ ರೂಪದಿಂದ ಜಗತ್ತನ್ನು ಸೃಷ್ಟಿಮಾಡುತ್ತಿರುವೆ. ಶುಭಕರವಾದ ಬುದ್ಧಿಯನ್ನು ನಮಗೆ ದಯಪಾಲಿಸುತ್ತಾ ಮಹಾದೇವನೇ, ನಮ್ಮನ್ನು ಸರ್ವದಾ ರಕ್ಷಿಸು. ॥೯೧॥

ಪ್ರಪಂಚವೇ ನೀನು. ನಿನ್ನನ್ನು ಬಿಟ್ಟು ಬೇರೆ ಪ್ರಪಂಚವಿಲ್ಲ. ನಿನಗಿಂತ ಅಣುರೂಪಿಯಾದದ್ದೂ, ನಿನಗಿಂತ ಮಹತ್ಪರಿಮಾಣವುಳ್ಳದುದೂ, ಅಥವಾ ನಿನಗೆ ಸಮನಾದುದೂ ಲೋಕದಲ್ಲಿ ಮತ್ತೊಂದು ವಸ್ತುವಿಲ್ಲ. ಒಂದು ಮರದಂತೆ ಅಚಲವಾಗಿ ನಿಂತು ಸ್ಥಾಣುವೆನಿಸಿಕೊಂಡಿರುವೆ. ಜಗತ್ತಿನಲ್ಲಿ ಎಂದೂ ಯಾರಿಗೂ ಸಿಲುಕದೆ ನಿತ್ಯನಾಗಿರುವೆ. ಈ ಜಗತ್ತೆಲ್ಲಾ ನಿನ್ನಿಂದಲೇ ಪರಿಪೂರ್ಣವಾಗಿರುವುದು. ಆದರಿಂದಲೇ ನೀನು ವಿಚಿತ್ರರೂಪನಂತೆ ಜನರಿಗೆ ತೋರಿಬರುತ್ತಿರುವೆ. ॥೯೨॥

ವೇದಗಳಾಗಲಿ, ದೇವತೆಗಳಾಗಲಿ ಆತ್ಮರೂಪಿಯಾಗಿ ಸರ್ವರ ಹೃದಯಾಂತರಾಳದಲ್ಲಿ ಅಡಗಿರುವ ನಿನ್ನನ್ನು ಸರಿಯಾಗಿ ತಿಳಿಯಲಾರವು. ಅನೇಕ ಪುಣ್ಯಕರ್ಮ

ಪ್ರಕೃಷ್ಟೋರುಪುಣ್ಯೈರ್ಯದಿ ತ್ಯಕ್ತಮೋಹೋ
ಭವತ್ಪಾದಸಕ್ತೋ ಭವೇತ್ತಸ್ಯ ಸಿದ್ಧಿಃ ॥೯೩॥

॥ ಈಶ್ವರ ಉವಾಚ ॥

ದೇವಿ ತೇಷಾಂ ಸ್ತುತಿಂ ಶ್ರುತ್ವಾ ತಾನವೋಚಂ ಪ್ರಹರ್ಷಿತಃ ॥೯೪॥

ಪುಷ್ಕರೇ ಸಂಸ್ಥಿತಾ ವಿಪ್ರಾಃ ಮತ್ಪಾದಶರಣಾಸ್ತಥಾ ।
ಕ್ಷೇತ್ರಿಣೋ ಭವತಾ ಪೂಜ್ಯಾಸ್ತಥಾನ್ಯೇಪಿ ಮುನೀಶ್ವರಾಃ ॥೯೫॥

ಕ್ಷೇತ್ರಮಾಗತ್ಯ ಯಃ ಕೋಪಿ ಕ್ಷೇತ್ರಸ್ಥಾನ್ ಪೂಜಯೇತ್ಪುರಾ ।
ಅಥಾಸ್ಯಾನರ್ಚಯೇತ್ಪಶ್ಚಾದ್ಯದಿ ಪಾತ್ರಾನಹೋ ವಿಧೇ ॥೯೬॥

ಮದ್ಭಕ್ತಾ ಶಾಂಭವಶ್ರೇಷ್ಠಾ ಭಕ್ತಪೂಜಾ ಮಮೇಷ್ಟದಾ ।
ವಿಹಾಯ ಭಕ್ತಾನ್ ಮಯ್ಯೇವ ಅನ್ಯಂ ಸಂಪೂಜಯಂತಿ ಯೇ॥೯೭

ತೈಃ ಕಷ್ಟಂ ಪ್ರಾಪ್ಯತೇ ಬ್ರಹ್ಮನ್ ಪುಷ್ಕರೇನ್ಯತ್ರ ವಾ ಸದಾ ।
ಪುಷ್ಕರೇ ತ್ವತ್ಕೃತೋ ಯಜ್ಞಃ ಸ್ವಾದ್ವನ್ನೋ ಬಹುದಕ್ಷಿಣಃ ॥೯೮॥

---

ಗಳಿಂದ ಅಜ್ಞಾನವನ್ನು ಕಳೆದುಕೊಂಡವನು ಮಾತ್ರ ನಿನ್ನ ಪಾದಸೇವೆಯಿಂದ ಸಕಲಸಿದ್ಧಿಗಳನ್ನೂ ಪಡೆಯುವನು.” ॥೯೩॥

ಎಲೌ ದೇವಿಯೇ ಹಾಗೆ ಅವರು ಸ್ತುತಿಸಿದುದನ್ನು ಕೇಳಿ ಹರ್ಷಿತನಾಗಿ ಅವರನ್ನು ಕುರಿತು ಹೀಗೆಂದನು. ॥೯೪॥

“ಎಲೈ ಬ್ರಹ್ಮಾದಿಗಳೇ, ಈ ಪುಷ್ಕರಕ್ಷೇತ್ರದಲ್ಲಿ ವಾಸಿಸತಕ್ಕವರೆಲ್ಲಾ ನನ್ನ ಭಕ್ತರು. ಆದ್ದರಿಂದ ಮೊದಲು ಈ ಕ್ಷೇತ್ರವಾಸಿಗಳನ್ನು ಪೂಜಿಸಬೇಕು. ಯಾವನು ಈ ಕ್ಷೇತ್ರಕ್ಕೆ ಬಂದು, ಸತ್ಪಾತ್ರರೆನಿಸಿದ ಈ ಕ್ಷೇತ್ರವಾಸಿಗಳನ್ನು ಮರ್ಯಾದಿಸದೆ, ಇತರರಿಗೆ ಸಂಭಾವನೆಕೊಡುವನೋ ಅವನು ಅನೇಕ ಕಷ್ಟಗಳನ್ನು ಅನುಭವಿಸುವನು. ॥೯೫-೯೬॥

ನನ್ನ ಭಕ್ತರು ನನಗೆ ಬಹಳ ಪ್ರಿಯತಮರು. ಅವರು ಮಾಡುವ ಪೂಜೆಯಿಂದಲೇ ನಾನು ತೃಪ್ತಿಗೊಳ್ಳುವೆನು. ಅಂತಹವರನ್ನು ಸತ್ಕರಿಸದೆ ಮಾಡಿದ ಯಾವ ಕರ್ಮವಾಗಲಿ ನನಗೆ ತೃಪ್ತಿಯನ್ನುಂಟುಮಾಡಲಾರದು. ಅಲ್ಲದೆ ಅಂತಹ

ಮತ್ಪ್ರೀತಿಜನಕೋ ಜಾತಃ ಫಲಂ ತೇಷ್ಟಗುಣಂ ಭವೇತ್ ।
ಯಸ್ತು ಪುಷ್ಕರಮಾಸಾದ್ಯ ನಾನಾಧರ್ಮಗಣಂ ಚರನ್ ॥೯೯॥

ತಸ್ಯಾಷ್ಟಗುಣಿತಂ ಭೂಯಾದಿತಿ ಮೇ ವ್ರತಮಾಹಿತಂ ।
ಏತತ್ಕಪಾಲಾನುಗುಣಂ ಜಾತಾಃ ಪೂರ್ವೇ ಪಿತಾಮಹಾಃ ॥೧೦೦॥

ಸ ಪ್ರಜಾನಿ ವ್ಯತೀತಾನಿ ಮನ್ವಂತರಶತಾನಿ ಚ ।
ಅಸ್ಮಿನ್ ಸಂಸಾರಚಕ್ರೇ ತ್ವಂ ಮಾ ಗರ್ವಂ ವಹ ಪದ್ಮಜ ॥೧೦೧॥

ಪ್ರಣಮ್ಯ ಮಾಂ ತದಾ ಬ್ರಹ್ಮಾ ತಾನ್ವಿಪ್ರಾನ್ ಪೂಜಯತ್ತದಾ ।
ಗೋಭಿರನ್ನೈಶ್ಚ ವಾಸೋಭಿಃ ಶಾಂಭವಾನ್ ಪುಷ್ಕರಸ್ಥಿತಾನ್ ॥೧೦೨॥

ಸ್ನಾನಾರ್ಥಂ ಸರಸಸ್ತಸ್ಮಾತ್ ಆನೀತೇಯಂ ಸರಸ್ವತೀ ।
ಜ್ಯೇಷ್ಠಂ ಪುಷ್ಕರಮಾಸಾದ್ಯ ತರಂಗಾವಳಿಭಾಸುರಾ ॥೧೦೩॥

---

ವರು ಅನೇಕ ತೊಂದರೆಗಳಿಗೆ ಈಡಾಗುವರು. ಆದರೆ ನೀನು ಈ ಪುಷ್ಕರಕ್ಷೇತ್ರದಲ್ಲಿ ಬಹು ಧನವ್ಯಯದಿಂದ ಮಾಡಿದ ಈ ಯಾಗವು ನನಗೆ ಬಹಳ ತೃಪ್ತಿಯನ್ನುಂಟು ಮಾಡಿದೆ. ॥೯೭-೯೮॥

ಇಲ್ಲಿ ನೀನು ಒಂದು ಯಾಗಮಾಡಿದುದರಿಂದ ನಿನಗೆ ಎಂಟು ಯಾಗಗಳ ಫಲವು ದೊರೆತಂತಾಗಿದೆ. ಈ ಪುಷ್ಕರಕ್ಷೇತ್ರದಲ್ಲಿ ಯಾವ ಪುಣ್ಯಕರ್ಮವನ್ನಾಚರಿಸಿದರೂ ಅದು ಅಷ್ಟಗುಣಿತವಾದ ಫಲವನ್ನು ಕೊಡುವುದು. ಈಗ ನಾನಿಟ್ಟಿದ್ದ ಕಪಾಲಸಂಖ್ಯೆ ಯಷ್ಟು ಜನ ಬ್ರಹ್ಮರು ಇಷ್ಟರಲ್ಲಿ ಸೃಷ್ಟಿಕಾರ್ಯದಿಂದ ನಿವೃತ್ತರಾಗಿದ್ದಾರೆ. ॥೯೯-೧೦೦॥

ಅಷ್ಟೇ ಮನ್ವಂತರಗಳೂ ಕಳೆದಿವೆ. ಈ ಸಂಸಾರ (ಕಾಲ) ಚಕ್ರದಲ್ಲಿ ಹೀಗೆ ಎಷ್ಟೋ ಹೋಗುತ್ತವೆ. ಇದರಿಂದ ನೀನು ಎಂದಿಗೂ ಗರ್ವಪಡಬೇಡ.'' ಎಂದು ಉಪದೇಶಮಾಡಲು ಆಗ ಬ್ರಹ್ಮನು ಎಚ್ಚೆತ್ತು ನನಗೆ ವಿಧವಿಧವಾಗಿ ನಮಸ್ಕರಿಸಿ, ಒಡನೆಯೇ ಆ ಕ್ಷೇತ್ರವಾಸಿಗಳಾದ ನನ್ನ ಭಕ್ತರಿಗೆ ಅನ್ನದಾನವೇ ಮೊದಲಾದ ನಾನಾ ದಾನಗಳನ್ನಿತ್ತು ಅವರನ್ನು ಸಂತೋಷಪಡಿಸಿದನು. ॥೧೦೧-೧೦೨॥

ಹಾಗೆಯೇ ಅಲ್ಲಿರುವ ಒಂದು ಕೊಳಕ್ಕೆ ಸರಸ್ವತೀನದಿಯನ್ನು ಸೇರುವಂತೆ ಅಪ್ಪಣೆಯಿತ್ತೆನು. ಒಡನೆಯೇ ಆ ನದಿಯು ಅಲೆಯುಲೆಯಾಗಿ ಆ ಕೊಳದಲ್ಲಿ ಬಂದು

ತತ್ರಾವಭೃಥಮಾಸಾದ್ಯ ರರಾಜ ಸ ಪಿತಾಮಹಃ ।
ಸಾವಿತ್ರ್ಯಾ ಚೈವ ಗಾಯತ್ರ್ಯಾ ಋತ್ವಿಗ್ಭಿಶ್ಚ ಸುರಾಸುರೈಃ ॥೧೦೪॥
ಪುಷ್ಕರೇಶಂ ಸಮಭ್ಯರ್ಚ್ಯ ಸ್ತೋತ್ರಮೇತಜ್ಜಗಾದ ಹ ॥೧೦೫॥

॥ ಬ್ರಹ್ಮೋವಾಚ ॥

ಯಂ ವಿಭೋದ್ಯ ವಿಮೃಶಾಮಹೇ ಶತಂ
ನಿದಧಾವೋಂಜಲಿಮೌಲಿಜಾಲವ್ರತೈಃ ।
ಅನೇಕವಿಧಿಕಲ್ಪಿತಂ ವರಕಪಾಲಮಾಲಾಧರ
ಹರಸ್ವ ವಿಲಸಚ್ಛೃತಿಪ್ರಭವಪಾಪತಾಪಾಪಹ ॥೧೦೬॥

ಅಖರ್ವಜನಿ ದುರ್ದಶಾಂ ಪ್ರತಿಪದಂ ವಿನಾಶಾಶುಭಂ ।
ಮಹೇಶ ಜನಿಮಾರ್ಜನಾದ್ಭವ ಭವಾದಿ ಬಂಧಂ ಹರಂ ॥೧೦೭॥

॥ ಈಶ್ವರ ಉವಾಚ ॥

ಸ್ತುತ್ವಾ ಮಾಂ ಸ ತದಾ ಬ್ರಹ್ಮಾ ಪ್ರಣಮ್ಯಾಥ ಜಗೌ ಸುರಾನ್॥೧೦೮॥

---

ನಿಂತಿತು. ಅಲ್ಲಿ ಯಜ್ಞಪೂರ್ತಿಸೂಚಕವಾದ ಅವಭೃಥವನ್ನು ನೆರವೇರಿಸಿ, ಬ್ರಹ್ಮನು, ಸಾವಿತ್ರೀ ಗಾಯತ್ರಿಯರೊಡನೆ ಪುಷ್ಕರೇಶ್ವರನಿಗೆ ವಂದಿಸಿ ಈರೀತಿ ನನ್ನನ್ನು ವಿಧ ವಿಧವಾಗಿ ಸ್ತುತಿಸಲಾರಂಭಿಸಿದನು. ॥೧೦೩-೧೦೪-೧೦೫॥

ಮಹಾದೇವನೇ, ನಾವು ನಾನಾರೀತಿಯಲ್ಲಿ ಅನೇಕ ವ್ರತಾದಿಗಳನ್ನಾಚರಿಸುತ್ತಾ ವಿನಯದಿಂದ ಈರೀತಿ ಪ್ರಾರ್ಥಿಸಿಕೊಳ್ಳುವೆವು. ಶ್ರೇಷ್ಠವಾದ ಕಪಾಲ ಮಾಲೆಗಳನ್ನು ಧರಿಸಿ, ಶ್ರುತಿಪ್ರತಿಪಾದ್ಯನಾದ ಮಹೇಶ್ವರನೇ, ನಮಗೆ ಇಲ್ಲಿನವರೆಗೆ ಒದಗಿರುವ ಸಕಲ ಪಾಪಗಳನ್ನೂ ನಾಶಮಾಡಿ ನಮಗೆ ನಿತ್ಯಾನಂದವನ್ನು ಕರುಣಿಸುವವನಾಗು. ॥೧೦೬॥

ಅಸಂಖ್ಯಾತವಾದ ಜನ್ಮಪರಂಪರೆಗಳಿಂದ ಬಂದಿರುವ ಈ ಸಂಸಾರಬಂಧನದಿಂದ ನಮ್ಮನ್ನುದ್ಧರಿಸಿ ಕಾಪಾಡು. ಎಂದು ಬ್ರಹ್ಮನು ಪದೇ ಪದೇ ಪ್ರಾರ್ಥಿಸಿಕೊಂಡನು.

ಪುಷ್ಕರೇ ದುಷ್ಕರೇ ವಾಸಃ ಪುಷ್ಕರೇ ದುಷ್ಕರಂ ತಪಃ ।
ಪುಷ್ಕರೇ ದುಷ್ಕರಂ ದಾನಂ ಪಾತ್ರಂ ತತ್ರ ಸುದುಷ್ಕರಂ ॥೧೦೯॥

ಸರಸ್ವತೀ ಪುಣ್ಯತಮಾ ತದಾಯಾತಾ ಮಹಾರ್ಣವಂ ।
ಕಾರ್ತಿಕ್ಯಾಂ ತು ವಿಶೇಷೇಣ ಸ್ನಾನಂ ಪುಣ್ಯಂ ಹಿ ಪುಷ್ಕರೇ ॥೧೧೦॥

॥ ಸೂತ ಉವಾಚ ॥

ಇತ್ಥಂ ಸವೇಧಾಃ ಪ್ರಜಗಾಮ ಚೋಕ್ತ್ವಾ
ದೇವೈಸ್ಸ್ವಲೋಕಂ ಪರಮಂ ಮುನೀಂದ್ರೈಃ ।
ಯಃ ಪುಷ್ಕರಂ ಸಂಸ್ಮರತಿ ದಿನೇ ದಿನೇ
ನತಸ್ಯ ಪಾಪಾನಿ ಭವಂತಿ ವೃದ್ಧಿಂ ॥೧೧೧॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಪುಷ್ಕರಮಹಿಮಾ
ವರ್ಣನೇ ಬ್ರಹ್ಮಯಜ್ಞಪುಷ್ಕರೇಶ ಲೀಲಾಕಥನಂ ನಾಮ
ಪಂಚತ್ರಿಂಶೋಽಧ್ಯಾಯಃ

---

ಹಾಗೆಯೇ ಯಾಗಕ್ಕಾಗಿ ಬಂದಿದ್ದ ಇತರ ದೇವತೆಗಳನ್ನು ಮನಃಪೂರ್ವಕವಾಗಿ ಹೊಗಳಿ ಕಳುಹಿಸಿಕೊಟ್ಟನು. ॥೧೦೭-೧೦೮॥

ಪುಷ್ಕರಕ್ಷೇತ್ರವಾಸವೂ, ಅಲ್ಲಿ ನಿಶ್ಚಲವಾಗಿ ಮಾಡುವ ತಪಸ್ಸೂ, ಅಲ್ಲಿ ದಾನಮಾಡುವ ಬುದ್ಧಿಯೂ ಉಂಟಾಗುವುದು ಅತ್ಯಂತ ಪುಣ್ಯವಶದಿಂದಲೇ ಹೊರತು ಸುಲಭವಾಗಿ ದೊರೆಯುವುದಲ್ಲ. ಅಲ್ಲಿ ಕೊಡುವ ದಾನವನ್ನು ತೆಗೆದು ಕೊಳ್ಳುವವನೂ ಸತ್ಪಾತ್ರನೇ ಆಗಿರುವನು. ಅದರಲ್ಲಿಯೂ ಸಮುದ್ರಕ್ಕೆ ಸೇರುವ ಮುನ್ನ ಸರಸ್ವತೀನದಿಯೂ ಸಹ ಆ ಕ್ಷೇತ್ರಕ್ಕೆ ಬಂದೇ ಹೋಗುವಳು. ಅಂತಹ ಪುಷ್ಕರಕ್ಷೇತ್ರದಲ್ಲಿ ಕಾರ್ತಿಕಮಾಸದಲ್ಲಿ ಮಾಡುವ ಸ್ನಾನವು ವಿಶೇಷ ಫಲಪ್ರದ ವಾದದ್ದು ಎಂಬುದರಲ್ಲಿ ಸಂದೇಹವಿಲ್ಲ. ॥೧೦೯-೧೧೦॥

ಹೀಗೆ ಹೇಳುತ್ತಾ ಬ್ರಹ್ಮನು ಸಕಲ ದೇವತೆಗಳೊಡನೆ ತನ್ನ ಲೋಕಕ್ಕೆ ತೆರಳಿದನು. ಅಂತಹ ಪುಷ್ಕರಕ್ಷೇತ್ರವನ್ನು ಯಾವನು ನಿತ್ಯವೂ ತಪ್ಪದೆ ಸ್ಮರಿಸು

ವನೋ ಅವನ ಪಾಪರಾಶಿಯೆಲ್ಲವೂ ನಿರ್ಮೂಲವಾಗಿ ಹೋಗುವುವು ಎಂದು ಸೂತಮಹರ್ಷಿಗಳು ಸಕಲ ಋಷಿಗಳಿಗೂ ಹೇಳಿದರು. ॥೧೧೧॥

ಇಲ್ಲಿಗೆ ಶ್ರೀಶಿವರಹಸ್ಯದ ಪಂಚಮಾಂಶದಲ್ಲಿ ಪುಷ್ಕರಮಹಿಮಾವರ್ಣನೆ ಮತ್ತು
ಬ್ರಹ್ಮನ ಯಜ್ಞ, ಪುಷ್ಕರಲೀಲೆ ಇವುಗಳನ್ನು ತಿಳಿಸುವ
ಮೂವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

ಭರ್ಗಾಖ್ಯೇ

ಪಂಚಮಾಂಶೇ

## ಷಟ್ತ್ರಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಭೀಮೇಶ್ವರಂ ಮಹಾದೇವಸ್ಥಾನಂ ಭೀಮರಥೀತಟೇ ।
ಯತ್ರ ಕಾಲೋ ಮಯಾ ಜೀರ್ಣಃ ಕ್ಷೇತ್ರಂ ಕಾಲಂಜರಂ ಹಿ ತತ್ ॥೧॥

ಭೀಮೇಶ್ವರಂ ಮಹಾಲಿಂಗಂ ತತ್ರಾಸ್ತ್ಯೇಕಂ ವರಾನನೇ ।
ತತ್ರ ಶೈವಾಶ್ಚ ದೇವೇಶಿ ವಸಂತಿ ಭಸಿತೋಜ್ಜ್ವಲಾಃ ॥೨॥

ಭವಭಾವನಯಾ ಹ್ಯೇತದ್ಭವಭಾವಾಶ್ಚ ತೇ ಸದಾ ।
ಭೀಮೇಶ್ವರಂ ಬಿಲ್ವದಲೈರ್ಮಾಮಭ್ಯರ್ಚ್ಯ ವಸಂತಿ ತೇ ॥೩॥

---

## ಮೂವತ್ತಾರನೆಯ ಅಧ್ಯಾಯ

ಮಹಾದೇವನು ಪುನಃ ಪಾರ್ವತಿಯನ್ನು ಕುರಿತು ಕಾಲಂಜರಕ್ಷೇತ್ರದಲ್ಲಿ ಭೀಮರಥೀನದೀ ತಟದಲ್ಲಿರುವ ಭೀಮೇಶ್ವರದೇವಾಲಯದ ಮಹಿಮೆಯನ್ನು ವಿವರಿಸುತ್ತಾ ಹೀಗೆಂದನು. "ದೇವಿಯೇ, ಭೀಮರಥೀನದೀದಡದಲ್ಲಿರುವ ಭೀಮೇಶ್ವರ ದೇವಾಲಯ ಪರಮಪವಿತ್ರವಾದುದು. ಆ ಭೀಮೇಶ್ವರಲಿಂಗಾರಾಧನೆಯ ಉದ್ದೇಶದಿಂದ ಅನೇಕ ಶಿವಪೂಜಕರು ಸರ್ವದಾ ಅಲ್ಲಿ ನೆಲಸಿರುವರು. ಅಲ್ಲಿಯೇ ಯಮನು ಈಶ್ವರಾರಾಧಕರಿಂದ ಹಿಂದೆ ಪರಾಜಿತನಾದನು. ಅದು ಹೇಗೆಂದರೆ, ಹಿಂದೆ, ॥೧-೨॥

ಅಲ್ಲಿ ನೆಲಸಿರುವ ಶೈವರು ಆ ಶಿವಲಿಂಗವನ್ನೇ ಈಶಭಾವನೆಯಿಂದ ಬಿಲ್ವದಳಾದಿಗಳಿಂದ ಪೂಜಿಸಿ, ಕಾಲಕಳೆಯುತ್ತಿದ್ದರು. ವಿಷ್ಣುವೂ ಸಹ ಅಲ್ಲಿ ಭೀಮೇಶ್ವರ

ತತ್ರ ವಿಷ್ಣುಃ ಸಮಭ್ಯರ್ಚ್ಯ ಭೀಮೇಶಂ ಬಿಲ್ವಪಲ್ಲವೈಃ ।
ನಿಧನೇತ್ಯಾದಿಭಿರ್ಮಂತ್ರೈರ್ನೈವೇದ್ಯೈರ್ವಿವಿಧೈರಪಿ ॥೪॥

ತುಷ್ಟಾವ ಪ್ರಣತೋ ಲಿಂಗಂ ದರ್ಶನಾದಿಷ್ಟಕಾಮದಂ ।
ತತ್ರ ಲಕ್ಷ್ಮ್ಯಾ ಸಹ ವಿಷ್ಣುಸತ್ರಂ ಯಜ್ಞಂ ತತ್ರಾಹರದ್ಧರಿಃ ॥೫॥

ಭೀಮರಥ್ಯಾಂ ತದಾ ಸ್ನಾತ್ವಾ ತಸ್ಮಿನ್ನವಭೃಥೇ ಶಿವೇ ॥೬॥

॥ ಹರಿರುವಾಚ ॥

ಶಂಭೋ ತ್ವಂ ಮರುತಾಂ ಪಿತಾ ತ್ರಿಜಗತಾಮಾರಾಧ್ಯ ಈಶೋ ಹರ
ಸ್ತೇ ಸೋಮೋ ನಮಸಾತಿಭಿಷ್ಟ್ವಹಿ ವಿಭೋ ರುದ್ರ ಕ್ಷಯದ್ವೈರಿಣಂ ।
ಶಂಭೋ ಸೋಮಮಿಮಂ ಪಿಬ ತ್ವಮಘುಸಾ ಗೌರೋ ಯಥಾ ತರ್ಷಿತ
ಸ್ತೃಪ್ತ್ಯೈತ್ಯಾ ಜಗದೇತದದ್ಯ ಭಗವನ್ನಿಂದ್ರಾದಿಭಿಸ್ತೃಪ್ಯತೇ ॥೭॥

ಇಂದ್ರಸ್ಯಾತ್ಮಾ ಪರಮಸ್ತ್ವಂ ಮಹೇಶೋ
ಯಜ್ಞಸ್ಯಾತ್ಮಾ ದಕ್ಷಿಣಾ ತೇಽಸ್ಯ ಪತ್ನೀ ।

---

ನನ್ನ 'ನಿಧನಪತಯೇ ನಮಃ' ಮುಂತಾದ ವೇದವಾಕ್ಯಗಳಿಂದ ಅರ್ಚಿಸುತ್ತಾ ನೈವೇದ್ಯವೇ ಮೊದಲಾದ ಪೂಜಾಸಾಮಗ್ರಿಗಳಿಂದ ಆರಾಧಿಸುತ್ತಿದ್ದನು. ॥೩-೪॥

ಇಷ್ಟಾರ್ಥಗಳನ್ನೆಲ್ಲಾ ಪೂರ್ತಿಗೊಳಿಸುವ ಆ ಲಿಂಗವನ್ನು ಲಕ್ಷ್ಮೀ ಮತ್ತು ವಿಷ್ಣು ಇವರಿಬ್ಬರೂ ಅರ್ಚಿಸುತ್ತಾ ಒಂದು ದೊಡ್ಡ ಯಜ್ಞವನ್ನು ಮಾಡಲಾರಂಭಿಸಿದರು. ಆ ಯಾಗದ ಅವಭೃಥಸ್ನಾನವನ್ನು ಭೀಮರಥೀನದಿಯಲ್ಲಿ ಮಾಡಿದರು.॥೫-೬॥

ಆಗ ವಿಷ್ಣುವು ಹೀಗೆ ನನ್ನನ್ನು ಸ್ತುತಿಸಿದನು. "ಮಹಾದೇವನೇ, ಶಂಕರನೇ, ನೀನು ಸಮಸ್ತ ದೇವತೆಗಳಿಗೂ ಒಡೆಯನೆನಿಸಿರುವೆ. ಸಕಲ ಶತ್ರುಗಳನ್ನೂ ನಾಶಗೊಳಿಸುವ ನಿನ್ನನ್ನು ಈ ಸೋಮಯಾಗದಿಂದ ಈಗ ತೃಪ್ತಿಗೊಳಿಸುವೆನು. ಅತ್ಯಂತ ಪರಿಶುದ್ಧವಾದ ಈ ಸೋಮರಸವನ್ನು ನೀನು ಪಾನಮಾಡುವುದರಿಂದ ಈ ಜಗತ್ತೇ ನಿತ್ಯತೃಪ್ತಿಯನ್ನು ಹೊಂದುವುದು. ಅಲ್ಲದೆ ಇಂದ್ರಾದಿ ಸಕಲ ದೇವತೆಗಳ ತೃಪ್ತಿಯೂ ಅದರಿಂದಲೇ ಲಭಿಸುವುದು. ॥೭॥

ಮಹೇಶ್ವರನೇ, ನೀನೇ ಸಕಲ ಇಂದ್ರಿಯಗಳಿಗೂ ಆತ್ಮರೂಪದಂತಿರುವೆ. (ಇಲ್ಲಿ ಇಂದ್ರಿಯಾರ್ಥದಲ್ಲಿ ಇಂದ್ರ ಶಬ್ದವು ನಿಪಾತಿತವಾಗಿದೆ) ಸಕಲ ಯಜ್ಞಗಳಿಗೂ

ಸಹೈವ ತ್ವಾ ಸಂತಂ ನ ವಿದಂತಿ ದೇವಾಃ
ಸರ್ವಾತ್ಮಾ ತ್ವಂ ಸರ್ವಗತಶ್ಚ ನಿತ್ಯಃ ॥೮॥

ಇತ್ಥಂ ಭೀಮೇಶ್ವರಂ ಸ್ತುತ್ವಾ ವಿಷ್ಣುರ್ನತ್ವಾ ಪುನರ್ಹಿ ಮಾಂ ।
ಅಯಾಚತ ವರಂ ಮತ್ತಸ್ತ್ವತ್ಸಮೀಪೇ ವಸಾಮ್ಯಹಂ ॥೯॥

ಸುರಾಸುರೈರಹಂ ಯುದ್ಧೇ ಶ್ರಾಂತೋಽಸ್ಮಿ ಪರಮೇಶ್ವರ ।
ತ್ವಯಾ ಸಹ ವಸಾಮ್ಯದ್ಯ ಭೀಮರಥ್ಯಾಸ್ತು ದಕ್ಷಿಣೇ ॥೧೦॥

ಕುಣಿಕುಂಭಾತ್ಪ್ರತೀಚ್ಯಾಂ ಹಿ ಸ್ನಾತ್ವಾ ಕಾಲಂಜರೇ ಹರಿಃ ।
ಪ್ರಭಾತೇ ಸ ತದಾ ದೇವಿ ಮಲ್ಲಿಂಗಂ ಶಿರಸಾ ದಧತ್ ॥೧೧॥

॥ ಈಶ್ವರ ಉವಾಚ ॥

ಇತಿ ಸ್ತುತ್ವಾ ತದಾ ವಿಷ್ಣುರ್ಗಚ್ಛೇತ್ಯಭಿಹಿತೋ ಮಯಾ ।
ತತ್ರಾವಸತ್ಸ ಮೇ ಲಿಂಗಂ ದಧನ್ಮೂರ್ಧ್ನಿ ಹರಿಸ್ತದಾ ॥೧೨॥

---

ಆತ್ಮಸ್ವರೂಪನು ನೀನು. ದಕ್ಷಿಣಾದೇವಿಯೆನಿಸಿದ ಅಧ್ವರಪತ್ನಿಯೂ ನಿನ್ನಿಂದ ಸಂರಕ್ಷಿತಳೇ. ಸಕಲ ವಸ್ತುಗಳಲ್ಲಿಯೂ ಆತ್ಮಸ್ವರೂಪದಿಂದ ನೆಲಸಿ ಸರ್ವಾಂತರ್ಯಾಮಿಯೆನಿಸಿರುವವನು ನೀನೇ ಅಲ್ಲವೇ ? ॥೮॥

ಹೀಗೆ ವಿಷ್ಣುವು ಭೀಮೇಶ್ವರನನ್ನು ಸ್ತುತಿಸಿ, ಯಾವಾಗಲೂ ಅಲ್ಲಿಯೇ ತಾನೂ ನೆಲಸಿರುವಂತೆ ವರವನ್ನು ಅನುಗ್ರಹಿಸಬೇಕೆಂದು ನನ್ನನ್ನು ಕೇಳಿಕೊಂಡನು " ಮಹಾದೇವನೇ, ಸುರಾಸುರರೊಡನೆ ಹೋರಾಡಿ ಬಹಳವಾಗಿ ಆಯಾಸಪಟ್ಟಿರುವೆನು. ಈಗ ಶಾಂತನಾಗಿ ಭೀಮರಥಿಯ ದಕ್ಷಿಣಭಾಗದಲ್ಲಿ ನಿನ್ನೊಡನೆ ಕೂಡಿ ಸುಖದಿಂದ ವಾಸಮಾಡುವೆನು." ॥೯-೧೦॥

ಎಂದು ವಿನಯದಿಂದ ಪ್ರಾರ್ಥಿಸಿ, ವಿಷ್ಣುವು ಪ್ರಾತಃಕಾಲದಲ್ಲಿ ಕಾಲಂಜರ ಕ್ಷೇತ್ರದ ಪಶ್ಚಿಮದಿಕ್ಕಿನಲ್ಲಿರುವ ಭೀಮರಥೀನದಿಯ ಭಾಗವಾದ ಕುಣಿಕುಂಭಕ್ಷೇತ್ರದಲ್ಲಿ ಸ್ನಾನಮಾಡಿ ನನ್ನ ಅಪ್ಪಣೆಯನ್ನು ಪಡೆದು ಶಿವಲಿಂಗವನ್ನು ತಲೆಯ ಮೇಲಿಟ್ಟು ನನ್ನ ಭೀಮರಥೇಶ್ವರಲಿಂಗದ ಸಮೀಪದಲ್ಲಿಯೇ ನೆಲಸಿದನು. ॥೧೨॥

ಉವಾಸ ದಕ್ಷಿಣೇ ತೀರೇ ಭೀಮರಥ್ಯಾಸ್ತದಾಂಬಿಕೇ ।
ತತ್ಪಾಂಡುರಂಗಕ್ಷೇತ್ರಂ ಹಿ ವಿಷ್ಣೋಃ ಪ್ರಿಯತರಂ ಸದಾ ॥೧೩॥

॥ ದೇವ್ಯುವಾಚ ॥

ಕುತ್ರ ಕಾಲಸ್ತ್ವಯಾ ಜೀರ್ಣಃ ಕಿಮರ್ಥಂ ವದ ಮೇ ಶಿವ ।
ಕುಣಿಕುಂಭಮಿತಿ ಪ್ರೋಕ್ತಂ ಕಿಂ ತತ್ಕ್ಷೇತ್ರಂ ವರಂ ಶಿವ ॥೧೪॥

॥ ಸೂತ ಉವಾಚ ॥

ತದಾ ದೇವೀಂ ಮಹಾದೇವಃ ತತ್ಕ್ಷೇತ್ರಸ್ಯ ಚ ವೈಭವಂ ।
ಕಥಯಾಮಾಸ ವಿಪ್ರೇಂದ್ರಾಃ ಗೌರೀಂ ಪ್ರತಿ ಮಹೇಶ್ವರಃ ॥೧೫॥

॥ ಈಶ್ವರ ಉವಾಚ ॥

ಪಶ್ಚಿಮಾಂಭೋನಿಧೇಸ್ತೀರೇ ಕುಣಿಕುಂಭಂ ಮಹೇಶ್ವರಂ ।
ಸಮಭ್ಯರ್ಚ್ಯೈವ ನಿಯತಂ ಕುಣಿರ್ನಾಮ್ನಾ ಮಹಾಮುನಿಃ ॥೧೬॥

ಉವಾಸ ತಸ್ಯ ನಾಮ್ನೈವ ಕ್ಷೇತ್ರಂ ತತ್ಪ್ರಥೇ ಶಿವೇ ।
ಸ ಮಾಂ ತುಷ್ಟಾವ ಹೃಷ್ಟಾತ್ಮಾ ಕುಣಿಕುಂಭೇಶ್ವರಂ ಹಿ ಮಾಂ ॥೧೭॥

---

ಆ ಕ್ಷೇತ್ರವೇ ಈಗ ಪಾಂಡುರಂಗಕ್ಷೇತ್ರವೆಂದು ಪ್ರಸಿದ್ಧವಾಗಿ ವಿಷ್ಣುಕ್ಷೇತ್ರವೆನಿಸಿ, ಭೀಮರಥೀನದಿಯ ದಕ್ಷಿಣಭಾಗದಲ್ಲಿರುವುದು. ಅದು ವಿಷ್ಣುವಿಗೆ ಅತ್ಯಂತ ಪ್ರೀತಿಕರವೆನಿಸಿದೆ ಎಂದು ಪರಶಿವನು ಪಾರ್ವತಿಗೆ ಹೇಳಲು, ದೇವಿಯು ಮತ್ತೆ "ಪತಿವರ್ಯನೇ, ಯಮನು ಎಲ್ಲಿ ಏತಕ್ಕಾಗಿ ಪರಶಿವನಾದ ನಿನ್ನಿಂದ ಪರಾಜಿತನಾದನು? ಕುಣಿಕುಂಭಕ್ಷೇತ್ರಕ್ಕೆ ಆ ಹೆಸರು ಬರಲು ಕಾರಣವೇನು?" ॥೧೪॥

ಎಂದು ದೇವಿಯು ಪತಿಯನ್ನು ಪ್ರಶ್ನಿಸಲು ಪರಶಿವನುಕುಣಿಕುಂಭಕ್ಷೇತ್ರದ ಮಹಿಮೆಯನ್ನೂ ಅದರ ವೈಭವವನ್ನೂ ದೇವಿಗೆ ಈರೀತಿ ವಿವರಿಸಲಾರಂಭಿಸಿದನು. " ದೇವಿಯೇ, ಪಶ್ಚಿಮ ಸಮುದ್ರದ ದಡದಲ್ಲಿ ಕುಣಿಕುಂಭಕ್ಷೇತ್ರವೊಂದು ಪ್ರಸಿದ್ಧವಾಗಿರುವುದು. ಅಲ್ಲಿ ಹಿಂದೆ ಕುಣಿಯೆಂಬ ಋಷಿಯು ಶಿವಲಿಂಗವನ್ನು ಭಕ್ತಿಯಿಂದಾರಾಧಿಸುತ್ತಾ ವಾಸಿಸುತ್ತಿದ್ದನು. ॥೧೫-೧೬॥

ಅವನ ಹೆಸರಿನಿಂದಲೇ ಆ ಕ್ಷೇತ್ರವು ಪ್ರಸಿದ್ಧಿಯನ್ನು ಪಡೆದಿದೆ. ಒಂದುಸಾರಿ ಕುಣಿಮುನಿಯು ಕುಣಿಕುಂಭೇಶ್ವರನೆಂಬ ಹೆಸರಿನಿಂದ ಶಿವಲಿಂಗವನ್ನು ಪ್ರತಿಷ್ಠಿಸಿ

॥ ಕುಣಿರುವಾಚ ॥

ವಿಶ್ವನಾಥ ಮಮ ನಾಥ ಸುನಾಥ
ಘೋರಸಂಸೃತಿಭಯಂ ಪ್ರಮಮಾಥ ।
ಸ್ವರ್ಗಪಾಂಥಕೃತಪಾಥ ಸುನೀಥ
ಪಾಹಿ ಮಾಂ ಸುರಗಣಾಧಿಪನಾಥ ॥೧೮॥

ಇತಿ ಸ್ತುತ್ವಾ ತಸ್ಯ ನಾಮ್ನಾಹಂ ಪ್ರಭವಂ ಗಿರಿಜೇ ತದಾ ।
ಶ್ವೇತೋ ನಾಮಾಭವದ್ರಾಜಾ ಕಾಲಮೃತ್ಯುಪ್ರಪೀಡಿತಃ ॥೧೯॥

ಮೃತ್ಯುಂಜಯಂ ಮಾಮಾರಾಧ್ಯ ತತ್ರಕಾಲೇ ಮಹೇಶ್ವರಂ ।
ರುದ್ರಮಂತ್ರೈಸ್ಸಮಭ್ಯರ್ಚ್ಯ ಬಿಲ್ವಪತ್ರೈರ್ಮನೋರಮೇ ॥೨೦॥

ತುಷ್ಟಾವ ಭಕ್ತಿಮಾನ್ರಾಜಾ ತಸ್ಯ ಮೃತ್ಯುಂ ಹರಾಮ್ಯಹಂ ॥೨೧॥

॥ ಶ್ವೇತ ಉವಾಚ ॥

ಮೃತ್ಯುಂಜಯ ಮಹಾದೇವ ಜಗದೀಶ್ವರ ಶಂಕರ ।
ಮೃತ್ಯುಗ್ರಸ್ತಂ ಮೋಚಯಾಶು ತ್ರಿಯಂಬಕ ನಮೋಽಸ್ತುತೇ ॥೨೨॥

---

ಹೀಗೆ ನನ್ನನ್ನು ಸ್ತುತಿಸಿದನು. "ಲೋಕದೊಡೆಯನೇ, ನನಗೆ ರಕ್ಷಕನೆನಿಸಿರುವ ಪ್ರಮಥನಾಥನೇ, ನನಗೆ ಈ ಘೋರಸಂಸಾರದ ಭಯವನ್ನು ತಪ್ಪಿಸು. ಸ್ವರ್ಗಪ್ರದನಾದ ನೀನು ದೇವಗಣಗಳಿಗೆಲ್ಲಾ ಒಡೆಯನೆನಿಸಿರುವೆಯಲ್ಲವೆ? ಮಹಾದೇವನೇ, ನೀನು ಇಲ್ಲಿಯೇ ನೆಲಸಿ ನನ್ನನ್ನು ಕಾಪಾಡು." ॥೧೭-೧೮॥

ದೇವಿಯೇ, ಅವನ ಪ್ರಾರ್ಥನೆಯಂತೆ ನಾನು ಆ ಶಿವಲಿಂಗದಲ್ಲಿಯೇ ನೆಲೆಸಿದೆನು. ಹಾಗಿರಲು ಒಂದುಸಾರಿ ಶ್ವೇತನೆಂಬ ಹೆಸರಿನ ರಾಜನೊಬ್ಬನು ಅಲ್ಲಿಗೆ ಬಂದು ಆ ಶಿವಲಿಂಗವನ್ನು ಬಿಲ್ವಪತ್ರಾದಿಗಳಿಂದ ಅರ್ಚಿಸಿ ರುದ್ರದೇವತಾಕಗಳಾದ ಮಂತ್ರಗಳಿಂದ ಸ್ತುತಿಸಿದನು. ॥೧೯-೨೦॥

ಅವನ ಸ್ತುತಿಗೆ ಮೆಚ್ಚಿ ಅವನಿಗೆ ಬಂದಿದ್ದ ಮೃತ್ಯುವನ್ನು ನಾನು ನಿವಾರಣೆ ಮಾಡಿದೆನು. ಹೇಗೆಂದರೆ, ಒಂದುಸಾರಿ ಆ ರಾಜನು ಶಂಕರನಾದ ನನ್ನನ್ನು ಹೀಗೆ ಸ್ತುತಿಸಿದನು. "ಮೃತ್ಯುಂಜಯನೇ, ಮಹಾದೇವನೆ, ಶಂಕರನೇ, ನಾನು ಈಗ

ದೇವದತ್ತಕೃತನೇತ್ರಸುಮಿತ್ರೀ
ಭೂತ ಯಕ್ಷಸಖದಕ್ಷ ಸುಶಿಕ್ಷ ।
ಪಕ್ಷಿವಾಹನುತಪೂಜ್ಯಪದಾಬ್ಜ
ಧ್ವಸ್ತಪೂಷಭಗನೇತ್ರ ಪಾಹಿ ಮಾಂ ॥೨೩॥

ತತ್ಸ್ತುತ್ಯಾಹಂ ತದಾ ಕಾಲೋ ನಿರ್ಗೀರ್ಣಃ ಪರಮೇಶ್ವರಿ ।
ಕಾಲಂಜರಮಭೂತ್ಕ್ಷೇತ್ರಂ ತತಃ ಪ್ರಭೃತಿ ಶಂಕರಿ ॥೨೪॥

ಭೀಮೇಶ್ವರಂ ಮಾಂ ದೃಷ್ಟ್ವೈವ ಭೀಮಪಾಪೈಃ ಪ್ರಮುಚ್ಯತೇ ।
ಅತ್ರೇತಿಹಾಸಂ ತೇ ವಕ್ಷ್ಯೇ ಶೃಣುಷ್ವಾವಹಿತಾ ಮಮ ॥೨೫॥

ವನೇ ಗೋಪಾಲಕೋಸೀತ್ಸನಾಮ್ನಾ ಗೋನಂದಕಃ ಪುರಾ ।
ಸಿತಾಸಿತಾಸ್ತಥಾ ಕೃಷ್ಣಾಶ್ಚಿತ್ರಾಃ ಕಲ್ಮಾಷಕಾಪಿಲಾಃ ॥೨೬॥

---

ಮೃತ್ಯುವಿನ ಅಧೀನಕ್ಕೆ ಸಿಕ್ಕಿರುವೆನು. ನನ್ನನ್ನು ಅದರಿಂದ ರಕ್ಷಿಸಿ ಕಾಪಾಡು. ॥೧೮-೨೨॥

ದೇವತೆಗಳಿಗೆ ನಿನ್ನ ದಯಾನೇತ್ರವು ರಕ್ಷಣೆಯನ್ನೊದಗಿಸಿದೆ. ಕುಬೇರನಿಗೆ ನೀನು ಅತ್ಯಂತ ಮಿತ್ರನೆನಿಸಿರುವೆ. ಗರ್ವದಿಂದ ಕೂಡಿದ ದಕ್ಷಬ್ರಹ್ಮನನ್ನು ಬಹಳವಾಗಿ ನೀನು ಶಿಕ್ಷಿಸಿರುವೆ. ಪಕ್ಷಿವಾಹನನಾದ ವಿಷ್ಣುವಿನಿಂದ ಪೂಜಿತನಾಗಿರುವೆ. ದಕ್ಷಬ್ರಹ್ಮನ ಯಾಗದಲ್ಲಿ ಪೂಷ, ಭಗ ಮೊದಲಾದ ದೇವತೆಗಳ ಕಣ್ಣನ್ನು ನಾಶಗೊಳಿಸಿರುವೆ. ಇಂತಹ ಮಹಾದೇವನೇ, ನನ್ನನ್ನು ರಕ್ಷಿಸು.'' ॥೨೩॥

ಶ್ವೇತರಾಜನು ಮಾಡಿದ ಆ ಸ್ತುತಿಗೆ ಮೆಚ್ಚಿ ನಾನು ಅವನಿಗೆ ಮೃತ್ಯುವಾಗಿ ಬಂದಿದ್ದ ಕಾಲನನ್ನು ನುಂಗಿಬಿಟ್ಟೆನು. ಅಂದಿನಿಂದ ಆ ಕ್ಷೇತ್ರಕ್ಕೆ ಕಾಲಂಜರಕ್ಷೇತ್ರವೆಂದು ಹೆಸರಾಯಿತು. ಆ ಕ್ಷೇತ್ರದಲ್ಲಿರುವ ಭೀಮೇಶ್ವರನನ್ನು ದರ್ಶನಮಾಡಿದರೆ, ಅವರ ಭಯಂಕರವಾದ ಪಾಪರಾಶಿಯೆಲ್ಲಾ ನಿರ್ಮೂಲವಾಗುವುದು. ಇದಕ್ಕೆ ಸಂಬಂಧಿಸಿದ ಒಂದು ಇತಿಹಾಸವನ್ನು ಹೇಳುವೆನು ಕೇಳು. ॥೨೪-೨೫॥

ಒಂದು ಅರಣ್ಯದಲ್ಲಿ ಗೋನಂದಕನೆಂಬ ಹೆಸರಿನ ಗೊಲ್ಲನೊಬ್ಬನಿದ್ದನು. ಅವನಲ್ಲಿ ಕೆಂಪು, ಕಪ್ಪು, ಚಿತ್ರ, ಕಂದು ಮೊದಲಾದ ಬಣ್ಣಬಣ್ಣದ ಹಸುಗಳಿದ್ದವು.

ತಸ್ಯಾಸನ್ ವಿವಿಧಾ ಗಾವಃ ಸ ವತ್ಸಾಜಾವಿಕಾ ಗಣಾಃ ।
ಮಹಿಷೀಣಾಂ ಗಣಾಸ್ತಸ್ಯ ಬಹ್ವಾಸನ್ ಗೋಪಸಂಕುಲಾಃ ॥೨೭॥

ಸ ಗೋರಸೈಃ ಶ್ರೀ ಭೀಮೇಶಮಭಿಷೇಕ್ಷ್ಯತಿ ನಿತ್ಯಶಃ ।
ದಧಿಖಂಡೈಶ್ಚ ಸುಘೃತೈರ್ಧೂಪೈರ್ದೀಪೈಸ್ತಥಾಂಬಿಕೇ ॥೨೮॥

ಪಯಸಾ ಸಘಟೈರೀಶಂ ಸ್ನಪಯತ್ಯನಿಶಂ ಮುದಾ ।
ತಸ್ಯ ಗೋಗಣಮಧ್ಯಸ್ಥಾ ನಂದಿನೀ ನಾಮ ವಿಶ್ರುತಾ ॥೨೯॥

ಬಾಲವತ್ಸಾ ತಥಾ ಸಾ ಗೌಃ ಹುಂಭಾರಾವೈ ಗತಾವನಂ ।
ಗೋಭಿರ್ಗೋಪಸುತೈರ್ಯಾತಾ ವನಂ ಹರಿತಶಾದ್ವಲಂ ॥೩೦॥

ಭೀಮರಥ್ಯಾಸ್ತದಾ ತೀರೇ ಚರಂತೀ ಸಾ ದದರ್ಶ ಮಾಂ ।
ತಸ್ಯಾಸ್ತದ್ಧೃದಯಂ ಜ್ಞಾತುಂ ಶಾರ್ದೂಲೋಽಹಂ ತದಾಂಬಿಕೇ ॥೩೧॥

---

ಅಲ್ಲದೆ ಅವನಲ್ಲಿ ಅನೇಕ ಎಮ್ಮೆಗಳೂ, ಆಡುಗಳೂ, ಕುರಿಗಳೂ ಕರುಮರಿಗಳಿಂದ ಕೂಡಿ ಬಹು ಸಂಖ್ಯೆಯಲ್ಲಿ ತೋರಿಬರುತ್ತಿದ್ದುವು. ॥೨೬-೨೭॥

ಆತನು ನಿತ್ಯವೂ ಗೋಕ್ಷೀರದಿಂದಲೂ ಹಾಗೆಯೇ ಮೊಸರು, ತುಪ್ಪ ಮೊದಲಾದ ಪಂಚಾಮೃತವಸ್ತುಗಳಿಂದಲೂ ಮಹಾದೇವನಿಗೆ ಅಭಿಷೇಕಮಾಡಿ, ಧೂಪದೀಪಾದಿ ಪೂಜಾಸಾಮಗ್ರಿಗಳಿಂದ ಭಕ್ತಿಪೂರ್ವಕವಾಗಿ ಅರ್ಚಿಸುತ್ತಿದ್ದನು. ಅವನ ಹಸುಗಳ ಮಧ್ಯದಲ್ಲಿ ನಂದಿನಿಯೆಂಬ ಹೆಸರಿನ ಧೇನುವೊಂದು ಬಹು ಸುಂದರವಾಗಿತ್ತು. ॥೨೮-೨೯॥

ಅದಕ್ಕೆ ಎಳೆಗರುವೊಂದಿದ್ದಿತು. ಆ ಹಸುವು ಒಂದುಸಾರಿ 'ಅಂಬಾ' ಎಂದು ಕೂಗಿಕೊಳ್ಳುತ್ತಾ ಅರಣ್ಯವನ್ನು ಪ್ರವೇಶಿಸಿತು. ಅದನ್ನನುಸರಿಸಿ ಅನೇಕ ಗೋಪಾಲಕರು, ಹಸುಗಳೂ, ಸುಂದರವಾದ ಹುಲ್ಲು ಬಯಲಿನಿಂದ ಕೂಡಿದ ಆ ವನಕ್ಕೆ ಬಂದರು. ಅಲ್ಲಿಯೇ ಇರುವ ಭೀಮರಥೀ ನದಿಯತೀರದಲ್ಲಿ ಎಲ್ಲವೂ ಓಡಾಡುತ್ತಾ ಮೇಯುತ್ತಿರುವಾಗ, ಆ ಹಸುವಿನ ಮನಸ್ಸನ್ನು ಪರೀಕ್ಷಿಸಬೇಕೆಂದು ನಾನು (ಈಶ್ವರನು) ಹುಲಿಯ ವೇಷದಿಂದ ಗರ್ಜಿಸಿದೆನು. ॥೩೦-೩೧॥

ಕರಾಲೈರ್ವಿಕಟೈರ್ದಂತೈರ್ಭೀಷಣೈರ್ಭೀಷಣಾಕೃತಿಂ ।
ಮಾಂ ದೃಷ್ಟ್ವಾ ದುದ್ರುವುರ್ಗೋಪಾ ಗಾವೋ ವತ್ಸಾ ವಸಾದ್ವಸಂ ॥೩೨॥

ತನ್ಮಮಾಕ್ರಂದಿತಂ ಶ್ರುತ್ವಾ ಗಾವೋ ಗರ್ಭಾನ್ವಿತತ್ಯಜುಃ ।
ವಿತತ್ಯ ಲೋಚನೇ ಶ್ರೋತ್ರೇ ಪುಚ್ಛಂ ಧೂನ್ವನ್ನಗಾದಿಯಂ ॥೩೩॥

ನಂದಿನೀ ನಾಮ ಗೋರತ್ನಂ ಮಾಂ ಪ್ರಣಮ್ಯಾಹ ಸಾದರಂ ॥೩೪॥

॥ ನಂದಿನ್ಯುವಾಚ ॥

ಅಹೋ ವ್ಯಾಘ್ರ ಮಹಾಭಾಗ ಕಿಂ ತೇ ಕಾರ್ಯಂ ಮಯಾದ್ಯ ತಂ ।
ತದ್ವಿಧೇಹಿ ಮಹಾವ್ಯಾಘ್ರ ಶರೀರಂ ತೇ ದದಾಮ್ಯಹಂ ॥೩೫॥

ಕಿಂ ತ್ವೇಕವಚನಂ ಮೇದ್ಯ ಮೃಗೇಂದ್ರ ಶೃಣು ಸತ್ಯತಃ ।
ಬಾಲೋ ಮೇ ತರ್ಣಕೋತ್ಯಂತಂ ಪಾಯಯಿತ್ವಾ ಚ ತಂ ಪುನಃ ॥೩೬॥

ದೃಷ್ಟ್ವಾ ಸಖೀಗಣಂ ಸರ್ವಂ ಗೋಪಾನ್ ಗೋಪ್ಯಶ್ಚ ಮಾತರಂ ।
ಜೀರ್ಣಶೃಂಗದ್ವಿಜಾತ್ತುಂ ಸಾ ಘಾಸಂ ಚಾಪಿ ನ ಹಿ ಕ್ಷಮಾ ॥೩೭॥

---

ಅತ್ಯಂತ ಭಯಂಕರವೂ, ಉಗ್ರವೂ ಆದ ನನ್ನ ಮುಖ, ಕೋರೆಹಲ್ಲು ಮುಂತಾದುವುಗಳನ್ನು ನೋಡಿ ಗೋಪಾಲಕರೆಲ್ಲರೂ ಓಡಿಹೋದರು. ಹಸುಕರುಗಳು ಓಡಲಾರಂಭಿಸಿದುವು. ಗಬ್ಬದ ಹಸುಗಳು ಗರ್ಜನೆಗೆ ಹೆದರಿ ಒಡನೆಯೇ ಅಲ್ಲಿಯೇ ಕರು ಹಾಕಿದುವು. ಮತ್ತೆ ಕೆಲವು ದನಗಳು ಕಣ್ಣುಗಳನ್ನು ಕೆರಳಿಸಿಕೊಂಡು, ಬಾಲಗಳನ್ನೆತ್ತಿ ಓಡಲಾರಂಭಿಸಿದುವು. ಆಗ ನಂದಿನಿಯೆಂಬ ಆ ಪುಣ್ಯಪ್ರದವಾದ ಹಸುವುಮಾತ್ರ ಮುಂದೆ ಬಂದು ಧೈರ್ಯದಿಂದ ಹೀಗೆ ಮಾತನಾಡಿತು.॥೩೨-೩೩-೩೪॥

"ಎಲೈ ಹುಲಿರಾಯನೇ, ನಿನಗೆ ನನ್ನಿಂದಾಗಬೇಕಾದ ಕಾರ್ಯವಾವುದಿರುವುದು? ಮಹಾವ್ಯಾಘ್ರವೇ, ನಿನಗೆ ನನ್ನ ದೇಹಭಕ್ಷಣದಲ್ಲಿ ಆಸೆಯಿರುವುದಾದರೆ, ಅಗತ್ಯವಾಗಿ ದೇಹವನ್ನು ಅರ್ಪಿಸುವೆನು. ಆದರೆ ಒಂದು ಮಾತು. ನನಗೆ ಒಂದೇ ಒಂದು ಕರುವಿರುವುದು. ಅದಕ್ಕೆ ಹಾಲುಕೊಟ್ಟು ಬರುವೆನು. ॥೩೫-೩೬॥

ನನಗೆ ಅನೇಕ ಸ್ನೇಹಿತರೂ, ಗೋಪಾಲಕರೂ, ಗೊಲ್ಲತಿಯರೂ ಇರುವರು. ಅಲ್ಲದೆ ಅತ್ಯಂತ ಮುದಿಯಾಗಿ ಹುಲ್ಲನ್ನು ಸಹ ತಿನ್ನಲಾಗದ ತಾಯಿಯೊಬ್ಬ

ಇತ್ಯುಕ್ತಂ ನಂದಿನೀ ವಾಕ್ಯಂ ಶ್ರುತ್ವಾ ವ್ಯಾಘ್ರೋಽಹಮಂಬಿಕೇ ।
ತಾಮವೋಚಂ ಕ್ಷುಧಾವಿಷ್ಟಸ್ತದಾನೀಂ ತಾಂ ಪಯಸ್ವಿನೀಂ ॥೩೮॥

॥ ವ್ಯಾಘ್ರ ಉವಾಚ ॥

ಕ್ಷುತ್ಕ್ಷಾಮೋಽಹಂ ಜರಾವ್ಯಾಪ್ತಃ ಶುಷ್ಕಕಂಠೋಽಸ್ಮಿ ನಂದಿನೀ ।
ಪಿಪಾಸಾ ಬಾಧತೇ ಮಹ್ಯಂ ತೃಪ್ತಸ್ತ್ವದ್ರಕ್ತಪಾನತಃ ॥೩೯॥

ಯದಾ ಗಮಿಷ್ಯಸಿ ಪುನಃ ಶಪಥಾನ್ ದಾತುಮರ್ಹಸಿ ।
ಸಾ ನಂದಿನೀ ತದಾ ವ್ಯಾಘ್ರವಚಶ್ಶ್ರುತ್ವಾ ತದಾಂಬಿಕೇ ॥೪೦॥

ಶಪಥೈರ್ಮಾಂ ಮಹಾವ್ಯಾಘ್ರಂ ಶಾಮಯಾಮಾಸ ಪಾದಯೋಃ ॥೪೧॥

॥ ನಂದಿನ್ಯುವಾಚ ॥

ತರ್ಣಕಂ ಪಾಯಯಿತ್ವಾಹಂ ದೃಷ್ಟ್ವಾ ಸಖ್ಯಶ್ಚ ಮಾತರಂ ।
ನಾಗಮಿಷ್ಯೇ ಯದಾ ವ್ಯಾಘ್ರ ಭೀಮೇಶಾಗ್ರೇ ಶಪಾಮ್ಯಹಂ ॥೪೨॥

ಬಾಲವತ್ಸಾಂ ತು ಯೋ ಗಾಂ ವೈ ಸಮುಗ್ರಾಂ ದೋಗ್ಧುಮಿಚ್ಛತಿ ।
ತತ್ಪಾಪಂ ಮೇ ಭವದ್ವ್ಯಾಘ್ರ ಯದ್ಯಹಂ ನಾಗಮೇ ಪುನಃ ॥೪೩॥

---

ಇರುವಳು. ಅವರನ್ನೆಲ್ಲಾ ನೋಡಿಕೊಂಡು ಹಿಂದಿರುಗಿ ಬರುವೆನು" ಎಂದು ಹೇಳಲು ವ್ಯಾಘ್ರರೂಪಿಯಾದ ನಾನು ಆಗ ಪಯಸ್ವಿನಿಯಾದ ಆ ಹಸುವನ್ನು ನೋಡಿ, ಹಸಿವಿನಿಂದ ಕೂಡಿದವನಂತೆ ನಟಿಸುತ್ತಾ ಹೀಗೆಂದೆನು. ॥೩೭-೩೮॥

"ನಂದಿನಿಯೇ, ನಾನು ಹಸಿವು ಬಾಯಾರಿಕೆಗಳಿಂದ ಬಹಳವಾಗಿ ಬಳಲಿರುವೆನು. ನಿನ್ನ ರಕ್ತಪಾನದಿಂದ ನಾನು ತೃಪ್ತಿಪಡಬೇಕೆಂದಿದ್ದೇನೆ. ಆದರೆ ಹೊರಟು ಹೋದವಳು ಮತ್ತೆ ಬರುವುದುಂಟೆ? ನೀನು ಬರುವುದರಲ್ಲಿ ನಂಬಿಕೆಯೇನು? ಶಪಥಮಾಡುವೆಯಾ" ಎಂದು ಪ್ರಶ್ನಿಸಲು, ಆಗ ನಂದಿನಿಯು ನನ್ನ ಕಾಲುಗಳಿಗೆ ನಮಸ್ಕರಿಸಿ, ಮುಂದೆ ಹೇಳುವಂತೆ ಕೆಲವು ಪ್ರತಿಜ್ಞಾವಾಕ್ಯಗಳನ್ನುಸುರಲು ಆರಂಭಿಸಿತು. ॥೩೯-೪೦-೪೧॥

"ಎಲೈ ಹುಲಿಯೇ, ನನ್ನ ಕರುವಿಗೆ ಹಾಲನ್ನು ಕುಡಿಸಿ, ಮತ್ತೆ ನಾನಿಲ್ಲಿಗೆ ಬರದಿದ್ದರೆ ನನಗೆ ಇಂತಹ ಪಾಪಗಳು ಸಂಭವಿಸಲಿ. ಈ ಮಾತನ್ನು ಭೀಮೇಶ್ವರನ

ಅರಕ್ಷಿತಾ ಚ ಯೋ ರಾಜಾ ಬಲಿಷಡ್ಭಾಗಹಾರ್ಯಪಿ ।
ತತ್ಪಾಪಂ ಮೇ ಭವೇದ್ವ್ಯಾಘ್ರ ಯದ್ಯಹಂ ನಾಗಮೇ ಪುನಃ ॥೪೪॥

ವೇದಾಧ್ಯಯನಹೀನಶ್ಚ ಯಸ್ಸಂಧ್ಯಾಹೀನಕೋ ದ್ವಿಜಃ ।
ತತ್ಪಾಪಂ ಮೇ ಭವೇದ್ವ್ಯಾಘ್ರ ಯದ್ಯಹಂ ನಾಗಮೇ ಪುನಃ ॥೪೫॥

ಪತಿವ್ರತಾಪತಿಂ ತ್ಯಕ್ತ್ವಾ ಯಾ ಚಾನ್ಯಂ ಕುರುತೇ ಪತಿಂ ।
ತತ್ಪಾಪಂ ಮೇ ಭವೇದ್ವ್ಯಾಘ್ರ ಯದ್ಯಹಂ ನಾಗಮೇ ಪುನಃ ॥೪೬॥

ಶಿವಾರ್ಚನಾದಿಹೀನೋ ಯೋ ಭಸ್ಮರುದ್ರಾಕ್ಷವರ್ಜಿತಃ ।
ತತ್ಪಾಪಂ ಮೇ ಭವೇದ್ವ್ಯಾಘ್ರ ಯದ್ಯಹಂ ನಾಗಮೇ ಪುನಃ ॥೪೭॥

ರುದ್ರಾಧ್ಯಾಯವಿಹೀನೋ ಯಃ ಪಂಚಾಕ್ಷರವಿವರ್ಜಿತಃ ।
ತತ್ಪಾಪಂ ಮೇ ಭವೇದ್ವ್ಯಾಘ್ರ ಯದ್ಯಹಂ ನಾಗಮೇ ಪುನಃ ॥೪೮॥

ಅನ್ಯದೇವ ಸಮಂ ಪಶ್ಯನ್ ಮಹೇಶಂ ಯಶ್ಚ ನಿಂದತಿ ।
ತತ್ಪಾಪಂ ಮೇ ಭವೇದ್ವ್ಯಾಘ್ರ ಯದ್ಯಹಂ ನಾಗಮೇ ಪುನಃ ॥೪೯॥

---

ಮುಂದೆ ಶಪಥಪೂರ್ವಕವಾಗಿ ಹೀಗೆ ಹೇಳುವೆನು. ಒಂದು ವೇಳೆ ಆಡಿದ ಮಾತಿನಂತೆ ನಾನು ಬರದಿದ್ದರೆ, ಎಳೆಗರುವಿನಿಂದ ಕೂಡಿದ ಹಸುವಿನಿಂದ ಕರುವಿಗೆ ಹಾಲನ್ನು ಬಿಡದೆ ಪೂರ್ತಿಯಾಗಿ ಕರೆದರೆ, ಯಾವ ಪಾಪವು ಕರೆದವನಿಗೆ ಸಂಭವಿಸುವುದೋ, ಅಂತಹ ಪಾಪವು ನನಗೆ ಸಂಭವಿಸಲಿ. ॥೪೨-೪೩॥

ರಾಜನಾದವನು ಪ್ರಜೆಗಳನ್ನು ರಕ್ಷಿಸದೆ ಅವರಿಂದ ಆದಾಯದ ಆರನೆಯ ಒಂದುಭಾಗವನ್ನು ಕಂದಾಯದ ರೂಪವಾಗಿ ತೆಗೆದುಕೊಂಡರೆ, ಬ್ರಾಹ್ಮಣನಾದವನು ವೇದಾಧ್ಯಯನವಿಲ್ಲದೆ ಸಂಧ್ಯಾದಿ ಕರ್ಮಹೀನನಾಗಿದ್ದರೆ, ಪತಿವ್ರತೆಯೆನಿಸಿದವಳು ಪತಿಯನ್ನು ಬಿಟ್ಟು ಜಾರನನ್ನು ಹೊಂದಿದರೆ, ಯಾವ ಪಾಪವು ಅವರಿಗೆ ಸಂಭವಿಸುವುದೋ ಅಂತಹ ಪಾಪವು ನನಗೂ ಒದಗಲಿ. ॥೪೪-೪೫-೪೬॥

ಶಿವಾರ್ಚನೆ ಮಾಡದೆ, ಭಸ್ಮರುದ್ರಾಕ್ಷಿಗಳನ್ನು ಧರಿಸದೆ, ರುದ್ರಾಧ್ಯಾಯಗಳನ್ನು ಪಠಿಸದೆ, ಶಿವಪಂಚಾಕ್ಷರಿಯನ್ನು ಜಪಿಸದೆ, ಈಶ್ವರನನ್ನು ಇತರ ದೇವತೆಗಳಿಗೆ ಸಮನೆಂದು ಅರಿತು ಆ ಮೂಲಕ ಮಹೇಶ್ವರನನ್ನು ದೂಷಿಸುವಂತಹ ಪಾಪಿಷ್ಠರಿಗೆ, ಯಾವ ಯಾವ ಪಾಪಗಳು ಸಂಭವಿಸುತ್ತವೆಯೋ, ಅಂತಹ ಪಾಪಕ್ಕೆ

ಸೋಮವಾರೇ ಪ್ರದೋಷೇ ಚ ಚತುರ್ದಶ್ಯಷ್ಟಮೀಷು ಚ ।
ದಿವಾ ಭುಂಕ್ತೇ ಚ ಯೋ ಮೋಹಾಚ್ಛಿವಲಿಂಗಾರ್ಚನೋಜ್ಝಿತಃ ।
ತತ್ಪಾಪಂ ಮೇ ಭವೇದ್ವ್ಯಾಘ್ರ ಯದ್ಯಹಂ ನಾಗಮೇ ಪುನಃ ॥೫೦॥

ಊರ್ಧ್ವಪುಂಡ್ರಾಂಕಿತೋ ಯಶ್ಚ ಚಕ್ರಾಂಕೋ ಮೃದ್ಭಿರೇವ ಹಿ ।
ತತ್ಪಾಪಂ ಮೇ ಭವೇದ್ವ್ಯಾಘ್ರ ಯದ್ಯಹಂ ನಾಗಮೇ ಪುನಃ ॥೫೧॥

ಏವಂ ಸಾ ನಂದಿನೀ ಶಾಪಾನುಕ್ತ್ವಾ ವತ್ಸಂ ಸಖೀಂ ಯಯೌ ।
ಸಾ ಪಾಯಯಿತ್ವಾ ವತ್ಸಂ ಸ್ವಮಾಪೃಚ್ಛ್ಯ ಚ ಸಖೀಜನಂ ॥೫೨॥

ಮಾತರಂ ತಾಂ ಸಮಾಲಿಂಗ್ಯ ಯಯೌ ಸಾ ಹೃಷ್ಟಮಾನಸಾ ।
ತಾಂ ವತ್ಸಸಹಿತಾಂ ವ್ಯಾಘ್ರೋ ದದರ್ಶಾಗಚ್ಛತೀಂ ಚ ಸಃ ॥೫೩॥

ವ್ಯಾಘ್ರಂ ಪ್ರಣಮ್ಯ ಸಾ ತಸ್ಥೌ ವಿನಯಾವನತಾನನಾ ।
ಪ್ರಾಹ ವ್ಯಾಘ್ರಂ ತದಾ ದೇವಿ ನಂದಿನೀ ವಿಶ್ವನಂದಿನೀ ॥೫೪॥

---

ನಾನೂ ಗುರಿಯಾಗುವೆನು ಅಲ್ಲದೇ ಸೋಮಪ್ರದೋಷ, ಕೃಷ್ಣಚತುರ್ದಶೀ, ಅಷ್ಟಮೀ ಮೊದಲಾದ ಶೈವತಿಥಿಗಳಲ್ಲಿ ಶಿವಪೂಜೆಮಾಡದೆ ಮಧ್ಯಾಹ್ನ ಊಟಮಾಡಿದವರಿಗೆ ಒದಗುವ ದುಷ್ಕೃತಗಳು ನನಗೂ ಉಂಟಾಗಲಿ. ॥೪೭-೪೮-೪೯-೫೦॥

ಒಂದುವೇಳೆ ನಾನು ಹಿಂದಿರುಗಿ ಬರದಿದ್ದರೆ, ಊರ್ಧ್ವಪುಂಡ್ರಗಳನ್ನು ಧರಿಸಿಕೊಂಡು, ಗೋಪೀಚಂದನ (ಮಣ್ಣು) ದಿಂದ ಚಕ್ರಾಕಾರವನ್ನು ಹಾಕಿಕೊಂಡವನಿಗೆ ಬರುವ ಪಾಪಶೇಷವು ನನಗೆ ಬರಲಿ" ಎಂದು ಪ್ರತಿಜ್ಞೆಮಾಡಿ ಹುಲಿಯಿಂದ ಅನುಜ್ಞಾತಳಾಗಿ ಆ ನಂದಿನೀಧೇನುವು ತನ್ನ ಕರುವಿದ್ದೆಡೆಗೆ ಬಂದು, ಕರುವಿಗೆ ಹಾಲನ್ನು ಕುಡಿಸಿ ಸಖಿಯರನ್ನೆಲ್ಲಾ ನೋಡಿ, ಅವುಗಳಿಂದ ಬೀಳ್ಕೊಂಡು ಮತ್ತೆ ಹೊರಟಿತು. ॥೫೧-೫೨॥

ಹಾಗೆಯೇ ಮುದಿಯಾದ ತಾಯಿಹಸುವನ್ನೂ ಆಲಿಂಗಿಸಿಕೊಂಡು, ತನ್ನ ಕರುವಿನೊಡನೆ ಹುಲಿಯಿರುವ ಸ್ಥಳಕ್ಕೆ ಬಂದಿತು. ಒಡನೆಯೇ ನಂದಿನಿಯು ಹುಲಿಯನ್ನು ನೋಡಿ ಅದರ ಮುಂದೆ ತಲೆಯನ್ನು ಬಗ್ಗಿಸಿಕೊಂಡು ವಿನಯದಿಂದ ನಿಂತುಕೊಂಡು, ॥೫೩-೫೪॥

ಯಥೇಷ್ಟಂ ಮಾಂ ಮಹಾಭಾಗ ಖಾದ ತ್ವಂ ರುಧಿರಂ ಪಿಬ ।
ಭೀಮೇಶ್ವರೋ ಮೇ ತುಷ್ಟಸ್ಸ್ಯಾತ್ ಪ್ರಾಣದಾನಾನ್ಮಹೇಶ್ವರಃ ॥೫೫॥
ಏತಸ್ಮಿನ್ನಂತರೇ ವತ್ಸೋ ವ್ಯಾಘ್ರಂ ಪ್ರಾಹ ಮಹಾಬಲಂ ॥೫೬॥

॥ ವತ್ಸ ಉವಾಚ ॥

ಮುಂಚ ಮಸ್ಮಾತರಂ ವ್ಯಾಘ್ರ ಭಕ್ಷಾದ್ಯ ಪಲಲಂ ಮಮ ।
ಕೋಮಲಂ ತವ ತೃಪ್ತಿಶ್ಚ ಭವಿಷ್ಯತಿ ನ ಸಂಶಯಃ ॥೫೭॥

ವ್ಯಾಘ್ರಸ್ತ್ವರ್ಣಕವಾಕ್ಯೇನ ನಂದಿನ್ಯಾಃ ಸತ್ಯವಾಕ್ಯತಃ ।
ಹರ್ಷವರ್ಷೇಣ ಮಹತಾ ಸ್ವರೂಪಂ ಪರಮಾಸ್ಥಿತಃ ॥೫೮॥

ತ್ರಿಣೇತ್ರೋ ನೀಲಕಂಠಶ್ಚ ಮಹೋಕ್ಷವರವಾಹನಃ ।
ಸವತ್ಸಾ ನಂದಿನೀ ಪಾದೌ ಮದೀಯೌ ಪ್ರಣತೌ ತದಾ ॥೫೯॥

ತುಷ್ಟಾವ ಮಾಂ ತದಾ ಶಂಭುಂ ವರಂ ದಾತುಂ ಸಮುತ್ಥಿತಂ ॥೬೦॥

---

ಎಲೈ ಹುಲಿರಾಯನೇ, ಇಗೋ ನನ್ನ ರಕ್ತವನ್ನು ಪಾನಮಾಡು. ಅದರಿಂದ ಇಲ್ಲಿರುವ ಭೀಮೇಶ್ವರನು ಸಂತುಷ್ಟನಾಗಲಿ" ಎಂದು ಹೇಳುತ್ತಿರುವಾಗಲೇ ಆ ಕರುವು ಅಲ್ಲಿಗೆ ಬಂದು ಹುಲಿಯ ಎದುರಿನಲ್ಲಿ ನಿಂತು ಹೀಗೆಂದಿತು. ॥೫೫-೫೬॥

"ಎಲೈ ವ್ಯಾಘ್ರವೇ, ನನ್ನ ತಾಯಿಯನ್ನು ತಿನ್ನಬೇಡ. ನಿನಗೆ ಹಸಿವಾಗುವುದಾದರೆ ನನ್ನ ಮಾಂಸವನ್ನು ಭಕ್ಷಿಸು. ನನ್ನ ಮಾಂಸವು ಬಹಳ ಕೋಮಲವಾಗಿರುವುದು" ಎಂದು ಹೇಳಿದ ಕರುವಿನ ಮಾತನ್ನೂ, ತಾಯಿಯ ಸತ್ಯನಿರ್ವಹಣತೆಯನ್ನೂ ಕಂಡು ವ್ಯಾಘ್ರವು ಸ್ವಸ್ವರೂಪವನ್ನು ತಾಳಿತು. ಅಂದರೆ ನಾನು ಪ್ರತ್ಯಕ್ಷನಾಗಿ ನಿಂತೆನು. ॥೫೭-೫೮॥

ನೇತ್ರತ್ರಯಗಳಿಂದಲೂ, ದಿವ್ಯಕಂಠದಲ್ಲಿ ಕಂಡುಬರುವ ನೀಲವರ್ಣದಿಂದಲೂ, ವಾಹನವಾದ ವೃಷಭದೊಡನೆಯೂ, ಪ್ರತ್ಯಕ್ಷನಾದ ನನ್ನ ಆಕಾರವನ್ನು ನೋಡಿ ಆ ನಂದಿನಿಯು ನನ್ನನ್ನು ಹೀಗೆ ಸ್ತುತಿಸತೊಡಗಿತು. ನಾನಾದರೋ ಅದರ ಭಕ್ತಿಗೆ ಮೆಚ್ಚಿ ವರಕೊಡುವವನಾಗಿದ್ದೆನು. ॥೫೯-೬೦॥

॥ ನಂದಿನ್ಯುವಾಚ ॥

ದೇವಸ್ತ್ವಂ ನಮಸಾಂ ಪತಿಃ ಪಶುಪತಿಶ್ಚೋಮಾಪತಿರ್ವಿಟ್ಪತಿಃ
ಸತ್ತ್ರೀನಾಂ ಚ ಪತಿರ್ವನಸ್ಯ ಚ ಪತಿಸ್ತ್ವಂ ವೈ ದಿಶಾನಾಂ ಪತಿಃ ।
ಲುಂಚಾನಾಂ ಚ ಪತಿಃ ಸದೋ ಗಣಪತಿಸ್ತ್ವಂ ವೈ ಹಿರಣ್ಯಪತಿಃ
ಅಶ್ವಾನಾಂ ಚ ಪತಿಃ ಸಭಾಪತಿರಸಿ ಗೃಹ್ಯಸ್ಯ ವ್ರಾತೇಃ ಪತಿಃ ॥೬೧॥

ಸೇನಾಯಾಶ್ಚ ಪತಿಸ್ತ್ವದೀಯಚರಣಂ ಪ್ರಾಪ್ತಾ ಪಶುತ್ವಂ ಹರ ॥೬೨॥

ಇತ್ಥಂ ಸಾ ನಂದಿನೀ ಪ್ರಾಹ ತಾಂ ಪಶುತ್ವಾದಮೋಚಯಂ ।
ಮತ್ಸಾರೂಪ್ಯಂ ತದಾ ದತ್ತಂ ತತ್ಸ್ತುತ್ಯಾ ತೋಷಿತೋಽಂಬಿಕೇ ॥೬೩॥

ಇದಂ ತೇ ಭೀಮನಾಥಸ್ಯ ಚರಿತಂ ಕಥಿತಂ ಮಯಾ ।
ಶ್ರುತ್ವಾ ಸತ್ಯಪರೋ ದೇವಿ ನಾನ್ಯಥೋ ಭವಿತಾ ನರಃ ॥೬೪॥

ಸತ್ಯೇನ ಲೋಕಾನ್ ಜಯತಿ ಸತ್ಯೇನ ತಪತೇ ರವಿಃ ।
ಸತ್ಯೇನ ಸಂಸ್ಥಿತಾ ಪೃಥ್ವೀ ಸರ್ವಂ ಸತ್ಯೇ ಪ್ರತಿಷ್ಠಿತಂ ॥೬೫॥

---

"ಮಹಾದೇವನೇ, ನೀನು ಸಕಲ ಪೂಜ್ಯವಸ್ತುಗಳಿಗೂ ಒಡೆಯನೆನೆಸಿದವನು. ಪಶುರೂಪಿಗಳಾದ ಸಕಲ ಪ್ರಾಣಿಗಳಿಗೂ, ಪಾರ್ವತಿಗೂ, ಸಕಲ ಸೈನ್ಯಗಳಿಗೂ, ಕಾಡು, ದಿಕ್ಕುಗಳು, ಚೋರರು, ಸಭೆಗಳು, ಗಣಗಳು, ಹಿರಣ್ಯರಾಶಿ, ಕುದುರೆಗಳು, ಗೃಹ್ಯಾದಿ ಸಕಲ ಅಗ್ನಿಗಳು ಇವೆಲ್ಲಕ್ಕೂ ನೀನು ಅಧಿಪತಿಯೆನಿಸಿರುವೆ. ಸಮಸ್ತ ಸೈನ್ಯಕ್ಕೂ ನೀನೆ ಯಜಮಾನನೆನಿಸಿರುವೆ. ಇಂತಹ ಮಹಾದೇವನಾದ ನಿನ್ನ ಪಾದಾರವಿಂದಗಳಿಗೆ ಭಕ್ತಿಯಿಂದ ಎರಗುವೆನು." ॥೬೧-೬೨॥

ಹಾಗೆ ಮಾಡಿದ ಪ್ರಾರ್ಥನೆಯನ್ನು ಕೇಳಿ ನಾನು ಸಂತೋಷಪಟ್ಟು ಅದಕ್ಕೆ ಪಶುತ್ವವನ್ನು ಹೋಗಲಾಡಿಸಿ ನನ್ನ ಸಾರೂಪ್ಯವನ್ನು ದಯಪಾಲಿಸಿದೆನು. ದೇವಿಯೇ, ಈ ಭೀಮನಾಥನ ಚರಿತ್ರೆಯನ್ನು ಕೇಳಿದವರು ನಿಜವಾಗಿಯೂ ಸತ್ಯವಂತರಾಗುವರು ಎಂಬುದರಲ್ಲಿ ಸಂಶಯವೇ ಇಲ್ಲ. ॥೬೪॥

ಸಕಲ ಲೋಕವನ್ನೂ ಜಯಿಸತಕ್ಕುದೇ ಸತ್ಯ. ಸೂರ್ಯನು ಲೋಕವನ್ನು ದಹಿಸುವುದೇ ಸತ್ಯದಿಂದ. ಸತ್ಯವಶದಿಂದಲೇ ಭೂಮಿಯು ಸ್ಥಿರವಾಗಿ ನಿಂತಿರುವುದು. ಅಂತೂ ಒಟ್ಟಿನಲ್ಲಿ ಎಲ್ಲವೂ ಸತ್ಯದಲ್ಲಿ ಪರಿಣಾಮಗೊಳ್ಳುವುದು. ಎಲೌ ದೇವಿಯೇ,

ಪಶುಪತಿಮಥ ಮಾಂ ಪ್ರಣಮ್ಯ ಸಾ ಗೌ
ರ್ಗಹನತರಂ ವಿಜಹೌ ಭವೋಗ್ರಬಂಧಂ ।
ಮುರಹರವಿಧಿದೇವವಂದ್ಯಮೌಳಿಂ
ಸುರವರಮಂಬಿಕೆಯಾ ನತೋಽಸ್ಮಿ ಭೀಮನಾಥಂ ॥೬೬॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಕಾಲಂಜರಕ್ಷೇತ್ರ
ಭೀಮೇಶ್ವರಮಾಹಾತ್ಮ್ಯೇ ವ್ಯಾಘ್ರಗೋಸಂವಾದೇ
ಸತ್ಯವಾಗ್ಗೋಸಾರೂಪ್ಯಪ್ರದಾನಂ ನಾಮ
ಷಟ್‌ತ್ರಿಂಶೋಽಧ್ಯಾಯಃ

---

ಹಾಗೆ ನಂದಿನೀಧೇನುವು ಪಶುಪತಿಯೂ, ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳಿಂದ ವಂದ್ಯನೂ, ಭೀಮೇಶ್ವರನೆಂಬ ಹೆಸರಿನಿಂದ ಪ್ರಸಿದ್ಧನಾದವನೂ ಆದ ನನ್ನನ್ನು ನಾನಾವಿಧವಾಗಿ ಸ್ತುತಿಸಿ, ಯಾವ ರೀತಿಯಿಂದಲೂ ತಪ್ಪಿಸಿಕೊಳ್ಳಲಾಗದ ಭವ ಬಂಧನವನ್ನು ತಪ್ಪಿಸಿಕೊಂಡು, ಕೊನೆಗೆ ಶಿವಸಾಯುಜ್ಯವನ್ನೇ ಹೊಂದಿತು. ಆದ್ದ ರಿಂದ ಎಲೌ ದೇವಿಯೇ, ಯಾರು ತಮ್ಮ ನಡೆವಳಿಕೆಗಳಿಂದ ಸತ್ಯವನ್ನು ರಕ್ಷಿಸಿ ಕೊಂಡು ಬರುವರೋ, ಅಂತಹವರಿಗೆ ಭೀಮೇಶ್ವರನೆನಿಸಿದ ನಾನು ಸಕಲ ಸೌಭಾಗ್ಯ ಗಳನ್ನೂ ಒದಗಿಸುತ್ತಾ ಅವರನ್ನು ಕಾಪಾಡಿ ಅವರಿಗೆ ನನ್ನ ಸಾಯುಜ್ಯವನ್ನು ಕೊಡುವೆನು. ಇದರಲ್ಲಿ ಸಂಶಯಪಡಬೇಡ ಎಂದು ಪರಶಿವನು ಪಾರ್ವತಿಗೆ ಹೇಳಿದನು. ॥೬೫-೬೬॥

ಇಲ್ಲಿಗೆ ಶಿವರಹಸ್ಯದ ಪಂಚಮಾಂಶದಲ್ಲಿ ಕಾಲಂಜರಕ್ಷೇತ್ರದ ಭೀಮೇಶಮಹಿಮೆ
ಯನ್ನು ವಿವರಿಸುವ ಮೂವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಸಪ್ತತ್ರಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಶೃಣು ಶೈಲಸುತೇ ಕಶ್ಚಿದಾಸೀದಾವಂತಿಕೋ ದ್ವಿಜಃ ।
ಸದಾರತನಯಸ್ತತ್ರ ನಾಮ್ನಾ ಭೂತ್ಸ ಸುದರ್ಶನಃ ॥೧॥

ತೇನ ಸಂಪಾದಿತಂ ದ್ರವ್ಯಮಸಂಖ್ಯಂ ಹೈಮರೂಪ್ಯಕಂ ।
ದಾಸೀ ದಾಸಾಶ್ಚ ತಸ್ಯಾಸನ್ ಮಹಿಷ್ಯಜಗವಾದಿಕಂ ॥೨॥

ಸದಾರಭೋಗೇನ ಸದಾ ವೇಶ್ಯಾಚೇಟೀರತಿರ್ದ್ವಿಜಃ ।
ಕಾಲೋ ನೀತಸ್ಸದಾ ತೇನ ದುರ್ವಾರ್ತಾಕಲಹಾದಿಭಿಃ ॥೩॥

---

## ಮೂವತ್ತೇಳನೆಯ ಅಧ್ಯಾಯ

ಪರಶಿವನು ಮತ್ತೆ ಪಾರ್ವತೀದೇವಿಗೆ ಧರ್ಮಸೂಕ್ಷ್ಮವನ್ನು ವಿವರಿಸುತ್ತಾ ಹೀಗೆಂದನು “ ಎಲೌ ಗಿರಿರಾಜನಂದಿನಿಯೇ, ಹಿಂದೆ ಅವಂತೀಕ್ಷೇತ್ರದಲ್ಲಿ ಸುದರ್ಶನನೆಂಬ ಒಬ್ಬ ಬ್ರಾಹ್ಮಣನು ಪತ್ನೀಪುತ್ರ ಸಮೇತನಾಗಿ ವಾಸಮಾಡಿಕೊಂಡಿದ್ದನು. ಆತನು ಬಹು ದ್ರವ್ಯ ಸಂಪಾದನೆಮಾಡಿ, ಅನೇಕ ದಾಸದಾಸಿಯರನ್ನೂ, ಹಸು, ಎಮ್ಮೆ ಮೊದಲಾದ ಅನೇಕ ಪ್ರಾಣಿಗಳನ್ನೂ ಬಹಳವಾಗಿ ಪಡೆದಿದ್ದನು. ॥೧-೨॥

ಅಷ್ಟಿದ್ದರೂ ಆತನು ಸದಾ ಪತ್ನಿ ಸೌಖ್ಯದಿಂದಲೂ, ವೇಶ್ಯೆಯರು, ಚೇಟಿಯರು ಮೊದಲಾದವರ ಸಂಸರ್ಗದಿಂದಲೂ, ಕೆಲಸಕ್ಕೆ ಬಾರದ ವ್ಯವಹಾರಗಳಿಂದಲೂ

ತೇನಾನ್ನದಾನಂ ನ ಕೃತಂ ಬ್ರಾಹ್ಮಣೇಭ್ಯೋ ಮಹೇಶ್ವರಿ ।
ನ ಹಿರಣ್ಯಂ ನ ವಸ್ತ್ರಂ ಚ ನ ಗೃಹಂ ಶಯನಾದಿಕಂ ॥೪॥

ನೈವಾರಾಮಃ ಕೃತಸ್ತೇನ ಛಾಯಾವೃಕ್ಷೋಽಪಿ ನೋ ಪಥಿ ।
ನ ಬಿಲ್ವಾರೋಪಣಂ ತೇನ ಕೃತಂ ನಾಶ್ವತ್ಥರೋಪಣಂ ॥೫॥

ತಟಾಕಂ ವಾಪಿ ವಿಪುಲಂ ಶರಣ್ಯಂ ಸರ್ವದೇಹಿನಾಂ ।
ನ ಕೂಪಃ ಖಾನಿತಸ್ತೇನ ತೃಷಾರ್ತೇಭ್ಯೋ ಮರುತ್ಸ್ಥಲೇ ॥೬॥

ಗ್ರೀಷ್ಮೇ ಘರ್ಮಾಂಶುತಪ್ತಾನಾಂ ಪ್ರಪಾ ನೈವ ಚ ಕಾರಿತಾ ।
ಛಾಯಾಮಂಟಪನಿರ್ಮಾಣಂ ವರ್ಷಾತಪನಿವಾರಕಂ ॥೭॥

ನಾಕಾರಿ ತೇನ ದೇವೇಶಿ ಶಿವಲಿಂಗಾಲಯಂ ತಥಾ ।
ನೈವ ಭೂತಿರ್ಗಲಾಂಗೇಷು ಲಲಾಟೇ ಚಾಸ್ತಿ ಮಸ್ತಕೇ ॥೮॥

---

ಕಾಲಕಳೆಯುತ್ತಿದ್ದನು. ಆತನು ಒಂದು ದಿನವಾದರೂ ಬ್ರಾಹ್ಮಣರಿಗೆ ವಸ್ತ್ರ, ಹಿರಣ್ಯ, ಗೃಹ, ಶಯನ ಮುಂತಾದ ವಸ್ತುಗಳನ್ನು ದಾನರೂಪವಾಗಿ ಕೊಟ್ಟವನಲ್ಲ. ॥೩-೪॥

ಆತನು ಪ್ರಯಾಣಿಕರ ಸೌಕರ್ಯಕ್ಕಾಗಿ ಸಾಲುಮರಗಳನ್ನಾಗಲಿ, ಉದ್ಯಾನ ವನಗಳನ್ನಾಗಲಿ ನಿರ್ಮಿಸಲಿಲ್ಲ. ಶಿವಪೂಜಾರ್ಥವಾಗಿ ಬಿಲ್ವವೃಕ್ಷವನ್ನಾಗಲಿ, ಅರಳೀ ಮರದ ಸ್ಥಾಪನೆಯನ್ನಾಗಲಿ ರಚಿಸಲಿಲ್ಲ. ಸರ್ವರಿಗೂ ಅನುಕೂಲವಾಗುವಂತೆ ನೀರಿಲ್ಲದ ಸ್ಥಳಗಳಲ್ಲಿ ಬಾವಿ, ಕೆರೆ ಮುಂತಾದುವುಗಳನ್ನೂ ನಿರ್ಮಾಣಮಾಡಿಸಲಿಲ್ಲ. ॥೫-೬॥

ಬೇಸಗೆಯಲ್ಲಿ ಬಳಲಿದವರ ತೃಪ್ತಿಗಾಗಿ ಅರವಟ್ಟಿಗೆಗಳನ್ನಾಗಲಿ, ಬಿಸಿಲು, ಮಳೆ ಮೊದಲಾದುವುಗಳನ್ನು ಪರಿಹರಿಸುವ ಚತ್ರ, ಚಾವುಡಿಗಳನ್ನಾಗಲಿ ಕಟ್ಟಿಸ ಲಿಲ್ಲ. ಶಿವಾಲಯುವನ್ನು ನಿರ್ಮಿಸಿ ಶಿವಾರ್ಚನೆಯನ್ನೂ ಆತನು ಮಾಡಲಿಲ್ಲ. ಮತ್ತು ಮಾಡಿಸಲಿಲ್ಲ. ಕೊನೆಗೆ ತನ್ನ ಕಂಠ, ಲಲಾಟ ಮುಂತಾದ ಪ್ರದೇಶಗಳಲ್ಲಿ ಭಸ್ಮಧಾರಣೆಯನ್ನು ಸಹ ಮಾಡಿಕೊಳ್ಳುತ್ತಿರಲಿಲ್ಲ. ॥೭-೮॥

ತ್ರಿಪುಂಡ್ರೋ ಲೇಪಿತೋ ನೈವ ನೈವ ಭಸ್ಮಾವಗುಂಠನಂ ।
ನೈವ ಪಂಚಾಕ್ಷರೋ ಮಂತ್ರಃ ಶ್ರುತೋ ವಾ ಕಾ ಜಪೇ ಕಥಾ ॥೯॥

ರುದ್ರಾಧ್ಯಾಯಜಪಸ್ತೇನ ನ ದೃಷ್ಟೋ ನಾಪಿ ವಾ ಶ್ರುತಃ ।
ಶಿವಲಿಂಗಾರ್ಚನಂ ನೈವ ಕೃತಂ ಬಿಲ್ವದಲೈಃ ಶಿವೇ ॥೧೦॥

ಶಿವನೈವೇದ್ಯವಾರ್ತಾಪಿ ತಸ್ಯ ದೂರತ ಏವ ಹಿ ।
ಶಾಂಭವೈಸ್ಸಹ ಸಲ್ಲಾಪೇ ತಸ್ಯ ಹೃಲ್ಲಾಸ ಏವ ನ ॥೧೧॥

ಶಿವಲಿಂಗಂ ನೈವ ದೃಷ್ಟಂ ಜನ್ಮಮಧ್ಯೇ ಶಿವಾಲಯೇ ।
ನ ಗೃಹೇ ಕಿಮು ವಕ್ತವ್ಯಂ ಲಿಂಗಂ ಬಿಲ್ವದಳಾರ್ಚಿತಂ ॥೧೨॥

ನ ಸ್ನಾನಂ ನ ಜಪೋ ಹೋಮಃ ಸ್ವಾಧ್ಯಾಯಃ ಪಿತೃಪೂಜನಂ ।
ನ ಶ್ರೌತಸ್ಮಾರ್ತಕರ್ಮಾಣಿ ಸ ಕರೋತಿ ದ್ವಿಜೋಪಿ ಸನ್ ॥೧೩॥

ನ ಸಂಧ್ಯಾ ವಂದಿತಾ ತೇನ ಕಾಲೇ ಪಾಪಪ್ರಣಾಶಿನೀ ।
ಗಾಯತ್ರೀ ಜಪಮಾತ್ರೇವಾ ನಾಭೂತ್ಸೋ ಹಿ ದ್ವಿಜಾಧಮಃ ॥೧೪॥

---

ಭಸ್ಮತ್ರಿಪುಂಡ್ರ, ಭಸ್ಮಲೇಪನ ಇವುಗಳಲ್ಲಿ ಅವನಿಗೆ ಆಸೆಯೇ ಇರಲಿಲ್ಲ. ಶಿವಪಂಚಾಕ್ಷರೀಮಂತ್ರ, ರುದ್ರಾಧ್ಯಾಯ ಈ ಶೈವಮಂತ್ರಗಳನ್ನು ಆತನು ಕೇಳಿಯೂ ಇರಲಿಲ್ಲ. ಜಪಿಸಿಯೂ ಇರಲಿಲ್ಲ. ಒಂದುಸಾರಿಯಾದರೂ ಪವಿತ್ರಗಳಾದ ಬಿಲ್ವಪತ್ರೆಗಳಿಂದ ಶಿವಲಿಂಗಾರ್ಚನೆ ಮಾಡಲಿಲ್ಲ. ॥೯-೧೦॥

ಅವನು ಎಂದೂ ಶಿವನೈವೇದ್ಯವನ್ನು ಭಕ್ಷಿಸಿದವನಲ್ಲ. ಈಶ್ವರಭಕ್ತರೊಡನೆ ಮಾತನಾಡಿ ತನ್ನ ಮನಸ್ಸನ್ನು ಸಂತೋಷಗೊಳಿಸಿದವನಲ್ಲ. ಅವನ ಜನ್ಮದಲ್ಲಿ ಒಂದು ಸಾರಿಯಾದರೂ ಶಿವಾಲಯಕ್ಕೆ ಹೋಗಿ ಶಿವಲಿಂಗದರ್ಶನಮಾಡಲಿಲ್ಲ. ಇನ್ನು ಮನೆಯಲ್ಲಿ ಎಂದಾದರೂ ಬಿಲ್ವಾರ್ಚನೆಯಿಂದ ಈಶ್ವರನನ್ನು ಅರ್ಚಿಸುವುದುಂಟೇ ? ॥೧೧-೧೨॥

ಆತನು ಜಾತಿಯಲ್ಲಿ ಬ್ರಾಹ್ಮಣನಾದರೂ, ಸ್ನಾನ, ಜಪ, ಹೋಮ, ವೇದಾಧ್ಯಯನ, ಪಿತೃದೇವತಾಪೂಜೆ, ಶ್ರುತ್ಯುಕ್ತಗಳಾದ ಮತ್ತು ಸ್ಮೃತಿಪ್ರಚೋದಕಗಳಾದ ಯಾವ ಕರ್ಮಗಳನ್ನೂ ಆಚರಿಸಿದವನಲ್ಲ. ಕಾಲಕಾಲಕ್ಕೆ ನಡೆಸಬೇಕಾದ ಸಕಲ

ಶಿವಾಲಯೋ ವಾ ದೇವೇಶಿ ನ ದೃಷ್ಟಸ್ತೇನ ಶಂಕರಿ ।
ಶಿವೋತ್ಸವೇ ರಥಸ್ಥೋಽಪಿ ವೃಷಸ್ಥೋ ವಾ ಮಹೇಶ್ವರಃ ॥೧೫॥

ನ ದೃಷ್ಟಸ್ತೇನ ದೇವೇಶಿ ಪ್ರದೋಷೇ ಶಶಿಶೇಖರಃ ।
ಸೋಮವಾರೇ ತಥಾಷ್ಟಮ್ಯಾಂ ಚತುರ್ದಶ್ಯಾದಿಪರ್ವಣಿ ॥೧೬॥

ನ ದೃಷ್ಟಾ ದೀಪಮಾಲಾ ವಾ ದೂರಸ್ಥೇನಾಪಿ ಶಾಂಭವಿ ।
ಪ್ರದಕ್ಷಿಣನಮಸ್ಕಾರೈಃ ಸ್ತುತಿಭಿರ್ನ ಸ್ತುತಃ ಶಿವಃ ॥೧೭॥

ಸಹಸ್ರನಾಮಭಿಃ ಪೂಜಾ ನ ಶತಾಷ್ಟಾದಿನಾಮಭಿಃ ।
ನಾಭ್ಯರ್ಚಿತಃ ಪಶುಪತಿಃ ಸಾಕ್ಷಾತ್ಕೈವಲ್ಯದಾಯಕಃ ॥೧೮॥

ತರುಣೀಮೇವ ಸತತಂ ವಾರುಣ್ಯಾ ಸಹ ಸೇವತೇ ।
ಸ ತು ಪಾಪಾನ್ಯನಂತಾನಿ ಅಸಕೃಚ್ಚ ಕರೋತಿ ಹಿ ॥೧೯॥

ಸ ಗ್ರಾಮಪಾಲಾನಾಹೂಯ ದ್ವಿಜಾನಾಂ ಗೋಧನಂ ವಸು ।
ಸ ಲುಂಠಯತಿ ಪಾಪಾತ್ಮಾ ಗೃಹಾನುದ್ದೀಪಯತ್ಯಪಿ ॥೨೦॥

---

ಪಾಪನಿವಾರಕಗಳಾದ ಸಂಧ್ಯಾವಂದನ, ಗಾಯತ್ರೀಜಪ ಇವುಗಳಲ್ಲಿ ಒಂದುದಿನ ವಾದರೂ ದೃಢಮನಸ್ಸಿಡಲಿಲ್ಲ. ॥೧೩-೧೪॥

ಪಾರ್ವತಿಯೇ, ಆತನು ಈಶ್ವರಾಲಯಕ್ಕೆ ಹೋಗಿ, ರಥಾರೂಢನಾದ ಅಥವಾ ವೃಷಭಾರೂಢನಾದ ಶಂಕರನನ್ನು ಎಂದೂ ಕಣ್ಣಾರ ದರ್ಶನಮಾಡಲಿಲ್ಲ. ಸೋಮ ಪ್ರದೋಷ, ಅಷ್ಟಮಿ, ಚತುರ್ದಶೀ ಮುಂತಾದ ಶಿವಪ್ರೀತಿಕರಗಳಾದ ತಿಥಿಗಳಲ್ಲಿ ಆತನು ಈಶ್ವರದರ್ಶನ ಮಾಡಿದವನಲ್ಲ. ॥೧೫-೧೬॥

ದೂರದಲ್ಲಿ ನಿಂತಾದರೂ ಶಿವಾಲಯದಿಂದ ದೀಪೋತ್ಸವವನ್ನು ನೋಡಲಿಲ್ಲ. ಪ್ರದಕ್ಷಿಣನಮಸ್ಕಾರಗಳಿಂದಲೂ, ಸ್ತುತಿವಚನಗಳಿಂದಲೂ, ಸಹಸ್ರನಾಮ ಅಥವಾ ಅಷ್ಟೋತ್ತರಶತನಾಮಗಳಿಂದಲೂ ಮೋಕ್ಷಪ್ರದಾಯಕನಾದ ಶಂಕರನನ್ನು ಎಂದೂ ಸ್ತುತಿಸಲಿಲ್ಲ. ಪೂಜಿಸಲಿಲ್ಲ. ॥೧೭-೧೮॥

ಸ್ತ್ರೀಸೌಖ್ಯ, ಮದ್ಯಪಾನ ಇವುಗಳಲ್ಲಿ ಸದಾ ಅನುರಕ್ತನಾಗಿ ಮಾಡಬಾರದ ಅನೇಕ ಪಾಪಕಾರ್ಯಗಳನ್ನು ಪದೇ ಪದೇ ಮಾಡುತ್ತಾ, ಗ್ರಾಮಾಧಿಕಾರಿಗಳೊಡನೆ

ಮಧುಮಾಂಸಂ ತಿಲಂ ತೈಲಂ ತಂಡುಲಂ ಕಂಬಲಾನಿ ಚ ।
ಸ ವಿಕ್ರೀಣಾತಿ ಸತತಂ ಧನವೃದ್ಧ್ಯೈವ ಜೀವತಿ ॥೨೧॥

ಆಹೃತ್ಯ ಧೀವರಾನ್ ಪಾಪೀ ಕ್ರಯಾರ್ಥಂ ಮತ್ಸ್ಯಘಾತಕಃ ।
ಸದಾ ಕೃಷಿಪರೋ ನಿತ್ಯಂ ದೇವತಾತಿಥಿದೂಷಕಃ ॥೨೨॥

ವಿಧವಾ ಸಂಗನಿರತಃ ಸ ಕನ್ಯಾಮುಪಸೇವತೇ ।
ಬ್ರಹ್ಮದ್ರೋಹೇಷು ನಿರತೋ ದ್ವಿಜನಿಂದಾಪರಸ್ಸದಾ ॥೨೩॥

ಪಿಶುನೋ ರಾಜಗಾಮೀ ಚ ವಾಚಾಟೋಽಸೂಯಕಃ ಖಲಃ ।
ಶ್ರೋತ್ರಿಯೈಃ ಕೃತವೃತ್ತಿಸ್ಥೈರ್ಯಾಚಿತಸ್ತಾನಸೂಯತಿ ॥೨೪॥

ನ ಪಾರ್ವಣಂ ಕೃತಂ ತೇನ ಶ್ರಾದ್ಧಂ ಪಿತೃಮೃತೇಽಹನಿ ।
ಗವಾಂ ಸಂರಕ್ಷಕೋ ದೇವಿ ಕ್ಷೀರಪಾನಾರ್ಥಮೇವ ಹಿ ॥೨೫॥

---

ಒಳಸಂಚು ನಡೆಸಿ, ಬ್ರಾಹ್ಮಣರ ಗೋವು, ಹಣ, ಮನೆ, ಮಠ ಮುಂತಾದುವು ಗಳನ್ನು ಧ್ವಂಸಮಾಡಿಸುತ್ತಿದ್ದನು. ॥೧೯-೨೦॥

ಮದ್ಯ, ಮಾಂಸ, ಎಳ್ಳು, ಎಣ್ಣೆ, ಅಕ್ಕಿ, ಕಂಬಳಿ ಮುಂತಾದ ವಸ್ತುಗಳನ್ನು ಮಾರಿ, ಧನವನ್ನು ಕೂಡಿಟ್ಟು, ಅದರ ಬಡ್ಡಿಯಿಂದಲೇ ಹೊಟ್ಟೆಹೊರೆದುಕೊಳ್ಳು ತ್ತಿದ್ದನು. ಬೆಸ್ತರಿಂದ ಮೀನುಗಳನ್ನು ಹಿಡಿಸಿ ಮಾರುತ್ತಿದ್ದನು. ಸದಾ ವ್ಯವಸಾಯ ಮಾಡಿಸುತ್ತಾ ದೇವತೆಗಳನ್ನೂ, ಅತಿಥಿಗಳನ್ನೂ, ನಿಂದಿಸುತ್ತಾ ಕಾಲಕಳೆಯುತ್ತಿ ದ್ದನು. ॥೨೧-೨೨॥

ವಿಧವಾಸಂಗಮ, ಕನ್ಯಾಸಂಗಮ ಮುಂತಾದುವುಗಳಲ್ಲಿಯೇ ಆಸಕ್ತನಾಗಿರು ವನು. ಬ್ರಹ್ಮದ್ರೋಹ, ದ್ವಿಜದ್ರೋಹ ಮುಂತಾದುವುಗಳನ್ನೇ ನಡೆಸುತ್ತಾ, ಚಾಡಿ ಕೋರನಾಗಿ ರಾಜನಲ್ಲಿ ಪ್ರೀತಿಯನ್ನು ಗಳಿಸುತ್ತಾ ವಾಚಾಳಿಯಾಗಿ ಕಾಲಕಳೆಯು ತ್ತಿದ್ದನು. ಯಾರಾದರೂ ಶ್ರೋತ್ರಿಯರಾದವರು ದಾರಿದ್ರ್ಯದಿಂದ ಏನನ್ನಾದರೂ ಬಂದು ಯಾಚಿಸಿದರೆ ಅವರನ್ನು ದೂಷಿಸಿ ಕಳುಹಿಸುವನು. ಕೊನೆಗೆ ತನ್ನ ತಂದೆತಾಯಿಗಳ ವಾರ್ಷಿಕಶ್ರಾದ್ಧವನ್ನು ಸಹ ಮಾಡಿದವನಲ್ಲ. ಹಸುಗಳನ್ನು ಸಾಕುವುದು ತಾನು ಹಾಲುಕುಡಿಯುವುದಕ್ಕಾಯಿತೇ ಹೊರತು ಪರೋಪಕಾರ ದೃಷ್ಟಿಗೆ ಸೇರಲಿಲ್ಲ. ॥೨೩-೨೪-೨೫॥

ಸ ಬಾಲವತ್ಸಾಂ ಗಾಂ ದೋಗ್ಧ್ರೀಂ ವತ್ಸಕ್ಷೀರಂ ವಿವರ್ಜಯನ್ ।
ಶಿವದ್ರೋಹಪರೋ ನಿತ್ಯಂ ಸರ್ವದಾ ಜನಪೀಡಕಃ ॥೨೬॥

ಸ್ತ್ರೀಣಾಂ ದ್ರವ್ಯಾಣ್ಯಥಾದಾಯ ಗಣನಾವರ್ಜಿತಾನ್ಯಥಾ ।
ವೃದ್ಧ್ಯಾ ದಾಸ್ಯಾಮಿ ಚೇತ್ಯುಕ್ತ್ವಾ ನಿಷ್ಕಂ ತಾಸಾಂ ನ ದೀಯತೇ॥೨೭॥

ಧನಾರ್ಜನಂ ಸದಾ ದೇವಿ ಪಾಪೇನೈವಾಕರೋದ್ದ್ವಿಜಃ ।
ತದ್ಗ್ರಾಮವಾಸಿವಿಪ್ರಾಣಾಂ ಧಾನ್ಯಾನಿ ಸುಬಹೂನ್ಯಪಿ ॥೨೮॥

ಗೃಹ್ಣಾತಿ ಚ ಸದಾ ತೇಷಾಂ ಹೀನಾರ್ಘೇಣೈವ ದೀಯತೇ ।
ದುರ್ಭಿಕ್ಷಂ ಧ್ಯಾಯತಿ ಸದಾ ಧಾನ್ಯಾದಿಕ್ರಯಹೇತವೇ ॥೨೯॥

ಗೋಗಜಾಶ್ವಾವಿಕಾಂಶ್ಚೈವ ಸೈನಿಕೇ ಕ್ರಯಕೃತ್ಸದಾ ।
ತದ್ರಸಾನಾಂ ಚ ವಿಕ್ರೇತಾ ಯದಾ ವಾರ್ಧುಷಿಕಃ ಖಲಃ ॥೩೦॥

ಏವಂ ಸಂವಸತಸ್ತಸ್ಯ ತದಾಸೀಚ್ಚ ಜಲೋದರಃ ।
ಸ ವೃದ್ಧಿಮಗಮದ್ರೋಗಸ್ತಸ್ಯ ಪಾಪಬಲೇನ ಹಿ ॥೩೧॥

---

ಹಸುವಿನಿಂದ ಹಾಲುಕರೆಸುವಾಗ ಎಳೆಗರುವಿಗೂ ಒಂದುತೊಟ್ಟು ಹಾಲನ್ನು ಉಳಿಸುತ್ತಿರಲಿಲ್ಲ. ಹೀಗೆ ದ್ರೋಹಮಾಡಿ ಶಿವನಿಗೂ ಅದನ್ನು ಅರ್ಪಿಸದೆ ತಾನೇ ಕುಡಿದುಬಿಡುವನು. ಸ್ತ್ರೀಯರ ದ್ರವ್ಯಕ್ಕೆ ಬಡ್ಡಿಯನ್ನು ಕೊಡುತ್ತೇನೆಂದು ಆಸೆ ತೋರಿಸಿ, ತಾನು ಲೆಕ್ಕಪತ್ರವಿಲ್ಲದೆ ಅದನ್ನು ಅಪಹರಿಸಿ ಅವರಿಗೆ ಯಾವ ಸಹಾಯ ವನ್ನೂ ಮಾಡುತ್ತಿರಲಿಲ್ಲ. ಅಸಲಿಗೂ ಮೋಸಮಾಡಿಬಿಡುತ್ತಿದ್ದನು. ॥೨೬-೨೭॥

ಅದೇ ರೀತಿ ಅಧರ್ಮದಿಂದಲೇ ಆತನು ಬಹು ಧನಾರ್ಜನೆಮಾಡಿದ್ದನು. ಆ ಗ್ರಾಮದಲ್ಲಿ ವಾಸಿಸುತ್ತಿರುವ ಬ್ರಾಹ್ಮಣರ ಸಕಲ ಧನಧಾನ್ಯಗಳನ್ನೂ ಅಗ್ಗವಾಗಿ ಕೊಂಡುಕೊಂಡು ದುರ್ಭಿಕ್ಷವು ಬಂದರೆ ಅದನ್ನು ಹೆಚ್ಚಿನಬೆಲೆಗೆ ಮಾರಬಹುದೆಂದು ದುರ್ಭಿಕ್ಷಕಾಲವನ್ನೇ ಹಾರೈಸುತ್ತಿರುವನು. ॥೨೮-೨೯॥

ಹಸು, ಆನೆ, ಕುದುರೆ, ಆಡು ಮುಂತಾದ ಪ್ರಾಣಿಗಳು ಸ್ವಲ್ಪ ವಯಸ್ಸನ್ನು ಪಡೆದೊಡನೆ ಅವೆಲ್ಲವನ್ನೂ ಸೈನಿಕರಿಗೆ ಮಾರಿಬಿಡುವನು. ಅವುಗಳಿಂದ ಬರುವ ಹಾಲು ಮೊಸರುಗಳನ್ನೂ ಕ್ರಯಕ್ಕೆ ಕೊಡುತ್ತಿದ್ದನು. ಹೀಗೆ ವಾಸಮಾಡುತ್ತಿರುವ

ನ ಭಿಷಕ್ಸಂಪ್ರದಾನೇಽಪಿ ಔಷಧಾರ್ಥಂ ತದಾಂಬಿಕೇ ।
ಮತಿರಾಸೀಚ್ಚ ಲುಬ್ಧಸ್ಯ ಪರದ್ರವ್ಯಾಪಹಾರಿಣಃ ॥೩೨॥

ನ ಶಾಂತಿಹೋಮಕಾರ್ಯೇಷು ನೈವಾಸೀತ್ತದ್ಧನವ್ಯಯಃ ।
ಸದಾ ತಲ್ಪಗತಶ್ಚಾಸೀಜ್ಜಲೋದರನಿಪೀಡಿತಃ ॥೩೩॥

ಅತಿವೃಷ್ಟ್ಯಾ ತದಾ ಸಾಯಂ ತದ್ಗೃಹಂ ವಿಸ್ತೃತಂ ಸ್ಥಿತಂ ।
ಸಮಾಗತಸ್ತತ್ರ ಶೈವಃ ಪ್ರದೋಷೇ ಶಿವಪೂಜಕಃ ॥೩೪॥

ತಸ್ಯ ಭಾರ್ಯಾಽಥ ತಂ ವಿಪ್ರಂ ವಾಸಯಾಮಾಸ ವೈ ಗೃಹೇ ।
ಸೋಽಪಿ ವಿಪ್ರಸ್ತದಾ ಸಾಯಂ ಸ್ನಾತ್ವಾ ಭಸ್ಮವಿಭೂಷಿತಃ ॥೩೫॥

ರುದ್ರಾಕ್ಷಮಾಲಾಭರಣಶ್ಚಕಾರ ಶಿವಪೂಜನಂ ।
ಬಿಲ್ವಪತ್ರೈರ್ಧೂಪದೀಪೈಃ ಪ್ರಣಾಮಪ್ರಕ್ರಮೈಸ್ತದಾ ॥೩೬॥

---

ಆತನಿಗೆ ಒಂದು ಸಾರಿ ಜಲೋದರರೋಗವು ಪ್ರಾಪ್ತವಾಯಿತು. ಅದು ಅವನ ಪಾಪಕರ್ಮವಶದಿಂದ ದಿನದಿನಕ್ಕೂ ವೃದ್ಧಿಯನ್ನೇ ಪಡೆಯಿತು. ||೩೦-೩೧||

ಆಗಲೂ ರೋಗನಿವಾರಣೆಗಾಗಿ ವೈದ್ಯನಿಗೆ ಔಷಧದ ಮೂಲ್ಯವನ್ನು ಕೊಡುವುದಕ್ಕೂ ಮನಸ್ಸು ಬರಲಿಲ್ಲ. ಪರದ್ರವ್ಯಾಪಹಾರಿಯಾದ ಆತನ ಮನಸ್ಸು ಶಾಂತ್ಯಾದಿಗಳನ್ನು ನಡೆಸಿದರೆ ದ್ರವ್ಯ ನಷ್ಟವಾಗುವುದೆಂದು ತಿಳಿದು ಜಲೋದರ ರೋಗದಿಂದಲೇ ನರಳುತ್ತಾ ಕಾಲಕಳೆಯುತ್ತಿದ್ದಿತು. ||೩೨-೩೩||

ಹೀಗಿರುವಾಗ ಒಂದು ದಿನ ಸಾಯಂಕಾಲ ದೊಡ್ಡ ಮಳೆ ಬಂದಿತು. ಇವನ ಮನೆಯು ಬಹಳ ವಿಶಾಲವಾಗಿದ್ದುದರಿಂದ ಅಲ್ಲಿ ಸ್ವಲ್ಪಹೊತ್ತು ನಿಲ್ಲಲು ಒಬ್ಬ ಶಿವಪೂಜಕನಾದ ಬ್ರಾಹ್ಮಣನು ಬಂದನು. ಅದನ್ನು ನೋಡಿ ಅವನ ಹೆಂಡತಿಯು ಆ ಬ್ರಾಹ್ಮಣನಿಗೆ ಅವಕಾಶ ಮಾಡಿಕೊಟ್ಟು ಆ ರಾತ್ರಿ ಅಲ್ಲಿಯೇ ಇರಬಹುದೆಂದು ಅನುಮತಿಯಿತ್ತಳು. ಪ್ರದೋಷಕಾಲವಾಗಿದ್ದುದರಿಂದ ಆತನು ಅಲ್ಲಿಯೇ ಸ್ನಾನಮಾಡಿ ವಿಭೂತಿರುದ್ರಾಕ್ಷಿಗಳನ್ನು ಧರಿಸಿಕೊಂಡನು. ||೩೪-೩೫||

ಹಾಗೆಯೇ ಈಶ್ವರಪೂಜೆಯನ್ನು ವಿಧಿವತ್ತಾಗಿ ಬಿಲ್ವಪತ್ರಾದಿಗಳಿಂದಲೂ, ಧೂಪದೀಪನೈವೇದ್ಯ ತಾಂಬೂಲ ನಿರಾಜನಗಳಿಂದಲೂ ನೆರವೇರಿಸಿದನು. ಇದನ್ನೆಲ್ಲಾ

ಶಿವನೈವೇದ್ಯತಾಂಬೂಲೈರ್ನೀರಾಜನಪುರಸ್ಸರಂ ।
ಸ ಶಯಾನೋ ಗದಾರ್ತಶ್ಚ ಪಶ್ಯಂಸ್ತತ್ಕೃತಪೂಜನಂ ॥೩೭॥

ನೈವ ಕಿಂಚಿದಥೋವಾಚ ತದ್ಭಾರ್ಯಾ ತಂ ತದಾ ದ್ವಿಜಂ ।
ವಾಸಯಾಮಾಸ ತದ್ರಾತ್ರೌ ಭೋಜನಾಚ್ಛಾದನಾದಿಭಿಃ ॥೩೮॥

ತಾಮನುಜ್ಞಾಪ್ಯ ಶೈವೋಽಪಿ ಯಯೌ ಪ್ರಾತರ್ಯಥಾಗತಂ ।
ತಸ್ಮಾತ್ಸಪಂಚಮೇ ಚಾಹ್ನಿ ಹಿಕ್ಕೋರೂರ್ಧ್ವೋರ್ಧ್ವಕಂಠಕಃ ॥೩೯॥

ವಿವೃತ್ತನಯನೋತ್ಯರ್ಥಂ ಪ್ರಸಾರ್ಯ ಚರಣಾವುಭೌ ।
ಮೃತೋ ಯಮಭಟೈರ್ನೀತೋ ಬಧ್ವಾ ಪಾಶೈಃಕಶಾದಿಭಿಃ ॥೪೦॥

ತಾಡಿತಶ್ಚ ತದಾ ನೀತೋ ಮಾರ್ಗಂ ವೈವಸ್ವಕಂ ತದಾ ।
ತಂ ಭಾರ್ಯಾ ಚಾಪಿ ರುರುದೇ ಜಹೃಷುಸ್ತತ್ಪುರೇ ಜನಾಃ ॥೪೧॥

ತತೋ ದಗ್ಧೋ ಬಾಂಧವೈಶ್ಚ ಹಾ ಮೃತೋಯಮಿತಿ ದ್ವಿಜಃ ।
ನಾನಾಯಾತನಯಾ ವಿಪ್ರೋ ನೀತೋ ವೈವಸ್ವತಾಂತಿಕಂ ॥೪೨॥

---

ಜಲೋದರ ರೋಗಗ್ರಸ್ತನಾಗಿದ್ದ ಮನೆಯ ಯಜಮಾನನು ನೋಡುತ್ತಲೇ ಮಲಗಿದ್ದನು. ॥೩೬-೩೭॥

ಅದೃಷ್ಟವಶದಿಂದ ಆಗ ಪತ್ನಿಯನ್ನೇನೂ ವಿಶೇಷವಾಗಿ ದೂಷಿಸಲಿಲ್ಲ. ಆದರಿಂದ ಪತ್ನಿಯು ಆ ಶೈವನಿಗೆ ಆಹಾರಾದಿ ಉಪಚಾರಗಳಿಂದ ತೃಪ್ತಿಪಡಿಸಿ, ಅಲ್ಲಿಯೇ ಮಲಗಿಕೊಳ್ಳಲು ಹಾಸಿಗೆ, ಹೊದಿಕೆ ಮೊದಲಾದವುಗಳನ್ನು ಕೊಟ್ಟಳು. ಅದೇ ರೀತಿ ಶೈವನು ಅಲ್ಲಿಯೇ ಮಲಗಿದ್ದು, ಬೆಳಗ್ಗೆ ಎದ್ದು ಅವರ ಅಪ್ಪಣೆಯನ್ನು ಪಡೆದು ಹೊರಟು ಹೋದನು. ಅದು ನಡೆದ ಐದು ದಿನಗಳ ನಂತರ ಆತನಿಗೆ ಕಾಯಿಲೆಯು ಹೆಚ್ಚಾಗಿ, ಬಿಕ್ಕಳಿಕೆ ಹತ್ತಿ, ಶ್ವಾಸಕಡೆದು, ಕೈಕಾಲುಗಳನ್ನು ಒದರಿ ಕೊಳ್ಳುತ್ತಾ ಕಣ್ಣನ್ನು ತೆರೆದುಕೊಂಡು ಹಾಗೆಯೇ ಮೃತನಾದನು. ಒಡನೆಯೇ ಯಮದೂತರು ಅಲ್ಲಿಗೆ ಬಂದು ಅವನನ್ನು ಪಾಶದಿಂದ ಬಿಗಿದು ಚಾವಟಿಯಿಂದ ಹೊಡೆದು ಯಮಲೋಕಕ್ಕೆ ಕರೆದುಕೊಂಡುಹೋದರು. ॥೩೮-೩೯-೪೦॥

ದಾರಿಯಲ್ಲಿ ಅವನನ್ನು ಬಹಳವಾಗಿ ಹೊಡೆಯುತ್ತಾ, ಎಳೆದುಕೊಂಡು ಹೋದರು. ಇತ್ತಲಾಗಿ ಪತಿಯು ಮೃತನಾದುದನ್ನು ಕಂಡು ಪತ್ನಿಯು ಬಹಳವಾಗಿ

॥ ಯಮ ಉವಾಚ ॥

ಯಮೋಽಪಿ ಸ್ವಭಟಾನಾಹ ಚಿತ್ರಗುಪ್ತಂ ಪುರಸ್ಸ್ಥಿತಂ ॥೪೩॥

ಕಿಮನೇನ ಕೃತಂ ಪಾಪಂ ವಿಚಾರ್ಯ ವದ ಲೇಖಕ ।
ಪಾಪಮೂರ್ತಿರಿಯಂ ತಾವತ್ ಅಸ್ಮಿನ್ ಕಾರ್ಯಾ ದಯಾ ನ ಹಿ ॥೪೪॥

ಚಿತ್ರಗುಪ್ತಸ್ತಮಾಹೇದಂ ವಿನತಃ ಪ್ರಾಂಜಲಿಸ್ತದಾ ॥೪೫॥

॥ ಚಿತ್ರಗುಪ್ತ ಉವಾಚ ॥

ಏತಸ್ಯ ಪಾಪಗಣನಾಂ ಫಣಿತುಂ ಫಣೀಂದ್ರೋ
ನಾಲಂ ಸಹಸ್ರಫಣಿಕೋ ದ್ವಿಸಹಸ್ರಜಿಹ್ವಃ ।
ಸಂಪೀಡ್ಯತಾಮಯಮಹೋ ಕಶಯೋರುಘಾತ್ಯೈಃ
ಪಾತ್ಯೈಶ್ಶಿಲಾಪ್ರಪತನೈಃ ಶರಮುದ್ಗರೈಶ್ಚ ॥೪೬॥

---

ಅತ್ತಳು. ಆದರೆ ಆ ಊರಿನವರೆಲ್ಲ ಇವನು ಮೃತನಾದುದನ್ನು ಕೇಳಿ ಸಂತೋಷ ಪಟ್ಟರು. ನೆಂಟರಿಷ್ಟರೆಲ್ಲಾ ಸೇರಿ ಇವನ ದೇಹವನ್ನು ಸುಟ್ಟುಬಿಟ್ಟರು. ಅತ್ತ ಯಮದೂತರು ಅವನನ್ನು ಬಹುವಾಗಿ ಹಿಂಸಿಸುತ್ತಾ ಯಮನ ಸಮೀಪಕ್ಕೆ ಕರೆದೊಯ್ದರು. ॥೪೧-೪೨॥

ಒಡನೆಯೇ ಯಮನು ಈತನನ್ನು ನೋಡಿ, ಅಲ್ಲಿಯೇ ಇದ್ದ ಚಿತ್ರಗುಪ್ತನನ್ನು ಕರೆದು "ಅಯ್ಯಾ ಲೇಖಕನೇ, ಇವನು ಮಾಡಿರುವ ಪಾಪಕಾರ್ಯಗಳಾವುವು? ನೋಡಿದರೆ ಪಾಪಮೂರ್ತಿಯಂತೆಯೇ ಕಾಣುತ್ತಿರುವನು. ಇವನಲ್ಲಿ ನೀನಾವ ಕರುಣೆಯನ್ನೂ ತೋರಿಸದೆ ಎಲ್ಲವನ್ನೂ ವಿವರಿಸು" ಎಂದನು. ಆಗ ಚಿತ್ರಗುಪ್ತನು ಯಮನನ್ನು ಕುರಿತು ಅಂಜಲಿಬದ್ಧನಾಗಿ, ॥೪೩-೪೪-೪೫॥

"ಪ್ರಭುವೇ, ಈತನು ಬಹುಪಾಪಿಯು. ಈತನ ಪಾಪಕಾರ್ಯಗಳನ್ನು ವಿವರಿಸಿ ಹೇಳಲು, ಸಾವಿರಮುಖ, ಎರಡುಸಾವಿರ ನಾಲಗೆ ಇವುಗಳಿಂದ ಕೂಡಿದ ಆದಿಶೇಷನಿಗೂ ಅಸದಳ. ಹಾಗಿರುವಾಗ ನನ್ನಿಂದ ಸಾಧ್ಯವಾದೀತೆ? ಒಟ್ಟಿನಲ್ಲಿ ಈತನನ್ನು ಪಾಶದಿಂದ ಬಿಗಿದು, ಚಾವಟಿಯಿಂದ ಹೊಡೆದು, ಕಲ್ಲಿನಿಂದ ಕುಟ್ಟಿ, ಬಂಡೆಯಿಂದ ಉರುಳಿಸಿ, ನಾನಾರೀತಿಯಾದ ಶಿಕ್ಷೆಗೆ ಗುರಿಪಡಿಸಬಹುದು" ಎಂದನು. ॥೪೬॥

ನಿವೃತ್ಯ ನಯನೇ ತದಾ ಪ್ರಬಲಚಂಡಭಾನೋಸ್ಸ್ನತ
ಸ್ತುಟಿಚ್ಛಟಿಚಟಾರವಪ್ರತಿಭಟಾರ್ಭಟೀದಂತಜೈಃ ।
ಮುಹುರ್ಭಟಿಗಣಾಂಸ್ತದಾ ವದತಿ ಪಾತ್ಯತಾಂ ಕ್ವಾಥ್ಯತಾಂ
ಸುಘೋರನರಕಾಗ್ನಿಭಿಃ ಪ್ರಬಲಶಸ್ತ್ರಧಾರಾದಿಭಿಃ ॥೪೭॥

ಯಮಸ್ಯ ವಚನಾಚ್ಛಿವೇ ಭಟಗಣಾಸ್ತದಾಕ್ರಂದನೈಃ
ಭರ್ಸುಂಡಿಲಗುಡಾದಿಭಿಃ ಪರಿಘತೀಕ್ಷ್ಣನಾರಾಚಕೈಃ ।
ದ್ವಿಜಾಂಗಪರಿಕರ್ತನೈಃ ಪ್ರಬಲತೈಲದೀಪ್ತೋಲ್ಮುಕೈಃ
ತದಾ ತದಗುರೂಲ್ಬಣಂ ನಿಖಿಲಯಾತನಾಂ ತೇ ವ್ಯಧುಃ ॥೪೮॥

॥ ಈಶ್ವರ ಉವಾಚ ॥

ಹಾಹಾ ನ ಕೋಽಪಿ ಸುಭಗೇ ಶಿವಲಿಂಗಪೂಜಾಂ
ಕರ್ತುಂ ಯತಂತಿ ವಿವಿಧೈಃ ಕುಸುಮೈಶ್ಚ ನೀರೈಃ ।
ತಸ್ಮಾದಿಮಾಂ ಶಮನಘೋರಮಹಾಗ್ನಿಭೀತಿಂ
ಪ್ರಾಪ್ಯಾಪಿ ತೇ ಹಿ ವಿವಶಾ ವಿಧಿಕರ್ಮಜಾಲೈಃ ॥೪೯॥

---

ಅದನ್ನು ಕೇಳಿ ಯಮನು ಕಣ್ಣುಗಳನ್ನು ಕೆರಳಿಸಿಕೊಂಡು ಮಿಂಚಿನಂತೆ ಹೊಳೆಯುವ ಕೋರೆದಾಡೆಗಳಿಂದ ಭಯಂಕರನಾಗಿ ಆರ್ಭಟಿಸುತ್ತಾ ಅಲ್ಲಿಯೇ ನಿಂತಿದ್ದ ಭಟರನ್ನು ಕುರಿತು, "ಇವನನ್ನು ಘೋರವಾದ ನರಕಕ್ಕೆ ತಳ್ಳಿ, ಶಸ್ತ್ರಧಾರೆಗಳಿಂದ ಈತನ ಹೃದಯವನ್ನು ಸೀಳಿರಿ ಮತ್ತು ಬೆಂಕಿಯಲ್ಲಿ ಬೇಯಿಸಿರಿ" ಎಂದು ಅಪ್ಪಣೆಮಾಡಿದನು. ॥೪೭॥

ಒಡನೆಯೇ ಯಮದೂತರು ಗರ್ಜಿಸುತ್ತಾ, ಈಟಿ, ದೊಣ್ಣೆ, ಸುತ್ತಿಗೆ, ಬಾಣ ಮುಂತಾದುವುಗಳಿಂದ ಅವನನ್ನು ಹೊಡೆದು ಕ್ರೂರಪಕ್ಷಿಗಳಿಂದ ಅವನ ಶರೀರವನ್ನು ಚುಚ್ಚಿಸಿ ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿ ನಾನಾವಿಧವಾದ ಯಾತನೆಗಳನ್ನು ಕೊಡಲಾರಂಭಿಸಿದರು. ॥೪೮॥

"ಎಲೌ ದೇವಿಯೇ, ಜನರು ತಾವು ಬದುಕಿರುವಾಗ ಶಿವಲಿಂಗಪೂಜೆಯನ್ನು ಪುಷ್ಪಗಂಧೋದಕಾದಿಗಳಿಂದ ಪೂಜಿಸಲು ಪ್ರಯತ್ನಿಸುವುದಿಲ್ಲ. ಆದ್ದರಿಂದಲೇ ಅವರು ಈ ಯಮನ ಘೋರಶಿಕ್ಷೆಗೆ ಒಳಪಟ್ಟು, ಪರಾಧೀನರಾಗಿ ಬಹಳ ಕರ್ಮಫಲವನ್ನು ಅನುಭವಿಸಲು ನಾನಾಯೋನಿಗಳಲ್ಲಿ ಹುಟ್ಟುವರು. ॥೪೯॥

ಮಂದಾರಕುಂದನವಚಂಪಕಬಿಲ್ವಪತ್ರೈಃ
ಮಂದಪ್ರದೋಷ ಸಮಯೇ ಕರುಣೇಂದುಚೂಡೇ ।
ಲಿಂಗಾರ್ಚನೈರ್ಮತಿರಹೋ ಗಿರಿಜೇ ಸಧನ್ಯೋ
ಮಂದಾರನಂದಿತಗುಣೋ ಮುನಿವೃಂದಮಾನ್ಯಃ ॥೫೦॥

ಪಾಪಾನ್ಯಮಂದತರಸಂಸ್ಸೃತಿಘೋರಬಂಧ ।
ಕಂದಾಯಿತಾನ್ಯಪಿ ವಿಧೂಯ ಮುದಾನುಗಸ್ಸ್ಯಾತ್ ॥೫೧॥

ಕಿಂ ವಕ್ತವ್ಯಮಹೋ ಗಿರೀಂದ್ರತನಯೇ ಯಸ್ಸಾಯಮಭ್ಯರ್ಚಯೇತ್
ಲಿಂಗಂ ಮಂಗಲದಂ ಪ್ರದೋಷಸಮಯೇ ಬಿಲ್ವೈಶ್ಚದೂರ್ವಾಂಕುರೈಃ ।
ತಸ್ಯಾಪಾರಫಲಾಂಬುರಾಶಿಗಣನಾಂ ಕರ್ತುಂ ನ ಈಶೇ ಫಣೀ
ಸ್ವಸ್ಯಾಸ್ಯಾಂತರತಸ್ಸಹಸ್ರದ್ವಿಗುಣಜ್ಜಿಹ್ವಾಗ್ರಧಾರಾರಸೈಃ ॥೫೨॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಸುದರ್ಶನನಾಮಕ
ದುರ್ಬ್ರಾಹ್ಮಣಕಥಾ ನರಕಯಾತನವರ್ಣನಂ
ನಾಮ ಸಪ್ತತ್ರಿಂಶೋಽಧ್ಯಾಯಃ

---

ಯಾವನು ಪ್ರದೋಷಕಾಲದಲ್ಲಿ ಚಂದ್ರಶೇಖರನೆನಿಸಿದ ನನ್ನ ಶಿರಸ್ಸಿನ ಮೇಲೆ ಮಂದಾರ, ಕುಂದ, ಸಂಪಿಗೆ, ಬಿಲ್ವಪತ್ರೆ ಮೊದಲಾದುವುಗಳನ್ನು ಸಮರ್ಪಿಸಿ ಭಕ್ತಿಯಿಂದ ನನ್ನನ್ನು ಅರ್ಚಿಸುವನೋ, ಅವನೇ ನಿಜವಾಗಿ ಧನ್ಯನು. ಅಲ್ಲದೆ ದೇವತೆಗಳಿಂದಲೂ ಸ್ತುತ್ಯನೆನಿಸಿ, ಆತನು ಅನೇಕ ಮುನಿಜನರಿಗೆ ಪೂಜ್ಯನೆನಿಸಿ ಕೊಳ್ಳುವನು. ॥೫೦॥

ಆತನು ಎಷ್ಟೇ ಅಪರಿಮಿತ ಪಾಪರಾಶಿಯನ್ನು ಗಳಿಸಿದ್ದರೂ ಸಹ ಅವುಗಳನ್ನೆಲ್ಲಾ ಕಳೆದುಕೊಂಡು ಸರ್ವದಾ ಹರ್ಷಚಿತ್ತನಾಗಿರುವನು. ॥೫೧॥

ಪಾರ್ವತಿಯೇ, ನಿನ್ನಲ್ಲಿ ಮತ್ತೇನು ಹೇಳುವುದಿದೆ? ಯಾರು ಪ್ರತಿ ಪ್ರದೋಷಕಾಲದಲ್ಲಿಯೂ, ಪವಿತ್ರವೂ, ಮಂಗಳಪ್ರದವೂ ಆದ ಶಿವಲಿಂಗವನ್ನು ಭಕ್ತಿಯಿಂದ ಬಿಲ್ವ, ದೂರ್ವ, ಫಲರಾಶಿಗಳು ಇವುಗಳಿಂದ ಅರ್ಚಿಸುವರೋ, ಅವರಿಗೆ ಒದಗುವ ಸುಕೃತವನ್ನು ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ಸಹಸ್ರವದನಗಳಿಂದಲೂ, ಎರಡುಸಾವಿರ ನಾಲಿಗೆಗಳಿಂದಲೂ ಕೂಡಿರುವ ಆದಿಶೇಷನೂ ಸಹ

ಅವನ ಸುಕೃತರಾಶಿಯನ್ನು ವಿವರಿಸಿ ಹೇಳಲಾರನು. ಹಾಗಿರುವಾಗ ಶಿವಪೂಜಾ ಮಹಿಮೆ, ಅದರಿಂದ ಒದಗುವ ಸುಖ, ಅದಿಲ್ಲದೆ ಜನರು ಪಡುವ ಕಷ್ಟನಷ್ಟಗಳು ಇವುಗಳನ್ನು ವಿವರಿಸಿ ಹೇಳುವುದು ಹೇಗೆ? ಎಂದು ಶಂಕರನು ದೇವಿಯ ಎದುರಿನಲ್ಲಿ ಶಿವಪೂಜಾಮಹಿಮೆಯನ್ನು ವಿವರಿಸಿದನು. ||೫೨||

ಇಲ್ಲಿಗೆ ಶ್ರೀ ಶಿವರಹಸ್ಯದ ಪಂಚಮಾಂಶದಲ್ಲಿ ಸುದರ್ಶನನೆಂಬ ಬ್ರಾಹ್ಮಣನು ಶಿವಪೂಜಾವಿಮುಖನಾಗಿ ನರಕವನ್ನು ಹೊಂದಿದ ಕಥೆಯನ್ನು ವಿವರಿಸುವ ಮೂವತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಅಷ್ಟತ್ರಿಂಶೋಽಧ್ಯಾಯಃ

|| ಈಶ್ವರ ಉವಾಚ ||

ಅಸಿಪತ್ರೋರುವಿಪಿನೇಷ್ವಸಿಧಾರಾಸುಪಾತಿತಃ ।
ಕುಂಭೀಪಾಕೇ ತಥಾಗೌರಿ ಪಕ್ವಶ್ಚಾತ್ಯಂತಮುತ್ಕಟಂ ॥೧॥

ತಪ್ತಶೈಲಕಟಾಹೇಷು ಪಾಚಿತಸ್ಸಮುಹುರ್ಮುಹುಃ ।
ಭಟೋರುಶಸ್ತ್ರಧಾರಾಭಿಸ್ತಾಡಿತಸ್ಸದ್ವಿಜಸ್ತದಾ ॥೨॥

ಗದಾ ಭುಸುಂಡೀಪರಿಘೈಃ ಶೂಲೈಃ ಪ್ರೋಥಿತಮಸ್ತಕಃ ।
ಶರಕೃತ್ತಮಹಾಮರ್ಮಾಸ್ರವದ್ರಕ್ತಸ್ತಥಾಂಬಿಕೇ ॥೩॥

---

## ಮೂವತ್ತೆಂಟನೆಯ ಅಧ್ಯಾಯ

ಎಲೌ ಪಾರ್ವತಿಯೇ, ಹಾಗೆ ಯಮನು ಕ್ರೂರವಾಗಿ ಆ ಬ್ರಾಹ್ಮಣನನ್ನು ಶಿಕ್ಷಿಸಬೇಕೆಂದು ಅಪ್ಪಣೆಮಾಡಲು, ಯಮದೂತರು ನಿಷ್ಕರುಣರಾಗಿ ಅವನನ್ನು ಮೊದಲು ಅಸಿಪತ್ರವನಕ್ಕೆ ಎಸೆದರು. ಕತ್ತಿಯಂತೆ ಮೊನೆಚಾಗಿರುವ ಆ ಎಲೆಗಳು ಅವನ ಮೈಯ್ಯನ್ನೆಲ್ಲಾ ಸೀಳಿದವು. ಅಲ್ಲಿಂದ ಮುಂದೆ ಕುಂಭೀಪಾಕವೆಂಬ ನರಕದಲ್ಲಿಟ್ಟು ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಬೇಯಿಸಿದರು. ಹಾಗೆಯೇ ತಮ್ಮ ಶಸ್ತ್ರಗಳ ತುದಿಗಳಿಂದ ತಿವಿದು ಹೊಡೆದು ನಾನಾರೀತಿಯಲ್ಲಿ ಹಿಂಸೆಮಾಡಿದರು. ||೧-೨||

ಗದೆ, ಪರಿಘ ಇವುಗಳಿಂದ ಹೊಡೆದರು. ಶೂಲಕ್ಕೆ ಅವನ ಹಣೆಯನ್ನು ಚುಚ್ಚಿ ಮೇಲಕ್ಕೆ ಎತ್ತಿಹಿಡಿದರು. ಬಾಣದಿಂದ ಅವನ ಅಂಗಾಂಗಗಳನ್ನೆಲ್ಲಾ

ತುದ್ಯಮಾನಸ್ತಥಾ ಕಾಕೈಃ ಸೃಗಾಲಶ್ವಭಿರಾವೃತಃ ।
ಹಾಹೇತಿ ಪ್ರಲಪನ್ನಿಪ್ರಃ ಪರಿಧಾವನ್ನಿತಸ್ತತಃ ॥೪॥

ಕರಾಳದಂಷ್ಟ್ರೈಃ ಶ್ವಗಣೈರ್ದಷ್ಟಶ್ಚಾನುದ್ರುತಸ್ತದಾ ।
ಅನ್ಯೇ ನಾರಕಿಣಶ್ಚಾಪಿ ಬ್ರಾಹ್ಮಣಕ್ಷತ್ರಿಯಾದಯಃ ॥೫॥

ವೈಶ್ಯಾಶ್ಶೂದ್ರಾಸ್ತಥಾ ಪಾಪಾ ನಾನಾಸಂಕರಜಾತಯಃ ।
ನಾನಾದುಃಖಶತೈರ್ಘೋರೈಃ ಪೀಡ್ಯಂತೇ ಯತ್ರಕಿಂಕರೈಃ ॥೬॥

ಪೂಯವಿಣ್ಮೂತ್ರಕುಂಡೇಷು ಕಶಾಘಾತೋತ್ಥಿತೈರ್ವ್ರಣೈಃ ।
ಸ್ರವದ್ರಕ್ತೈಃ ಕ್ಷಾರಸೇಕಮಹಾದುಃಖಕೃತಾರವೈಃ ॥೭॥

ಖಡ್ಗತಾಡಿತಹಸ್ತೈಶ್ಚ ಪಾದೈರ್ಮುಂಡೈಶ್ಚ ಖಂಡಿತಾಃ ।
ವಿನಿಕ್ಷಿಪ್ತಾ ತಾಮ್ರಮುಸ್ತಿಷ್ಕಾಃ ಶ್ವಭಿಶ್ಚ ಬಲಿಭೋಜಿಭಿಃ ॥೮॥

ತಪ್ತತೈಲಪಟೈರಂಗೈರ್ಜ್ವಲದ್ಭಿರ್ದುಃಖಸಂಕುಲೈಃ ।
ದೀಪಿತೈಃ ಕೇಚಿದುನ್ಮತ್ತಾಂ ಧಾವಂತಿ ಚ ರುದಂತಿ ಚ ॥೯॥

---

ಕತ್ತರಿಸಿ ರಕ್ತವು ಸುರಿಯುವಂತೆ ಮಾಡಿದರು. ಕಾಗೆಗಳಿಂದ ಕುಕ್ಕಿಸಿದರು. ನರಿಗಳಿಂದ ಕಚ್ಚಿಸಿದರು. ಇದನ್ನೆಲ್ಲಾ ಸಹಿಸಲಾರದೆ ಆ ವಿಪ್ರನು ಅರಚುತ್ತಾ ಕೂಗುತ್ತಾ ಓಡಾಡಲಾರಂಭಿಸಿದನು. ॥೩-೪॥

ಕ್ರೂರವಾದ ಕೋರೆಹಲ್ಲುಳ್ಳ ನಾಯಿಗಳಿಂದ ಮತ್ತೆ ಮತ್ತೆ ಅವನನ್ನು ಕಚ್ಚಿಸುತ್ತಲೇ ಇದ್ದರು. ಆ ಯಮಲೋಕದಲ್ಲಿ ಇದೇ ರೀತಿ ಪಾಪಿಷ್ಠರಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೇ ಮೊದಲಾದವರೆಲ್ಲರೂ ಇದೇವಿಧವಾದ ಭಯಂಕರ ದುಃಖವನ್ನು ಅನುಭವಿಸುತ್ತಿದ್ದರು. ॥೫-೬॥

ರಕ್ತ, ಕೀವು, ಮೂತ್ರ, ಮಲ ಮುಂತಾದುವುಗಳಿಂದ ತುಂಬಿದ ಕೊಳಗಳಲ್ಲಿ ಆ ಪಾಪಿಗಳನ್ನು ಅದ್ದಿ, ಮತ್ತೆ ತಮ್ಮ ಚಾವಟಿಗಳಿಂದ ಅವರನ್ನು ಹೊಡೆದು ಗಾಯಗೊಳಿಸಿ, ಅಲ್ಲಿ ಬರುವ ರಕ್ತಕ್ಕೆ ಉಪ್ಪು, ಕಾರ ಇವುಗಳನ್ನು ಎರಚುವರು. ಕೊನೆಗೆ ಕತ್ತಿಯಿಂದ ಅವರನ್ನು ತುಂಡುತುಂಡಾಗಿ ಕಡಿದು, ಅವರ ಮಾಂಸಖಂಡದ ಚೂರುಗಳನ್ನು ನಾಯಿ, ಕಾಗೆ ಮೊದಲಾದವುಗಳಿಗೆ ಹಾಕುವರು. ॥೭-೮॥

ಇದೇ ರೀತಿ ಪಾಪಿಗಳಾದ ಸ್ತ್ರೀಪುರುಷರನ್ನೆಲ್ಲಾ, ಕಾದೆಣ್ಣೆಯ ಕೊಪ್ಪರಿಗೆ

ಸಂತಪ್ತವಾಲುಕಾಮಧ್ಯೇ ಲೋಲಯಂತ್ಯಪಿ ಪಾಪಿನಃ ।
ಏವಂ ನಾರೀನರಾಸ್ತತ್ರ ರುದ್ಯಮಾನಾಂಶ್ಚ ಪಾಪಿನಃ ॥೧೦॥

ಗರ್ಜಂತಸ್ತಾಡಯಂತಸ್ತೇ ಭಟಾ ಮುದ್ಗರಪಾಣಯಃ ।
ವದಂತಿ ಕ್ರೂರವಚನೈರ್ಭ್ರೂಕುಟೀಕುಟಿಲೇಕ್ಷಣಾಃ ॥೧೧॥

॥ ಭಟಾ ಊಚುಃ ॥

ಅಹೋ ದುಷ್ಕೃತಕರ್ಮಾಣಃ ಸುಖಬುದ್ಧ್ಯೈವ ಪಾತಕಂ ।
ಕೃತಂ ಭವತಿ ಮೋಹೇನ ತತ್ಫಲಂ ಭುಜ್ಯತೇತ್ರ ಹಿ ॥೧೨॥

ಏನಂ ಛಿನತ ದುರ್ಬುದ್ಧಿಮೇನಂ ಪಾತಯತಾಧುನಾ ।
ಏನಂ ತಾಡಯತಾದ್ಯಾಶು ಏನಂ ಖಂಡಯತಾಸಿಭಿಃ ॥೧೩॥

ಅನೇನ ರಾಜ್ಞೋನ್ಮತ್ತೇನ ಪ್ರಜಾಸ್ಸಂಪೀಡಿತಾ ಭೃಶಂ ।
ದೇವದ್ರವ್ಯಹರಃ ಪಾಪೀ ದ್ವಿಜದ್ರವ್ಯಾಪಹಾರಕಃ ॥೧೪॥

---

ಯಲ್ಲಿ ಹಾಕುವುದು, ಕಾದಮರಳಿನ ಮಧ್ಯೆ ಓಡಾಡಿಸುವುದು, ಇವೇ ಮೊದಲಾದ ಹಿಂಸಾಕೃತ್ಯಗಳಿಂದ ಓಡಾಡಿಸುತ್ತಾ ಗೋಳಾಡಿಸುವರು. ಆದರಿಂದ ಆ ಪಾಪಿಗಳೆಲ್ಲರೂ ಹುಚ್ಚರಂತೆ ಅಳುತ್ತಾ ತಿರುಗುವರು. ॥೯-೧೦॥

ಆ ಯಮಭಟರು ಅಷ್ಟಕ್ಕೂ ತೃಪ್ತರಾಗದೆ ಮುದ್ಗರಗಳಿಂದ ಹೊಡೆಯುತ್ತಾ ಕೋಪದಿಂದ ಹುಬ್ಬುಗಂಟಿಕ್ಕಿಕೊಂಡು ಹೀಗೆ ನಿಂದಿಸುವರು. "ಅಯ್ಯೋ ಪಾಪಿಗಳಿರಾ, ಸುಖವನ್ನು ಪಡೆಯುತ್ತೇವೆಂಬ ಭ್ರಾಂತಿಯಿಂದ ಅನೇಕ ಪಾಪಕರ್ಮಗಳನ್ನು ಆಚರಿಸಿದಿರಿ ಅಲ್ಲವೆ? ಆದರ ಫಲವನ್ನು ಈಗ ಅನುಭವಿಸಿರಿ. ॥೧೧-೧೨॥

ದುರ್ಬುದ್ಧಿಯಿಂದ ವರ್ತಿಸಿದ ಇವನನ್ನು ಕಡಿಯಿರಿ. ಕೆಡವಿರಿ. ಹೊಡೆಯಿರಿ. ಕತ್ತಿಗಳಿಂದ ಕತ್ತರಿಸಿರಿ. ಈತನು ರಾಜನಾಗಿದ್ದು ಪ್ರಜೆಗಳನ್ನು ಬಹಳವಾಗಿ ಪೀಡಿಸಿದನು. ಈತನು ಬ್ರಾಹ್ಮಣನಾಗಿದ್ದು ದೇವಬ್ರಾಹ್ಮಣರ ದ್ರವ್ಯವನ್ನು ಅಪಹರಿಸಿದನು. ॥೧೩-೧೪॥

ಬಾಂಧವಾನತಿಥೀನ್ ಭೃತ್ಯಾಂಸ್ತ್ಯಕ್ತ್ವಾ ಭುಂಕ್ತೇ ನೃಪಾಧಮಃ ।
ತಪ್ತತೈಲಕಟಾಹೇಷು ಪಾತ್ಯತಾಮಯಮುದ್ಧತಃ ॥೧೫॥

ಅಯಂ ದ್ವಿಜೋ ಮಹಾಪಾಪೀ ಶ್ರೌತಸ್ಮಾರ್ತಪರಾಙ್ಮುಖಃ ।
ತ್ರಿಪುಂಡ್ರಭಸ್ಮರುದ್ರಾಕ್ಷರುದ್ರಪಂಚಾಕ್ಷರೋಜ್ಝಿತಃ ॥೧೬॥

ಶಿವಲಿಂಗಾರ್ಚನಾಹೀನೋ ಬಿಲ್ವಪತ್ರೈಸ್ತಥಾ ಸುಮೈಃ ।
ಪರಾನ್ನಾದಸ್ಸದಾ ಪಾಪೀ ನಿತ್ಯಂ ಪರ್ವಣ್ಯಪಿ ದ್ವಿಜಃ ॥೧೭॥

ಧನಧಾನ್ಯಯುತಶ್ಚಾಪಿ ಭಾರ್ಯಾಪುತ್ರಸಮನ್ವಿತಃ ।
ಸಂತಪ್ತಭ್ರಾಷ್ಟ್ರಮಧ್ಯೇಽಯಂ ಭರ್ಜತಾಂ ತರ್ಜತಾಂ ದ್ವಿಜಃ ॥೧೮॥

ವೈಶ್ಯೋಽಯಂ ಸರ್ವದಾ ಪಾಪೀ ಅನ್ಯನ್ಯಾಸಾಪಹಾರಕಃ ।
ವೃದ್ಧ್ಯಾಧಿಕ್ಯೇನ ಪಾಪಾತ್ಮಾ ಸ ತು ದೌಷ್ಟ್ಯೇನ ಜೀವತಿ ॥೧೯॥

ಅತ್ಯಂತಂ ತೀಕ್ಷ್ಣಶಸ್ತ್ರೌಘೈಃ ಸಂತಪ್ತಮುಸಲೈರಪಿ ।
ಖಂಡ್ಯತಾಂ ದಂಡ್ಯತಾಂ ಪಾಪಸ್ತಿಲಶಃ ಪರ್ವಸಂಧಿಷು ॥೨೦॥

---

ಈ ರಾಜನು ತನ್ನ ಬಂಧುಗಳನ್ನೂ, ಅತಿಥಿಗಳನ್ನೂ, ಸೇವಕರನ್ನೂ ವಂಚಿಸಿ ತಾನು ಭೋಜನಮಾಡಿರುವನು. ಇವನನ್ನು ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಮುಳುಗಿಸಿರಿ. ಈ ಬ್ರಾಹ್ಮಣನು ತನ್ನ ಶ್ರೌತಸ್ಮಾರ್ತ ನಿತ್ಯಕರ್ಮಗಳನ್ನೂ ಭಸ್ಮರುದ್ರಾಕ್ಷಾದಿ ಶೈವಚಿಹ್ನೆಗಳನ್ನೂ, ಪಂಚಾಕ್ಷರೀಮಂತ್ರದ ಜಪವನ್ನೂ ತಿರಸ್ಕರಿದ್ದನು. ಈತನು ಮಹಾಪಾಪಿಯು. ॥೧೫-೧೬॥

ಮತ್ತು ಈ ಬ್ರಾಹ್ಮಣನು ಬಿಲ್ವಪತ್ರಾದಿಗಳಿಂದ ಎಂದೂ ಈಶ್ವರಾರ್ಚನೆ ಮಾಡಿದವನಲ್ಲ. ಅಲ್ಲದೆ ಪ್ರತಿಪರ್ವತಿಥಿಗಳಲ್ಲಿಯೂ ಈತನು ಪರಾನ್ನಭೋಜನ ಮಾಡಿ ಪಾಪಗಳಿಸಿರುವನು. ಈತನಿಗೆ ಪತ್ನೀಪುತ್ರರೂ, ಧನಧಾನ್ಯಗಳೂ ಸಮೃದ್ಧಿಯಾಗಿದ್ದರೂ ಪರಾನ್ನಭೋಜಿಯಾಗಿದ್ದನು. ಇಂತಹ ದುರಾಶಾಪೀಡಿತನಾದ ಬ್ರಾಹ್ಮಣನನ್ನು ಕಾದ ಕೊಪ್ಪರಿಗೆಗೆ ಎಸೆಯಿರಿ. ॥೧೭-೧೮॥

ಈ ವೈಶ್ಯನು ಮತ್ತೊಬ್ಬರು ನಂಬಿಕೆಯಾಗಿಟ್ಟಿದ್ದ ವಸ್ತುಗಳನ್ನೆಲ್ಲಾ ಅಪಹರಿಸಿರುವನು. ಹೆಚ್ಚು ಬಡ್ಡಿಯಿಂದ ಹಣಸಂಪಾದಿಸಿದ್ದರೂ ಪಾಪಿಯಾದ ಈತನು ಸೇವಕನಂತೆ ದುಡಿಯುತ್ತಿದ್ದನು. ಇವನನ್ನು ಹರಿತವಾದ ಬಾಣಗಳಿಂದಲೂ, ಕಾದ

ಅಯಂ ಶೂದ್ರೋಽಪಿ ಮಂದಾತ್ಮಾ ಬ್ರಾಹ್ಮಣಾನವಮನ್ಯತೇ ।
ಗಾಂ ತಾಡಯತಿ ಪಾದೇನ ಶೂದ್ರೋಽಯಂ ವೃಷಭಾನಯಂ ॥೨೧॥

ಹಲೈರುದ್ವೇಜಯಾಮಾಸ ವಿಪ್ರವಿತ್ತಾಪಹಾರಕಃ ।
ಅಧೋಮುಖೋರ್ಧ್ವಪಾದೋಽಯಂ ದಾಹ್ಯಂ ಖದಿರವಹ್ನಿನಾ ॥೨೨॥

ಅಯಂ ಭಾರ್ಯಾಪರಿತ್ಯಾಗೀ ದೋಷದರ್ಶನವರ್ಜಿತಃ ।
ಸಂತಪ್ತಕಂಟಕೈರ್ಘೋರೈರ್ನಾರಾಚೀನುನ್ನತನುರ್ಭವೇತ್ ॥೨೩॥

ಅಯಂ ಯುವಾ ಮಹಾಪಾಪೀ ಪರದಾರೋಪಸೇವಕಃ ।
ಸಕಾಮಂ ಚ ಸದಾ ಪಾಪಃ ಪರಸ್ತ್ರೀದರ್ಶನೋತ್ಸುಕಃ ॥೨೪॥

ಶಿಶ್ನಂ ಸವೃಷಣಂ ಚಾಸ್ಯ ನೇತ್ರೇ ತುದ್ಯಂತು ದಂಶಿತೈಃ ।
ಶೂಲಾಗ್ರೈರ್ಮುಸಲೈರ್ಘೋರೈರುತ್ಪಾಟ್ಯಾಂತ್ರಾಣಿ ದಂಶಿತೈಃ ॥೨೫॥

---

ಒನಕೆಗಳಿಂದಲೂ ಬಡಿದು ಸಂಧಿಕೀಲಗಳನ್ನು ಚೂರುಚೂರಾಗಿ ಕತ್ತರಿಸಿರಿ. ||೧೯-೨೦||

ಈ ಶೂದ್ರನು ಅಜ್ಞಾನದಿಂದ ಬ್ರಾಹ್ಮಣಾದಿ ಉತ್ತಮವರ್ಣದವರನ್ನು ಅಪಮಾನಗೊಳಿಸಿರುವನು. ಕಾಲಿನಿಂದ ಹಸುವನ್ನು ಒದ್ದಿರುವನು. ನೇಗಿಲನ್ನು ಬಲವಾಗಿ ಬಿಗಿದು ಎತ್ತುಗಳಿಗೆ ಹಿಂಸೆ ಕೊಟ್ಟಿರುವನು. ವಿಪ್ರರ ದ್ರವ್ಯವನ್ನೆಲ್ಲಾ ಅಪಹರಿಸಿರುವನು. ಇಂತಹವನನ್ನು ತಲೆಕೆಳಗಾಗಿ ಕಟ್ಟಿ ಕಗ್ಗಲಿಯ ಸೌದೆಯ ಉರಿಯಿಂದ ದಹಿಸಿರಿ. ||೨೧-೨೨||

ಈತನು ನಿರ್ದುಷ್ಟಳಾದ ಪತ್ನಿಯನ್ನು ಪರಿತ್ಯಾಗಮಾಡಿರುವನು. ಇಂತಹ ಪಾಪಿಯನ್ನು ಕಾದಮುಳ್ಳುಗಳಿಂದ ಶರೀರವಾದ್ಯಂತವಾಗಿ ಚುಚ್ಚಿರಿ. ಇಗೋ ಈ ಯುವಕನು, ಸದಾ ಪರಸ್ತ್ರೀಯರನ್ನೇ ನೋಡುತ್ತಾ, ಪರದಾರಸೇವನೆಯಿಂದಲೇ ತನ್ನಕಾಮವನ್ನು ಪೂರ್ತಿಗೊಳಿಸಿಕೊಂಡಿರುವನು. ಇಂತಹವನ ಕಣ್ಣು, ಶಿಶ್ನ, ವೃಷಣ ಮೊದಲಾದ ಆ ಅವಯವಗಳನ್ನೆಲ್ಲಾ ಕತ್ತರಿಸಿ ಹಾಕಿರಿ. ಶೂಲ, ಮುಸಲ ಮುಂತಾದ ಕ್ರೂರವಾದ ಆಯುಧಗಳಿಂದ ಕರುಳುಗಳನ್ನು ಈಚೆಗೆ ಎಳೆದು ಕತ್ತರಿಸಿರಿ. ||೨೩-೨೪-೨೫||

ಅಯಂ ಸರ್ವತ್ರ ನಿಂದಾಂ ಚ ಕರೋತಿ ಸ ದುರಾತ್ಮವಾನ್ ।
ಉತ್ಪಾಟ್ಯತಾಮಸ್ಯ ಜಿಹ್ವಾ ತಪ್ತಸಂದರ್ಶನೈರ್ಭಟಾಃ ॥೨೬॥

ತುಲಾಂ ಹಿರಣ್ಯಗರ್ಭಂ ಚ ಗೋಸಹಸ್ರಪ್ರತಿಗ್ರಹೀ ।
ವಿದ್ವಾಂಸಃ ಪಾಪಭೂಯಿಷ್ಠಾಃ ವಾವದೂಕಾಃ ಸದಾ ಖಲಾಃ ೨೭॥

ಅಪಾಪಾನಾಂ ಚ ಸಾಧೂನಾಂ ನಿಂದಕಾ ವಾದಕೌತುಕಾತ್ ।
ದಗ್ಧಾಂಗಾನ್ ವಹ್ನಿನರಕೇ ಪಾತಯಂತು ಮಲಹ್ರದೇ ॥೨೮॥

ಅನಿಷ್ಕೃತಿಪರಾಃ ಪಾಪಾಃ ಸರ್ವದಾ ಪ್ರೇತಭೋಜಿನಃ ।
ಗೋದ್ವಯಂ ಪ್ರತಿಗೃಹ್ಯಾಪಿ ತದ್ವಿಕ್ರಯಪರಾಯಣಾಃ ॥೨೯॥

ಶ್ಲೇಷ್ಮಹ್ರದೇ ಸದಾ ಪಾಪಾಃ ಪತಂತು ಶತವತ್ಸರಂ ।
ಕನ್ಯಾವಿಕ್ರಯಕೃಚ್ಚಾಯಂ ಸ್ಥಿತೋ ರಕ್ತಮಲಹ್ರದೇ ॥೩೦॥

ಮಾತರಂ ಪಿತರಂ ಸಾಧೂನ್ ಕಟೂಕ್ತ್ಯಾ ಭರ್ತ್ಸಯಂತ್ಯಯಂ ।
ಮಲಹ್ರದೇ ಚ ಪತಿತಸ್ತಥಾ ಸ್ತ್ರೀಧನಹಾರಕಃ ॥೩೧॥

---

ಈತನು ಸಕಲರನ್ನೂ ಬಾಯಿಗೆ ಬಂದಂತೆ ನಿಂದಿಸುತ್ತಿರುವನು. ಇವನ ನಾಲಿಗೆಯನ್ನು ಕಾದಕತ್ತಿಗಳಿಂದ ಸೀಳಿಹಾಕಿರಿ. ಈತನು ಹತ್ತಿ, ಸುವರ್ಣ, ಅನೇಕ ಗೋದಾನಗಳು ಇವುಗಳನ್ನು ನಿರ್ಭಯವಾಗಿ ದಾನತೆಗೆದುಕೊಂಡಿರುವನು. ಇಲ್ಲಿ ನಿಂತಿರುವ ವಿದ್ವಾಂಸರು ವಿದ್ಯಾವಂತರಾಗಿದ್ದರೂ ಪಾಪಕರ್ಮಾಸಕ್ತರಾಗಿ ಎದುರಾಳಿಗಳನ್ನು ನಿಂದಿಸುತ್ತಾ ವಾದಮಾಡಲು ಆಸಕ್ತರಾಗಿದ್ದರು. ॥೨೬-೨೭॥

ಅಲ್ಲದೆ ಸತ್ಪುರುಷರಾದ ಅನೇಕ ಪಂಡಿತರನ್ನು ವಾದದ ನೆಪದಿಂದ ನಿಂದಿಸಿದ್ದರು. ಇಂತಹವರನ್ನು ಅಗ್ನಿನರಕದಲ್ಲಿ ಸುಟ್ಟು ಮಲಪೂರಿತವಾದ ಕೊಳದಲ್ಲಿ ಹಾಕಿರಿ. ಪಾಪಿಷ್ಠರಾಗಿ ನಿತ್ಯವೂ ಪ್ರೇತಭೋಜನಮಾಡುತ್ತಾ, ಪ್ರಾಯಶ್ಚಿತ್ತವನ್ನೂ ಸಹ ಮಾಡಿಕೊಳ್ಳದೆ, ಗೋದಾನವನ್ನು ಸ್ವೀಕರಿಸಿ, ಅದನ್ನು ಮಾರಲು ಪ್ರಯತ್ನಿಸಿದವರಿವರು. ॥೨೮-೨೯॥

ಇವರನ್ನು ನೂರುವರ್ಷಪರ್ಯಂತ ಶ್ಲೇಷ್ಮದಿಂದ ತುಂಬಿದ ಮಡುವಿನಲ್ಲಿ ಹಾಕಿರಿ. ಹೆಣ್ಣನ್ನು ಮಾರಿಕೊಂಡು ಜೀವಿಸಿದವರನ್ನು ರಕ್ತ ಮತ್ತು ಮಲ ಇವುಗ

ತದುತ್ಥಕ್ರಿಮಿಭಿರ್ಘೋರೈರ್ದಷ್ಟಾಃ ಸರ್ವಾಂಗಸಂಧಿಕೆಃ ।
ವೈಶ್ವದೇವಾಗ್ನಿರಹಿತಾಸ್ತ್ರೇತಾಗ್ನಿ ಪರಿವರ್ಜಿತಾಃ ॥೩೨॥

ಅತಿಥ್ಯಾದಿವಿಹೀನಾಶ್ಚ ದೇವತಾತಿಥಿದೂಷಕಾಃ ।
ಅಯಾಜ್ಯಯಾಜಕಾಃ ಪಾಪಾಸ್ಸದಾ ಧನಪರಾಯಣಾಃ ॥೩೩॥

ಸಂತಪ್ತವಾಲುಕಾಸಂಸ್ಥಾಃ ದಗ್ಧಾಃ ಸೂರ್ಯಕರೈಸ್ತಥಾ ।
ದಂಭಾಹಂಕಾರಮಾತ್ಸರ್ಯಲೋಭಕಾಮಪರಾಸ್ಸದಾ ॥೩೪॥

ಸರ್ವಭೂತೇಷ್ವವಿಶ್ವಸ್ತಾಃ ಅಮಿತ್ರಾಃ ಕ್ರೂರವಾಕ್ ಶಠಾಃ ।
ಕುಂಭೀಪಾಕೇಷು ಪಚ್ಯಂತೇ ಗೋವಧೇ ನಿರತಾಸ್ತಥಾ ॥೩೫॥

ವಿಶ್ವಾಸಘಾತಕಾಃ ಪಾಪಾಃ ಭರ್ತೃಕಾರ್ಯವಿರೋಧಿನಃ ।
ಕ್ರಕಚೈರ್ದಂತುರೈರ್ಭಿನ್ನಾಃ ದ್ವಿಧಾ ತೇ ಶಕಲೀಕೃತಾಃ ॥೩೬॥

---

ಳಿಂದ ಕೂಡಿದ ಕೊಳಕ್ಕೆ ಎಸೆಯಿರಿ. ತಾಯಿತಂದೆಗಳನ್ನೂ, ಸಾಧುಗಳನ್ನೂ ದೂಷಿಸಿದವನನ್ನೂ, ಸ್ತ್ರೀವಿತ್ತವನ್ನು ಅಪಹರಿಸಿದವನನ್ನೂ ಮಲಕೂಪಕ್ಕೆ ತಳ್ಳಿರಿ. ॥೩೦-೩೧॥

ಅದರಲ್ಲಿರುವ ಕ್ರಿಮಿಕೀಟಗಳು ಅವರ ಅಂಗಾಂಗಗಳನ್ನೆಲ್ಲಾ ಕಚ್ಚಲಿ. ಬ್ರಾಹ್ಮಣವರ್ಣದವರಾಗಿ, ವೈಶ್ವದೇವ, ಯಜ್ಞಾದಿಗಳಲ್ಲಿ ನಡೆಸುವ ಅಗ್ನಿತ್ರಯ ಪೂಜೆ, ಅತಿಥಿಸೇವೆ, ಇವುಗಳನ್ನು ಬಿಟ್ಟು ಸರ್ವದಾ, ದೇವತೆಗಳನ್ನೂ, ಅತಿಥಿಗಳನ್ನೂ ದೂಷಿಸುತ್ತಾ, ಯಾಗಮಾಡಲು ಅನರ್ಹರಾದವರಿಂದ ಯಾಗಮಾಡಿಸುತ್ತಾ, ಸರ್ವಥಾ ಧನಪರಾಯಣರಾಗಿರುವ ಪಾಪಿಷ್ಠರನ್ನು ಕಾದ ಮರಳಿನ ರಾಶಿಯ ಮೇಲೆ ನಿಲ್ಲಿಸಿ ಸೂರ್ಯಕಿರಣಗಳಿಂದ ಪರಿತಪಿಸುವಂತೆ ಮಾಡಿರಿ. ॥೩೨-೩೩-೩೪॥

ಇನ್ನು ಅಹಂಕಾರ, ಅಸೂಯೇ, ಅತ್ಯಾಸೆ, ಮೊದಲಾದುವುಗಳಿಂದ ಕೂಡಿ, ಯಾರಲ್ಲಿಯೂ ವಿಶ್ವಾಸವಿಡದೆ, ಎಲ್ಲರನ್ನೂ ತಿರಸ್ಕರಿಸುತ್ತಾ, ಸರ್ವಶತ್ರುಗಳೆನಿಸಿದವರನ್ನು ಕುಂಭೀಪಾಕಕ್ಕೆ ಹಾಕಿರಿ. ಗೋಹತ್ಯ, ವಿಶ್ವಾಸದ್ರೋಹ, ಸ್ವಾಮಿಕಾರ್ಯಕ್ಕೆ ಅಡ್ಡಿತಂದ ಸೇವಕರು, ಇವರನ್ನು ಗರಗಸದಿಂದ ಕುಯಿದು ಎರಡು ತುಂಡುಗಳಾಗಿ ಮಾಡಿರಿ. ॥೩೫-೩೬॥

ವಿಧವಾಸಂಗನಿರತಾಃ ಕನ್ಯಾಸಂದೂಷಕಾಶ್ಚ ಯೇ ।
ಅಶ್ಮಪಾತೈಸ್ಸುಘೋರೈಸ್ತೇ ವಿಪ್ರೋಥಿತಕಲೇವರಾಃ ॥೩೭॥

ಸುರಾಪಾನರತಾಃ ಪಾಪಾಃ ದೇವದ್ರವ್ಯಾಪಹಾರಕಾಃ ।
ಸಂತಪ್ತಶಸ್ತ್ರಧಾರಾಭಿರ್ದಂದಶೂಕಮಹಾವಿಷೈಃ ॥೩೮॥

ದಗ್ಧಾ ವೃಶ್ಚಿಕಜಾಲೈಶ್ಚ ಸ್ರವದ್ರುಧಿರಕರ್ದಮೈಃ ।
ತಿಷ್ಠಂತಿ ಹಾ ಹತಾಸ್ಮೇತಿ ರುದಂತಿ ಕರುಣಾಂ ಬಹು ॥೩೯॥

ಇಯಂ ನಾರೀ ಮದೋನ್ಮತ್ತಾ ಪತಿನಿಂದಾಪರಾ ಸದಾ ।
ಪರಸಂಗರತಾ ನಿತ್ಯಂ ಸಂತಪ್ತಾಯಸದಂಡಕಂ ॥೪೦॥

ಸಮಾಲಿಂಗ್ಯಾಶು ಕಶಯಾ ತಾಡ್ಯತೇ ಯಮಕಿಂಕರೈಃ ।
ಪರದಾರೋಪಸೇವೀ ಚ ಆಯಸೀಂ ಪ್ರತಿಮಾಂ ಸದಾ ॥೪೧॥

ಸಮಾಲಿಂಗ್ಯ ವಿದಗ್ಧೋಽಯಮಾಕ್ರಂದತಿ ದಿವಾನಿಶಂ ।
ಪರಾನ್ನನಿರತೋ ನಿತ್ಯಂ ಸ್ವಗೃಹೇ ಪಾಕವರ್ಜಿತಃ ॥೪೨॥

---

ವಿಧವಾಸಂಗವು, ಕನ್ಯಾಸಂಭೋಗ, ಇವುಗಳಲ್ಲಿ ನಿರತರಾದವರಿಗೆ ಕಲ್ಲುಗಳನ್ನೇ ಹೊಡೆಯುತ್ತಾ ಅದರಿಂದ ಅವರದೇಹವೆಲ್ಲಾ ಸೀಳಿಹೋಗುವಂತೆ ಮಾಡಿರಿ. ಮದ್ಯಪಾನ, ದೇವದ್ರವ್ಯಾಪಹರಣ, ಇದರಲ್ಲಿ ಕಾಲಕಳೆದವರನ್ನು ಕಾದಶಸ್ತ್ರದ ಅಲುಗುಗಳಿಂದ ಚುಚ್ಚಿ, ಹಾವಿನ ವಿಷವನ್ನು ಕುಡಿಸಿರಿ. ॥೩೭-೩೮॥

ಅಯ್ಯೋ, ಚೇಳುಗಳಿಂದ ಕಚ್ಚಿಸಿಕೊಂಡು, ರಕ್ತದ ಕೆಸರಿನಲ್ಲಿ ಬಿದ್ದಿರುವ ಈ ಪಾಪಿಗಳೆಲ್ಲರೂ ರೋದಿಸುತ್ತಾ ನಿಂತಿರುವರು. ಪತಿಯನ್ನು ದೂಷಿಸಿ, ಪರಪುರುಷ ಸಂಪರ್ಕಮಾಡಿದ ಈ ಸ್ತ್ರೀಯು ಈಗ ಕಾದಕಬ್ಬಿಣದ ದಂಡವನ್ನು ಆಲಿಂಗಿಸಿಕೊಂಡು ಗೋಳಿಡುತ್ತಿರುವಳು. ॥೩೯-೪೦॥

ಹಾಗೂ ಯಮದೂತರು ಚಾವಟೆಯಿಂದ ಆಕೆಯನ್ನು ಇನ್ನೂ ಹೊಡೆಯುತ್ತಲೇ ಇರುವರು. ಇಲ್ಲಿರುವ ಮನುಷ್ಯನೊಬ್ಬನು ಸ್ವಯಂ ಪಂಡಿತನಾದರೂ ಪರಸ್ತ್ರೀಗಮನಮಾಡಿ, ಕಾದಕಬ್ಬಿಣದ ಬೊಂಬೆಯನ್ನು ತಬ್ಬಿಕೊಂಡು ರೋದನಮಾಡುತ್ತಿರುವನು. ಈತನು ಸದಾ ಪರಾನ್ನವನ್ನೇ ಭುಂಜಿಸುತ್ತಾ, ತನ್ನ ಮನೆಯಲ್ಲಿ ಅಡಿಗೆಯನ್ನೇ ಮಾಡದೇ ಜೀವಿಸಿರುವನು. ॥೪೧-೪೨॥

ಕ್ರಿಮಿರಾಶಿಂ ಸಮಾಶ್ನಾತಿ ಪ್ರೇತಾನ್ನೋ ಮಲಭುಕ್ಸದಾ ।
ಉಭಯಸ್ಯಾಂ ಚ ಗಾಂ ಗೃಹ್ಯ ತಾಡ್ಯತೇ ತಪ್ತಪಿಂಡಕೈಃ ॥೪೩॥

ಬ್ರಾಹ್ಮಣೋಽಯಂ ಮಹಾಪಾಪೀ ಅನ್ಯಶ್ಚಕ್ರಾಂಕನೋತ್ಸುಕಃ ।
ಶಿವನಿಂದಾಪರೋ ನಿತ್ಯಂ ಶಾಂಭವದ್ವಿಟ್ಸದಾ ಮುದಾ ॥೪೪॥

ಪ್ರದೋಷೇ ಸೋಮವಾರೇ ಚ ಶಿವರಾತ್ರೌ ತಥೈವ ಚ ।
ಭುಂಕ್ತೇನ್ನಾನಿ ದಿವಾ ಪಾಪೀ ಚತುರ್ದಶ್ಯಷ್ಟಮೀಷು ಚ ॥೪೫॥

ತಿಲಶಃ ಖಂಡ್ಯತಾಂ ದುಷ್ಟಃ ಶಸ್ತ್ರೌಘೈಃ ಕ್ಷಾರಸೇಚನೈಃ ।
ಬ್ರಹ್ಮಚಾರ್ಯಯಮುನ್ಮತ್ತೋ ವೇದಾಧ್ಯಯನವರ್ಜಿತಃ ॥೪೬॥

ಕಾಮಾತುರಶ್ಚ ಸ್ವಾದ್ವನ್ನೋ ಭಿಕ್ಷುಶ್ಚಾಯಂ ದುರಾತ್ಮವಾನ್ ।
ಮಿಷ್ಟಮಶ್ನಾತಿ ಸತತಂ ಬಲಾದಾಕ್ರಮ್ಯ ಪೀಡ್ಯತಾಂ ॥೪೭॥

---

ಅಲ್ಲದೆ ಸರ್ವದಾ ಪ್ರೇತಾನ್ನವನ್ನೂ ಭಕ್ಷಿಸಿರುವನು. ಇದರಿಂದ ಈಗ ಈತನು ಕ್ರಿಮಿರಾಶಿಯನ್ನೇ ತಿನ್ನಬೇಕಾಯಿತು. ಉಭಯಮುಖೀ ಗೋದಾನವನ್ನು ಪರಿಗ್ರಹಿಸಿದ ಈತನು ಇಲ್ಲಿ ಕಬ್ಬಿಣದ ಕಾದ ಗುಂಡುಗಳಿಂದ ಹೊಡೆಯಲ್ಪಡುತ್ತಿರುವನು. ಮತ್ತು ತಪ್ತಚಕ್ರಾಂಕನಕ್ಕೆ ಮನಗೊಟ್ಟ ಈ ಬ್ರಾಹ್ಮಣನು ಶಿವನಿಂದಾಪರನಾಗಿ ಶಿವಪೂಜಕರಿಗೆ ದ್ವೇಷಿಯೆನಿಸಿದನು. ॥೪೩-೪೪॥

ಇದೂ ಅಲ್ಲದೆ ಸೋಮಪ್ರದೋಷ, ಶಿವರಾತ್ರಿ, ಕೃಷ್ಣಚತುರ್ದಶೀ, ಅಷ್ಟಮೀ ಮುಂತಾದ ಶಿವಪ್ರೀತಿಕರಗಳಾದ ತಿಥಿಗಳಲ್ಲಿ ಹಗಲು ಅನ್ನವನ್ನು ತಿಂದ ಪಾಪಿಯನ್ನೂ, ಶಸ್ತ್ರಗಳ ಸಮೂಹದಿಂದ ಚೂರುಚೂರಾಗಿ ಕತ್ತರಿಸಿ, ಅದರ ಮೇಲೆ ಉಪ್ಪಿನ ನೀರನ್ನು ಚಿಮುಕಿಸುತ್ತಿರುವರು. ಈ ಬ್ರಹ್ಮಚಾರಿಯು ಉನ್ಮತ್ತನಾಗಿ, ವೇದಾಧ್ಯಯನ ವರ್ಜಿತನಾಗಿದ್ದನು. ॥೪೫-೪೬॥

ಅಲ್ಲದೆ ಆತನು ಕಾಮಾತುರನಾಗಿ, ಮೃಷ್ಟಾನ್ನಭೋಜನಾಸಕ್ತನಾಗಿ ದುರ್ಮಾರ್ಗದಲ್ಲಿ ಸಂಚರಿಸಿರುವನು. ಇಂತಹವನನ್ನು ಬಲಾತ್ಕಾರವಾಗಿ ಎಳೆದು ಹೊಡೆಯಿರಿ. ॥೪೭॥

ಮುದ್ಗರೈಶ್ಚ ಹನ್ಯತಾಂ ಲಗುಡೈರ್ಘೋರೈರ್ಮುಸಲೈರಾಯಸೈರ್ದೃಢಂ ।
ಊರ್ಧ್ವಪುಂಡ್ರಧರೋ ನಿತ್ಯಂ ಮೃದಾಯಂ ಬ್ರಾಹ್ಮಣಬ್ರುವಃ ॥೪೮॥

ಶ್ವಭಿಸ್ಸಂದಶ್ಯತಾಂ ಪಾಪೋ ವಾಯಸೈರ್ವೃಶ್ಚಿಕೈರಪಿ ।
ತ್ರಿಪುಂಡ್ರಫಾಲಾನ್ ದೃಷ್ಟ್ವೈವ ಸದಾ ನಿಂದಂತ್ಯಯಂ ದ್ವಿಜಃ ॥೪೯॥

ಉತ್ಪಾಟ್ಯತಾಮಸ್ಯ ಜಿಹ್ವಾ ನೇತ್ರೇ ಸೂಚ್ಯಾ ತುದಂತು ಚ ।
ಶೃಣ್ವನ್ನಿಂದಾಂ ಮಹೇಶಸ್ಯ ದೇವಾನಾಂ ಚ ದ್ವಿಜಸ್ಯ ಚ ॥೫೦॥

ಆಶೀವಿಷವಿಷೈರ್ಘೋರೈರ್ದಹ್ಯತಾಂ ಶಣವಲ್ಕಲೈಃ ।
ಏವಂ ತೇ ನರಕಾ ಘೋರಾ ಭಟಾರ್ಭಟೈರನ್ಯೈರಪಿ ॥೫೧॥

ಛಿಂದಿಭಿಂದೀತಿ ವಾದ್ಯೈಶ್ಚ ಹಾಹೇತಿ ಚ ಪ್ರಲಾಪಿತೈಃ ।
ನಾನಾದುಃಖಶತೈರ್ಘೋರೈರ್ದುಃಖಿತಃ ಪರಿಧಾವತೇ ॥೫೨॥

ಅಸಹ್ಯಂ ದೇವಿ ತದ್ದುಃಖಂ ವರ್ಣಿತುಂ ಚಾಪಿ ನ ಕ್ಷಮಂ ।
ತಂ ದೃಷ್ಟ್ವಾ ದುಃಖಿತಂ ವಿಪ್ರಂ ಧಾವಂತಂ ಕರುಣಾರವಂ ॥೫೩॥

---

ಈ ಬ್ರಾಹ್ಮಣನು ಮಣ್ಣಿನಿಂದ ಊರ್ಧ್ವಪುಂಡ್ರವನ್ನು ಧರಿಸಿಕೊಂಡು ತಾನು ಬ್ರಾಹ್ಮಣಶ್ರೇಷ್ಠನೆಂದು ಹೇಳಿಕೊಂಡಿರುವನು. ಇಂಥಹವನನ್ನು ದೊಣ್ಣೆಗಳಿಂದಲೂ, ಕಬ್ಬಿಣದ ಮುಸಲಾಯುಧಗಳಿಂದಲೂ ಹೊಡೆದು ಅರೆಯಿರಿ. ನಾಯಿಗಳಿಂದಲೂ, ಚೇಳು, ಕಾಗೆ, ಮುಂತಾದ ಪ್ರಾಣಿಗಳಿಂದಲೂ ಕಚ್ಚಿಸಿರಿ. ತ್ರಿಪುಂಡ್ರಧಾರಿಗಳಾದ ಶೈವರನ್ನು ಬಹುವಾಗಿ ನಿಂದಿಸಿದ್ದ ಇವರ ನಾಲಿಗೆಗಳನ್ನು ಸೀಳಿ, ಕಣ್ಣುಗಳನ್ನು ಸೂಜಿಗಳಿಂದ ಚುಚ್ಚಿರಿ. ಈತನು ಈಶ್ವರನ ಮತ್ತು ದೇವಬ್ರಾಹ್ಮಣರ ನಿಂದನೆಯನ್ನು ಕಿವಿಗೊಟ್ಟು ಕೇಳಿರುವನು. ॥೪೮-೪೯-೫೦॥

ಇಂತಹವನನ್ನು ಘೋರವಾದ ಸರ್ಪಗಳಿಂದ ಕಚ್ಚಿಸಿ, ಶಣಬಿನ ಬಟ್ಟೆಯನ್ನು ಸುತ್ತಿ ಬೆಂಕಿಹೊತ್ತಿಸಿರಿ. ಹೀಗೆ ನರಕದಲ್ಲಿರುವ ಕ್ರೂರಭಟರು, ಹೊಡಿ, ಬಡಿ, ಎಂದು ಕೂಗುತ್ತಲಿರುವರು. ಪಾಪಿಗಳಾದರೋ ಆ ಹಿಂಸೆಯನ್ನು ತಾಳಲಾರದೆ, ಅಳುತ್ತಾ ಕೊರಗುತ್ತಾ ದಿಕ್ಕಾಪಾಲಾಗಿ ಓಡುತ್ತಿರುವರು. ॥೫೧-೫೨॥

ಅಂತೂ ದೇವಿಯೇ, ಆ ನರಕಯಾತನೆಯನ್ನು ಸಹಿಸುವುದೂ, ವರ್ಣಿಸುವುದೂ ಅಸಾಧ್ಯ. ಅದಿರಲಿ, ಆ ಬ್ರಾಹ್ಮಣನು ನರಕದಲ್ಲಿ ಬಿದ್ದು ಗೋಳಾಡುವು

ಅಸ್ಮಾನಪಿ ಶಿವೇ ದೃಷ್ಟ್ವಾ ಕರುಣಾ ಮೇ ಸಮಾಗತಾ ।
ತತ್ರ ಶೈವಕೃತಾ ಪೂಜಾ ದೃಷ್ಟಾ ತೇನೇತಿ ತಂ ತದಾ ॥೩೪॥

ಸಮಾನೇತುಂ ಗಿರಿಸುತೇ ಮಯಾ ಸಂಪ್ರೇಷಿತಾ ಗಣಾಃ ।
ಮಮಾಜ್ಞಯಾ ತಮಾವಂತ್ಯಂ ಸಮಾನೇತುಂ ತದಾಂಬಿಕೇ ॥೩೫॥

ದೃಷ್ಟ್ವಾ ತಂ ನರಕಂ ಘೋರಂ ತೇ ಯಮೇನ ಸುಪೂಜಿತಾಃ ।
ಪ್ರಾಹ ತಾನ್ ಪ್ರಾಂಜಲಿಃ ಸೌರಿಃ ಕುತ್ರ ವಾ ಗಮ್ಯತೇ ಗಣಾಃ ॥೩೬॥

ಭವತಾಂ ದರ್ಶನೇ ಯೋಗ್ಯಃ ಕಿಮಯಂ ನರಕಾರ್ಣವಃ ।
ಗಣಾ ಯಮವಚಶ್ಶ್ರುತ್ವಾ ಪ್ರಾಹುಸ್ತೇ ತಂ ಶಿವಾಜ್ಞಯಾ ॥೩೭॥

॥ ಗಣಾ ಊಚುಃ ॥

ಆವಂತ್ಯೋಽಯಂ ಪಾಪಯುಕ್ತಸ್ತಥಾಪಿ ಭಗವತ್ಪ್ರಿಯಃ ।
ಕಿಂ ವಾನೇನ ಕೃತಂ ಪುಣ್ಯಂ ಸೂಕ್ಷ್ಮಂ ಜಾನಾತಿ ಶಂಕರಃ ॥೩೮॥

---

ದನ್ನು ನೋಡಿ ನನಗೆ ಅವನಲ್ಲಿ ಮರುಕವುಂಟಾಯಿತು. ಒಡನೆಯೇ, ಆ ಬ್ರಾಹ್ಮಣನು ಕೊನೆಯಲ್ಲಿ ಶೈವನು ಆಚರಿಸಿದ ಶಿವಪೂಜೆಯನ್ನಾದರೂ ನೋಡಿರುವನಲ್ಲಾ ಎಂದು ಭಾವಿಸಿ, ॥೩೩-೩೪॥

ಅವನನ್ನು ಇಲ್ಲಿಗೆ ಕರೆದುತರುವಂತೆ ನನ್ನ ಪ್ರಮಥಗಣಗಳನ್ನು ಹೇಳಿಕಳುಹಿಸಿದೆನು. ಒಡನೆಯೇ ನನ್ನ ಅನುಚರರು ಆ ನರಕಕ್ಕೆ ಹೋಗಲು, ಯಮನು ಅವರನ್ನು ನೋಡಿ ಒಡನೆಯೇ ಭಯಭಕ್ತಿಯಿಂದ ಅವರಿಗೆ ನಮಸ್ಕರಿಸಿ, ಅವರ ಪ್ರಯಾಣದ ಉದ್ದೇಶವನ್ನು ಪ್ರಶ್ನಿಸಿದನು. ॥೩೫-೩೬॥

ಮತ್ತು 'ಎಲೈ ಪ್ರಮಥಗಣಗಳೇ, ಈ ಪಾಪಿಯನ್ನು ತಮ್ಮಂತಹವರು ನೋಡಬಹುದೇ ? ಏತಕ್ಕಾಗಿ ಇಲ್ಲಿಗೆ ಈಗ ಬಂದಿರಿ' ಎಂದು ಯಮನು ಪ್ರಶ್ನಿಸಲು, ಕೂಡಲೇ ಪ್ರಮಥಗಣಗಳು " ಸೂರ್ಯಪುತ್ರನೇ, ಅವಂತೀದೇಶದ ಈತನು ಪರಮಪಾಪಿಯಾಗಿದ್ದರೂ, ಶಂಕರನಿಗೆ ಪ್ರೀತಿಪಾತ್ರನಾಗಿರುವನು. ಏಕೆಂದರೆ ಹಿಂದೆ ಒಬ್ಬ ಶೈವನು ಪ್ರದೋಷಕಾಲದಲ್ಲಿ ನಡೆಸಿದ ಶಿವಪೂಜೆಯನ್ನು ಈತನು ನೋಡಿದವನಾದ್ದರಿಂದ ಕಷ್ಟನಿವಾರಕನಾದ ಮಹಾದೇವನು, ಆ ಸೂಕ್ಷ್ಮಪುಣ್ಯವನ್ನು ದೊಡ್ಡದಾಗಿ

ಯಮಾನೇನ ಕೃತಾ ಪೂಜಾ ಪ್ರದೋಷೇ ಶೈವಕಲ್ಪಿತಾ ।
ದೃಷ್ಟ್ವಾ ತೇನ ಮಹಾದೇವಸ್ತುಷ್ಟಃ ಕಷ್ಟನಿವಾರಕಃ ॥೫೯॥

ತತ್ಸಮಾನಯನೇ ಸೌರೇ ಪ್ರೇಷಿತಾಃ ಶ್ರೀಶಿವೇನ ಹಿ ।
ಅತಃ ಪರಂ ತ್ವಮಸ್ಮಾಕಂ ಗಣನೀಯೋಽಸಿ ಕಿಂ ವದ ॥೬೦॥

ಗಣಾನಾಂ ವಚನಂ ಶ್ರುತ್ವಾ ಪ್ರಾಹ ಸೌರಿಃ ಕೃತಾಂಜಲಿಃ ॥೬೧॥

ಶಿವಾಜ್ಞಾಪಾಲಕಶ್ಚಾಹಂ ಯಥೇಚ್ಛತಿ ಚ ಸಪ್ರಭುಃ ।
ಅಸ್ಯೈವ ದಂಡನಾರ್ಥೇಽಹಂ ಶಂಕರೇಣ ನಿಯೋಜಿತಃ ॥೬೨॥

ಇತಿ ತೇ ಗಣಪಾಸ್ಸರ್ವೇ ಯಮೇನ ಚ ಸಮನ್ವಿತಾಃ ।
ದ್ರಷ್ಟುಂ ತಂ ನರಕಂ ಘೋರಂ ತೇಽಪಿ ಶಂಭುಗಣಾಸ್ತದಾ ॥೬೩॥

॥ ಸೂತ ಉವಾಚ ॥

ಕೇಚಿಚ್ಛಿರೋರುವಿನಿಕೃತ್ತಮಹಾಂಗಬಂಧಾಃ
ಕೇಚಿಜ್ಜ್ವಲಜ್ವಲನದೀಪ್ತವಿದೀಪ್ತದೇಹಾಃ ।
ಕೇಚಿಚ್ಚ ದಂಡವರಖಂಡಿತಮುಂಡಷಂಡಾಃ
ಕೇಚಿತ್ಸ್ರವದ್ರುಧಿರದಿಗ್ಧಸಮಗ್ರಕಾಯಾಃ ॥೬೪॥

---

ಭಾವಿಸಿ, ಇವನನ್ನು ಕರೆದುತರುವಂತೆ ಅಪ್ಪಣೆಮಾಡಿ ಇಲ್ಲಿಗೆ ನಮ್ಮನ್ನು ಕಳುಹಿಸಿರುವನು. ಇನ್ನು ನಾವು ನಿನ್ನ ಅಪ್ಪಣೆಯನ್ನು ನಡೆಸುವವರಲ್ಲ"ಎಂದರು.॥೫೮-೫೯-೬೦॥

ಒಡನೆಯೇ ಯಮನು ಶಿವದೂತರ ಮಾತನ್ನು ಕೇಳಿ " ಮಹಾತ್ಮರೇ ನಾನೂ ಸಹ ನಿಮ್ಮಂತೆಯೇ ಶಿವಾಜ್ಞಾಪಾಲಕನು. ಶಂಕರನ ಅಪ್ಪಣೆಯಿಂದಲೇ ಈತನನ್ನು ನಾನು ಶಿಕ್ಷಿಸಿದೆನು. ಈಗ ಪರಶಿವನು ಅವನನ್ನು ರಕ್ಷಿಸಲು ಹೊರಟರೆ ನಾನು ಅಡ್ಡಿಬರುವೆನೆ ? " ಎಂದು ಹೇಳಿ ಆ ಗಣಗಳೊಡಗೂಡಿ ತಾನು ನರಕಕ್ಕೆ ಹೋದನು. ॥೬೧-೬೨-೬೩॥

ಅಲ್ಲಿ ಕೆಲವರನ್ನು ಯಮಭಟರು ತಲೆಯಿಂದ ಹಿಡಿದು ಎಲ್ಲಾ ಅವಯವಗಳನ್ನೂ ಕತ್ತರಿಸುತ್ತಿದ್ದರು. ಕೆಲವರ ದೇಹಗಳು ಬೆಂಕಿಯಲ್ಲಿ ಉರಿಯುತ್ತಿದ್ದವು. ಕೆಲವರ ಮುಂಡ ಮತ್ತು ರುಂಡಗಳು ಬೇರೆಬೇರೆಯಾಗಿ ಬಿದ್ದಿದ್ದುವು. ಹಲವರ ದೇಹದಿಂದ ರಕ್ತವು ಪ್ರವಾಹವಾಗಿ ಹರಿಯುತ್ತಿದ್ದಿತು. ॥೬೪॥

ಕೇಚಿನ್ಮಹಾಮುಸಲಪುಂಡಲಖಂಡಕಾಯಾಃ
ಕೇಚಿದ್ವಿದೀರ್ಣದಶನಾಂತ್ರವಿಭಿನ್ನಪಾದಾಃ ।
ಕೇಚಿತ್ಸುತೀಕ್ಷ್ಣಖರಖಡ್ಗವಿಭಿನ್ನಹಸ್ತಾಃ
ಕೇಚಿನ್ಮಹಾಯಸಸುಶೃಂಖಲಜಾಲಮಾಲಾಃ ॥೬೫॥

ದೃಷ್ಟ್ವಾ ಯಮೇನ ಗಣಪಾ ಅತಿಘೋರಮುಗ್ರಂ
ಜಗರ್ಜುರೀಶಾನ ಮಹೇಶನಾಮ್ನಾ ।
ಶಂಭೋ ಶಿವ ಪ್ರಮಥನಾಥ ತ್ರಿಲೋಚನೇತಿ
ಪಾಹೀಶ ನಾರಕಸುಘೋರ ಮಹಾಭವಾಬ್ಧೇಃ ॥೬೬॥

ಹಾ ಹಾ ಹಾ ಬಹುಪಾತಕಾ ಕುಲರವೈರಾಕ್ರಂದಿತಂ ದಿಕ್ತಟಂ
ಶಂಭೋ ಭೋ ಭಗವನ್ಮಹೇಶ ಕರುಣಾದೃಷ್ಟ್ಯಾವಲೋಕ್ಯಾದರಾತ್ ।
ಸಂತಿಷ್ಠ ಕ್ಷಣಕಂ ಮಹೋತ್ಸವರಣಾಸ್ತ್ವತ್ತೇಜಸಾಪ್ಯಾಯಿತಾ
ಶ್ಯಾಮೀ ನಾರಕಿಣೋ ಮದೀಯವಚಸಾ ತ್ವಂ ದೀನಬಂಧುಃ ಕಿಲ ॥೬೭॥

---

ಕೆಲವರ ದೇಹಗಳನ್ನು ಮುಸಲಗಳಿಂದ ಬಡಿಯುತ್ತಿದ್ದರು. ಅನೇಕರ ಹಲ್ಲುಗಳನ್ನು ಮುರಿದು, ಕರುಳುಗಳನ್ನು ಎಳೆದು, ಕಾಲುಗಳನ್ನು ಮುರಿದು, ಹಿಂಸಿಸುತ್ತಿದ್ದರು. ಕೆಲವರ ಕೈಗಳನ್ನು ಹರಿತವಾದ ಕತ್ತಿಗಳಿಂದ ಕತ್ತರಿಸುತ್ತಿದ್ದರು. ಪಾಪಿಗಳನೇಕರಿಗೆ ಕಬ್ಬಿಣದ ಭಾರವಾದ ಸರಪಳಿಗಳ ಮಾಲೆಯನ್ನು ಹಾಕಿ ಎಳೆದುಕೊಂಡುಹೋಗುತ್ತಿದ್ದರು. ॥೬೫॥

ಅಂತಹ ಘೋರನರಕವನ್ನು ಯಮನೊಡನೆ ಹೋಗಿದ್ದ ಶಿವಗಣಗಳು ನೋಡಿ, ಶಂಭೋ, ಶಂಕರ, ಪ್ರಮಥಾಧಿನಾಥ, ತ್ರಿಲೋಚನ ಮುಂತಾದ ಶಿವ ನಾಮಗಳನ್ನುಚ್ಚರಿಸುತ್ತಾ, ಶಂಕರನೇ, ಇಂತಹ ಕಷ್ಟಪ್ರದವಾದ ಸಂಸಾರದುಃಖದಿಂದ ನಮ್ಮನ್ನು ರಕ್ಷಿಸು ಎಂದು ಕೂಗಿಕೊಂಡರು. ॥೬೬॥

ಮತ್ತು ಆಗ ಆ ಪ್ರಮಥಗಣಗಳು ನನ್ನನ್ನು ಕುರಿತು " ಮಹಾದೇವನೇ, ನರಕದಲ್ಲಿ ದುಃಖಪಡುತ್ತಿರುವ ಈ ಪಾಪಿಗಳ ಆರ್ತನಾದವನ್ನು ಕೇಳಿ, ಅವರಮೇಲೆ ದಯೆಯಿಂದ ನಿನ್ನ ಕರುಣಾಪಾಂಗವನ್ನು ಬೀರುವವನಾಗು. ಕ್ಷಣಕಾಲ ನೀನು ನೋಡಿದರೂ ಈ ಪಾಪಿಗಳಿಗೆ ಶಾಶ್ವತವಾದ ಆನಂದವು ದೊರಕುವುದು. ಮಹಾದೇವನೇ, ನೀನು ದೀನಬಂಧುವಲ್ಲವೆ? ಈ ಪಾಪಿಗಳನ್ನು ರಕ್ಷಿಸಲಾರೆಯಾ ! ॥೬೭॥

ಯಮಭಟಪಟಲೀಕೃತೋಗ್ರರಾವಂ
ವಿನಿಹತನಾರಕಿಣಾಂ ಕಶೋಗ್ರಘಾತೈಃ ।
ನರಕಮತಿಸುಘೋರಮದ್ಯ ಶಂಭೋ
ನ ಹಿ ಪಶ್ಯೇಮ ಭವತ್ಕೃಪಾಕಟಾಕ್ಷೈಃ ॥೬೮॥

ಗಣೇಶವದನಚ್ಯುತಪ್ರಬಲಶಂಭುನಾಮ್ನಾ ತದಾ
ಶಿವಾದ್ಯ ಹರ ಪಾಹಿ ನಃ ಪ್ರಮಥನಾಥ ಶಂಭೋ ಶಿವ ।
ತದೈವ ಯಮಯಾತನಾವಿರಹಿತಾಸ್ತದಾ ನಾರಕಾಃ
ಜಗರ್ಜುರಖಿಲಾಸ್ತದಾ ವಿವಿಧಪಾತಕೈಸ್ತೇ ಚ್ಯುತಾಃ ॥೬೯॥

ತಾನ್ ಗಣಾನ್ ಸ ತದಾ ಪ್ರಾಹ ಯಮಃ ಕ್ರೋಧವಶಂಗತಃ ।
ದಂತಾನ್ ಕಟಕಟಾಶಬ್ದೈರ್ವಿವೃತ್ಯ ನಯನೇ ತದಾ ॥೭೦॥

॥ ಯಮ ಉವಾಚ ॥

ಸರ್ವಾಣಿ ಪಾಪಾನ್ಯತಿದುಃಖದಾನಿ
ಗಣಾಸ್ಸದಾ ದುಃಖತರಾಣಿ ಶಂಭೋಃ ।

---

ಶಂಕರನೇ, ಈ ನರಕವು ಯಮಭಟರಿಂದ ತುಂಬಿಹೋಗಿದೆ. ಅವರ ಆರ್ಭಟವೂ, ಪಾಪಿಗಳನ್ನು ಹೊಡೆಯುವ ಚಾವಟಿಯ ಏಟೂ, ಈ ನರಕವನ್ನು ಭಯಂಕರವನ್ನಾಗಿ ಮಾಡಿದೆ. ದೇವದೇವನೇ, ನಿನ್ನ ಕರುಣಾದೃಷ್ಟಿಯ ಬಲದಿಂದ ನಾವು ಈ ದುಃಖವನ್ನು ತಪ್ಪಿಸಿಕೊಂಡಿರುವೆವು. ಅಲ್ಲವೆ!" ॥೬೮॥

ಎಂದು ಆ ನನ್ನ ಗಣನಾಯಕರು ಪ್ರಾರ್ಥಿಸುತ್ತಿರುವಾಗ, ಅವರ ಬಾಯಿಂದ ಹೊರಟ ಶಿವನಾಮಗಳನ್ನು ಆ ಪಾಪಿಗಳೆಲ್ಲಾ ಕೇಳಿದರು. ಒಡನೆಯೇ ಆ ಶಿವನಾಮ ಮಹಿಮೆಯಿಂದ ನರಕಯಾತನೆಯೆಲ್ಲಾ ಅವರಿಗೆ ಮಾಯವಾದವು. ಆಗ ಅವರು ಆಶ್ಚರ್ಯಪಡುತ್ತಾ ದುಃಖದಿಂದ ನಾವೆಲ್ಲರೂ ಮುಕ್ತರಾದೆವೆಂದು ಸಂತೋಷದಿಂದ ಜಯಕಾರಮಾಡಲಾರಂಭಿಸಿದರು. ॥೬೯॥

ಒಡನೆಯೇ ಅದನ್ನು ನೋಡಿ ಯಮನು ಕುಪಿತನಾಗಿ, ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ, ಕಣ್ಣುಗಳನ್ನು ದೊಡ್ಡದಾಗಿ ತೆರೆದು ನನ್ನ ಗಣಗಳನ್ನು ಕ್ರೂರವಾಗಿ ನೋಡಲಾರಂಭಿಸಿದನು. ॥೭೦॥

ಅಲ್ಲದೆ ಗಣಗಳೊಡನೆ ಹೀಗೆಂದನು " ಎಲೈ ಗಣದೇವತೆಗಳಿರಾ, ಲೋಕದಲ್ಲಿ

ದ್ರೋಹೇ ತಥಾ ತಾಂತ್ಸಮುದೀಕ್ಷ್ಯ ಕೋಪೋ
ಮಹಾನಭೂನ್ಮೇ ಶೃಣು ತತ್ಪ್ರಕೃಷ್ಟಂ ॥೭೧॥

ಕುಕಲ್ಪನಾನಲ್ಪವಿಕಲ್ಪಜಾಲೈ
ರ್ಮಹೇಶನಿಂದಾಂ ತನುತೇ ನರಾಧಮಃ ।
ಅಧೋಮುಖಶ್ಚೋರ್ಧ್ವಪದಾವಲಂಬತೇ
ವಿಷ್ಠಾಹ್ರದೇ ತತ್ಕ್ರಿಮಿಭುಕ್ ಶತಂ ಸಮಾಃ ॥೭೨॥

ಕನಿಷ್ಠಂ ಪಶೂನಾಂ ವದಂತ್ಯೇವ ವೇದಾಃ
ಖರಾಪಾರಶಿಶ್ನೋದ್ಭವಂ ತಂ ಚ ವಿಪ್ರಂ ।
ಶುನೀಗರ್ಭಸಂಭೂತಿವಿಷ್ಠಾಕ್ರಿಮಿಂ ತಂ
ಮಹೇಶಾರ್ಚನಾವರ್ಜಿತಂ ಜನ್ಮ ಯಸ್ಯ ॥೭೩॥

ಶಿವೇಶಾನಪೂಜಾನಿವೇದ್ಯಾನ್ನಭೋಜೀ
ಭುನಕ್ತ್ಯೇವ ಕಷ್ಟಂ ಮಲಾನಾಂ ಸರಾಶಿಂ ।
ತದಶ್ಯಾಮ ಮಂತ್ರೈರ್ವದತ್ಯೇವ ವೇದ
ಸ್ತ್ರಿಕಾಲಃ ಸಮುತ್ಪಾಟಯಂತ್ಯಾಶು ತಸ್ಯೋರ್ಧ್ವಮುಂಡಂ ॥೭೪॥

---

ಜನರು ಆಚರಿಸಿದ ಸಕಲ ಪಾಪಗಳೂ ಅವರಿಗೆ ದುಃಖಕರಗಳೇ ಆಗುವುವು. ಆದರಲ್ಲಿಯೂ ಶಿವದ್ರೋಹ, ಶೈವದ್ರೋಹ ಇವುಗಳನ್ನು ನೋಡಿದರಂತೂ ನನ್ನ ಕೋಪವು ಮಿತಿಮೀರಿ ಹೋಗುವುದು. ॥೭೧॥

ಯಾರು ಕುತರ್ಕಗಳಿಂದಲೂ, ಅತಿಶಯವಾದ ಸಂದೇಹಜಾಲಗಳಿಂದಲೂ, ವಾಚ್ಯವಾಗಿಯೋ, ವ್ಯಂಗ್ಯವಾಗಿಯೋ ಈಶ್ವರನಿಂದೆ ಮಾಡುವರೋ ಅಂತಹವರನ್ನು ತಲೆಕೆಳಗಾಗಿ ನಡೆಸಬೇಕು. ಅಲ್ಲದೆ ಅವರು ನೂರು ವರ್ಷ ಪರ್ಯಂತ ಮಲಕೂಪ ದಲ್ಲಿ ಬಿದ್ದು ಅದರ ಕ್ರಿಮಿಗಳನ್ನೇ ತಿನ್ನುತ್ತಾ ಅವರು ಜೀವಿಸಬೇಕು. ॥೭೨॥

ಮಹೇಶ್ವರನ ಅರ್ಚನೆಯಿಂದ ದೂರರಾದವರ ಜನ್ಮವನ್ನು ವೇದಗಳು ಕನಿಷ್ಠವರ್ಗದ ಪಶುಜನ್ಮದಂತೆ ಜರೆಯುವುವು. ಅವನು ಜಾತಿಯಲ್ಲಿ ವಿಪ್ರನಾದರೂ ಕತ್ತೆಯವೀರ್ಯೋದ್ಭವವಾದ ಪ್ರಾಣಿಗೆ ಸಮನೆಂದು ಹೇಳುವುವು. ಮತ್ತು ಹೆಣ್ಣು ನಾಯಿಯ ಹೊಟ್ಟೆಯಲ್ಲಿರುವ ಹುಳುವಿನಂತೆ ಅವನ ಜನ್ಮವು ನಿಂದ್ಯವಾದುದೆಂದೂ ವೇದಗಳು ಸಾರುವುವು. ॥೭೩॥

ವೇದಗಳು ತಮ್ಮ ಮಂತ್ರಗಳಿಂದ ಹೀಗೆ ಹೇಳುವುವು, " ಯಾರು ಶಿವನಿಗೆ

ಭುಶುಂಡೀನಿಪಾತೈಃ ಕಶಾಘಾತಪಾತೈಃ
ಸುರುದ್ರಾಕ್ಷಹೀನಾಂಗಸಂಗಾಂಗಸಂಗಂ ।
ಸುಧೂಮಾಯಿತೇ ತಪ್ತತೈಲೀಕಟಾಹೇ
ಸಮುತ್ಕ್ಷಿಪ್ಯ ಭಸ್ಮೀಕರೋಮ್ಯೇವ ಕಾಲಃ ॥೭೫॥

ಗಣಾ ರುದ್ರಪಂಚಾಕ್ಷರಾವೃತ್ತಿಹೀನಾನ್
ಮಹಾದೇವಲಿಂಗಾರ್ಚಕಾನ್ ವಿಸ್ಫುಲಿಂಗೈಃ ।
ಸುಚಕ್ರಾಂಕಿತಾನೂರ್ಧ್ವಪುಂಡ್ರಾಸ್ತಥಾನ್ಯಾನ್
ಸುದಂಷ್ಟ್ರೈರುಧಾರಾದಿಭಿಶ್ಚರ್ವಯಾಮಿ ॥೭೬॥

ಪ್ರದೋಷಾರ್ಚನಾವರ್ಜಿತಂ ಸೋಮವಾರೇ
ದಿವಾ ಭುಕ್ತವಂತಂ ಮಹಾಲೋಹಘಾತೈಃ ।
ತಥಾ ಭೂತಕಾಲಾಷ್ಟಮೀಷು ಪ್ರದೋಷೇ
ನ ಚಾರ್ಚಂತಿ ಲಿಂಗಂ ಸದಾ ಕಾಲದಂಡ್ಯಾಃ ॥೭೭॥

---

ನಿವೇದನವಾಗದ ಆ ಆಹಾರವನ್ನು ಭುಂಜಿಸುವರೋ ಅವರು ಮಲರಾಶಿಯನ್ನೇ ತಿನ್ನುವ ಜನ್ಮವನ್ನು ತಾಳುವರು. ಅಲ್ಲದೆ ಅಂತಹವರ ಶಿರಸ್ಸನ್ನು ಯಮದೂತರು ತುಂಡರಿಸಿಬಿಡುವರು.'' ॥೭೪॥

ನಿಜವಾಗಿಯೂ ನಾನು ಯಾವನು ಶಿವಪೂಜೆಯಲ್ಲಿ ವಿಮುಖನಾಗಿ ರುದ್ರಾಕ್ಷಧಾರಣೆಮಾಡಿಕೊಳ್ಳುವುದಿಲ್ಲವೋ ಅಂತಹವನ್ನು ಚಾವಟೆ, ಭುಶುಂಡಿ ಮೊದಲಾದ ಆಯುಧಗಳಿಂದ ಹೊಡೆಸಿ ಕಾದೆಣ್ಣೆಯ ಕೊಪ್ಪರಿಗೆಗೆ ತಳ್ಳಿಸಿ ಅವನನ್ನು ಸುಟ್ಟು ಭಸ್ಮಮಾಡಿಬಿಡುವೆನು. ॥೭೫॥

ಎಲೈ ಗಣಗಳೇ, ಶಿವಪಂಚಾಕ್ಷರೀ ಮಂತ್ರವನ್ನು ಜಪಿಸದೆ ಶಿವಲಿಂಗಾರ್ಚನ ಮಾಡದವರನ್ನೂ, ಮತ್ತು ತಪ್ತಮುದ್ರಾಧಾರಣೆ, ಚಕ್ರಧಾರಣೆ, ಊರ್ಧ್ವಪುಂಡ್ರ ಧಾರಣೆ ಇವುಗಳಿಂದ ದೂಷಿತರಾದವರನ್ನೂ ನಾನು ನನ್ನ ಬಾಯಿಯಲ್ಲಿ ಹಾಕಿ ಕೊಂಡು ಅಗಿದು ನುಂಗುವೆನು. ॥೭೬॥

ಸೋಮಪ್ರದೋಷ, ಕೃಷ್ಣಾಷ್ಟಮೀ, ಕೃಷ್ಣಚತುರ್ದಶೀ ಮುಂತಾದ ತಿಥಿಗಳ ಪ್ರದೋಷಕಾಲದಲ್ಲಿ ಶಂಕರನನ್ನು ಅರ್ಚಿಸದೆ, ಯಾರು ದಿವಾ ಭೋಜನಮಾಡು

ಮಹಾಶೈವನಿಂದಾಕರಸ್ಯೋರ್ಧ್ವಜಿಹ್ವಾಂ
ಸಮುತ್ಪಾಟ್ಯ ಕಾಲಃ ಸ ತತ್ಫಾಲಮುಧ್ಯಾತ್ ।
ಜ್ವಲದ್ಘೋರಸಂದಂಶಜಾಲೈಸ್ತದಂಗಂ
ನಿಕೃತ್ಯಾಂಭಸಾ ಕ್ಷಾರಜೇನಾಶು ಸಿಂಚೇತ್ ॥೭೮॥

ಮಹಾದೇವಲಿಂಗಾರ್ಚನೇ ಯಸ್ತು ವಿಘ್ನಂ
ಕರೋತಿ ಹಿ ತದ್ದಂಶಾಹುತಾಶನೋಽಹಂ ।
ಇತ್ಥಂ ಸಕಾಲಃ ಸತತಂ ರುಷಾನ್ವಿತಃ
ಶಿವದ್ರುಹಾಂ ನಾಸ್ತಿ ವಿನಿಷ್ಕ್ರಿಯೇತಿ ॥೭೯॥

ಶಿವಾರಾಮವಿಚ್ಛೇದನೇ ಯಸ್ಯ ಹಸ್ತೌ
ಕುಠಾರೋದ್ಯತೌ ತಸ್ಯ ಹಸ್ತೌ ಕುದಾರೈಃ ।
ತಥಾ ದೇವದೇವಾಲಯಸ್ಯಾಪಿ ಕಾಲ
ಶ್ಛಿನತ್ತ್ಯೇಕಮಂಗಂ ತಿಲಾನಾಂ ಕ್ರಮೇಣ ॥೮೦॥

---

ವರೋ, ಅಂತಹವರನ್ನು ನಾನು ಕಬ್ಬಿಣದ ಸರಳುಗಳಿಂದ ಹೊಡೆಸುವೆನು. ಮತ್ತೂ ನಾನಾರೀತಿಯಾದ ಶಿಕ್ಷೆಗೆ ಗುರಿಪಡಿಸುವೆನು. ॥೭೭॥

ಮಹಾದೇವನನ್ನು ನಿಂದಿಸುವವನ ನಾಲಿಗೆಯನ್ನು ಸೀಳಿ, ಅವನ ಹಣೆಯನ್ನು ಬಡಿದು, ಕ್ರೂರಾಸಿಗಳಿಂದ ದೇಹವನ್ನು ಸೀಳಿ, ಅದಕ್ಕೆಲ್ಲಾ ಉಪ್ಪುಬೆರೆದ ನೀರನ್ನು ಯಮನು ಎರಚುವನೆಂದು ವೇದಗಳು ಸಾರುತ್ತವೆ. ॥೭೮॥

ಯಾರು ಮಹೇಶ್ವರನ ಪೂಜೆಗೆ ಅಡ್ಡಿಯನ್ನು ತರುವನೋ, ಅಂತಹವನನ್ನು ಅಗ್ನಿಯು ವಸ್ತುವನ್ನು ದಹಿಸುವಂತೆ ಸುಲಭವಾಗಿ ದಹಿಸಿಬಿಡುವೆನು. ಹೀಗೆಂದು ಹೇಳುತ್ತಾ ಯಮನು ಶಿವದ್ರೋಹಿಗಳನ್ನು ಎಂದಿಗೂ ಬಿಡುಗಡೆ ಮಾಡಕೂಡದೆಂದು ಗರ್ಜಿಸಿದನು. ॥೭೯॥

ಶಿವದೇವಾಲಯಕ್ಕೆ ಸಂಬಂಧಿಸಿದ ಉದ್ಯಾನವನ್ನಾಗಲಿ, ಶಿವದೇವಾಲಯವನ್ನಾಗಲಿ ನಾಶಗೊಳಿಸುವುದರಲ್ಲಿ ಯಾವನ ಕೈಗಳು ಕೊಡಲಿಯನ್ನು ಹಿಡಿಯುವುವೋ, ಅಂತಹವನ ದೇಹವನ್ನೆಲ್ಲಾ ಯಮನು ಅದೇ ಕೊಡಲಿಯಿಂದಲೇ ಎಳ್ಳಿನಷ್ಟು ಸಣ್ಣ ಸಣ್ಣ ಚೂರುಚೂರಾಗಿ ಕತ್ತರಿಸುವನು. ॥೮೦॥

ಇತ್ಥಂ ಕಾಲವಚಶ್ಶ್ರುತ್ವಾ ಗಣಾ ಊಚುಃ ಪರಸ್ಪರಂ ॥೮೧॥

ನಾನಾಸಂಸಾರಚಿಂತಾಪ್ರತಿಹತಮತಯಃ ಕ್ಷೀಣಪುಣ್ಯೈಕಲೇಶಾಃ
ನೀಚಾಃ ಕಾರ್ಯೇ ಸ್ವಕೀಯೇ ಶಮನಭವನಗಾಃ ಕ್ಲೇಶವೃಂದಂ ಭಜಂತಿ ।
ತಸ್ಮಾದ್ವಿಚ್ಯುತಕರ್ಮಶೇಷಜನುಭಿಸ್ತಿರ್ಯಕ್ತ್ವಮಾಸಾದ್ಯ ತೇ
ನಾನಾದುಃಖಶತೈರ್ಮಹೇಶಕುಧಿಯಸ್ತ್ವಾಂ ನಾಶ್ರಯಂತೇ ಜನಾಃ ॥೮೨॥

ಶ್ರುತ್ವಾ ಕಾರ್ತಾಂತವಾರ್ತಾಂ ವಿವಿಧಗತಿವಶಾತ್ ಕಿಂಕರೈರ್ಯಾಮ್ಯದಂಡೈಃ
ಖಂಡ್ಯಂತೇ ಯತ್ರ ಜೀವೋ ಪ್ರತಿನರಕಶತಂ ವತ್ಸರಾಣಾಂ ಬಹೂನಿ ।
ಭಿಂದಿ ಭಿಂದೀತಿ ವಾದ್ಯೈಃ ಪಟುತರಕಶಯಾ ತಾಡ್ಯತೇಯಂ ಜನೌಘ
ಸ್ತ್ವತ್ಪೂಜಾಸ್ತವನಪ್ರಣಾಮರಹಿತೋ ಭೋ ಮುಹ್ಯತೇಯಂ ವಿಭೋ॥೮೩॥

ಮಾರ್ಗಂ ತ್ವಪಾಮಾರ್ಗದಲೈರ್ಮಹೇಶ
ಲಿಂಗಾರ್ಚನಾನ್ಮಾರ್ಗಯತೇ ವಿಮುಕ್ತ್ಯೈ ।
ಮಾರ್ಗೇ ತ್ವಗಂಗಾಸಿತಭಸ್ಮಭಾಲೋ
ರುದ್ರಾಕ್ಷಮಾಲಃ ಸ ತು ಪುಣ್ಯಶೀಲಃ ॥೮೪॥

---

ಹಾಗೆ ಹೇಳಿದ ಯಮನ ಮಾತುಗಳನ್ನು ಕೇಳಿದ ಶಿವಗಣಗಳು ಪರಸ್ಪರವಾಗಿ ಹೀಗೆ ಮಾತನಾಡಿಕೊಂಡರು. 'ಲೋಕದಲ್ಲಿ ಜನರು ಸಂಸಾರಸಾಗರದಲ್ಲಿ ಬಿದ್ದು ಅವಿವೇಕಿಗಳೆನಿಸಿಕೊಂಡು, ನೀಚಕಾರ್ಯಾಸಕ್ತರಾಗಿ ಪಾಪವನ್ನು ಗಳಿಸಿ, ಹೀಗೆ ಯಮಾಲಯವನ್ನು ಸೇರಿ ದುಃಖಿಸುವರು. ಮತ್ತೆ ಅವರ ಕರ್ಮಾನುಗುಣವಾಗಿ ತಿರ್ಯಗ್ಯೋನಿಗಳಲ್ಲಿ ಜನಿಸಿ, ಮತ್ತೆ ದುಃಖಭಾಗಿಗಳೆನಿಸಿ, ಮತ್ತೆ ನರಕಕ್ಕೆ ಬೀಳುವರು. ಅಷ್ಟಾದರೂ ಜನರು ಈಶ್ವರನನ್ನು ಸರಿಯಾಗಿ ಅರಿಯರಲ್ಲಾ! ॥೮೧-೮೨॥

ಪರಶಿವನೇ, ಯಮಲೋಕದಲ್ಲಿ ಯಮನು ಶಿಕ್ಷಿಸುವುದನ್ನೂ ಯಮದೂತರು ದಂಡಾಯುಧಗಳಿಂದ ಕತ್ತರಿಸಿ, ನರಕದಲ್ಲಿ ಅನೇಕ ವರ್ಷಪರ್ಯಂತ, ಹೊಡಿ, ಕಡಿ ಎಂಬ ಕ್ರೂರವಾಕ್ಯಗಳಿಂದ ದಂಡಿಸುವುದನ್ನೂ ಜನರು ತಿಳಿದೂ ತಿಳಿದೂ, ನಿನ್ನ ಪೂಜೆ ನಿನ್ನ ಸ್ತುತಿ, ನಿನ್ನ ವಂದನೆ ಮುಂತಾದ ದುಃಖನಾಶಕಗಳಾದ ಕಾರ್ಯದಲ್ಲಿ ಮಗ್ನರಾಗುವುದಿಲ್ಲವಲ್ಲಾ! ಇದೇನಾಶ್ಚರ್ಯ! ॥೮೩॥

ಮಹೇಶ್ವರನೇ, ಮುಕ್ತಿಪ್ರಾಪ್ತಿಗೆ ಶಿವಲಿಂಗಾರ್ಚನೆಯೊಂದೇ ರಾಜಮಾರ್ಗ. ಅದನ್ನರಿಯದೆ ಜನರು ನಾನಾ ಮಾರ್ಗಗಳಲ್ಲಿ ಅಲೆದಾಡಿ ಕಡೆಗೂ ಮುಕ್ತಿಯನ್ನು

॥ ಸೂತ ಉವಾಚ ॥

ಇತ್ಥಂ ಯಮೇನ ಕೃತಸೂಕ್ತಯ ಏವ ಧೀರಾಃ
ವೀರಾ ಮಹೇಶ್ವರಗಣೇಶವರಾಶ್ಚ ವಿಪ್ರಂ ।
ಆರೋಪ್ಯ ಹಂಸವರಯಾನಮನೋಹರೇಣ
ಸಂಪೂಜಿತಾಃ ಪ್ರಮಥನಾಥ ಪದಂ ಯಯುಸ್ತೇ ॥೮೫॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ನಾರಕಿಣಾಂ
ಯಮಯಾತನಾವರ್ಣನೇ ಶಿವಗಣಯಮಸಂವಾದೇ
ಅಷ್ಟತ್ರಿಂಶೋಽಧ್ಯಾಯಃ

---

ಹೊಂದದೆ ಸಂಸಾರದಲ್ಲಿ ತೊಳಲುವರು. ಆದರೆ ಪುಣ್ಯಶಾಲಿಯಾದವನು ಮಾತ್ರ ಮಾರ್ಗಾಂತರಗಳನ್ನು ನೋಡದೆ, ಸರ್ವದಾ ಭಸ್ಮರುದ್ರಾಕ್ಷಧಾರಣೆಗಳಿಂದ ಶಿವಲಿಂಗವನ್ನೇ ಆರಾಧಿಸುತ್ತಾ ಸುಲಭವಾಗಿ ಆನಂದಸುಖವನ್ನನುಭವಿಸುವನು" ಎಂದು ಶಿವಗಣಗಳು ಪರಸ್ಪರ ಮಾತನಾಡಿಕೊಂಡರು. ॥೮೪॥

ಅಂತೂ ಯಮನೊಡನೆ ಆರೀತಿ ಸಂಭಾಷಣೆ ನಡೆಸಿ ಶಿವಗಣಶ್ರೇಷ್ಠರು, ಆ ಬ್ರಾಹ್ಮಣನನ್ನು ಹಂಸಗಳಿಂದ ಎಳೆಯಲ್ಪಡುವ ರಥದಲ್ಲಿ ಕುಳ್ಳಿರಿಸಿಕೊಂಡು ವಿಧವಿಧವಾಗಿ ಸತ್ಕರಿಸುತ್ತಾ ಶಿವಲೋಕಕ್ಕೆ ಕರೆದು ತಂದರು. ಎಂದು ಸೂತಮಹರ್ಷಿಗಳು ಅಲ್ಲಿ ನೆರೆದಿದ್ದ ಸಕಲ ಋಷಿಜನರಿಗೂ ಹೇಳಿ ಸುಮ್ಮನಾದರು. ॥೮೫॥

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗನಾಮಕವಾದ ಪಂಚಮಾಂಶದಲ್ಲಿ
ನರಕಯಾತನೆಯನ್ನೂ, ಶಿವಗಣ ಮತ್ತು ಯಮ ಇವರ ಸಂಭಾಷಣೆಯನ್ನೂ
ತಿಳಿಸುವ ಮೂವತ್ತೆಂಟನೆಯ ಅಧ್ಯಾಯವು ಸಮಾಪ್ತವಾದುದು.



|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಏಕೋನಚತ್ವಾರಿಂಶೋಽಧ್ಯಾಯಃ

|| ಸೂತ ಉವಾಚ ||

ಅವಂತೀ ನಾಥ ವಿಪ್ರೇಣ ಕೇಚಿತ್ಪುಣ್ಯಲವಾನ್ವಿತಾಃ ।
ಜನ್ಮಮಧ್ಯೇ ಸಕೃದ್ವಾಪಿ ಯೇ ಪಂಚಾಕ್ಷರತತ್ಪರಾಃ ||೧||

ಕದಾಚಿದ್ಭಸ್ಮನಿಟಿಲಾಃ ದೂರಾದ್ಯೇ ಶಿವದರ್ಶಿನಃ ।
ಪ್ರದೋಷೇ ಸೋಮವಾರೇಷು ಶಿವರಾತ್ರಿಷು ಚಾಪಿ ಯೇ ||೨||

ಶೈವಾಲಾಪಪರಾ ಯೇ ವೈ ಯೇ ಚ ತತ್ಸಂಗಿಸಂಗಿನಃ ।
ಯಯುಸ್ತೇಽಪಿ ವಿಮಾನೇನ ಭಾಸ್ವರೇಣ ಶಿವಾಂತಿಕಂ ||೩||

---

## ಮೂವತ್ತೊಂಬತ್ತನೆಯ ಅಧ್ಯಾಯ

ಮತ್ತೆ ಸೂತಮಹರ್ಷಿಗಳು ಶಿವಕಥಾಶ್ರವಣಾಸಕ್ತರಾದ ಮುನಿಜನರನ್ನು ಕುರಿತು ಮತ್ತುಹೀಗೆಂದರು. ಋಷಿವರ್ಯರೇ, ಆ ರೀತಿ ಅವಂತೀನಾಥನಾದ ಬ್ರಾಹ್ಮಣನು ಕೈಲಾಸಗಾಮಿಯಾಗಲು, ಅದೇ ನರಕದಲ್ಲಿದ್ದ, ಅನೇಕರು, ತಮ್ಮ ಜನ್ಮದಲ್ಲಿ ಎಂದೋ ಒಂದು ಸಾರಿ, ಶಿವಪಂಚಾಕ್ಷರವನ್ನು ಜಪಿಸಿದ್ದುದರಿಂದಲೂ, ಆಕಸ್ಮಾತ್ತಾಗಿ ಭಸ್ಮಧಾರಣೆಮಾಡಿದ್ದುದರಿಂದಲೂ, ಶಿವಸಾಮೀಪ್ಯವನ್ನು ಹೊಂದಲು ಅರ್ಹರೆನಿಸಿದರು. ಹಾಗೆಯೇ ದೂರದಿಂದ ಶಿವದರ್ಶನಮಾಡಿದವರೂ, ಸೋಮಪ್ರದೋಷದಲ್ಲಿ, ಶಿವರಾತ್ರಿಯಲ್ಲಿ ಈಶ್ವರಲಿಂಗದರ್ಶನಮಾಡಿ, ಶಿವಕಥಾಶ್ರವಣ ಮಾಡಿದವರೂ, ಅಥವಾ ಅಂತಹವರ ಸಂಸರ್ಗದಲ್ಲಿದ್ದವರೂ ಆತನೊಡನೆಯೇ ಕೈಲಾಸಕ್ಕೆ ತೆರಳಲು ಸಿದ್ಧರಾಗಿ ನಿಂತರು. ||೧-೨-೩||

ತೇ ಗಣಾಶ್ಚ ಮಹೇಶಾನಂ ತಾಂಸ್ತದಾದರ್ಶಯಂಸ್ತದಾ ।
ವಿಭ್ರಾಜಮಾನವಪುಷಃ ಪ್ರಣೇಮುರ್ದಂಡವತ್ಕ್ಷಿತೌ ॥೪॥

ಸಾಂಜಲಿಃ ಪ್ರಣತಾಸ್ಸರ್ವೇ ಜಯದೇವೇತಿ ವಾದಿನಃ ।
ತದೋಚುಸ್ತೇ ತದಾ ವಿಪ್ರಾ ಗಣಾಸ್ತೇಽಪಿ ಮಹೇಶ್ವರಂ ॥೫॥

॥ ಗಣಾ ಊಚುಃ ॥

ತ್ವಂ ಸಚ್ಚಿದಾನಂದಘನೋಽಸಿ ಸೇತು
ರ್ವಿಧಾರಣೋ ಭೂತಪತಿಸ್ತಥಾಯಂ ।
ಆನಂದಲೇಶೇನ ಚಿದಾಮಲೇನ
ಸತ್ವೇನ ಯುಕ್ತೋ ಧುತಕಿಲ್ಬಿಷಶ್ಚ ॥೬॥

ಜನಿತಾ ಪವನಾನಲಾಬ್ಜಬಂಧೋ
ರ್ಜನಿತಾ ಭೂಮಿದಿವೋ ಮತೇಶ್ಚ ಶಂಭೋ ।
ಜಗತೋ ಜನಿತಾ ಮಹೇಶ್ವರಸ್ತ್ವಂ
ಜನಿತಾ ವೃತ್ರಹಣೋ ಮುರಾಂತಕಸ್ಯ ॥೭॥

---

ಹಾಗೆ ತೇಜಸ್ಸಿನಿಂದ ಪ್ರಕಾಶಿಸುವ ಭಕ್ತವೃಂದವನ್ನೆಲ್ಲಾ ಕರೆದುಕೊಂಡು ಶಿವದೂತರು ಪರಶಿವನ ಸಮೀಪಕ್ಕೆ ಹೋಗಿ, ಸಾಷ್ಟಾಂಗದಿಂದೆರಗಿ, ಅಂಜಲಿ ಬದ್ಧರಾಗಿ 'ಜಯ ಮಹಾದೇವ' ಎಂದು ಹೇಳುತ್ತಾ ಮಹೇಶ್ವರನನ್ನು ಕುರಿತು ಹೀಗೆಂದರು. ॥೫॥

"ಮಹಾದೇವನೇ, ನೀನು ಸಚ್ಚಿದಾನಂದಸ್ವರೂಪನು. ಜಗತ್ತನ್ನೇ ಹೃದಯ ಕುಹರದಲ್ಲಿ ಧರಿಸಿದವನು. ಸಕಲ ಪ್ರಾಣಿಗಳಿಗೂ ಒಡೆಯನು. ಚಿದಾನಂದಮಯ ನಾಗಿ ಸತ್ವಗುಣಪ್ರಧಾನ್ಯದಿಂದ ನೀನು ಪಾಪದೂರನೆನಿಸಿರುವೆ. ॥೬॥

ಪರಶಿವನೇ, ನೀನು ವಾಯು, ಅಗ್ನಿ, ಸೂರ್ಯ, ಭೂಮಿ, ಅಂತರಿಕ್ಷ, ಬುದ್ಧಿ ಮುಂತಾದ ಪದಾರ್ಥಗಳಿಗೆಲ್ಲಾ ಉತ್ಪತ್ತಿಸ್ಥಾನವು. ಈ ಜಗತ್ತೆಲ್ಲಾ ಆವಿರ್ಭವಿಸಿರು ವುದು ನಿನ್ನಿಂದಲೇ. ಇಂದ್ರಾದಿದೇವತೆಗಳೂ ನಿನ್ನಿಂದ ಜನಿಸಿದವರೇ. ॥೭॥

ವರ್ಷಾಸು ಮೇಘಗಣಗರ್ಜನದುರ್ದಿನೇಷು
ನೀಲಾಭ್ರಮಧ್ಯಬಹುಗರ್ಜಿತವಿದ್ಯುದುತ್ಥಃ ।
ಮಧುರ್ಝಶಗತಭಾನುಹಸ್ತಮಧ್ಯಃ
ಸುಕೃಪಾತಪರ್ಜಣವರ್ಷಕಾಲಜಾತಃ ॥೮॥

ವರ್ಷ್ಯೋಽಸಿ ಮೇಘ್ಯೋಽಸಿ ಚ ವೈದ್ಯುತೋಽಸಿ
ಅತಪ್ಯವರ್ಶ್ಯೋಽಸಿ ಮಹೇಶ್ವರಸ್ತ್ವಂ ।
ತ್ವಂ ರುದ್ರಮಂತ್ರೈಃ ಪ್ರತಿಪಾದಿತೋಽಸಿ
ದೀನಾನಿಮಾನ್ ಪಾಹಿ ಮಹೇಶ ದೃಷ್ಟ್ವಾ ॥೯॥

ತ್ವದ್ದರ್ಶನಾನ್ಮಹಾದೇವ ಪ್ರದೋಷೇ ಶೈವಪೂಜಿತಂ ।
ಲಿಂಗಂ ಮನೋಹರಂ ದೃಷ್ಟಂ ಬಿಲ್ವಪತ್ರಾದಿಪೂಜಿತಂ ॥೧೦॥

ತ್ವದ್ದರ್ಶನಾತ್ಪಾಪಯುಕ್ತೋ ಮುಕ್ತೋಽಯಂ ತ್ವತ್ಕೃಪಾಬಲಾತ್ ।
ತ್ವದ್ದರ್ಶನಮಘೌಘಾನಾಂ ನಾಶಕಂ ಶ್ರೀಮಹೇಶ್ವರ ॥೧೧॥

---

ಮೇಘಾವರಣದಿಂದ ವೃಷ್ಟಿಯನ್ನು ಸುರಿಸುವ ವರ್ಷಋತುವಿನಲ್ಲಿ, ನೀಲಾಕಾಶದ ಮಧ್ಯಭಾಗದಲ್ಲಿ ಮಿಂಚಿನರೂಪದಿಂದ ಹೊಳೆಯುವವನೂ ನೀನೇ ಅಲ್ಲವೆ? ಮೀನಮಾಸದ ವಸಂತಋತುವಿನಲ್ಲಿ ಸೂರ್ಯ ಮಧ್ಯ ಬಿಂಬದಲ್ಲಿ ವಿರಾಜಿಸುವ ಶಕ್ತಿರೂಪನೂ ನೀನೇ. ನಿನ್ನ ದಯಾದೃಷ್ಟಿಯೇ ವೃಷ್ಟಿರೂಪವಾಗಿ ಪ್ರಪಂಚವನ್ನು ತಂಪುಗೊಳಿಸುತ್ತಿರುವುದು. ॥೮॥

ಮಳೆಯ ನೀರಿನಲ್ಲಿ ಅಡಗಿರುವವನೂ, ಮೇಘಾಂತರ್ವರ್ತಿಯಾದವನೂ, ಮಿಂಚಿನ ಒಳಗೆ ನೆಲಸಿರುವವನೂ ನೀನೇ ಅಲ್ಲವೆ? ಶ್ರೀರುದ್ರಮಂತ್ರಗಳಿಂದ ಸ್ತುತನಾಗಿರುವ ಮಹಾದೇವನೇ, ನಿನ್ನ ಕರುಣಾಪಾಂಗದಿಂದ ಬಡವರಾದ ನಮ್ಮನ್ನುದ್ಧರಿಸು. ॥೯॥

ಮಹಾದೇವನೇ, ಈತನು ಪ್ರದೋಷಕಾಲದಲ್ಲಿ ಶೈವನೊಬ್ಬನಿಂದ ಬಿಲ್ವಪತ್ರಾರ್ಚಿತವಾದ ಶಿವಲಿಂಗವನ್ನು ದರ್ಶನಮಾಡಿದ್ದನು. ಅದರಿಂದ ಈಗ ಪಾಪಮುಕ್ತನಾಗಿ ನಿನ್ನ ಸನ್ನಿಧಿಗೆ ತರಲ್ಪಟ್ಟಿರುವನು. ನಿನ್ನ ದರ್ಶನವು ಸಕಲ ಪಾಪಮೋಚಕವಾದುದು ಅಲ್ಲವೇ? ॥೧೦-೧೧॥

ತ್ವನ್ನಾಮಸ್ಮೃತಿಮಾತ್ರೇಣ ದಗ್ಧಪಾತಕಪರ್ವತಾಃ ।
ಭವಿಷ್ಯಂತಿ ಮಹಾದೇವ ನಾನಾಪಾಪಯುತಾ ನರಾಃ ॥೧೨॥

ತವ ಪಾದಾಂಬುಜದ್ವಂದ್ವಧ್ಯಾನನಿರ್ಧೂತಕಲ್ಮಷಾಃ ।
ತವ ಲಿಂಗಾರ್ಚನಾತ್ಸರ್ವೇ ಪುನಂತಿ ಭುವನಂ ಜನಾಃ ॥೧೩॥

ಏತೇ ನಾರಕಿಣೋ ದೇವ ಆವಂತ್ಯೇನ ಸಮಾಗತಾನ್ ।
ಪಶ್ಯ ಪಶ್ಯಾಧುನಾ ಶಂಭೋ ಕಿಂಚಿತ್ಪುಣ್ಯಲವಾನ್ವಿತಾನ್ ॥೧೪॥

ಪ್ರಣಮ್ಯ ದೇವಮೀಶಾನಂ ಆವಂತ್ಯೇನಾಥ ನಾರಕಾಃ ।
ಪ್ರಾಹೂರಾಹುಮುಖೋನ್ಮುಕ್ತಸೂರ್ಯಾ ಇವ ವಿರಾಜಿತಾಃ ॥೧೫॥

॥ ನಾರಕಾ ಊಚುಃ ॥

ಉರುಚಿರಕೃತಪಾಪತಾಪಭಂಗಂ
ಕುರು ಶಿವಶಂಕರ ನಃ ಪ್ರಸೀದ ಶಂಭೋ ।
ಸುರವರತಟಿನೀಜಟೋಡುರಾಜ
ಸ್ಫುಟಗರಕಂಧರಪಾಹಿ ದೀನಬಂಧೋ ॥೧೬॥

---

ನಿನ್ನ ನಾಮಸ್ಮರಣೆಯಿಂದಲೇ ಅತಿಪಾಪಿಷ್ಠರಾದ ಜನರೂ ತಮ್ಮ ಪಾಪರಾಶಿಯನ್ನು ಕಳೆದುಕೊಳ್ಳುವರಲ್ಲವೆ? ನಿನ್ನ ಪಾದಕಮಲಗಳ ಧ್ಯಾನದಿಂದಲೂ, ಶಿವಲಿಂಗಾರ್ಚನೆಯಿಂದಲೂ ಜನರು ಪವಿತ್ರಾತ್ಮರೆನಿಸುವರು. ॥೧೨-೧೩॥

ಮಹೇಶ್ವರನೇ, ಇಲ್ಲಿ ಬಂದಿರುವ ಈ ಪಾಪಿಗಳು ಎಲ್ಲೋ ಅಲ್ಪಪುಣ್ಯಾರ್ಜನೆ ಮಾಡಿದ್ದರಿಂದ, ಈ ಅವಂತೀದೇಶದ ಬ್ರಾಹ್ಮಣನೊಡನೆ ಬಂದಿರುವರು. ದಯಾದೃಷ್ಟಿಯಿಂದ ನೋಡಬೇಕು" ಎಂದು ಶಿವಗಣಗಳು, ಹೇಳುತ್ತಿರಲು ಆ ನಾರಕಿಗಳೆಲ್ಲರೂ ಮಹಾದೇವನಿಗೆ ವಂದಿಸಿ, ರಾಹುವಿನಿಂದ ಬಿಡಲ್ಪಟ್ಟ ಸೂರ್ಯಬಿಂಬದಂತೆ ವಿರಾಜಿಸತೊಡಗಿದರು. ॥೧೪-೧೫॥

ಒಡನೆಯೇ ಅವರು ಹೀಗೆ ಸ್ತುತಿಸತೊಡಗಿದರು. ದೇವಗಂಗೆಯನ್ನೂ, ತಾರಾರಾಜನನ್ನೂ ಶಿರದಲ್ಲಿ ಧರಿಸಿ, ಮಹಾವಿಷವನ್ನು ಕಂಠದಲ್ಲಿ ಅಡಗಿಸಿರುವ ಮಹಾತ್ಮನೇ, ಗೌರೀರಮಣನೇ, ದೀನಬಂಧುವೇ, ಅತಿಶಯವಾದ ರೀತಿಯಲ್ಲಿ ಆಚರಿತವಾಗಿರುವ ನಮ್ಮ ಪಾಪರಾಶಿಯನ್ನೆಲ್ಲಾ ಪರಿಹರಿಸಿ ಕಾಪಾಡು. ॥೧೬॥

ತರಂಗಮೌಲಿಂ ಶಶಲಿಂಗಮೌಳಿಂ
ವಂದಾರುವೃಂದಾರ್ಚಿತಪುಷ್ಪಮೌಳಿಂ ।
ಸುಬಿಲ್ವಗಂಧೋತ್ತಮಲಿಪ್ತಮೌಳಿಂ
ಭಜಾಮು ಶಂಭುಂ ಸುರವರ್ಗಮೌಳಿಂ ॥೧೭॥

ಶಂಭೋ ಜಗತ್ಕಷ್ಟಮಿದಂ ವಿಶಿಷ್ಟಂ
ಶಿಷ್ಟಸ್ಯ ನಿಷ್ಠಸ್ಯ ತವಾಂಘ್ರಿಪದ್ಮೇ ।
ಕಷ್ಟಾನಿ ಸಂಹರ್ತುಮಹೋ ತ್ವಮೀಷ್ಟೇ
ಪ್ರಕೃಷ್ಟಲಿಂಗೇ ಪರಿಗೃಹ್ಯ ಪೂಜಾಂ ॥೧೮॥

ಕಾಲೇ ತಿಥೌ ಕಷ್ಟತರೇ ಮಹೇಶ
ಭಕ್ತ್ಯೈಃ ಕೃತಾಂ ನೀರದಲ್ಯೈಃ ಫಲ್ಯೈರ್ವಾ ।
ಪ್ರದೋಷವೇಲಾಸ್ವಥ ಪಾಪತಾಪ
ಹೀನಾಸು ಶಂಭೋ ಪ್ರಕಟಂ ಪ್ರಸೀದ ॥೧೯॥

---

ಪರಶಿವನೇ, ನಿನ್ನ ಶಿರೋಭಾಗವು ಗಂಗಾತರಂಗಗಳಿಂದಲೂ, ಚಂದ್ರಕಲೆಗಳಿಂದಲೂ, ದೇವವೃಕ್ಷದ ಪುಷ್ಪರಾಶಿಯಿಂದಲೂ, ಬಿಲ್ವಪತ್ರೆ, ಶ್ರೀಗಂಧ ಮುಂತಾದ ಪೂಜಾವಸ್ತುಗಳಿಂದಲೂ ಪ್ರಕಾಶಿಸುತ್ತಿರುವುದು. ಅಂತಹ ದೇವಪೂಜ್ಯವಾದ ನಿನ್ನ ಮೂರ್ತಿಯನ್ನು ನಾವು ಸರ್ವದಾ ಸೇವಿಸುವೆವು. ॥೧೭॥

ಶಂಭುವೇ, ಈಜಗತ್ತೆಂಬುದು ಕಷ್ಟಮಯವಾದದ್ದು. ಯಾರು ಸರ್ವದಾ ನಿನ್ನ ಪಾದಪದ್ಮಗಳಲ್ಲಿಯೇ ದೃಢಭಕ್ತಿಯನ್ನಿಡುವರೋ, ಅಂತಹವರ ಪೂಜಾದಿಗಳನ್ನು ಸ್ವೀಕರಿಸಿ, ಅವರ ದುಃಖರಾಶಿಯನ್ನೆಲ್ಲಾ ನಿರ್ಮೂಲಮಾಡುವೆ, ಎಂಬುದಾಗಿ ತಿಳಿದು ನಾವು ನಿನ್ನನ್ನು ಈಗ ಆಶ್ರಯಿಸಿರುವೆವು. ॥೧೮॥

ಮಹೇಶ್ವರನೇ, ನಿನ್ನ ಭಕ್ತರಿಗೆ ಕಷ್ಟಕರವಾದ ಕಾಲದಲ್ಲಿ, ನೀನು ಅವರು ಭಕ್ತಿಯಿಂದ ಅರ್ಪಿಸುವ ಒಂದು ಹಸಿ ನೀರನ್ನಾಗಲಿ, ಒಂದು ಫಲವನ್ನಾಗಲಿ, ಪಾಪರಹಿತವಾದ ಪ್ರದೋಷಕಾಲದಲ್ಲಿ ಸ್ವೀಕರಿಸುವವನಾಗು. ಅದರಿಂದ ಅವರ ಬಂಧನವೆಲ್ಲಾ ಬಯಲಾಗುವುದು. ಆ ಮೂಲಕ ನಿನ್ನ ಭಕ್ತರನ್ನು ಉದ್ಧರಿಸುವವನಾಗು.” ॥೧೯॥

॥ ಈಶ್ವರ ಉವಾಚ ॥

ಇತಿ ನಾರಕಿಣಾಂ ವಾಕ್ಯಾತ್ತುಷ್ಟಃ ಕಷ್ಟಹರಃ ಶಿವಃ ।
ಪ್ರಾಹ ತಾನ್ ಗಣಪಶ್ರೇಷ್ಠಾಂಸ್ತಾಂಶ್ಚ ನಾರಕಿಣಸ್ತದಾ ॥೨೦॥

ಮಲ್ಲಿಂಗಾರ್ಚನಸಕ್ತಾನಾಂ ಪ್ರದೋಷಾರ್ಚನಕಾರಿಣಾಂ ।
ಶಿವರಾತ್ರಿಪರಾಣಾಂ ಚ ಸೋಮವಾರವ್ರತಾತ್ಮನಾಂ ॥೨೧॥

ಮನ್ನಾಮಜಪಸಕ್ತಾನಾಂ ಭಸ್ಮರುದ್ರಾಕ್ಷಧಾರಿಣಾಂ ।
ಶ್ರೀರುದ್ರಜಪಸಕ್ತಾನಾಂ ಶ್ರೀಪಂಚಾಕ್ಷರಜಾಪಿನಾಂ ॥೨೨॥

ಕಾಲಾಷ್ಟಮೀಚತುರ್ದಶ್ಯೋರ್ನಿಶಿ ಶಂಕರಪೂಜನಾತ್ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೨೩॥

ನ ಪಾಪಭಯಲೇಶೋ ಹಿ ತೇಷು ನಾಸ್ತಿ ಗಣೋತ್ತಮಾಃ
ಬಾಣಲಿಂಗಂ ಯಸ್ಯ ಗೇಹೇ ಸದಾ ಬಿಲ್ವದಳಾರ್ಚಿತಂ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್॥೨೪॥

---

ಎಂದು ವಿಧವಿಧವಾಗಿ ಪ್ರಾರ್ಥಿಸಿದ ಆ ಪಾಪಿಗಳ ಮಾತನ್ನು ಕೇಳಿ ಶಂಕರನು, ತನ್ನ ಗಣಗಳಿಗೂ, ಆ ಪಾಪಿಗಳಿಗೂ ಹೀಗೆ ಉಪದೇಶಿಸಿದನು. "ಯಾರು ಸರ್ವದಾ ಶಿವಲಿಂಗಾರ್ಚನೆಯಲ್ಲಿ ಮನಸ್ಸಿಡುವರೋ, ಪ್ರದೋಷಾರ್ಚನೆ, ಶಿವರಾತ್ರೀ ಮತ್ತು ಸೋಮವಾರವ್ರತ ಇವುಗಳನ್ನು ಭಕ್ತಿಯಿಂದ ಯಾರು ನಡೆಸುವರೋ ಅವರಿಗೆ ಯಮಭಯವಿರುವುದಿಲ್ಲ. ॥೨೦-೨೧॥

ಸದಾ ನನ್ನ ನಾಮಸ್ಮರಣೆಯಿಂದಲೂ, ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಪವಿತ್ರವಾದ ಶಿವಪಂಚಾಕ್ಷರೀ, ಶ್ರೀರುದ್ರಮಂತ್ರ ಮುಂತಾದ ಶಿವಮಂತ್ರಪಠನೆಯಿಂದಲೂ, ಕೃಷ್ಣಾಷ್ಟಮೀ ಕೃಷ್ಣಚತುರ್ದಶೀ ತಿಥಿಗಳ ಅರ್ಧರಾತ್ರಿಯ ಪೂಜೆಯಿಂದಲೂ, ನನ್ನನ್ನು ತೃಪ್ತಿಪಡಿಸಿದವರಿಗೆ ಯಮನಿಂದಾಗಲಿ, ಯಮಲೋಕದಿಂದಾಗಲಿ ಭಯವಿರುವುದಿಲ್ಲ. ಅವರು ಎಂದಿಗೂ ಅಲ್ಲಿಗೆ ಹೋಗುವುದೂ ಇಲ್ಲ. ॥೨೨-೨೩॥

ಅವರಿಗೆ ಪಾಪಭಯವಂತೂ ಇರುವುದೇ ಇಲ್ಲ. ಯಾರು ಮನೆಯಲ್ಲಿ ಬಾಣಲಿಂಗವನ್ನಿಟ್ಟುಕೊಂಡು, ಅದನ್ನು ಬಿಲ್ವಪತ್ರೆಯಿಂದ ಪೂಜಿಸುವರೋ, ಯಾರು

ಯೋ ಭಸ್ಮೋದ್ಧೂಲಿತತನುಸ್ತ್ರಿಪುಂಡ್ರಾವಳಿಭಾಸುರಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೨೫॥

ಪಂಚಾಕ್ಷರಪರೋ ಯಸ್ತು ಶ್ರೀರುದ್ರಜಪತತ್ಪರಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೨೬॥

ಪ್ರತಿಸಸ್ತೋಮವಾರೇಷು ಪ್ರದೋಷೇಷು ಮಹೇಶ್ವರಂ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೨೭॥

ಸಮಭ್ಯರ್ಚ್ಯ ಬಿಲ್ವದಳೈರ್ಯೇ ಪಶ್ಯಂತಿ ಚ ಪೂಜನಂ ।
ಶಿವಲಿಂಗಂ ಗೃಹೇ ವಾಪಿ ಯೇ ವೈ ದೇವಾಲಯೇಽಪಿ ವಾ ॥೨೮॥

ಬಿಲ್ವಪತ್ರಾರ್ಚನಪರಾಃ ಬಿಲ್ವಾರ್ಚನರತಾ ನರಾಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೨೯॥

ಶಿವಾರಾಮಕರಾ ಯೇ ವೈ ತಟಾಕಂ ಕೂಪಮೇವ ಚ ।
ಯೇ ಕುರ್ವಂತಿ ನರಾ ಭಕ್ತ್ಯಾ ಧೂಪದೀಪಪ್ರದಾ ನರಾಃ ॥೩೦॥

ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ।
ಶಿವಗೋಪುರನಿರ್ಮಾಣಂ ಪ್ರಾಕಾರಂ ಮಂಟಪಂ ತಥಾ ॥೩೧॥

---

ಭಸ್ಮೋದ್ಧೂಲಿತಗಾತ್ರರಾಗಿ, ಭಸ್ಮತ್ರಿಪುಂಡ್ರದಿಂದ ಶೋಭಿತರಾಗುವರೋ, ಅಂತಹವರು ಎಂದಿಗೂ ಯಮನಿಗಾಗಲಿ, ಯಮಲೋಕಕ್ಕಾಗಲಿ ಹೆದರುವುದಿಲ್ಲ. ॥೨೪-೨೫॥

ಹಾಗೆಯೇ ಶಿವಪಂಚಾಕ್ಷರೀ, ಶ್ರೀರುದ್ರ ಮುಂತಾದ ಶೈವಮಂತ್ರ ಪಾಠಕರೂ ಸೋಮಪ್ರದೋಷಕಾಲದಲ್ಲಿ ಶಿವವ್ರತಮಾಡಿದವರೂ, ಬಿಲ್ವದಳಗಳಿಂದ ಶಿವಲಿಂಗಾರ್ಚನೆಮಾಡಿದವರೂ, ತಮ್ಮ ಮನೆಗಳಲ್ಲಾಗಲಿ, ದೇವಾಲಯಗಳಲ್ಲಾಗಲಿ ಶಿವಲಿಂಗವನ್ನು ಬಿಲ್ವಪತ್ರಾದಿಗಳಿಂದ ಪೂಜಿಸಿದವರೂ ಯಮನ ಆಕಾರಕ್ಕಾಗಲಿ, ಲೋಕಕ್ಕಾಗಲಿ ಹೆದರಬೇಕಾಗಿಲ್ಲ. ॥೨೬-೨೭-೨೮-೨೯॥

ಈಶ್ವರಪೂಜೆಗಾಗಿ ಪುಷ್ಪೋದ್ಯಾನ, ಶಿವಾಭಿಷೇಕಾರ್ಥವಾಗಿ ಕೆರೆ, ಬಾವಿ ಮುಂತಾದುವುಗಳು, ಧೂಪದೀಪಾದಿ ಪೂಜಾಸಾಮಗ್ರಿಗಳು ಇವುಗಳನ್ನು ಯಾರು ಒದಗಿಸುವರೋ, ಮತ್ತು ಶಿವಾಲಯದ ಗೋಪುರ, ಮಂಟಪ, ಪ್ರಾಕಾರ ಇವುಗಳನ್ನು

ಯೇ ಕುರ್ಯುರಿಷ್ಟಕಾಸಂಘೈಃ ಪಾಷಾಣೈಸ್ಸುಧಯಾಪಿ ಚ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್॥೩೨॥

ಶಿವಲಿಂಗಾರ್ಚನಪರಾಶ್ಶಿವನಾಮಪರಾಸ್ತಥಾ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್॥೩೩॥

ಶಿವತೀರ್ಥಕೃತಸ್ನಾನಾಃ ಶಿವಕ್ಷೇತ್ರನಿವಾಸಿನಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್॥೩೪॥

ಶಿವಭಕ್ತಾರ್ಚನಪರಾಃ ಭೋಜನಾಚ್ಛಾದನಾಭಿಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್॥೩೫॥

ಕಾಲಾಷ್ಟಮೀಚತುರ್ದಶ್ಯಾಮುಪೋಷಣಶಿವಾರ್ಚಕಾಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್॥೩೬॥

ಧೂಪದಾಯೇ ಸದಾ ಗೌರಿ ಮಲ್ಲಿಂಗಪುರತೋ ನರಾಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್॥೩೭॥

ದೀಪಮಾಲಾದಿಕರ್ತಾರಃ ಪುಣ್ಯೇ ಸಾಯಂ ವಿಶೇಷತಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್॥೩೮॥

---

ಇಟ್ಟಿಗೆ, ಕಲ್ಲು, ಸುಣ್ಣ ಮುಂತಾದುವುಗಳಿಂದ ನಿರ್ಮಾಣಮಾಡಿಸುವರೋ, ಅಂತಹವರು ಯಮನಿಂದ ಯಾವ ತೊಂದರೆಯನ್ನೂ ಅನುಭವಿಸಲಾರರು. ||೩೦-೩೧||

ಶಿವಲಿಂಗಾರ್ಚನೆ ಮಾಡುತ್ತಾ ಶಿವನಾಮವನ್ನು ಜಪಿಸುತ್ತಾ, ಶಿವತೀರ್ಥದಲ್ಲಿ ಮುಳುಗುತ್ತಾ, ಶಿವಕ್ಷೇತ್ರವಾಸಿಗಳಾದವರಿಗೂ, ಶಿವಪೂಜಕರನ್ನು ವಸ್ತ್ರಭೋಜನಾದಿಗಳಿಂದ ತೃಪ್ತಿಪಡಿಸಿದವರಿಗೂ, ಯಮ ಮತ್ತು ನರಕಗಳ ಭಯವಿರುವುದಿಲ್ಲ. ||೩೨-೩೩-೩೪-೩೫||

ಕೃಷ್ಣಾಷ್ಟಮೀ, ಕೃಷ್ಣಚತುರ್ದಶೀ ತಿಥಿಗಳಲ್ಲಿ ಉಪವಾಸಮಾಡಿ ಶಿವಾರ್ಚನೆ ಮಾಡಿದವರಿಗೂ, ಶಿವಲಿಂಗದ ಎದುರಿನಲ್ಲಿ ನಿಂತು ಧೂಪ, ದೀಪಮಾಲಾ, ತುಪ್ಪ ಅಥವಾ ಎಣ್ಣೆಯಿಂದ ಹೊತ್ತಿಸಿದ ದೀಪಸಾಲುಗಳ ಸೇವೆ, ಮುಂತಾದುವುಗಳಿಂದ

ಘೃತೈಸ್ತೈಲೈಸ್ಸದಾ ಭಕ್ತ್ಯಾ ಶಿವದೀಪಪ್ರದಾ ನರಾಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೩೯॥

ಶಿವಾಭಿಷೇಕಪಾನೀಯಂ ಯೇ ಪಿಬಂತಿ ಮುದಾ ನರಾಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೪೦॥

ಯೇ ಬಿಲ್ವವನಕರ್ತಾರಸ್ತತ್ಪತ್ರೈಃ ಪೂಜಯಂತಿ ಮಾಂ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೪೧॥

ಬಿಲ್ವಮೂಲೇಷು ಲಿಂಗಾರ್ಚಾಂ ಯೇ ಕುರ್ವಂತಿ ಸದಾ ಮುದಾ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೪೨॥

ಶಿವೋತ್ಸವಪರಾ ಯೇ ಚ ಯೇ ಚ ತಸ್ಯೋಪಕಾರಕಾಃ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೪೩॥

ಗೋಘಟಾದಿಪ್ರದಾತಾರಃ ಅಭಿಷೇಚನಿಕಾನ್ಯಪಿ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೪೪॥

ಶಿವನೈವೇದ್ಯಪುಷ್ಟಾಂಗಾಃ ಯೇ ರುದ್ರಾಕ್ಷಧರಾಸ್ಸದಾ ।
ನ ಯಮಂ ಯಮಲೋಕಂ ವಾ ತೇ ಪಶ್ಯಂತಿ ಗಣಾಃ ಕ್ವಚಿತ್ ॥೪೫॥

---

ಪರಶಿವನನ್ನು ತೃಪ್ತಿಪಡಿಸಿದವರಿಗೂ, ಶಿವಾಭಿಷಿಕ್ತವಾದ ತೀರ್ಥವನ್ನು ಪಾನಮಾಡಿದವರಿಗೂ ಯಮ ಮತ್ತು ಯಮಲೋಕಗಳ ಭಯವಿರುವುದಿಲ್ಲ. ॥೩೬-೩೭-೩೮-೩೯-೪೦॥

ಬಿಲ್ವವನವನ್ನು ನಿರ್ಮಿಸಿ ಅದರ ಪತ್ರೆಗಳಿಂದ ನನ್ನನ್ನು ಪೂಜಿಸಿದವರೂ, ಬಿಲ್ವಮೂಲದಲ್ಲಿ ಶಿವಲಿಂಗಾರ್ಚನೆಮಾಡುವವರೂ, ಶಿವೋತ್ಸವದಲ್ಲಿ, ಶಿವೋಪಚಾರದಲ್ಲಿ ನಿರತರಾದವರೂ, ಗೋದಾನ, ಉದಕುಂಭದಾನ ಮೊದಲಾದುವುಗಳನ್ನು ಮಾಡಿ, ಅದರಿಂದ ಈಶ್ವರನಿಗೆ ಅಭಿಷೇಕಮಾಡಿಸಿದವರೂ ಶಿವನೈವೇದ್ಯದಿಂದ ದೇಹವನ್ನು ಪೋಷಿಸಿಕೊಂಡು, ರುದ್ರಾಕ್ಷಧಾರಿಗಳಾದವರೂ ಯಮ ಮತ್ತು ಯಮಲೋಕ ಇವುಗಳಿಂದ ಹೆದರಬೇಕಾಗಿಲ್ಲ. ॥೪೧-೪೨-೪೩-೪೪-೪೫॥

ಕಿಮುದ್ಯ ಬಹುನೋಕ್ತೇನ ಭಕ್ತಿರ್ಮಮ ಗರೀಯಸೀ ।
ಭಾವಗ್ರಾಹ್ಯೋಽಯಮೀಶಾನೋ ಭಕ್ತಿರ್ಭವತಿ ಭಾಗ್ಯತಃ ॥೪೬॥

ಭಕ್ತಸ್ಯ ಸರ್ವಪಾಪಾನಿ ನಾಶಯಾಮಿ ಗಣೇಶ್ವರಾಃ ।
ಏತತ್ತುಷ್ಟಿಕರಂ ಪುಣ್ಯಂ ಗಣಾ ಮಮ ನ ಸಂಶಯಃ ॥೪೭॥

ಮಮ ಪ್ರೀತಿಕರಂ ಚಾಪಿ ವಕ್ಷ್ಯಾಮಿ ಭವತಾಂ ಗಣಾಃ
ಉಕ್ತಾನಾಂ ಚ ನಿರಾಸೇನ ಅನುಕ್ತಾನಾಂ ಚ ವಿಸ್ತರಾತ್ ।
ಊರ್ಧ್ವಪುಂಡ್ರಾಂಕನಂ ಚೈವ ಮೃದಾ ಫಾಲಗಲಾದಿಷು
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೪೮॥

ತ್ರಿಶೂಲವಜ್ರಚಕ್ರಾದಿಧಾರಣಂ ಸ್ವಕಲೇವರೇ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೪೯॥

ಲಿಂಗಾರ್ಚನಂ ಬಿಲ್ವಪತ್ರೈರ್ಯೇ ನ ಕುರ್ವಂತಿ ಮೋಹಿತಾಃ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೦॥

---

ಎಲೈ ಗಣಶ್ರೇಷ್ಠರೇ, ಹೆಚ್ಚು ಹೇಳುವುದೇನು? ನಾನು ಎಲ್ಲಕ್ಕಿಂತಲೂ ಹೆಚ್ಚಾಗಿ ಭಕ್ತಿಗೆ ಮೆಚ್ಚತಕ್ಕವನು. ಯಾರು ಶುದ್ಧ ಜ್ಞಾನದಿಂದ ನನ್ನನ್ನು ಧ್ಯಾನಿಸುವರೋ, ಅವರಿಗೆ ನಾನು ಒಲಿಯುವೆನು. ಅಂದರೆ ಅಂತಹ ಭಕ್ತಿಯು ಅವರಿಗೆ ಲಭಿಸಲು ಅಪಾರವಾದ ಸುಕೃತವಿರಬೇಕು. ಭಕ್ತಿಗೆ ಮೆಚ್ಚಿದ ನಾನು ಭಕ್ತರ ಪಾಪವನ್ನೆಲ್ಲಾ ಕಳೆಯುವೆನು. ನಾನೂ ಅದರಿಂದ ತೃಪ್ತಿಪಡುವೆನು. ॥೪೬-೪೭॥

ಈಗ ನನಗೆ ಪ್ರೀತಿಕರವಾದ ಕರ್ಮಗಳನ್ನು ಹೇಳಿದೆನು. ಕೇಳಿರಿ. ಹಾಗೆಯೇ ಇಲ್ಲಿನವರೆಗೆ ಹೇಳಿರುವುದನ್ನು ಬಿಟ್ಟು ಹೇಳದಿರುವ ನನಗೆ ಅನಿಷ್ಟಕರಗಳಾದ ಕ್ರಮಗಳನ್ನೂ ಈಗ ವಿವರಿಸಿ ಹೇಳುವೆನು. ಮಣ್ಣಿನಿಂದ (ಮೃತ್ತಿಕೆಯಿಂದ) ಹಣೆ, ಕತ್ತು ಮುಂತಾದ ಸ್ಥಳಗಳಲ್ಲಿ ಊರ್ಧ್ವಪುಂಡ್ರವನ್ನಿಡುವುದು ನನಗೆ ಇಷ್ಟವಾದುದಲ್ಲ. ॥೪೮॥

ತಮ್ಮ ದೇಹದಲ್ಲಿ ತ್ರಿಶೂಲ, ವಜ್ರಾಯುಧ, ಚಕ್ರ ಮುಂತಾದ ಚಿಹ್ನೆಗಳನ್ನು ಧರಿಸುವುದೂ, ಬಿಲ್ವಪತ್ರಾದಿಗಳಿಂದ ಶಂಕರನನ್ನು ಪೂಜಿಸದಿರುವುದೂ, ಶ್ರುತಿ

ಸರ್ವಶ್ರುತಿಶ್ರುತಂ ಪುಣ್ಯಂ ಭಸ್ಮನೋ ವರ್ಜನಂ ಮುದಾ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೦॥

ತ್ರಿಪುಂಡ್ರವರ್ಜನಂ ನಿತ್ಯಂ ತಥಾ ಭಸ್ಮಾವಗುಂಠನಂ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೧॥

ಲಿಂಗಾರ್ಚನಂ ಬಿಲ್ವಪತ್ರೈರ್ಯೇ ನ ಕುರ್ವಂತಿ ಮೋಹಿತಾಃ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೨॥

ರುದ್ರಾಧ್ಯಾಯಾದಿರಹಿತಾಃ ಯೇ ಸದಾ ತೇ ನ ಮೇ ಪ್ರಿಯಾಃ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೪॥

ಪಂಚಾಕ್ಷರವಿಹೀನಾ ಯೇ ಅನ್ಯಮಂತ್ರಜಪಾದರಾಃ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೫॥

ಸಾಲಿಗ್ರಾಮಾದಿಸಾಮ್ಯೇನ ಶಿವಲಿಂಗಾರ್ಚಕಾ ನರಾಃ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೬॥

ಅನ್ಯಪುಂಡ್ರಾಣಿ ಧೃತ್ವೈವ ರುದ್ರಪಂಚಾಕ್ಷರಾದರಾಃ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೭॥

---

ಪ್ರಸಿದ್ಧವೂ, ಪುಣ್ಯಪ್ರದವೂ ಆದ ಭಸ್ಮವನ್ನು ದೂರಮಾಡುವುದೂ, ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣೆ ಇವುಗಳನ್ನು ಅಲಕ್ಷಿಸುವುದೂ ಪಾಪಕರ್ಮಗಳೆನಿಸುವುವು. ಅವುಗಳಿಂದ ನಾನು ತೃಪ್ತಿಪಡುವುದಿಲ್ಲ. ॥೪೯-೫೦-೫೧-೫೨॥

ಅಜ್ಞಾನದಿಂದ ಯಾರು ಬಿಲ್ವಪತ್ರಾರ್ಚನಪುರಸ್ಸರವಾಗಿ ಶಿವಲಿಂಗವನ್ನು ಪೂಜಿಸುವುದಿಲ್ಲವೋ, ರುದ್ರಾಧ್ಯಾಯಜಪ, ಪಂಚಾಕ್ಷರಜಪ ಇವುಗಳನ್ನು ಬಿಟ್ಟು ಬೇರೆ ಮಂತ್ರಪುರಶ್ಚರಣೆಯಲ್ಲಿ ಸರ್ವದಾ ಮನಸ್ಸಿಡುವರೋ, ಮತ್ತು ಶಿವಲಿಂಗದ ಸಾಮ್ಯವನ್ನೇ ಯಾರು ಸಾಲಿಗ್ರಾಮಗಳಿಗಿಡುವರೋ ಅಂತಹವರು ಪಾಪಿಷ್ಠರು. ಅವರ ಕರ್ಮಗಳಿಂದ ನಾನು ಎಂದೂ ತೃಪ್ತಿಪಡಲಾರೆನು. ॥೫೩-೫೪-೫೫-೫೬॥

ಭಸ್ಮತ್ರಿಪುಂಡ್ರತ್ಯಾಗಮಾಡಿ ಅನ್ಯಪುಂಡ್ರವನ್ನು ಧರಿಸಿ ರುದ್ರಾಧ್ಯಾಯವನ್ನು ಪಠಿಸುವುದೂ, ಈಶ್ವರನೈವೇದ್ಯಶೇಷವನ್ನು ಭುಂಜಿಸದಿರುವುದೂ, ನನ್ನನ್ನು ಸ್ಮರಿಸದೆ

ಮಹೇಶಭಕ್ತಶೇಷಂ ಯೇ ನ ಭುಂಜಂತಿ ನರಾಧಮಾಃ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೮॥

ಮನ್ನಿಂದಾನಿರತಾ ಯೇ ವೈ ಮನ್ನಾಮಸ್ಮರಣೋಜ್ಝಿತಾಃ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೫೯॥

ಬ್ರಹ್ಮವಿಷ್ಣುಸುರಾಣಾಂ ಚ ಸಮಂ ಮದ್ದರ್ಶನಂ ತಥಾ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೬೦॥

ಮನ್ನಾಮಾನ್ಯನ್ಯನಾಮ್ನೈವ ಸಮಂ ಪಶ್ಯಂತಿ ಯೇ ನರಾಃ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೬೧॥

ಏಕಪೀಠೇ ಚ ಮಲ್ಲಿಂಗಮನ್ಯದೇವಾದಿಪೂಜನಂ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೬೨॥

ಮಮ ಭಕ್ತೇಷು ವಿದ್ವೇಷಂ ಅನ್ಯಭಕ್ತಾರ್ಚನಂ ಮುದಾ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೬೩॥

ರುದ್ರಾಕ್ಷಧಾರಣಂ ಹಿತ್ವಾ ಕಾಷ್ಠಪಾಷಾಣಧಾರಣಂ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೬೪॥

ಮತ್ಕ್ಷೇತ್ರವಿಮುಖಾ ಯೇ ವೈ ಅನ್ಯಕ್ಷೇತ್ರರತಾಸ್ಸದಾ ।
ಮಮಾಪ್ರೀತಿಕರಂ ಪಾಪಕಾರಣಂ ತದ್ಗಣೋತ್ತಮಾಃ ॥೬೫॥

---

ಯಾವಾಗಲೂ ನಿಂದಿಸುತ್ತಿರುವುದೂ, ನನ್ನ ದರ್ಶನವನ್ನು ಬ್ರಹ್ಮಾದಿಸಾಮಾನ್ಯ ದೇವತೆಗಳ ದರ್ಶನಕ್ಕೆ ಸಮವಾಗಿ ತಿಳಿಯುವುದೂ ನನಗೆ ಪ್ರೀತಿಕರಗಳೆನಿಸುವುದಿಲ್ಲ. ॥೫೭-೫೮-೫೯-೬೦॥

ಯಾರು ನನ್ನ ನಾಮಗಳ ಮಹಿಮೆಯು ಇತರ ದೇವತಾನಾಮಗಳ ಮಹಿಮೆಗೆ ಸಮನೆಂದು ಭಾವಿಸುವರೋ, ಒಂದೇ ನನ್ನ ಪೀಠದಮೇಲೆ ದೇವತಾಂತರಗಳನ್ನಿಟ್ಟು ಪೂಜಿಸುವರೋ, ಹಾಗೆಯೇ ನನ್ನ ಭಕ್ತರನ್ನು ದೂರೀಕರಿಸಿ ಇತರ ದೇವತಾಭಕ್ತರನ್ನು ಅರ್ಚಿಸುವರೋ, ಅದೂ ಅಲ್ಲದೆ ರುದ್ರಾಕ್ಷಿಯನ್ನು ಧರಿಸಿಕೊಳ್ಳದೆ ಕಲ್ಲು, ಕಡ್ಡಿ ಮುಂತಾದುವುಗಳನ್ನು ಕಂಠದಲ್ಲಿ ಕಟ್ಟಿಕೊಳ್ಳುವರೋ

ಕಾಲಾಷ್ಟಮೀ ಚತುರ್ದಶ್ಯಾಂ ಪ್ರದೋಷೇ ಸೋಮವಾರಕೇ ।
ಮುದಾ ದಿವಾಭೋಜನಾ ಯೇ ಮಮಲಿಂಗಾರ್ಚನೋಜ್ಝಿತಾಃ॥೬೬॥

ತೇಷಾಂ ಹಿ ನರಕಾವಾಸೋ ಗಣಾಃ ಪ್ರಿಯತರೋ ಮಮ ।
ಕಿಂ ಚ ಮತ್ಪುಣ್ಯಲೇಶೇನ ತರಂತಿ ಚ ಸದಾ ನರಾಃ ॥೬೭॥

ನರಕಾರ್ಣವತೀರ್ಣಾಸ್ತೇ ಭವಿಷ್ಯಂತಿ ಗಣೋತ್ತಮಾಃ
ಇತ್ಥಂ ಶಂಭೋರ್ವಚಶ್ಶ್ರುತ್ವಾ ಗಣಾಸ್ತೇ ಚೈವ ನಾರಕಾಃ ।
ಪ್ರಣಮ್ಯ ದದೃಶುರ್ದೇವಂ ಕೈಲಾಸಂ ಶಂಕರಾಲಯಂ ॥೬೮॥

ತತ್ರ ತೇ ಗಣಪಾ ಜಾತಾ ಮಹೇಶಾರ್ಚನತತ್ಪರಾಃ ।
ತತ್ರ ಲಿಂಗಾನಿ ಪುಣ್ಯಾನಿ ಬಿಲ್ವಮೂಲಸ್ಥಿತಾನಿ ಹಿ ॥೬೯॥

ತತ್ರ ಸ್ನಾತ್ವಾ ತ್ರಿಪುಂಡ್ರಾಂಕಾಃ ರುದ್ರಾಕ್ಷಕೃತಭೂಷಣಾಃ ।
ತತ್ಪತ್ರೈಃ ಪೂಜಯಾಮಾಸುರೀಶಾನಂ ದೇವನಾಯಕಂ ॥೭೦॥

---

ನನ್ನ ಕ್ಷೇತ್ರವಾಸವನ್ನು ಅಲಕ್ಷಿಸಿ ಕ್ಷೇತ್ರಾಂತರವಾಸದಲ್ಲಿ ಆಸಕ್ತರಾಗುವರೋ, ಅಂತಹವರೆಲ್ಲರೂ ಪರಮ ಪಾಪಿಗಳು. ಅವರ ನಡತೆಯಿಂದ ನಾನು ಎಂದಿಗೂ ತೃಪ್ತನಾಗುವುದಿಲ್ಲ. ॥೬೧-೬೨-೬೩-೬೪-೬೫॥

ಗಣವರ್ಯರೇ, ಯಾರು ಕೃಷ್ಣಾಷ್ಟಮೀ, ಕೃಷ್ಣಚತುರ್ದಶೀ, ಸೋಮಪ್ರದೋಷ ಈ ದಿನಗಳಲ್ಲಿ ರಾತ್ರಿ ಶಿವಲಿಂಗಾರ್ಚನೆ ಮಾಡದೆ, ಹಗಲು ಭೋಜನ ಮಾಡುವರೋ, ಅಂತಹವರಿಗೆ ನರಕವು ತಪ್ಪುವುದಿಲ್ಲ. ಹಾಗಲ್ಲದೆ ಯಾರು ನನ್ನನ್ನು ತೃಪ್ತಿಗೊಳಿಸಿ ಅಲ್ಪಪುಣ್ಯವನ್ನಾದರೂ ಸಂಪಾದಿಸುವರೋ, ಅಂತಹವರು ನರಕಯಾತನೆಯನ್ನು ತಪ್ಪಿಸಿಕೊಳ್ಳುವರಲ್ಲದೆ, ನನ್ನ ಲೋಕವನ್ನೂ ಸೇರುವರು. ಇದರಲ್ಲಿ ಸಂಶಯವಿಲ್ಲ.'' ॥೬೬-೬೭॥

ಎಂದು ಶಂಕರನು ನರಕದಿಂದ ಬಂದಿದ್ದ ಪಾಪಿಗಳಿಗೆಲ್ಲಾ ಹೇಳಲು ಅದನ್ನು ಕೇಳಿ ಅವರೆಲ್ಲರೂ ಧನ್ಯರಾದರು. ಮತ್ತು ಈಶ್ವರ ದರ್ಶನದಿಂದ ಪಾಪಮುಕ್ತರೆನಿಸಿ ಕೈಲಾಸದಲ್ಲಿಯೇ ಶಿವಗಣಗಳಲ್ಲಿ ಐಕ್ಯರಾದರು. ಒಡನೆಯೇ ಅವರೆಲ್ಲರೂ ಅಲ್ಲಿದ್ದ ಶಿವತೀರ್ಥಗಳಲ್ಲಿ ಸ್ನಾನಮಾಡಿ, ಅಲ್ಲಿಯೇ ಇದ್ದ ಬಿಲ್ವಮೂಲಸ್ಥಾನಗಳಾದ ಶಿವಲಿಂಗಗಳನ್ನು ಬಿಲ್ವಪತ್ರಾದಿಗಳಿಂದ ಪೂಜಿಸಿ, ಸದಾ ಭಸ್ಮರುದ್ರಾಕ್ಷಿಗಳಿಂದ ಶೋಭಿಸುತ್ತಾ ಅಲ್ಲಿಯೇ ಸುಖವಾಗಿ ನೆಲಸಿದರು. ॥೬೮-೬೯-೭೦॥

ತತ್ರ ತೇ ಗಣಪಾ ಜಾತಾ ಮಹೇಶಾನುಚರಾಸ್ತದಾ ।
ಕಪರ್ದಭಾರವಿಲಸಚ್ಚಂದ್ರರೇಖಾವಿರಾಜಿತಾಃ ॥೨೧॥

ತ್ರಿಪುಂಡ್ರನಿಟಿಲಾಸ್ಸರ್ವೇ ಸ್ವರ್ಣವೇತ್ರಲಸತ್ಕರಾಃ ।
ದೃಷ್ಟ್ವಾ ಕೈಲಾಸರಚನಾಂ ವಿಸ್ಮಿತಾಸ್ತೇ ಭವಂಸ್ತದಾ ॥೨೨॥

ನಾನಾಮುನಿಶತೋಪೇತಂ ನಾನಾಗಂಧರ್ವಶೋಭಿತಂ ।
ಯಕ್ಷಕಿಂಪುರುಷಾದ್ಯೈಶ್ಚ ಅಪ್ಸರೋಭಿಶ್ಚ ಸೇವಿತಂ ॥೨೩॥

ಬ್ರಹ್ಮವಿಷ್ಣ್ವಾದಿಭಿರ್ದೇವೈರ್ದಿಕ್ಪಾಲೈಶ್ಚ ಸಮಾವೃತಂ ।
ಸನಂದನಾದ್ಯೈರ್ಮುನಿಭಿರ್ನಂದಿಭೃಂಗಿಗಣೇಶ್ವರೈಃ ॥೨೪॥

ಕುಮಾರಗಣಪಾದ್ಯೈಶ್ಚ ಶಾಂಭವೈರುಪಶೋಭಿತಂ ।
ತತ್ರ ವೈಖಾನಸಾಃ ಸಿದ್ಧಾ ವಾಲಖಿಲ್ಯಾ ಮರೀಚಿಪಾಃ ॥೨೫॥

ತಪಸಾ ದೇವಮೀಶಾನಂ ಯೇ ಪ್ರಾಪ್ತಾ ಮುನಯಸ್ಸದಾ ।
ಸಮಾಧಿಯಮದಾನಾದ್ಯೈಃ ಪೂಜಯಾ ಪರಮೇಶ್ವರಂ ॥೨೬॥

---

ಶಿವಾನುಗ್ರಹದಿಂದ ಅವರು ಗಣಾಧೀಶರಾಗಿ ಮಹೇಶ್ವರ ಸಾಮ್ಯವನ್ನೇ ಪಡೆದರು. ಜಟಾಕಲಾಪ, ಚಂದ್ರರೇಖೆ, ತ್ರಿಪುಂಡ್ರಗಳು, ಸುವರ್ಣದಂಡ ಇವೆಲ್ಲವನ್ನೂ ಪಡೆದವರಾಗಿ ಆ ನಾರಕಿಗಳು ಕೈಲಾಸ ಗಿರಿಯಸೊಬಗನ್ನೇ ನೋಡುತ್ತಾ ಆಶ್ಚರ್ಯಪಡುತ್ತಿದ್ದರು. ॥೨೧-೨೨॥

ಆ ಕೈಲಾಸಪರ್ವತದಲ್ಲಿ ಅನೇಕ ಋಷಿವರ್ಗವೂ, ಗಂಧರ್ವ, ಯಕ್ಷ, ಕಿಂಪುರುಷಾದಿಗಳು, ಅಪ್ಸರೋಗಣಗಳೂ, ಬ್ರಹ್ಮ, ವಿಷ್ಣು, ದಿಕ್ಪಾಲಕರು, ಸನಕಸನಂದನಾದಿ ಮಹರ್ಷಿಗಳೂ, ನಂದಿ ಭೃಂಗಿಯೇ ಮೊದಲಾದ ಪ್ರಮಥಗಣಗಳೂ ಅಲ್ಲಲ್ಲಿ ವಿಹರಿಸುತ್ತಾ ಆನಂದಿಸುತ್ತಿದ್ದರು. ॥೨೩-೨೪॥

ಸ್ಕಂದ ಗಣಪತಿಯರು ಶಂಕರ ಕಿಂಕರರೊಡನೆ ವಿರಾಜಿಸುತ್ತಿದ್ದರು. ಮಹರ್ಷಿಗಳೂ, ಸಿದ್ಧರೂ, ವಾಲಖಿಲ್ಯರೂ, ಮರೀಚಿಪುತ್ರರೂ ಅಲ್ಲಲ್ಲಿ ಕುಳಿತು, ಚಿತ್ತನಿರೋಧ ಮಾಡಿ ಮಹಾದೇವನನ್ನು ನಾನಾ ವಿಧವಾದ ದಾನಾರ್ಚನಾದಿಗಳಿಂದ ತೃಪ್ತಿಪಡಿಸುತ್ತಿದ್ದರು. ॥೨೫-೨೬॥

ಯೇ ತೋಷಯಂತಿ ನಿಯತಾಃ ನಾನಾಭಕ್ತಿಸಮನ್ವಿತಾಃ।
ಸರ್ವಥಾ ಶರಣಂ ಯಾತಾಃ ಮನೋವಾಕ್ಕಾಯಕರ್ಮಭಿಃ ॥೭೭॥

ತೇಷಾಂ ತತ್ಪರಮಂ ಸ್ಥಾನಂ ಯದ್ದೇವೈರಪಿ ದುರ್ಲಭಂ।
ಯತ್ರ ಗತ್ವಾ ನ ಶೋಚಂತಿ ಯತ್ರ ಪಾತಭಯಂ ನ ಹಿ ॥೭೮॥

ನೀಲಕಂಠಂ ವಿರೂಪಾಕ್ಷಂ ಗಂಗಾಧರಮುಮಾಸಖಂ।
ರಾಜಚ್ಚಂದ್ರಕಲಾಮೌಳಿಂ ವೇದವೇದಾಂತಸಂಸ್ತುತಂ ॥೭೯॥

ಕರ್ಪೂರಧವಳಂ ದೇವಂ ವರದಾಭಯಶೋಭಿತಂ।
ಕಾಕೋದರಮಹಾಹಾರಂ ತ್ರಿಪುಂಡ್ರವಿಲಸನ್ಮುಖಂ ॥೮೦॥

ಸೇವಿತಂ ಪರಯಾ ಶಕ್ತ್ಯಾ ವಾಮಾಂಗಾಸನಸಂಸ್ಥಿತಾಂ।
ನಿರೀಕ್ಷಂತೀಂ ಮಹಾದೇವಸುಂದರಾಸನಪಂಕಜಂ ॥೮೧॥

ಸ್ವನೇತ್ರಭ್ರಮರೈರ್ದೇವೀಂ ಸರ್ವಾಭರಣಶೋಭಿತಾಂ।
ನಾರದಾದಿಮುನಿಶ್ರೇಷ್ಠೈರ್ದೇವಗಂಧರ್ವಸತ್ತಮೈಃ ॥೮೨॥

---

ಪರಶಿವನನ್ನು ಮನೋವಾಕ್ಕಾಯಕರ್ಮಗಳಿಂದ ತೃಪ್ತಿಪಡಿಸಬೇಕೆಂದು ಹಂಬಲಿಸುವವರೆಲ್ಲಾ ಅಲ್ಲಿಯೇ ಪರಶಿವನನ್ನು ಮೊರೆಹೊಕ್ಕು ನೆಲೆಸಿದ್ದರು. ದೇವತೆಗಳಿಗೂ ಸುಲಭಸಾಧ್ಯವಲ್ಲದ ಆ ಪ್ರದೇಶವನ್ನು ಪಡೆದ ಮುನಿವರ್ಗವು ದುಃಖಲೇಶವನ್ನಾಗಲಿ, ಮತ್ತೆ ಭೂಲೋಕಕ್ಕೆ ಹಿಂದಿರುಗುವ ಯೋಚನೆಯನ್ನಾಗಲಿ ಹೊಂದದೆ ಸುಖದಿಂದಿರುತ್ತಿದ್ದರು. ॥೭೭-೭೮॥

ಅಲ್ಲಿ ಪರಶಿವನು ನೀಲಕಂಠನೂ, ವಿರೂಪಾಕ್ಷನೂ, ಗಂಗಾಧಾರಿಯೂ ಆಗಿ ವಿರಾಜಿಸುತ್ತಿದ್ದನು. ಶಂಕರನ ಶಿರೋಭಾಗವು ಚಂದ್ರನಿಂದ ಶೋಭಿಸುತ್ತಿದ್ದಿತು. ದೇಹವು ಕರ್ಪೂರದಂತೆ ಶುಭ್ರವಾಗಿದ್ದಿತು. ವೇದವೇದಾಂತಗಳಿಂದ ಸರ್ವದಾ ಸ್ತುತನಾಗಿದ್ದನು. ಸರ್ವ ಭೂಷಣನೆನಿಸಿ, ತ್ರಿಪುಂಡ್ರವಿಲಸತ್ಫಾಲನಾಗಿ, ವರದ ಮತ್ತು ಅಭಯ ಮುದ್ರೆಗಳನ್ನು ಕೈಯ್ಯಿಂದ ತೋರ್ಪಡಿಸುತ್ತಿದ್ದನು. ॥೭೯-೮೦॥

ಶಕ್ತಿದೇವತೆಯರಿಂದ ಸೇವಿತಳಾದ ಪಾರ್ವತಿಯು ಪರಶಿವನ ಎಡಭಾಗದಲ್ಲಿ ಕುಳಿತು ಮಹಾದೇವನ ಸುಂದರವಾದ ವದನಾರವಿಂದವನ್ನು ತನ್ನ ನೇತ್ರವೆಂಬ ಭ್ರಮರಗಳಿಂದ ಅಲಂಕರಿಸುತ್ತಾ, ಸರ್ವಾಭರಣಸುಂದರಿಯಾಗಿ ವಿರಾಜಿಸುತ್ತಿದ್ದಳು.

ಸಂಸ್ತುತಂ ವಲ್ಲಕೀಹಸ್ತೈರ್ಗಾನಧಾರಾರಸೈಶ್ಶಿವಂ ।
ಗಣೇಂದ್ರೈರ್ವಿವಿಧೈರ್ದೇವಂ ಸೇವಿತಂ ಪರಯಾ ಮುದಾ ॥೮೩॥

ರತ್ನಸಿಂಹಾಸನಾಸೀನಂ ನಾನಾವಾದ್ಯಕರೈರ್ಗಣೈಃ ।
ಮೃದಂಗಕಾಹಳಾನೇಕಶಂಖದುಂದುಭಿನಿಸ್ವನೈಃ ॥೮೪॥

ಸ್ತುವದ್ಭಿರ್ದೇವಸಂಘೈಶ್ಚ ಜಯಶಬ್ದೈಶ್ಚ ಪುಷ್ಕಲೈಃ ।
ಪುರಃಸ್ಥಿತೈರ್ಗಣೇಂದ್ರೈಶ್ಚ ನಂದಿನಾ ಸ್ವರ್ಣವೇತ್ರಿಣಾ ॥೮೫॥

ಛತ್ರಚಾಮರಹಸ್ತೈಶ್ಚ ಮಹಾಕಾಳಾದಿಭಿರ್ಗಣೈಃ ।
ತಂಡುಭೃಂಗಿಪ್ರಭೃತಿಭಿರ್ಬಾಣಾದ್ಯೈಃ ಪರಿಸೇವಿತಂ ॥೮೬॥

ಧ್ವಜನ್ಯೈಶ್ಚ ಪತಾಕೈಶ್ಚ ವೃಷಭಾಂಕಮನೋಹರೈಃ ।
ಮಹಾವೀರಮಹಾಸೌಧೈರ್ನಾನಾಮಣಿಮಯಾನ್ವಿತೈಃ ॥೮೭॥

ತತ್ಕಾಂತಿಧೃತಚಂದ್ರಾರ್ಕಭಾಭಿಶ್ಚ ಸುಮನೋಹರಂ ।
ಧ್ಯಾಯಂತಮಗ್ರೇ ದೇವೇಶಂ ಕಕುದಾ ಪರಿಸೇವಿತಂ ॥೮೮॥

---

ನಾರದಾದಿ ಸಕಲ ಮಹರ್ಷಿಗಳೂ, ದೇವಗಂಧರ್ವಪರಿವೃತರಾಗಿ ದೇವಿಯನ್ನೂ ಪರಶಿವನನ್ನೂ ವಿಧವಿಧವಾಗಿ ಸ್ತುತಿಸುತ್ತಿದ್ದರು. ॥೮೧-೮೨॥

ಮತ್ತು ಅವರು ವಿಧವಿಧವಾದ ಗಾನಧಾರೆಗಳನ್ನು ವೀಣಾವಾದನಪುರಸ್ಸರವಾಗಿ ಶಿವದಂಪತಿಗಳ ಮುಂದೆ ಹರಿಸುತ್ತಿದ್ದರು. ಪರಶಿವನಾದರೋ, ರತ್ನಸಿಂಹಾಸನದಲ್ಲಿ ಮಂಡಿಸಿ, ನಾನಾವಾದ್ಯಗಳೆನಿಸಿದ ಮೃದಂಗ, ತುತ್ತೂರಿ, ಶಂಖ, ದುಂದುಭಿಯೇ ಮೊದಲಾದವುಗಳ ಮಧುರಧ್ವನಿಯನ್ನು ಆಲೈಸುತ್ತಿರುವನು. ॥೮೩-೮೪॥

ದೇವತಾವೃಂದವು ಜಯಶಬ್ದಪುರಸ್ಸರವಾಗಿ, ಸುವರ್ಣದಂಡಧಾರಿಯಾದ ನಂದಿಯ ಆಜ್ಞೆಯಂತೆ ಪರಶಿವನನ್ನು ಸ್ತುತಿಸುತ್ತಿದ್ದರು. ತಂಡು, ಭೃಂಗಿ ಮೊದಲಾದವರು ಛತ್ರಿಚಾಮರಾದಿಗಳನ್ನು ಹಿಡಿದು ಮಹಾದೇವನನ್ನು ಸೇವಿಸುತ್ತಿದ್ದರು. ॥೮೫-೮೬॥

ಬಸವನ ಗುರುತುಗಳಿಂದ ಶೋಭಿಸುವ, ಬೀಸಣಿಗೆ, ಧ್ವಜ ಇವುಗಳು ಅಲ್ಲಲ್ಲಿ ಸುಂದರವಾಗಿ ಕಾಣುತ್ತಿದ್ದುವು. ಹೀರಮಣಿಮಯವಾದ ಸೌಧಗಳು, ಸೂರ್ಯ

ಚಾರುಶೃಂಗಾಂತರಾಲೋಲಚಾಮರದ್ವಯಶೋಭಿತಂ ।
ಸ್ತಬ್ಧೇಕ್ಷಣಾಭ್ಯಾಂ ಕರ್ಣಾಭ್ಯಾಂ ಪಶ್ಯಂತಂ ಪರಮೇಶ್ವರಂ ॥೮೯॥

ಸಂಸ್ಥಿತಂ ಧರ್ಮಧೌರೇಯಂ ನಾನಾಘಂಟಾವಿರಾಜಿತಂ ।
ಕುಮಾರಗಣಪಾಭ್ಯಾಂ ಚ ಸೇವಿತಂ ಸುಮನೋಹರಂ ॥೯೦॥

ನಾನಾಕುಸುಮಗಂಧಾಢ್ಯಹಾರಶೋಭಿತಕಂಧರಂ ।
ಪ್ರಸನ್ನವದನಾಂಭೋಜಂ ತೇ ದೇವಂ ದದೃಶುಶ್ಶಿವೇ ॥೯೧॥

ಕೈಲಾಸೇ ಸುಹಿರಣ್ಯಪಂಜರಗತಾಃ ಪುಂಸ್ಕೋಕಿಲಾಶ್ಶಾರಿಕಾಃ
ರಕ್ತಾಶೋಕಹರಿನ್ಮಣಿಪ್ರತಿನಿಭಾಃ ಸತ್ಪುಂಡರಿಕಪ್ರಭಾಃ ।
ದೃಷ್ಟ್ವಾ ಲಿಂಗಮುಮಾಪತಿಪ್ರಿಯತಮಂ ಪಾಹೀಶ ಶಂಭೋ ಶಿವೇ
ತ್ಯಾಕ್ರೋಶಂತಿ ಶುಕಾಃ ಶಿವಾಗ್ರಗತಯೋ ನೃತ್ಯಂತಿ ತೇ ಬರ್ಹಿಣಃ ॥೯೨॥

---

ಚಂದ್ರರ ವಿಶಾಲವಾದ ಕಾಂತಿಗಳಿಂದ ಪ್ರಕಾಶಿಸುತ್ತಲಿದ್ದುವು. ಪರಶಿವನ ಮುಂಭಾಗದಲ್ಲಿ ವೃಷಭೇಶ್ವರನು ಪರಶಿವನನ್ನೇ ಸರ್ವದಾ ಧ್ಯಾನಿಸುತ್ತಾ ಸುಂದರವಾದ ಹಿಳಲಿನಿಂದ ಶೋಭಿಸುತ್ತಿದ್ದನು. ॥೮೭-೮೮॥

ಆ ವೃಷಭದ ಎರಡು ಕೋಡುಗಳ ಮಧ್ಯದಲ್ಲಿ ಎರಡು ಚಾಮರಗಳು ನೇತಾಡುತ್ತಿದ್ದುವು. ಕಣ್ಣು, ಕಿವಿಗಳನ್ನು ಸ್ಥಿರವಾಗಿಟ್ಟುಕೊಂಡು ಪರಮೇಶ್ವರನನ್ನೇ ನೋಡುತ್ತಿದ್ದಿತು. ನಾನಾವಿಧವಾದ ಘಂಟಾಧ್ವನಿಗಳಿಂದ ಕೂಡಿ ಧರ್ಮಸ್ವರೂಪಿಯಾಗಿ ಅಕ್ಕ ಪಕ್ಕದಲ್ಲಿ, ಕುಮಾರ ಗಣಪತಿಯನ್ನು ಪಡೆದು, ನಾನಾವಿಧವಾದ ಸುಗಂಧ ಪುಷ್ಪಮಾಲೆಗಳಿಂದಲಂಕೃತನಾಗಿದ್ದ ಆ ವೃಷಭೇಶ್ವರನನ್ನು ಆ ಗಣಗಳೆಲ್ಲರೂ ನೋಡಿದರು. ॥೮೯-೯೦-೯೧॥

ಸುವರ್ಣಮಯಗಳಾದ ಪಂಜರಗಳಲ್ಲಿ ವಿಹರಿಸುವ ಪುಂಸ್ಕೋಕಿಲೆಗಳೂ, ಶಾರಿಕೆಗಳೂ, ಗಿಳಿಗಳೂ, ಕೆಂಪು ಮತ್ತು ಹರಿದ್ವರ್ಣದ ರತ್ನಪ್ರಭೆಯನ್ನು ಬೀರುತ್ತಾ, ನೋಡುವವರಿಗೆ ಪುಷ್ಪಭ್ರಾಂತಿಯನ್ನುಂಟುಮಾಡುತ್ತಾ, ಶಂಭೋ, ಶಂಕರನೇ, ದೇವಿಯೇ, ನಮ್ಮನ್ನು ರಕ್ಷಿಸು ಎಂದು ಮುದ್ದುಮುದ್ದಾಗಿ ಮಾತನಾಡುತ್ತಿದ್ದುವು. ನವಿಲುಗಳು ಮಹಾದೇವನ ಪುರೋಭಾಗದಲ್ಲಿ ಸುಂದರವಾಗಿ ನಾಟ್ಯವಾಡುತ್ತಿದ್ದುವು. ॥೯೨॥

ಹಂಸಾಸ್ಸಾರಸಚಕ್ರವಾಕಸಹಿತಾಃ ಕ್ಷೀರೋದನೀರೈರ್ಮುದಾ
ಚಂಚೂಭಿಃ ಪಯಸಾಂ ಕಣೈರತಿಶಿತೈರ್ಮುಕ್ತಾವಲೀಭಿಸ್ಸಹ ।
ರೇವಾಲಿಂಗವರಂ ಪ್ರದೋಷಸಮಯೇ ತದ್ಬಿಲ್ವಮೂಲಸ್ಥಿತಂ
ಸಂಪೂಜ್ಯ ಪ್ರಥಿಮಾನಪಕ್ಷಪವನೈಃ ಸಂವೀಜಯಂತ್ಯಾದರಾತ್ ॥೯೩॥

ಗಂಧರ್ವಕಿನ್ನರಗಣಾ ಲಲನಾಭಿರೀಶಂ
ನಾಟ್ಯೈರ್ಮೃದಂಗಮುಖನಿಸ್ಸೃತತಾಲಶಬ್ದೈಃ ।
ಶಂಖೈಶ್ಚ ಕಾಹಲರವೈರ್ಮೃದುವೇಣುವೀಣಾ
ಝಕ್ಕಾದಿದುಂದುಭಿರವೈಃ ಪರಿಘೋಷಯಂತಿ ॥೯೪॥

ಸಾರಂಗಾಃ ಸ್ವಕಕಾಯಕಂಡುವಿವಶಾ ಬಿಲ್ವಸ್ಯ ಸಂಘರ್ಷಣೈ
ರ್ಮತ್ತೇಭೇಂದ್ರ ಸುಪುಷ್ಕರೋದ್ಭವಜಲಾಸಾರೈಸ್ಸುಶೀತೈರಪಿ ।

---

ಆ ಕೈಲಾಸಪರ್ವತದಲ್ಲಿರುವ ಹಂಸಗಳೂ, ಸಾರಸಪಕ್ಷಿಗಳೂ, ಚಕ್ರವಾಕಗಳೂ, ತಮ್ಮ ಕೊಕ್ಕುಗಳಲ್ಲಿ ಹಾಲು, ನೀರು, ಮುತ್ತು ಇವೇ ಮೊದಲಾದುವುಗಳನ್ನು ಕಚ್ಚಿಕೊಂಡು, ಅಲ್ಲಿಯೇ ಬಿಲ್ವಮೂಲದಲ್ಲಿ ವಿರಾಜಿಸುವ ನರ್ಮದಾಲಿಂಗದಮೇಲೆ ಅವುಗಳನ್ನು ಸುರಿದು, ಪ್ರದೋಷಪೂಜೆಯನ್ನು ನೆರವೇರಿಸುತ್ತಾ, ತಮ್ಮ ಗರಿಗಳ ಗಾಳಿಯಿಂದ ಶಿವಲಿಂಗವನ್ನು ಬೀಸುತ್ತಾ ಚಾಮರಸೇವೆಮಾಡುತ್ತಿದ್ದುವು. ॥೯೩॥

ಗಂಧರ್ವರೂ, ಕಿನ್ನರರೂ ತಮ್ಮ ತಮ್ಮ ಸ್ತ್ರೀಯರೊಡಗೂಡಿ, ಮೃದಂಗ, ತಾಳ ಮುಂತಾದ ವಾದ್ಯಧ್ವನಿಗಳೊಡಗೂಡಿ ಅಲ್ಲಲ್ಲಿ ನಾಟ್ಯಮಾಡುತ್ತಾ, ಶಂಖ, ಕಹಳೆ, ಕೊಳಲು, ವೀಣೆ, ಝಕ್ಕ, ದುಂದುಭಿ ಮುಂತಾದ ವಾದ್ಯಘೋಷಗಳಿಂದ ಪರಶಿವನನ್ನು ಸ್ತುತಿಸುತ್ತಿದ್ದರು. ॥೯೪॥

ಸಾರಂಗಗಳು ತಮ್ಮ ದೇಹದ ಕಡಿತವನ್ನು ನಿವಾರಿಸಿಕೊಳ್ಳುವ ನೆಪದಿಂದ ಬಿಲ್ವವೃಕ್ಷಗಳನ್ನುಜ್ಜಿ, ಆ ಮೂಲಕ ಬಿಲ್ವಪತ್ರೆಗಳು ಬುಡದಲ್ಲಿದ್ದ ಶಿವಲಿಂಗಗಳ ಮೇಲೆ ಬೀಳುವಂತೆ ಮಾಡುತ್ತಿದ್ದುವು. ಹಾಗೆಯೇ ಮದ್ದಾನೆಗಳು ತಮ್ಮ ಸೊಂಡಲುಗಳಲ್ಲಿ ಶೀತಲವಾದ ನೀರನ್ನು ತುಂಬಿಕೊಂಡು, ಬಿಲ್ವವೃಕ್ಷದ ಪಾತಿಗೂ, ಹಾಗೆಯೇ ಅಲ್ಲಿರುವ ನರ್ಮದಾಲಿಂಗದ ಮೇಲೆಯೂ ಸುರಿದು ಶಿವಲಿಂಗಾಭಿಷೇಕ

ಸ್ವೈಃ ಪುಚ್ಛೈಶ್ಚಮರೀಗಣೈಃ ಕೃತಮಹಾಲಿಂಗಸ್ಯ ಸಂಪೂಜನೈ
ಸ್ತತ್ಪಾಂಡುಛದಸೇಕವೀಜನಮಿಷಾತ್ಸಂತೋಷಯಂತೀಶ್ವರಂ ॥೯೫॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ನಾರಕಸ್ಥ
ಸುದರ್ಶನಾದ್ಯಾನಯನಂ ಶಿವಗಣಸಂವಾದೇ ಕೈಲಾಸಪರ್ವತವರ್ಣನಂ
ನಾಮ ಏಕೋನಚತ್ವಾರಿಂಶೋಽಧ್ಯಾಯಃ

---

ಮಾಡುತ್ತಿದ್ದವು. ಚಮರೀಮೃಗಗಳಾದರೋ, ತಮ್ಮ ಸ್ವಭಾವಶುದ್ಧವಾದ ಬಾಲಗಳನ್ನೆತ್ತಿ ಮೇಲೆ ಹೇಳಿದ ರೀತಿಯಿಂದ ಪೂಜಿತಗಳಾದ ಶಿವಲಿಂಗದ ಅಕ್ಕ ಪಕ್ಕದಲ್ಲಿ ನಿಂತು, ಪರಮೇಶ್ವರನಿಗೆ ವ್ಯಜನಸೇವೆಯನ್ನು ಭಯಭಕ್ತಿಗಳಿಂದ ಸಮರ್ಪಿಸುತ್ತಿದ್ದವು. ಹೀಗೆ ಮೂಕಪ್ರಾಣಿಗಳೂ ಸಹ ಶಿವಭಕ್ತಿಯಿಂದಾವೃತಗಳಾಗಿ ಶಿವಲಿಂಗವನ್ನು ಪೂಜಿಸುವ ದೃಶ್ಯವನ್ನು ಆ ಶಿವಗಣಗಳು ಆಶ್ಚರ್ಯದಿಂದ ನೋಡಿದರೆಂದು ಸೂತಮಹಾಮುನಿಗಳು ಅಲ್ಲಿ ನೆರೆದಿದ್ದ ಋಷಿಜನರಿಗೆ ಪ್ರೀತಿಯಿಂದ ವಿವರಿಸಿ ಹೇಳಿದರು. ॥೯೫॥

ಇಲ್ಲಿಗೆ ಶ್ರೀಶಿವರಹಸ್ಯದ ಪಂಚಮಾಂಶದಲ್ಲಿ ನರಕಲೋಕದಲ್ಲಿದ್ದ ಸುದರ್ಶನನೇ
ಮೊದಲಾದವರನ್ನೆಲ್ಲಾ, ಶಿವಗಣಗಳು ಕೈಲಾಸಕ್ಕೆ ತಂದ ಕಥಾ ಭಾಗವನ್ನೂ
ಮತ್ತು ಕೈಲಾಸಪರ್ವತ ವರ್ಣನೆಯನ್ನೂ ವಿವರಿಸುವ
ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಚತ್ವಾರಿಂಶೋಽಧ್ಯಾಯಃ

॥ ದೇವ್ಯುವಾಚ ॥

ಶ್ರುತಂ ಸುದರ್ಶನಾಖ್ಯಾನಂ ತ್ವತ್ತೋ ವಿಸ್ಮಾಪನಂ ಮಮ ।
ಪ್ರದೋಷೇ ಪಾಪಿನಾ ತೇನ ದೃಷ್ಟ್ವಶ್ಚಾನ್ಯಾರ್ಚಿತಃ ಶಿವಃ ॥೧॥

ಶೇಷೇಣ ನಾಮಸಾಹಸ್ರೈಸ್ತ್ವಂ ಸ್ತುತಃ ಕಥಮೀಶ್ವರ ।
ತಂ ನಾಮ್ನಾಂ ಶ್ರವಣೇಚ್ಛಾ ಮೇ ಭೂಯಸೀ ಭವತಿ ಪ್ರಭೋ ॥೨॥

॥ ಸೂತ ಉವಾಚ ॥

ತಸ್ಮಿನ್ ಕೈಲಾಸಶಿಖರೇ ಸುಖಾಸೀನಂ ಮಹೇಶ್ವರಂ ।
ಪ್ರಣಮ್ಯ ಪ್ರಾರ್ಥಯಾಮಾಸ ಸಾ ದೇವೀ ಜಗದಂಬಿಕಾ ॥೩॥

---

## ನಲವತ್ತನೆಯ ಅಧ್ಯಾಯ

ಪಾರ್ವತಿಯು ಸುದರ್ಶನನ ವೃತ್ತಾಂತವನ್ನು ಪರಶಿವನಿಂದ ಕೇಳಿ " ಮಹಾದೇವನೇ, ಈಗ ನಿನ್ನಿಂದ ಪ್ರದೋಷಕಾಲದ ಈಶ್ವರಾರ್ಚನೆಯ ಮಹಿಮೆಯು ತಿಳಿದಂತಾಯಿತು. ಮಹೇಶ್ವರನೇ, ಆದಿಶೇಷನು ತನ್ನ ಸಹಸ್ರವದನಗಳಿಂದಲೂ, ನಿನ್ನ ಸಹಸ್ರನಾಮಗಳನ್ನು ಉಚ್ಚರಿಸಿ ಸ್ತುತಿಸಿದನು ಎಂದು ಕೇಳಿರುವೆನು. ಆ ನಿನ್ನ ಸಹಸ್ರನಾಮಗಳಾವುವು ? ಅದನ್ನು ಕೇಳಲು ನನಗೆ ಬಹು ಕುತೂಹಲವಿರುವುದು ದಯೆಯಿಟ್ಟು ಅದನ್ನು ತಿಳಿಸಬೇಕು " ಎಂದು ಪ್ರಾರ್ಥಿಸಲು, ॥೧-೨॥

ಕೈಲಾಸಪರ್ವತ ಶಿಖರದಲ್ಲಿ ಪ್ರಸನ್ನನಾಗಿ ಕುಳಿತಿದ್ದ ಪರಶಿವನು ಸಹಸ್ರನಾಮಶ್ರವಣಕುತೂಹಲದಿಂದ ಪ್ರಶ್ನೆಮಾಡಿದ ದೇವಿಯ ಪ್ರಾರ್ಥನೆಯನ್ನು ಕೇಳಿ

ತದಾ ದೇವ್ಯಾ ಮಹಾದೇವಃ ಪ್ರಾರ್ಥಿತಃ ಸರ್ವಕಾಮದಃ ।
ಫಣೀಶೋ ಮುಖಸಾಹಸ್ರೈರ್ಯಾನಿ ನಾಮಾನಿ ಚೋಕ್ತವಾನ್ ॥೪॥

ತಾನಿ ವಃ ಸಂಪ್ರವಕ್ಷ್ಯಾಮಿ ಯಥಾ ಮಮ ಗುರೋಶ್ಶ್ರುತಂ ।
ಭವೋ ಭವಾನೀಮಾಹೇತ್ಥಂ ಸರ್ವಪಾಪಪ್ರಣಾಶಕಂ ॥೫॥

ಋಷಿಶ್ಛಂದೋ ದೈವತಂ ಚ ತಾನ್ಯಹಂ ಕ್ರಮಶೋಂಬಿಕೇ ।
ಸಹಸ್ರನಾಮ್ನಾಂ ಪುಣ್ಯಂ ಮೇ ಫಣೀಂದ್ರಃ ಕೃತವಾನುಮೇ ॥೬॥

॥ ಈಶ್ವರ ಉವಾಚ ॥

ಋಷಿಸ್ತಸ್ಯ ಹಿ ಶೇಷೋಯಂ ಛಂದೋನುಷ್ಟುಪ್ಪ್ರಕೀರ್ತಿತಃ ।
ದೇವತಾಸ್ಯಾಹಮೀಶಾನಿ ಸರ್ವತ್ರ ವಿನಿಯೋಜನಂ ॥೭॥

ಧ್ಯಾನಂ ತೇ ಕಥಯಾಮ್ಯದ್ಯ ಶೃಣು ತ್ವಮಗಕನ್ಯಕೇ ॥೮॥

ಕೈಲಾಸೇ ಸುಹಿರಣ್ಯವಿಷ್ಟರವರೇ ದೇವ್ಯಾ ಸಮಾಲಿಂಗಿತಂ
ನಂದ್ಯಾದ್ಯೈರ್ಗಣಪೈಃ ಸದಾ ಪರಿವೃತಂ ವಂದೇ ಶಿವಂ ಸುಂದರಂ ।

---

ಸಂತೋಷಪಟ್ಟು, ಪತ್ನಿಯ ಕೋರಿಕೆಯಂತೆ ಆದಿಶೇಷನಿಂದ ಉಕ್ತವಾದ ಪಾಪನಾಶಕವಾದ ಶಿವಸಹಸ್ರನಾಮಸ್ತೋತ್ರವನ್ನು ಸುಲಭವಾಗಿ ವಿವರಿಸಿ ಹೇಳಲಾರಂಭಿಸಿದನು. ॥೩-೪-೫॥

ದೇವಿಯೇ, ಶೇಷಕೃತ ಈ ಸಹಸ್ರನಾಮಸ್ತೋತ್ರಕ್ಕೆ ಆದಿಶೇಷನೇ ಋಷಿಯು. ನಾನೇ (ಪರಶಿವನೇ) ದೇವತೆಯು. ಅನುಷ್ಟುಪ್ ಛಂದಸ್ಸು, ಈ ವಿಧವಾದ ಋಷಿ ದೇವತಾ ಛಂದಸ್ಸನ್ನರಿತು ಶಿವಸಹಸ್ರನಾಮಸ್ತುತಿಯನ್ನು ಆರಂಭಿಸಬೇಕು. ॥೬-೭॥

ಹಾಗೆಯೇ ಮೊದಲು ಈರೀತಿ ಶಿವಧ್ಯಾನಮಾಡಬೇಕು. "ಪರಶಿವನು ಕೈಲಾಸದಲ್ಲಿ ಸುವರ್ಣಮಯವಾದ ಸಿಂಹಾಸನದಲ್ಲಿ ಪಾರ್ವತೀಸಮೇತನಾಗಿ ಕುಳಿತಿರುವನು. ನಂದೀಶ್ವರನೇ ಮೊದಲಾದ ಗಣದೇವತೆಗಳಿಂದ ಪರಿವೃತನಾಗಿರುವನು. ಷಣ್ಮುಖ, ಗಣಪತಿ, ಇವರೇ ಮೊದಲಾದವರು ಶಂಕರನ ಪಾದಗಳನ್ನು ಸೇವಿಸುತ್ತಿರುವರು. ಪರಶಿವನು ತನ್ನ ಭಕ್ತರ ಪಾಪರಾಶಿಯನ್ನೆಲ್ಲಾ ಧ್ವಂಸಮಾಡತಕ್ಕ ಪರಶುವನ್ನು ಕೈಯ್ಯಿಂದ ಧರಿಸಿರುವನು. ಇಂತಹ ಪರಶಿವನ ಪಾದಗಳನ್ನು ಭಕ್ತಿ

ಭಕ್ತಾಘೌಘನಿಕೃಂತನೈಕಪರಶುಂ ಬಿಭ್ರಾಣಮಿಂದುಪ್ರಭಂ
ಸ್ಕಂದಾದ್ಯೈರ್ಗಜವಕ್ತ್ರಸೇವಿತಪದಂ ಧ್ಯಾಯಾಮಿ ಸಾಂಬಂ ಸದಾ॥೯॥

ಏವಂ ಮಾಮಂಬಿಕೇ ಧ್ಯಾತ್ವಾ ನಾಮಾನಿ ಪ್ರಜಪೇತ್ತತಃ ।
ಹೃತ್ಪದ್ಮಸದ್ಮಸಂಸ್ಥಂ ಮಾಂ ಸರ್ವಾಭೀಷ್ಟಾರ್ಥಸಿದ್ಧಯೇ ॥೧೦॥

ಪುಣ್ಯಕಾಲೇಷು ಸರ್ವೇಷು ಸೋಮವಾರೇ ವಿಶೇಷತಃ ।
ಬಿಲ್ವಪತ್ರೈಃ ಪಂಕಜೈಶ್ಚ ಪುಷ್ಪಾಣ್ಯನ್ಯಾನಿ ಶಂಕರಿ ॥೧೧॥

ಪೂಜಯೇನ್ನಾಮಸಾಹಸ್ರೈಃ ಸರ್ವಾರ್ಥಪ್ರಾಪ್ತಯೇ ಶಿವೇ ।
ಯಂ ಯಂ ಕಾಮಯತೇ ಕಾಮಂ ತಂ ತಮಾಪ್ನೋತಿ ಶಂಕರಿ॥೧೨॥

ಧನಾರ್ಥೀ ಲಭತೇ ವಿತ್ತಂ ಕನ್ಯಾರ್ಥೀ ಕನ್ಯಕಾಂ ತಥಾ ।
ರಾಜ್ಯಾರ್ಥೀ ರಾಜ್ಯಮಾಪ್ನೋತಿ ಮೋಕ್ಷಾರ್ಥೀ ಮೋಕ್ಷಮಾಪ್ನು
ಯಾತ್ ॥೧೩॥

ಶೃಣು ದೇವಿ ಪರಂ ಪುಣ್ಯಂ ಮಾತೃಕಾನಾಮನುತ್ತಮಂ ।
ಸಹಸ್ರಂ ಪ್ರಜಪೇನ್ನಿತ್ಯಂ ಧರ್ಮಕಾಮಾರ್ಥಮೋಕ್ಷಭಾಕ್ ॥೧೪॥

---

ಯಿಂದ ಸೇವಿಸುವೆನು" ಎಂದು ನನ್ನನ್ನು ಧ್ಯಾನಿಸಿ ಸಹಸ್ರನಾಮಗಳನ್ನು ಪಠನೆ ಮಾಡಬೇಕು. ॥೮-೯॥

ಮತ್ತು ನಾನು ಸಕಲರ ಹೃದಯ ಕಮಲದಲ್ಲಿಯೂ ಅಡಗಿರುವೆನೆಂಬುದನ್ನು ಭಾವಿಸುತ್ತಾ, ವಿಶೇಷ ಪುಣ್ಯದಿನಗಳಲ್ಲಿಯೂ, ಸೋಮಪ್ರದೋಷಾದಿಗಳಲ್ಲಿಯೂ, ಬಿಲ್ವಪತ್ರ, ಕಮಲ ಮುಂತಾದ ಪತ್ರಪುಷ್ಪಗಳಿಂದ ನನ್ನನ್ನು ಪೂಜಿಸಬೇಕು. ॥೧೦-೧೧॥

ಹಾಗೆ ಸಹಸ್ರನಾಮಾರ್ಚನೆಮಾಡುವುದರಿಂದ ಭಕ್ತನು ತಮ್ಮ ತಮ್ಮ ಇಷ್ಟಾರ್ಥವನ್ನೆಲ್ಲಾ ಸುಲಭವಾಗಿ ಪಡೆಯುವನು. ಧನಾಭಿಲಾಷಿಯು ಧನವನ್ನೂ, ಕನ್ಯಾರ್ಥಿಯು ಸುಲಕ್ಷಣ ಕನ್ಯೆಯನ್ನೂ, ರಾಜ್ಯವನ್ನು ಬಯಸುವವನು ಸಂಪೂರ್ಣ ರಾಜ್ಯವನ್ನೂ, ಮೋಕ್ಷಾರ್ಥಿಯು ಮೋಕ್ಷವನ್ನೂ ಇದರಿಂದ ಪಡೆಯುವನು. ದೇವಿಯೇ, ಈಗ ಹೇಳಲಿರುವ ಅಕ್ಷರಕ್ರಮವಾದ ಸಹಸ್ರನಾಮಗಳನ್ನು ಭಕ್ತಿಯಿಂದ ಪಠಿಸಿದವರಿಗೆ ಧರ್ಮ, ಅರ್ಥ, ಕಾಮ, ಮೋಕ್ಷಗಳು ಸುಲಭವಾಗಿ ದೊರಕುವುವು. ॥೧೨-೧೩-೧೪॥

ಓಂಕಾರನಿಲಯಾಂತಸ್ಥ ಓಂಕಾರಾರ್ಥೈಕವಾಚಕಃ ।
ಓಂಕಾರೇಶ ಓಂಕೃತಿರೋಮಿತಿ ಶಬ್ದಕೃತಸ್ತುತಿಃ ॥೧೫॥

ಓಂಕಾರಕುಂಡನಿಲಯಲಿಂಗಪೂಜನಪಾಪಹೃತ್ ।
ನಮಿತಾಶೇಷದೇವಾದಿರ್ನದೀಪುಲಿನಸಂಸ್ಥಿತಃ ॥೧೬॥

ನಂದಿವಾದ್ಯಪ್ರಿಯೋ ನಿತ್ಯೋ ನಾಮಪಾರಾಯಣಪ್ರಿಯಃ ।
ಮಹೇಂದ್ರನಿಲಯೋ ಮಾನೀ ಮಾನಸಾಂತರಪಾಪಭಿತ್ ॥೧೭॥

ಮಯಸ್ಕಾರೋ ಮಹಾಯೋಗೀ ಮಾಯಾಚಕ್ರಪ್ರವರ್ತಕಃ ।
ಶಿವಶ್ಶಿವತರಶ್ಶೀತಃ ಶೀತಾಂಶುಕೃತಭೂಷಣಃ ॥೧೮॥

ಧನುಶ್ಶರಕರೋ ಧಾತಾ ಧರ್ಮಾಧರ್ಮಪರಾಯಣಃ ।
ಆತ್ಮಾ ಆಚಾರ್ಯ ಆಲಾದ್ಯ ಅನಂಗಶರಖಂಡನಃ ॥೧೯॥

---

(ಇಲ್ಲಿಂದ ಸಹಸ್ರನಾಮಗಳು ಆರಂಭವಾಗುತ್ತವೆ.)

ಓಂಕಾರವೆಂಬ ಪ್ರಣವಕ್ಕೆ ಮುಖ್ಯ ದೇವತೆಯೇ ಶಂಕರನು. ಓಂಕಾರದಿಂದ ತೋರಿಬರುವ ಸಕಲಾರ್ಥಪ್ರತಿಪಾದ್ಯನೂ ಶಂಕರನೇ. ಓಂಕಾರಕ್ಕೆ ಅಧಿಪತಿಯೂ, ಓಂಕಾರರೂಪಿಯೂ, ಓಂಕಾರದಿಂದ ಸ್ತುತ್ಯನಾದವನೂ, ಓಂಕಾರವೆಂಬ ಪಾಣಿ ಬಟ್ಟಲಿನಲ್ಲಿ ಲಿಂಗರೂಪದಿಂದ ನೆಲಸಿರುವವನೂ, ಪೂಜೆಯಿಂದ ಸಕಲ ಪಾಪವನ್ನು ನಿವಾರಿಸುವವನೂ, ಅಶೇಷದೇವತೆಗಳಿಂದ ಪೂಜಿತನಾದವನೂ, ನದಿಯ ಮರಳಿನಲ್ಲಿ ಸೈಕತರೂಪದಿಂದ ನಿಂತಿರುವವನೂ ಆದ ಶಿವನಿಗೆ ನಮಸ್ಕಾರ. ॥೧೫-೧೬॥

(ಸಹಸ್ರನಾಮಗಳನ್ನೆಲ್ಲಾ ಓಂಕಾರಾದಿಯಾಗಿ ಪಠಿಸಬೇಕು.)

ನಂದಿಯು ಬಾರಿಸುವ ವಾದ್ಯದಿಂದ ಪ್ರಿಯನಾದವನು. ನಾಶರಹಿತನು. ನಾಮಪಾರಾಯಣದಿಂದ ಪ್ರಿಯನಾಗುವವನು. ಮಹೇಂದ್ರನಿಗೆ ಆಶ್ರಯಭೂತನಾದವನು. ಗರ್ವವುಳ್ಳವನು. ಪರರ ಮನಸ್ಸಿನ ಪಾಪವನ್ನು ನಿವಾರಿಸುವವನು. ಭಕ್ತರಿಗೆ ಸುಖವನ್ನು ಅನುಗ್ರಹಿಸುವವನು. ಮಹಾಯೋಗಿಯು. ಮಾಯೆಯೆಂಬ ಚಕ್ರವನ್ನು ಸುತ್ತಿಸುವವನು. ಮಂಗಳಕರನು. ಮಂಗಳಸ್ವರೂಪನು. ಚಂದ್ರಶೇಖರನಾದವನು. ॥೧೭-೧೮॥

ಧನುಸ್ಸನ್ನೂ, ಬಾಣವನ್ನೂ ಕೈಯ್ಯಲ್ಲಿ ಧರಿಸಿರುವವನು. ಧರ್ಮ ಮತ್ತು ಅಧರ್ಮ ಇವುಗಳಲ್ಲಿ ಆಸಕ್ತನಾದವನು. ಆತ್ಮಸ್ವರೂಪಿಯು. ಸಂಸಾರದಿಂದ

ಈಶಾನ ಈಡ್ಯ ಈರ್ಧ್ಯ್ರಕ್ಚ ಇಭ ಮಸ್ತಕಸಂಸ್ಥಿತಃ ।
ಉಮಾಸಂಶ್ಲಿಷ್ಟವಾಮಾಂಗಉಶೀನರನೃಪಾರ್ಚಿತಃ ॥೨೦॥

ಉದುಂಬರಫಲಪ್ರೀತ ಉಮಾದಿಸುರಪೂಜಿತಃ ।
ರಿಜಿಷ್ಟೀಕೃತಭೂಚಕ್ರೋ ರಿಪುಪ್ರಮಥನೋರಿಜಃ ॥೨೧॥

ಲಿಂಗಾರ್ಚನಜನಪ್ರೀತೋ ಲಿಂಗೀ ಲಿಂಗಸಮಾಶ್ರಯಃ ।
ಲಿಪಿಪ್ರಿಯೋ ಬಿಂದುಹೀನೋ ಲೀಲಾಕೃತಜಗತ್ತ್ರಯಃ ॥೨೨॥

ಐಂದ್ರೀದಿಕ್ಪ್ರೀತಿಸಂಯುಕ್ತ ಐಶ್ವರ್ಯಾದಿಫಲಪ್ರದಃ ।
ಔತ್ತಾನಪಾದಪೂಜ್ಯಾಂಘ್ರಿರೋಮಾದಿಸುರಪೂಜಿತಃ ॥೨೩॥

---

ಪಾರಾಗುವ ತತ್ತ್ವಜ್ಞಾನವಿದ್ದರೂ, ಅದನ್ನವಲಂಬಿಸದೆ ಕಾಮ್ಯಕರ್ಮಾನುಷ್ಠಾನದಿಂದ ಸಂಸಾರಕ್ಕೆ ಹಿಂದಿರುಗುವ ಜೀವರೂಪನು (ಆತಾರ್ಯಃ). ಸಂಪೂರ್ಣವಾಗಿ ಕರ್ಮಫಲವನ್ನನುಭವಿಸುವ ಜೀವರೂಪಿಯು (ಅಲಾದ್ಯಃ). ಮನ್ಮಥನ ಬಾಣಗಳನ್ನು ನಾಶಮಾಡಿದವನು. ಈಶಾನ್ಯದಿಕ್ಕಿಗೆ ಅಧಿಪತಿಯು, ಜಗತ್ಪೂಜ್ಯನು. ನಿರ್ಮಲವಾದ ಶರನ್ಮೇಘದಲ್ಲಿ ಅಡಗಿರುವವನು. (ಈರ್ಧ್ಯ್ರಃ) ಆನೆಯ ಕುಂಭಸ್ಥಳದಲ್ಲಿ ನೆಲಸಿರುವವನು. ಪಾರ್ವತಿಯಿಂದ ಆಲಿಂಗಿತವಾದ ವಾಮಭಾಗವುಳ್ಳವನು. ಉಶೀನರನೆಂಬ ರಾಜನಿಂದ ಪೂಜಿತನಾದವನು. ॥೧೯-೨೦॥

ಅತ್ತಿಯ ಹಣ್ಣಿನಿಂದಲೂ ಪ್ರೀತನಾಗುವವನು. ಪಾರ್ವತಿಯೇ ಮೊದಲಾದ ದೇವತೆಗಳಿಂದ ಪೂಜಿತನಾದವನು. ಚಕ್ರಾಕಾರವಾದ ಭೂಮಿಯನ್ನೇ ಬತ್ತಳಿಕೆಯನ್ನಾಗಿ ಮಾಡಿಕೊಂಡವನು. ಶತ್ರುಗಳನ್ನು ನಾಶಮಾಡುವವನು. ಶತ್ರುಗಳಿಂದ ಜನಿಸಿದವನು. ಲಿಂಗಾರ್ಚನೆಮಾಡುವವರಿಗೆ ಅನುಗ್ರಹಿಸುವವನು. ಲಿಂಗದಲ್ಲಿ ಅಡಗಿರುವವನು. ಲಿಂಗವನ್ನು ಆಶ್ರಯಿಸಿರುವವನು. ಲಿಪಿಗಳಲ್ಲಿ ಆಸಕ್ತಿಯುಳ್ಳವನು. ಬಿಂದುರಹಿತನಾದವನು. ಮೂರು ಲೋಕಗಳನ್ನೂ ಲೀಲಾರೂಪದಲ್ಲಿ ನಡೆಸುವವನು. ॥೨೧-೨೨॥

ಪೂರ್ವದಿಕ್ಕಿನಲ್ಲಿ ಹೆಚ್ಚು ಪ್ರೀತಿಯುಳ್ಳವನು. ಐಶ್ವರ್ಯವೇ ಮೊದಲಾದ ಅನೇಕ ಫಲಗಳನ್ನು ಕೊಡುವವನು, ಉತ್ತಾನಪಾದರಾಯನ ಮಗನಾದ ಧ್ರುವನಿಂದಲೂ, ರೋಮಶರೇ ಮೊದಲಾದ ಮಹರ್ಷಿಗಳಿಂದಲೂ ಪೂಜಿತನಾದವನು. ಮೇರುಪರ್ವತವನ್ನೇ ಧನುಸ್ಸನ್ನಾಗಿ ಮಾಡಿಕೊಂಡವನು, ಭಕ್ತರ ಇಷ್ಟಾರ್ಥ

ಕಲ್ಯಾಣಾಚಲಕೋದಂಡಃ ಕಾಮಿತಾರ್ಥಪ್ರದಾಯಕಃ ।
ಕಸ್ತೂರೀತಿಲಕಪ್ರೀತಃ ಕರ್ಪೂರಾಭಕಲೇವರಃ ॥೨೪॥

ಕರಂಧಮಸುತಪ್ರೀತಃ ಕಲ್ಪಾದಿಪರಿವರ್ಜಿತಃ ।
ಕಲ್ಪಿತಾನೇಕಭೂತಾದಿಃ ಕಲಿಕಲ್ಮಷನಾಶನಃ ॥೨೫॥

ಕಮಲಾಮಲಸನ್ನೇತ್ರಃ ಕಮಲಾಪತಿಪೂಜಿತಃ ।
ಖಖೋಲ್ಕಾದಿತ್ಯವರದಃ ಖಂಜರೀಟವರಪ್ರದಃ ॥೨೬॥

ಖರ್ಜೂರವನಮಧ್ಯಸ್ಥಃ ಖಂಡಿತಾಖಂಡಲೀಕರಃ ।
ಖಗಃ ಖಡ್ಗಧರಃ ಖಂಡಃ ಖಗಗಃ ಖಂಕೃತಿಃ ಖಸಃ ॥೨೭॥

ಖಂಡಪರಶುಃ ಖಂಡಘನಃ ಖಂಡಿತಾರಾತಿಮಂಡಲಃ ।
ಗಂಧರ್ವಗಣಸುಪ್ರೀತೋ ಗಂಧಧೃಗ್ಗರ್ವನಾಶಕಃ ॥೨೮॥

---

ವನ್ನೆಲ್ಲಾ ನೆರವೇರಿಸುವವನು. ಕಸ್ತೂರೀತಿಲಕದಿಂದ ಪ್ರೀತನಾದವನು. ಕರ್ಪೂರದಂತೆ ಶುಭ್ರವಾದ ದೇಹವುಳ್ಳವನು. ॥೨೩-೨೪॥

ಕರಂಧಮನೆಂಬ ಸೂರ್ಯವಂಶದ ರಾಜನ ಪುತ್ರನಾದ ಅವಿಕ್ಷಿತನಿಗೆ ಪ್ರೀತನಾಗಿ ಅನೇಕ ವರಗಳನ್ನು ಕೊಟ್ಟವನು. ಕಲ್ಪ, ಯುಗ ಮುಂತಾದ ಕಾಲಪರಿಮಾಣವಿಲ್ಲದವನು. ಅನೇಕ ಪ್ರಾಣಿವರ್ಗವೇ ಮೊದಲಾದ ಸಕಲ ವಸ್ತುಗಳನ್ನೂ ಕಲ್ಪಿಸಿರುವನು. ಕಲಿಯುಗದಲ್ಲಿ ಒದಗುವ ಪಾಪರಾಶಿಯನ್ನೆಲ್ಲಾ ನಾಶಮಾಡತಕ್ಕವನು. ಕಮಲದಂತೆ ವಿಕಸಿತವಾದ ಕಣ್ಣುಗಳುಳ್ಳವನು. ವಿಷ್ಣುವಿನಿಂದ ಪೂಜಿತನಾದವನು, ಖಖೋಲ್ಕಾದಿಮಂತ್ರಪ್ರತಿಪಾದ್ಯನಾದ ಸೂರ್ಯನಿಂದ ಪೂಜಿತನಾದವನು. ಖಂಜರೀಟವೆಂಬ (ಕಾಡಿಗೆವುಂಡೆ) ಪಕ್ಷಿಗೆ ಪ್ರಿಯನಾದವನು. ॥೨೫-೨೬॥

ಖರ್ಜೂರದ ವನಮಧ್ಯದಲ್ಲಿ ಕಂಗೊಳಿಸುವವನು, ಇಂದ್ರನ ತೇಜಸ್ಸನ್ನೂ ಮಂಕುಗೊಳಿಸಿದವನು, ಆಕಾಶಗಾಮಿಯು, ಖಡ್ಗಧಾರಿಯು, ಖಂಡರೂಪಿಯು, ಅಂತರಿಕ್ಷದಲ್ಲಿ ಸಂಚರಿಸುವ ವಿಮಾನದಲ್ಲಿ ಪ್ರಯಾಣಮಾಡುವವನು, ಅಂತರಿಕ್ಷಸ್ವರೂಪಿಯು, ಯಕ್ಷರಾಕ್ಷಸರ ತಾಯಿಯಾದ ಖಸದೇವಿಯಂತಿರುವವನು, ಅರ್ಧಪರಶುವನ್ನು ಧರಿಸಿರುವವನು. ಕತ್ತರಿಸಲ್ಪಟ್ಟ ಮೇಘಗಳುಳ್ಳವನು, ಶತ್ರುಸಮೂಹವನ್ನು ನಾಶಗೊಳಿಸಿದವನು, ಗಂಧರ್ವಗಣಗಳಿಗೆ ಪ್ರೀತಿಯಿಂದ ವರ್ತಿಸುವವನು, ಗಂಧಮಾದನಪರ್ವತವನ್ನು ನಾಶಗೊಳಿಸಿದವನು. ॥೨೭-೨೮॥

ಗಂಗಾಧರೋ ಗೋಗಣೇಶೋ ಗಣೇಶವರಪುತ್ರಕಃ ।
ಗತಿದೋ ಗದಹಾ ಗಂಧೀ ಗಂಧಮಾಲ್ಯವರಾರ್ಚಿತಃ ॥೨೯॥

ಗಗನಸ್ಥೋ ಗಣಪತಿರ್ಗಗನಾಭೋಗಭೂಷಗಃ ।
ಘಂಟಾಕರ್ಣಪ್ರಿಯೋ ಘಂಟೋ ಘಟಜಸ್ತುತಿಸುಪ್ರಿಯಃ ॥೩೦॥

ಘೋಟಕಪ್ರಿಯಪುತ್ರಶ್ಚ ಘರ್ಮಕಾಲೋ ಘನಾಕೃತಿಃ ।
ಘನವಾಹೋ ಘನಾಧ್ಯಕ್ಷೋ ಘನಘೋಷೋ ಘಟೇಶ್ವರಃ ॥೩೧॥

ಘಂಟಾನಾದಕರಪ್ರೀತೋ ಘಟೀಭೂತಮಹಾಗಿರಿಃ ।
ಚಂದ್ರಚೂಡಶ್ಚಂದ್ರಕರಶ್ಚಂದನಾರ್ದ್ರಶ್ಚತುಷ್ಪಥಃ ॥೩೨॥

---

ಗಂಗೆಯನ್ನು ಧರಿಸಿದವನು, ದೇವಗಣಗಳಿಗೆಲ್ಲಾ ಒಡೆಯನಾದವನು, ಗಣೇಶನನ್ನೇ ಶ್ರೇಷ್ಠಪುತ್ರನನ್ನಾಗಿ ಹೊಂದಿದವನು, ಸದ್ಗತಿಯನ್ನು ಕೊಡುವವನು, ಸಕಲರೋಗನಾಶಕನು, ಸುಗಂಧವಿಶಿಷ್ಟನು, ಗಂಧ, ಪುಷ್ಪ ಇವುಗಳಿಂದ ಪೂಜಿತನಾದವನು, ಗಗನದಲ್ಲಿ ನಿಂತಿರುವವನು, ಗಣಗಳಿಗೆಲ್ಲಾ ಅಧಿಪತಿಯು, ಗಗನವನ್ನೇ ದೇಹವನ್ನಾಗಿ ಮಾಡಿಕೊಂಡಿರುವವನು, ಶಿವನ ನಾಮವನ್ನು ಬಿಟ್ಟು ಮತ್ತಾವ ನಾಮಗಳನ್ನೂ ಕೇಳಬಾರದೆಂದು ಗಂಟೆಯನ್ನು ಕಿವಿಗೆ ಕಟ್ಟಿಕೊಂಡಿದ್ದ ಘಂಟಾಕರ್ಣನಿಗೆ ಪ್ರಿಯನಾದವನು, ಘಂಟಾಧಾರಿಯು, ಘಟೋದ್ಭವನಾದ ಅಗಸ್ತ್ಯ ಮಹರ್ಷಿಯಿಂದ ಬಹಳವಾಗಿ ಸ್ತುತನಾದವನು. ॥೨೯-೩೦॥

ಅಶ್ವಮುಖಿಯಾದ ಹಯಗ್ರೀವನಿಗೆ ಜನಕನಾಗಿರುವವನು, ಗ್ರೀಷ್ಮಋತುವಿನಂತೆ ಸಂತಾಪಜನಕನು, ಮೇಘದಂತೆ ಆಕಾರವುಳ್ಳವನು, ಮೇಘವಾಹನನು, ಮೇಘಗಳ ಅಧಿಪತಿಯು, ಮೇಘದಂತೆ ಧ್ವನಿಯುಳ್ಳವನು, ಘಟದಲ್ಲಿ ಶಿವಲಿಂಗರೂಪದಿಂದಿರುವವನು, ಘಂಟಾನಾದಕ್ಕೆ ಬಹಳ ಸಂತೋಷಪಡುವವನು, ಮಹಾಗಿರಿಯನ್ನೇ ಧನುಸ್ಸನ್ನಾಗಿ ಮಾಡಿಕೊಂಡಿರುವವನು, ಚಂದ್ರನನ್ನೇ ಶಿಖರದಲ್ಲಿ ಹೊಂದಿರುವವನು, ಚಂದ್ರನ ಕಿರಣಗಳಿಂದ ಕೂಡಿರುವವನು, ಚಂದನದಿಂದ ಲೇಪಿತನಾದವನು. ನಾಲ್ಕು ಮಾರ್ಗಗಳಿಂದ ಕೂಡಿದ ಚೌಕದಂತಿರುವವನು. ॥೩೧-೩೨॥

ಚಮಸೋದ್ಭೇದಮಧ್ಯಸ್ಥಶ್ಚಂಡಕೋಪಶ್ಚತುರ್ಮುಖಃ ।
ಚಕ್ಷುಶ್ಶ್ರೋತ್ರಮಹಾಹಾರಶ್ಚಂಡಿಕೇಶವರಪ್ರದಃ ॥೩೩॥

ಚೇತೋ ಜನ್ಮಹರಶ್ಚಂಡಶ್ಚಾತುರ್ಹೋತ್ರಪ್ರಿಯಶ್ಚರಃ ।
ಚತುರ್ಮುಖಮುಖಸ್ತುತ್ಯಶ್ಚತುರ್ವೇದಶ್ಚರಾಚರಃ ॥೩೪॥

ಚಂಡಭಾಸುಕರಾಂತಸ್ಥಶ್ಚತುರ್ಮೂರ್ತಿವಪುಸ್ಸ್ಥಿತಃ ।
ಛಾದಿತಾನೇಕಲೋಕಾದಿಛ್ಛಂದಸಾಂ ಗಣಮಧ್ಯಗಃ ॥೩೫॥

ಛತ್ರಚಾಮರಶೋಭಾಢ್ಯಶ್ಛಾಂದೋಗ್ಯಗತಿದಾಯಕಃ ।
ಜಂಗಮಾಜಂಗಮಾಕಾರೋ ಜಗನ್ನಾಥೋ ಜಗದ್ಗತಃ ॥೩೬॥

ಜಹ್ನುಕನ್ಯಾಜಟೋ ಜಪ್ಯೋ ಜೇತಾ ಜತ್ರುರ್ಜನಾರ್ತಿಹಾ ।
ಜಂಭಾರಾತಿರ್ಜನಪ್ರೀತೋ ಜನಕೋ ಜಾವಿಕೋವಿದಃ ॥೩೭॥

---

ಚಮಸಪಾತ್ರೆ (ಯಾಜ್ಞಿಯಪಾತ್ರೆ)ಯ ಮಧ್ಯದಲ್ಲಿ ಅಡಗಿರುವವನು, ಉಗ್ರವಾದ ಕೋಪವುಳ್ಳವನು. ನಾಲ್ಕು ಮುಖಗಳುಳ್ಳ ಬ್ರಹ್ಮನಿಗೆ ಸದೃಶನು, ಸರ್ಪವನ್ನೇ ಹಾರವನ್ನಾಗಿ ಉಳ್ಳವನು, ಚಂಡಿಕೇಶನಿಗೆ ವರಪ್ರದಾನಮಾಡಿದವನು, ಮನೋಭವನಾದ ಮನ್ಮಥನನ್ನು ಧ್ವಂಸಮಾಡಿದವನು, ಯಜಮಾನನಿಗೆ ಪ್ರಿಯನಾಗಿ ವರ್ತಿಸುವವನು, ಬ್ರಹ್ಮನಿಂದಲೂ ಸ್ತುತನಾದವನು, ಚತುರ್ವೇದಸ್ವರೂಪಿಯು, ಚರಾಚರರೂಪಿಯು. ॥೩೩-೩೪॥

ಸೂರ್ಯಕಿರಣಾಂತಃಪಾತಿಯಾದವನು, ನಾಲ್ಕುವಿಧವಾದ ಪುರುಷಾರ್ಥಗಳೆಂಬ ಆಕಾರಗಳನ್ನು ಪಡೆದವನು, ಅನೇಕ ಲೋಕಗಳನ್ನೂ ಆಚ್ಛಾದನೆಮಾಡಿರುವವನು, ವೇದರಾಶಿಮಧ್ಯವರ್ತಿಯು. ಛತ್ರಿ, ಚಾಮರ ಮುಂತಾದವುಗಳಿಂದ ಅಲಂಕೃತನಾದವನು. ಛಾಂದೋಗ್ಯೋಪನಿಷತ್ತಿನಿಂದ ಸ್ತುತನಾಗಿ ಅವರಿಗೆ ಮೋಕ್ಷವನ್ನು ಕೊಡುವವನು. ಸ್ಥಾವರಜಂಗಮಾತ್ಮಕನಾಗಿರುವವನು. ಸಕಲ ಜಗತ್ತಿಗೂ ಒಡೆಯನೆನಿಸಿದವನು. ಜಗದ್ವ್ಯಾಪಿಯು. ॥೩೫-೩೬॥

ಜಾಹ್ನವಿಯನ್ನು (ಗಂಗೆಯನ್ನು) ಜಡೆಯಲ್ಲಿ ಧರಿಸಿರುವವನು. ಜಪಕ್ಕೆ ಯೋಗ್ಯನಾದವನು. ಸಕಲರನ್ನೂ ಜಯಿಸಿದವನು. ದೀನಜನರ ದುಃಖವನ್ನು ಹೋಗಲಾಡಿಸಿದವನು. ಜಂಭಾಸುರನಿಗೆ ದ್ವೇಷಿಯಾಗಿದ್ದವನು. ಸಕಲ ಜನರಿಗೂ

ಜನಾರ್ದನಾರ್ದನೋ ಜಾಮಿಜಾತ್ಯಾದಿ ಪರಿವರ್ಜಿತಃ ।
ಝುಣಝುಣಾಂಘ್ರಿಜಾರಾವೋ ಝುಂಕಾರೋಜ್ಝಿತದುಷ್ಕ್ರಿಯಃ ॥೩೮॥

ಟಂಪ್ರಿಯಷ್ಟಂಕೃತಿಷ್ಟಂಕಷ್ಟಂಕಭೇದೀ ಟಕಾರಕಃ ।
ಟಾದಿವರ್ಣಪ್ರಿಯಷ್ಟಾಂತ ಠಕ್ಕಾನಾದಪ್ರಿಯೋ ರಸಃ ॥೩೯॥

ಡಾಮರೀ ತಂತ್ರಮಧ್ಯಸ್ಥೋ ಡಮರುಧ್ವನಿಶೋಭಿತಃ ।
ಢಕ್ಕಾಧ್ವನಿಕೃತಾನಲ್ಪಬಧಿರೀಕೃತದಿಙ್ಮುಖಃ ॥೪೦॥

ಣಕಾರೋ ಣಣುಕೋತ್ಥಾದಿರ್ಣಾಂತಕೃಣ್ಣತಿನೋಚಕಃ ।
ತಸ್ಕರಸ್ತಾಮ್ರಕಸ್ತಾರ್ಕ್ಷ್ಯಸ್ತಾಮಸಾದಿಗುಣೋಜ್ಝಿತಃ ॥೪೧॥

ತರುಮೂಲಪ್ರಿಯಸ್ತಾತಸ್ತಮಸಾಂ ನಾಶಕಸ್ತಟಃ ।
ಥಾನಾಸುರ ಹರಃಸ್ಥಾತಾ ಸ್ಥಾಣುಃ ಸ್ಥಾನಪ್ರಿಯಸ್ಸ್ಥಿರಃ ॥೪೨॥

---

ಪ್ರೀತಿತೋರುವವನು. ಸಕಲ ಲೋಕಕ್ಕೂ ಪಿತೃಸ್ಥಾನನು. ಸಕಲ ಪ್ರಾಣಿಗಳ ಅಂತಸ್ಸತ್ವವನ್ನೆಲ್ಲಾ ತಿಳಿದವನು. ಜನಾರ್ದನನೆನಿಸಿದ ವಿಷ್ಣುವನ್ನೂ ಜಯಿಸಿದವನು. ಜಾತ್ಯಾದಿಹೀನವಾದವನು. ಝುಣ ಝುಣವೆಂಬ ಗೆಜ್ಜೆಗಳ ಧ್ವನಿಯಿಂದ ಕೂಡಿದ ಪಾದಗಳುಳ್ಳವನು. ಝುಂಕಾರದಿಂದಲೇ ಸಕಲ ಪಾಪರಾಶಿಯನ್ನೂ ನಿರ್ಮೂಲವಮಾಡಿದವನು. ॥೩೭-೩೮॥

ಟಂಕಾರದಲ್ಲಿ ಆಸೆಯುಳ್ಳವನು. ಪ್ರಪಂಚನಿರ್ಮಾಣಕರ್ತನು. ಟಂಕಾಯುಧರೂಪಿಯು. ಟಂಕಾಯುಧವನ್ನು ಭೇದಿಸುವವನು. ಟಕಾರಾದಿಯಾದ ಟಕಾರಾಂತವಾದ ವರ್ಣರಾಶಿಗಳಲ್ಲಿ ಪ್ರಿಯನೆನಿಸಿದವನು. ಠಕ್ಕಾವಾದ್ಯದಲ್ಲಿ ಪ್ರೀತಿಯುಳ್ಳವನು. ಸರ್ವ ರಸರೂಪಿಯು. ಡಾಮರಿಯೆಂಬ ಶಕ್ತಿದೇವತೆಯಿಂದ ಆವೃತನಾದವನು. ಡಮರುಧ್ವನಿಯಿಂದ ಶೋಭಿತನಾದವನು. ಢಕ್ಕಾಧ್ವನಿಯಿಂದ ಸಕಲ ದಿಕ್ಕುಗಳನ್ನೂ ಕಿವುಡಾಗಿಸಿದವನು. ॥೩೯-೪೦॥

ಣಕಾರರೂಪಿಯು. ಅಣುರೂಪಿಯು. ಣಕಾರಾಂತವಾದ ಅಪರ್ಣಾ, ಅರುಣ ಇವರಿಗೆ ಪ್ರಿಯನಾದವನು. ನತಿಯಿಂದ ಭಕ್ತರ ಪಾಪಗಳನ್ನು ಕಳೆಯುವವನು. ತಸ್ಕರರೂಪಿಯು. ರಕ್ತವರ್ಣವಿಶಿಷ್ಟನು. ಗರುಡಪಕ್ಷಿಯ ರೂಪಿಯು. ತಾಮಸವೇ ಮೊದಲಾದ ಗುಣಗಳಿಂದ ದೂರನಾದವನು. ವೃಕ್ಷದ ಬುಡದಲ್ಲಿ ಪ್ರೀತಿಯಿಂದ

ದಾತಾ ದಾನಪತಿರ್ದಾಂತೋ ದಂದಶೂಕವಿಭೂಷಿತಃ ।
ದರ್ಶನೀಯೋ ದೀನದಯೋ ದಂಡಿತಾರಾತಿಮಂಡಲಃ ॥೪೩॥

ದಕ್ಷಯಜ್ಞಹರೋ ದೇವ ದಾನವಾದಿರ್ದವೋದಯಃ ।
ದತ್ತಾತ್ರೇಯಪ್ರಿಯೋ ದಂಡೀ ದಾಡಿಮೀಕುಸುಮಪ್ರಿಯಃ ॥೪೪॥

ಧಾತಾ ಧನಾಧಿಪಸಖೋ ಧನಧಾನ್ಯಪ್ರದೋ ಧನುಃ
ಧಾಮಪ್ರದೋಂಧಸಾಂ ನಾಥೋ ಧರ್ಮಬಾಹುರ್ಧನುರ್ಧರಃ ॥೪೫॥

ನಮಸ್ಕಾರಪ್ರಿಯೋ ನಾಥೋ ನಮಿತಾಶೇಷದುಃಖಹೃತ್ ।
ನಂದಿಪ್ರಿಯೋ ನರ್ಮಸಖೋ ನರ್ಮದಾತೀರಸಂಸ್ಥಿತಃ ॥೪೬॥

---

ನೆಲಸುವವನು. ಅಜ್ಞಾನನಾಶಕನು. ಸಮಸ್ತ ರಾಕ್ಷಸರ ಸ್ಥಾನವನ್ನೆಲ್ಲಾ ನಾಶ ಮಾಡುವವನು. ಸ್ಥಾಣುರೂಪಿಯು. ಸ್ಥಾನದಲ್ಲಿ ಅತ್ಯಂತಾಸಕ್ತನು. ಸ್ಥಿರ ರೂಪಿಯು. ॥೪೧-೪೨॥

ಭಕ್ತರಿಗೆ ಐಶ್ವರ್ಯವನ್ನು ಕೊಡುವವನು. ಸಕಲ ದಾನಗಳಿಗೂ ಒಡೆಯನು. ಸಹನಶೀಲನು. ಸರ್ಪಭೂಷಿತನು. ಸುಂದರನು. ಬಡವರಲ್ಲಿ ದಯೆತೋರಿಸು ವವನು. ಸಕಲ ಶತ್ರುಸಮೂಹವನ್ನೂ ಶಿಕ್ಷಿಸುವವನು. ದಕ್ಷಬ್ರಹ್ಮನ ಯಾಗ ವನ್ನು ನಾಶಮಾಡಿದವನು. ದೇವ ರಾಕ್ಷಸರ ಗರ್ವನಾಶಕ್ಕೆ ಆವಿರ್ಭವಿಸಿದವನು. ದತ್ತಾತ್ರೇಯನಿಗೆ ಪ್ರಿಯನೆನಿಸಿದವನು. ದಂಡಧಾರಿಯು. ದಾಡಿಮೀಕುಸುಮದಲ್ಲಿ ಪ್ರೀತಿಯುಳ್ಳವನು. ॥೪೩-೪೪॥

ಜಗನ್ನಿರ್ಮಾಣಕನು. ಕುಬೇರನಿಗೆ ಸ್ನೇಹಿತನು. ಧನಧಾನ್ಯ ಇವುಗಳನ್ನು ಅನುಗ್ರಹಿಸುವವನು. ಧನೂರೂಪಿಯು. ತೇಜಸ್ಸನ್ನು ಅನುಗ್ರಹಿಸುವವನು. ಅಜ್ಞಾನಿಗಳಿಗೂ ಒಡೆಯನು. ಧರ್ಮವನ್ನೇ ಬಾಹುಗಳನ್ನಾಗಿ ಉಳ್ಳವನು. ಧನು ರ್ಧಾರಿಯು. ಭಕ್ತರ ನಮಸ್ಕಾರದಿಂದ ಪ್ರೀತನಾಗುವನು. ಜಗನ್ನಾಥನು. ನಮಸ್ಕಾರಮಾಡಿದವರ ಸಕಲ ದುಃಖಗಳನ್ನೂ ನಿವಾರಣೆಮಾಡುವವನು. ನಂದೀ ಶ್ವರನಿಗೆ ಪ್ರಿಯನಾದವನು. ಹಿತಮಿತ್ರನು. ನರ್ಮದಾತೀರವಾಸಿಯಾದವನು. ॥೪೫-೪೬॥

ನಂದನೋ ನಮು ಸಾಮೀಶೋ ನಾನಾರೂಪೋ ನದೀಗತಃ ।
ನಾಮಪ್ರೀತೋ ನಾಮರೂಪಗುಣಕರ್ಮವಿವರ್ಜಿತಃ ॥೪೭॥

ಪತ್ತೀನಾಂ ಚ ಪತಿಃ ಪಾರ್ಯೋ ಪರಮಾತ್ಮಾ ಪರಾತ್ಪರಃ ।
ಪಂಕಜಾಸನಪೂಜ್ಯಾಂಘ್ರಿಃ ಪದ್ಮನಾಭವರಪ್ರದಃ ॥೪೮॥

ಪನ್ನಗಾಧಿಪಸದ್ಧಾರಃ ಪಶೂನಾಂ ಪತಿಪಾವಕಃ ।
ಪಾಪಹಾ ಪಂಡಿತಃ ಪಾಂಥೋ ಪಾದಪೋನ್ಮದನಃ ಪರಃ ॥೪೯॥

ಫಣೀಫಣಲಸನ್ಮೌಲಿಃ ಫಣಿಕಂಕಣಸತ್ಕರಃ ।
ಫಣಿತಾನೇಕವೇದೋಕ್ತಿಃ ಫಣಿಮಾಣಿಕ್ಯಭೂಷಿತಃ ॥೫೦॥

ಬಂಧಮೋಚನಕೃದ್ಬಂಧುರ್ಬಂಧುರಾಲಕಶೋಭಿತಃ ।
ಬಲೀ ಬಲವತಾಂ ಮುಖ್ಯೋ ಬಲಿಪುತ್ರವರಪ್ರದಃ ॥೫೧॥

---

ಭಕ್ತರಿಗೆ ಸಂತೋಷಪ್ರದನು. ಭಕ್ತರಿಗೆ ಒಡೆಯನೆನಿಸಿದವನು. ನಾನಾರೂಪದಿಂದ ಕಾಣುವವನು. ನದೀಗತನಾದವನು. ಸ್ವನಾಮೋಚ್ಚಾರಣೆಯಿಂದ ಪ್ರೀತನಾದವನು. ನಾಮ, ರೂಪ, ಗುಣ, ಕರ್ಮ ಇವುಗಳಿಂದ ದೂರನಾದವನು. ಸಕಲ ಸೈನ್ಯಕ್ಕೂ ಅಧಿಪತಿಯು. ಸಂಸಾರವನ್ನು ದಾಟಿಸುವವನು. ಪರಮಾತ್ಮರೂಪಿಯು. ಪರಾತ್ಪರಸ್ವರೂಪನು. ಬ್ರಹ್ಮನಿಂದ ಪೂಜಿತವಾದ ಪಾದಪದ್ಮವುಳ್ಳವನು. ವಿಷ್ಣುವಿಗೆ ವರವನ್ನಿತ್ತವನು. ॥೪೭-೪೮॥

ಆದಿಶೇಷನನ್ನೇ ಹಾರವನ್ನಾಗಿ ಮಾಡಿಕೊಂಡಿರುವವನು. ಪಶುಸದೃಶರಾದ ಅಜ್ಞಾನಿಗಳನ್ನು ಪವಿತ್ರಗೊಳಿಸುವವನು. ಪಾಪನಿವಾರಕನು. ಸುಜ್ಞಾನಿಯು. ಪಥಿಕನು. ವೃಕ್ಷಾದಿಗಳನ್ನು ಪೋಷಿಸುವವನು. ಪರಾತ್ಪರನು. ಅನೇಕ ವೇದ ವಚನಗಳಿಂದ ಸ್ತುತ್ಯನಾದವನು. ನಾಗಮಣಿಗಳಿಂದ ಭೂಷಿತನಾದವನು. ॥೪೯-೫೦॥

ಬಂಧಗಳಿಂದ ಬಿಡಿಸುವ ಬಂಧುವು. ಮನೋಹರವಾದ ಮುಂಗುರುಳುಗಳಿಂದ ಶೋಭಿತನಾದವನು. ಬಲಿಷ್ಠನು. ಬಲಿಷ್ಠರಲ್ಲಿ ಮುಖ್ಯನಾದವನು. ಬಲಿಪುತ್ರನಾದ ಬಾಣಾಸುರನಿಗೆ ವರವನ್ನು ಕೊಟ್ಟವನು. ಬಾಣಾಸುರನಿಂದ ಪೂಜಿತ

ಬಾಣಾಸುರಸುಪೂಜ್ಯಾಂಘ್ರಿರ್ಬಾಣಲಿಂಗೋ ಬಹುಪ್ರದಃ ।
ಬಂದೀಕೃತಾಗಮೋ ಬಾಲಪಾಲಕೋ ಬಹುಶೋಭಿತಃ ॥೫೨॥

ಭವಾದಿರ್ಭವಹಾ ಭವ್ಯೋ ಭವೋ ಭಾವಪರಾಯಣಃ ।
ಭಯಹೃದ್ಭಯದೋ ಭೂತೋ ಭಂಡಾಸುರವರಪ್ರದಃ ॥೫೩॥

ಭಗಾಕ್ಷಿಮಥನೋ ಭರ್ಗೋ ಭವಾನೀಶೋ ಭಯಂಕರಃ ।
ಭಗಾಕಾರೋ ಭಾವಕರೋ ಭಸ್ಮಾಭ್ಯಕ್ತತನುರ್ಭಟಃ ॥೫೪॥

ಮಯಸ್ಕಾರೋ ಮಹಾದೇವೋ ಮಾಯಾವೀ ಮಾನಸಾಂತರಃ
ಮಾಯಾತೀತೋ ಮನ್ಮಥಾರಿರ್ಮಧುಪೋಥ ಮನೋನ್ಮನಃ ॥೫೫॥

ಮಧ್ಯಸ್ಥೋ ಮಧುಮಾಂಸಾತ್ಮಾ ಮನೋವಾಚಾಮಗೋಚರಃ ।
ಮಂಡಿತೋ ಮಂಡನಾಕಾರೋ ಮತಿದೋ ಮಾನಪಾಲಕಃ ॥೫೬॥

---

ವಾದ ಪಾದಪದ್ಮವುಳ್ಳವನು. ಬಾಣಲಿಂಗರೂಪಿಯು. ಬಹುಪ್ರದನಾದವನು. ಹೊಗಳುಭಟರಂತಿರುವ ವೇದಗಳಿಂದ ಸ್ತುತನಾದವನು. ಬಾಲರನ್ನು ಪಾಲಿಸುವವನು. ಬಹುವಾಗಿ ಶೋಭಿಸುವವನು. ॥೫೧-೫೨॥

ಸ್ವಯಂಉತ್ಪತ್ತಿಯನ್ನು ತಾಳುವವನು. ಸಂಸಾರದುಃಖವನ್ನು ನಿವಾರಿಸುವವನು. ಸುಂದರನು. ಉತ್ಪತ್ತಿಶೀಲನು. ಭಕ್ತಿಗೆ ಪ್ರಿಯನಾದವನು. ಭಯನಿವಾರಕನು. ಭಯಪ್ರದನು. ಭೂತಹಿತೈಷಿಯು. ಭಂಡಾಸುರನಿಗೆ ವರವಿತ್ತವನು. ಭಗದೇವನ ಕಣ್ಣುಗಳನ್ನು ಕಿತ್ತವನು. ಜ್ಯೋತೀರೂಪಿಯು. ಭವಾನೀ ಪತಿಯು. ಭಯಂಕರನು. ಯೋನಿಯ ಆಕಾರದಲ್ಲಿರುವವನು. ಭಕ್ತಿಭಾವವನ್ನುಂಟುಮಾಡುವವನು. ಭಸ್ಮಲೇಪಿತದೇಹಿಯು. ಶೂರಸೈನಿಕನು. ॥೫೩-೫೪॥

ಭಕ್ತರಿಗೆ ಸುಖವನ್ನು ಒದಗಿಸುವವನು. ಮಹಾದೇವನು. ಮಾಯಾವೃತನಾಗುವವನು. ಸಕಲರ ಮನಸ್ಸಿನಲ್ಲಿಯೂ ಅಡಗಿರುವವನು. ಮಾಯೆಗೆ ಒಳಪಡದವನು. ಮನ್ಮಥನಾಶಕನು. ಮಧುಪ (ಭ್ರಮರ) ದಂತೆ ಗುಣಗ್ರಾಹಿಯು. ಮನಸ್ಸಿನಲ್ಲಿಯೇ ಜನಿಸುವವನು. ಹೃದಯಮಧ್ಯದಲ್ಲಿರುವವನು. ಮಧು ಮತ್ತು ಮಾಂಸ ಏತದಾತ್ಮಕನು. ಮನಸ್ಸಿಗೂ ಮಾತಿಗೂ ಗೋಚರನಾದವನು. ಅಲಂಕೃತನು. ಅಲಂಕಾರಸ್ವರೂಪನು. ಬುದ್ಧಿಪ್ರದನು. ಮರ್ಯಾದೆಯನ್ನು ರಕ್ಷಿಸಿಕೊಂಡಿರುವವನು. ॥೫೫-೫೬॥

ಮನಸ್ವೀ ಮನುರೂಪಶ್ಚ ಮಂತ್ರಮೂರ್ತಿರ್ಮಹಾಹನುಃ ।
ಯಶಸ್ಕರೋ ಯಂತ್ರರೂಪೋ ಯಮಿಮಾನಸಪಾವನಃ ॥೫೭॥

ಯಮಾಂತಕರಣೋ ಯಾಮೀ ಯಜಮಾನೋ ಯದುರ್ಯಮೀ ।
ರಮಾನಾಥಾರ್ಚಿತಪದೋ ರಮ್ಯೋ ರತಿವಿಶಾರದಃ ॥೫೮॥

ರಂಭಾಪ್ರೀತೋ ರಸೋ ರಾತ್ರಿಚರೋ ರಾವಣಪೂಜಿತಃ ।
ರಂಗಪಾದೋ ರಂತಿದೇವೋ ರವಿಮಂಡಲಮಧ್ಯಗಃ ॥೫೯॥

ರಥಂತರಸ್ತುತೋ ರಕ್ತಪಾನೋ ರಥಪತೀರಜಃ ।
ಲತಾತ್ಮಕೋ ಲಂಬಹನುರ್ಲಾಂಗಲೀಲೋಲಗಂಡಕಃ ॥೬೦॥

ಲಲಾಮಸೋಮೋ ಲೂತಾದಿರ್ಲಲಿತಾಪೂಜಿತೋ ಲವಃ ।
ವಾಮನೋ ವಾಯುರೂಪಶ್ಚ ವರಾಹಮಥನೋ ವಟುಃ ॥೬೧॥

---

ಶೂರನು. ಮಂತ್ರರೂಪಿಯು. ಮಂತ್ರಕಾರನು. ಬಲಿಷ್ಠವಾದ ದವಡೆಯುಳ್ಳವನು. ಕೀರ್ತಿಕರನು. ಯಂತ್ರರೂಪಿಯು. ಜಿತೇಂದ್ರಿಯರಾದ ಮುನಿಗಳ ಮನಸ್ಸಿನಲ್ಲಿ ಅಡಗಿರುವವನು. ಯಮನನ್ನು ಸೋಲಿಸಿದವನು. ಯಮಸದೃಶನು. ಅಥವಾ ಪ್ರತಿ ಯಾಮದಲ್ಲಿಯೂ ಪೂಜಿತನಾದವನು. ಯಜಮಾನರೂಪಿಯು. ಯದುವಂಶದವನು. ಜಿತೇಂದ್ರಿಯನು. ವಿಷ್ಣುವಿನಿಂದ ಪೂಜಿತವಾದ ಪಾದಪದ್ಮವುಳ್ಳವನು. ಮನೋಹರನು. ರತಿಯಲ್ಲಿ ಪೂರ್ಣ ಪಂಡಿತನು. ॥೫೭-೫೮॥

ರಂಭಾನೃತ್ಯಕ್ಕೆ ಪ್ರೀತನಾದವನು. ರಸರೂಪಿಯು. ರಾತ್ರಿಸಂಚಾರಕನು. ರಾವಣನಿಂದ ಪೂಜಿತನಾದವನು. ನಾಟ್ಯವಾಡುವ ಪಾದವುಳ್ಳವನು. ಆತ್ಮಾರಾಮನೂ, ಸ್ವಯಂಪ್ರಕಾಶಕನೂ ಆದವನು. ಸೂರ್ಯಮಂಡಲ ಮಧ್ಯವರ್ತಿಯು. ರಥಂತರವೆಂಬ ಸಾಮವೇದದಿಂದ ಸ್ತುತನಾದವನು. ರಕ್ತಪಾನಾಭಿಲಾಷಿಯು. ಸಕಲ ರಥಗಳಿಗೂ ಒಡೆಯನೆನಿಸಿದವನು. ರಜೋಗುಣರೂಪಿಯು. ಲತಾರೂಪಿಯು. ಜೋತಾಡುವ ದವಡೆಯುಳ್ಳವನು. ಲಾಂಗಲವೆಂಬ ಆಯುಧಧಾರಿಯು. ಚಂಚಲವಾದ ಕಪೋಲಪ್ರದೇಶವುಳ್ಳವನು. ॥೫೯-೬೦॥

ಶಿರೋಭಾಗದಲ್ಲಿ ಚಂದ್ರನುಳ್ಳವನು. ಪ್ರಪಂಚವನ್ನೇ ಮೊದಲು ಸೃಜಿಸುವವನು. ಪಾರ್ವತಿಯಿಂದ ಪೂಜಿತನಾದವನು. ಅಣುರೂಪಿಯು. ಕುಬ್ಜನಾಗಿ

ವಾಕ್ಯಜಾತೋ ವರೋ ವಾರ್ಯೋ ವರುಣೇಡ್ಯೋ ವರಾಶ್ರಯಃ ।
ವಪುರ್ಧರೋ ವರ್ಷವರೋ ವರೀಯಾನ್ವರದೋ ವರಃ ॥೬೨॥

ವಸುಪ್ರದೋ ವಸುಪತಿರ್ವಂದಾರುಜನಪಾಲಕಃ ।
ಶಾಂತಃ ಶಮಪರಃ ಶಾಸ್ತಾ ಶಮನಾಂತಕರಃ ಶಠಃ ॥೬೩॥

ಶಂಖಹಸ್ತಃ ಶತ್ರುಹಂತಾ ಶಮಿತಾಖಿಲದುಷ್ಕೃತಃ ।
ಶರಹಸ್ತಃ ಶತಾವರ್ತಃ ಶತಕ್ರತುವರಪ್ರದಃ ॥೬೪॥

ಶಂಭುಃ ಶಮ್ಯಾಕಪುಣ್ಯಾರ್ಚ್ಯಃ ಶಂಕರಶ್ಶತರುದ್ರಗಃ ।
ಶಮ್ಯಾಕರಃ ಶಾಂತಮನಾಃ ಶಾಂತಃ ಶಶಿಕಲಾಧರಃ ॥೬೫॥

---

ಕಾಣುವವನು. ವಾಯುರೂಪಿಯು. ಉಪನಿಷದ್ವಾಕ್ಯಗಳಿಂದ ತೋರುವವನು. ವಾಯುರೂಪಿಯು. ವರಾಹವನ್ನು ನಾಶಮಾಡುವವನು. ವಟುರೂಪಿಯು. ಉಪನಿಷದ್ವಾಕ್ಯಗಳಿಂದ ತೋರುವವನು. ಶ್ರೇಷ್ಠನಾದವನು. ಅಮಂಗಳವನ್ನು ತಡೆಯಲು ಅರ್ಹನಾದವನು. ವರುಣಪೂಜಿತನು. ಸಕಲ ವರಗಳಿಗೂ ಆಶ್ರಯನಾದವನು. ಶರೀರಧಾರಿಯು. ವೃಷ್ಟಿಪ್ರದನು. ಸಕಲ ದೇವತೆಗಳಿಗೂ ಶ್ರೇಷ್ಠನೆನಿಸಿದವನು. ವರಪ್ರದಾತನು. ಶ್ರೇಷ್ಠನಾದವನು. ॥೬೧-೬೨॥

ಭಕ್ತರಿಗೆ ದ್ರವ್ಯಪ್ರದಾನಮಾಡುವವನು. ನಿಧಿಪತಿಯು. ಭಕ್ತವೃಂದವನ್ನು ರಕ್ಷಿಸುವವನು. ಶಾಂತಸ್ವಭಾವದವನು. ಶಾಂತಿಪ್ರಿಯನು. ಯಮನಿಗೂ ಯಮನಂತಿರುವವನು. ಮೋಸಗಾರನಂತೆಯೂ ನಟಿಸುವವನು. ಹಸ್ತದಲ್ಲಿ ಶಂಖವನ್ನು ಹಿಡಿದಿರುವವನು. ಸಕಲ ಶತ್ರುಗಳನ್ನೂ ಧ್ವಂಸಮಾಡುವವನು. ಸಕಲ ಪಾಪಗಳನ್ನೂ ನಾಶಗೊಳಿಸುವವನು. ಬಾಣವನ್ನು ಕೈಯ್ಯಲ್ಲಿ ಧರಿಸಿಕೊಂಡಿರುವವನು. ಅನೇಕ ಸುಳಿಗಳುಳ್ಳ ಸಮುದ್ರದಂತಿರುವವನು. ಇಂದ್ರನಿಗೆ ವರಗಳನ್ನು ಕೊಟ್ಟವನು. ॥೬೩-೬೪॥

ಶಂಕರನು. ಶಾಂತಿಪ್ರಿಯರ ಪುಣ್ಯದಿಂದ ಅರ್ಚಿತನಾದವನು. ಸುಖಕರನು. ಶತರುದ್ರೀಯದಲ್ಲಿ ನಿರತನಾದವನು. ಶಾಂತಿಯನ್ನುಂಟುಮಾಡುವವನು. ಶಾಂತವಾದ ಮನಸ್ಸುಳ್ಳವನು. ಶಾಂತಪ್ರಿಯನು. ಚಂದ್ರಕಲಾಧರನು. ಗುಹನಿಗೆ ಗುರುವೆನಿಸಿದವನು. ನಪುಂಸಕನು ಅಥವಾ ಸಮೂಹಾತ್ಮಕನು. ಯಜನಯಾಜನಾದಿ

ಷಡಾನನಗುರುಃ ಷಂಡಃ ಷಟ್ಕರ್ಮನಿರತೋ ಷಗುಃ ।
ಷಡ್ಗಾದಿರಸಿಕಷ್ಷಷ್ಠಃ ಷಷ್ಠೀಪ್ರೀತಃ ಷಡಂಗವಾನ್ ॥೬೬॥

ಷಡೂರ್ಮಿರಹಿತಃ ಷಷ್ಪ್ಯಃ ಷಿಡ್ಭ್ಯಃ ಷಾಡ್ಗುಣ್ಯದಾಯಕಃ ।
ಸತ್ಯಪ್ರಿಯಃ ಸತ್ಯಧಾಮಾ ಸಂಸಾರರಹಿತಃ ಸಮಃ ॥೬೭॥

ಸಖಾಸಂಧಾನಕುಶಲಃ ಸರ್ವಸಂಪತ್ಪ್ರದಾಯಕಃ ।
ಸಂಗರಃ ಸಾಗರಾಂತಸ್ಥಃ ಸತ್ರಾಶಃ ಸರಣಃ ಸ ಹ ॥೬೮॥

ಸಾಂಬಸ್ಸನಾತನಸ್ಸಾಧುಃ ಸಾರಾಸಾರವಿಶಾರದಃ ।
ಸಾಮಗಾನಪ್ರಿಯಸ್ಸಾರಃ ಸರಸ್ವತ್ಯಾ ಸುಪೂಜಿತಃ ॥೬೯॥

ಹರಾರಾತಿರ್ಹಂಸಗತಿರ್ಹಾಹಾಹೂಹೂಸ್ತುತಿಪ್ರಿಯಃ ।
ಹರಿಕೇಶೋ ಹರಿದ್ರಾಗೋ ಹರಿನ್ಮಣಿಸರೋಹಲಃ ॥೭೦॥

---

ಷಟ್ಕರ್ಮನಿರತನು. ಷಟ್‌ಶಾಸ್ತ್ರಗಳಲ್ಲಿ ರಸಿಕನೆನಿಸಿದವನು. ಷಡ್ಗುಣಪೂರಿತನು. ಷಷ್ಠೀತಿಥಿಯಲ್ಲಿ ಪ್ರೀತನು. ವೇದದ ಷಡಂಗಗಳಲ್ಲಿ ನಿರತನಾದವನು. ॥೬೫-೬೬॥

ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು, ಮರಣ ಮುಂತಾದ ಷಡೂರ್ಮಿಗಳನ್ನು ಹೊಂದದಿರುವವನು. ಬಾಲತೃಣರೂಪಿಯು. (ಷಡ್ಭ್ಯಃ.) ವ್ಯಾಪಿಸಲ್ಪಡುವ ತೇಜಸ್ಸುಳ್ಳವನು. ಷಡ್ಗುಣೈಶ್ವರ್ಯದಾಯಕನು. ಸತ್ಯದಲ್ಲಿ ಆಸೆಯುಳ್ಳವನು. ಸತ್ಯವನ್ನೇ ಕಾಂತಿಯನ್ನಾಗಿ ಉಳ್ಳವನು. ಸಂಸಾರಬಂಧನಕ್ಕೆ ದೊರಕದವನು, ಸಮಸ್ವಭಾವದವನು, ಸ್ನೇಹಿತನಂತಿರುವವನು, ಸಂಧಾನಕಾರ್ಯದಲ್ಲಿ ನಿಪುಣನಾದವನು, ಸಕಲ ಸಂಪತ್ತುಗಳನ್ನೂ ಒದಗಿಸಿಕೊಡುವವನು, ಯುದ್ಧರೂಪಿಯು, ಸಾಗರಮಧ್ಯವರ್ತಿಯು, ಅನ್ನಸತ್ರಾದಿಗಳಲ್ಲಿ ಪ್ರೀತಿಯನ್ನಿಟ್ಟಿರುವವನು, ರಣಾಭಿಲಾಷಿಯು. ॥೬೭-೬೮॥

ಪಾರ್ವತೀಪತಿಯು, ಆದಿಪುರುಷನು, ಸತ್ಪುರುಷನು, ಸಾರ ಮತ್ತು ಅಸಾರ ವಸ್ತುಗಳ ಸ್ವರೂಪವನ್ನರಿತವನು, ಸಾಮಗಾನಪ್ರಿಯನು, ಸಾರಪುರುಷನು, ಸರಸ್ವತಿಯಿಂದ ಪೂಜಿತನಾದವನು, ಸಕಲ ಶತ್ರುನಾಶಕನು, ಹಂಸದಂತೆ ಗತಿಯುಳ್ಳವನು, ಹಾ ಹಾ ಹೂ ಹೂ ಎಂಬ ದೇವತೆಗಳಿಂದ ಸ್ತುತ್ಯನಾದವನು, ಹಸುರುಬಣ್ಣದ ಎಲೆಗಳುಳ್ಳ ವೃಕ್ಷದಂತಿರುವವನು, ಹರಿದ್ವರ್ಣವಿಶಿಷ್ಟನಾದವನು, ಇಂದ್ರನೀಲಮಣಿಯ ಸರೋವರದಂತಿರುವವನು, ಹಲಾಯುಧರೂಪಿಯು ॥೬೯-೭೦॥

ಹರಿಪೂಜ್ಯೋ ಹರೋ ಹಾರ್ಯೋ ಹರಿಣಾಂಕಶಿಖಂಡಕಃ ।
ಹಾಹಾಕಾರಾದಿರಹಿತೋ ಹನುನಾಸೋ ಹಹಂಕೃತಃ ॥೨೦॥

ಲಾಲಾನನೋ ಲತಾಸೋಮೋ ಲಕ್ಷ್ಮೀಕಾಂತವರಪ್ರದಃ ।
ಲಂಬೋದರಗುರುರ್ಲಭ್ಯೋ ಲವಲೀಶೋ ಲುಲಾಯಗಃ ॥೨೧॥

ಕ್ಷಯದ್ವೀರಃ ಕ್ಷಮಾಯುಕ್ತೋ ಕ್ಷಯಾದಿರಹಿತಃ ಕ್ಷಮೀ ।
ಕ್ಷತ್ರಿಯಾಂತಕರಃ ಕ್ಷಾಂತಃ ಕ್ಷಾತ್ರಧರ್ಮಪ್ರವರ್ತಕಃ ೨೩॥

ಕ್ಷಯಿಷ್ಣುರ್ವರ್ಧನಃ ಕ್ಷಾಂತಃ ಕ್ಷಪಾನಾಥಕಲಾಧರಃ ।
ಕ್ಷಪಾದಿಪೂಜನಪ್ರೀತಃ ಕ್ಷಪಣಾಂತಃ ಕ್ಷರಾಕ್ಷರಃ ॥೨೪॥

ರುದ್ರೋ ಮನ್ಯುಃ ಸುಧನ್ವಾ ಚ ಬಾಹುಮಾನ್ ಪರಮೇಶ್ವರಃ
ಸ್ವಿಷುಃ ಸ್ವಿಷ್ಟಕೃದೀಶಾನೋ ಶರವ್ಯಾಧಾರಕೋ ಯುವಾ ॥೨೫॥

---

ವಿಷ್ಣುವಿನಿಂದ ಪೂಜಿತನು. ಪಾಪಹಾರಕನು. ಹರಭಕ್ತರಿಂದ ಪೂಜಿತನು. ಚಂದ್ರಶೇಖರನು. ಹಾಹಾಕಾರಾದಿಗಳಿಲ್ಲದವನು. ದವಡೆ ಮೂಗು ಇವುಗಳಿಂದ ಸುಂದರನೆನಿಸಿದವನು. ಅಹಂಕಾರದಿಂದ ಕೂಡಿದವನು. ಜೊಲ್ಲಿನಿಂದ ತುಂಬಿದ ಮುಖವುಳ್ಳವನು. ಸೋಮಲತಾಸ್ವರೂಪನು. ಲಕ್ಷ್ಮೀಕಾಂತನಾದ ವಿಷ್ಣುವಿಗೆ ವರವನ್ನು ಕೊಟ್ಟವನು. ಗಣಪತಿಗೆ ಗುರುವೆನಿಸಿದವನು. ಸುಕೃತಿಗಳಿಗೆ ಮಾತ್ರ ಲಭ್ಯನು. ಲವಲೀಶಸ್ವರೂಪಿಯು. ಮಹಿಷವಾಹನನು. ॥೨೦-೨೧॥

ನಮ್ಮ ಪಾಪಗಳನ್ನೆಲ್ಲಾ ನಾಶಮಾಡುವವನು. ತಾಳ್ಮೆಯಿಂದ ಕೂಡಿದವನು. ಕ್ಷಯರಹಿತನಾದವನು. ಕ್ಷಮಾಯುಕ್ತನು. ಕ್ಷತ್ರಿಯಾಂತಕರನು. ತಾಳ್ಮೆಯುಳ್ಳವನು. ಕ್ಷತ್ರಧರ್ಮಪ್ರವರ್ತಕನು. ಕ್ಷಯಶೀಲನು. ವೃದ್ಧಿಹೊಂದುವ ಸ್ವಭಾವದವನು. ಕ್ಷಕಾರಾಂತವಾದ ವರ್ಣಗಳಲ್ಲಿ ಅಡಗಿರುವವನು. ಚಂದ್ರಕಲಾಧಾರಿಯು. ಪ್ರದೋಷ ಪೂಜೆಯಲ್ಲಿ ಪ್ರೀತನಾಗುವನು. ಸರ್ವನಾಶಕನು. ನಾಶ ಮತ್ತು ಸ್ಥಿರಸ್ವಭಾವ ಇವುಗಳುಳ್ಳವನು. ॥೨೩-೨೪॥

ಭಯಂಕರರೂಪಿಯು. ಕೋಪರೂಪದಿಂದಿರುವವನು. ಶ್ರೇಷ್ಠವಾದ ಧನುಸ್ಸುಳ್ಳವನು. ಬಲಿಷ್ಠವಾದ ಬಾಹುವುಳ್ಳವನು. ಪರಶಿವಸ್ವರೂಪನು. ಶೋಭನವಾದ ಬಾಣಗಳುಳ್ಳವನು. ಈಶ್ವರರೂಪಿಯು. ಬಾಣರಾಶಿಯನ್ನು ಸರ್ವದಾ ಹೊತ್ತಿರುವ

ಅಘೋರಸ್ತನುಮಾನ್ ದೇವೋ ಗಿರೀಶಃ ಪಾಕಶಾಸನಃ ।
ಗಿರಿತ್ರಃ ಪುರುಷಃ ಪ್ರಾಣಃ ಪಂಚಪ್ರಾಣಪ್ರವರ್ತಕಃ ॥೭೬॥

ಅಧ್ಯವೋಚೋ ಮಹಾದೇವ ಅಧಿವಕ್ತಾ ಮಹೇಶ್ವರಃ ।
ಈಶಾನಃ ಪ್ರಥಮೋ ದೇವೋ ಭಿಷಜಾಂಪತಿರೀಶ್ವರಃ ॥೭೭॥

ತಾಮ್ರೋರುಣೋ ವಿಶ್ವನಾಥೋ ಬಭ್ರುಶ್ಚೈವ ಸುಮಂಗಲಃ ।
ನೀಲಗ್ರೀವಃ ಶಿವೋ ಹೃಷ್ಟೋ ದೇವದೇವೋ ವಿಲೋಹಿತಃ ॥೭೮॥

ಗೋಪವಶ್ಯೋ ವಿಶ್ವಕರ್ತಾ ಉದಹಾರ್ಯಜನೇಕ್ಷಣಃ ।
ವಿಶ್ವದೃಷ್ಟಃ ಸಹಸ್ರಾಕ್ಷೋ ಮೀಢುಷ್ಟೋ ಭಗವಾನ್ ಪರಃ ॥೭೯॥

ಶತೇಷುಧಿಃ ಕಪರ್ದೀ ಚ ಭೀಮೋ ಮೀಢುಷ್ಟಮೋ ಭವಃ ।
ಅನಾತತಶ್ಚಾತಿಧೃಷ್ಣುಃ ಸತ್ವತಾಂ ರಕ್ಷಕಃ ಪ್ರಭುಃ ॥೮೦॥

---

ವನು. ಯುವಕನು. ಭಯಂಕರನಲ್ಲದವನು. ಪ್ರಶಸ್ತವಾದ ದೇಹವುಳ್ಳವನು. ದೇವದೇವನು. ಪರ್ವತದಲ್ಲಿ ಮಲಗುವವನು. ಪಾಕಶಾಸನನೆನಿಸಿದ ಇಂದ್ರರೂಪನು. ಪರ್ವತಗಳನ್ನು ಕಾಪಾಡುವವನು. ಪುರುಷರೂಪಿಯು. ಪ್ರಾಣಸ್ವರೂಪನು. ಪಂಚಪ್ರಾಣಗಳನ್ನು ನಡೆಸುವವನು. ॥೭೫-೭೬॥

ಎಲ್ಲರಿಗಿಂತಲೂ ದೊಡ್ಡವನೆಂದು ಹೇಳಿಸಿಕೊಳ್ಳುವವನು. ಮಹಾದೇವನು. ಶ್ರೇಷ್ಠವಾದ ಮಾತುಗಳನ್ನಾಡುವವನು. ಸರ್ವೇಶ್ವರನು. ಈಶಾನಸ್ವರೂಪಿಯು. ಆದಿದೇವನು. ವೈದ್ಯಶ್ರೇಷ್ಠನು. ಸರ್ವರಿಗೂ ಒಡೆಯನು. ತಾಮ್ರವರ್ಣದವನು. ಅರುಣರೂಪಿಯು. ವಿಶ್ವಕ್ಕೆ ಒಡೆಯನು. ಪಿಂಗಳವರ್ಣದವನು. ಕೆಂಪುಬಣ್ಣದವನು. ನಾನಾವರ್ಣವಿಶಿಷ್ಟನು. ನೀಲವರ್ಣದಕಂಠ ಪ್ರದೇಶವುಳ್ಳವನು. ಶುಭಕರನು. ಸಂತುಷ್ಟಾತ್ಮಕನು. ದೇವದೇವನು. ॥೭೭-೭೮॥

ವೇದಶಾಸ್ತ್ರಸಂಸ್ಕಾರಬಾಹಿರರಾದ ಗೋಪಾಲಕರಿಗೂ ವಶನಾಗುವವನು. ವಿಶ್ವಸೃಷ್ಟಿಕರ್ತನು. ನೀರನ್ನು ಹೊರುವ ಸ್ತ್ರೀಯರಿಗೂ ಗೋಚರಿಸತಕ್ಕವನು. ಪ್ರಪಂಚದಿಂದ ನೋಡಲ್ಪಡುವವನು. ಮೇಘರೂಪದಿಂದ ವೃಷ್ಟಿಪ್ರದನು. ಷಡ್ಗುಣೈಶ್ವರ್ಯಸಂಪನ್ನನು. ಪರಾಪರರೂಪಿಯು. ಅನೇಕ ಬತ್ತಳಿಕೆಗಳುಳ್ಳವನು. ಜಟಾಧಾರಿಯು. ಭಯಂಕರನು. ವೃಷ್ಟಿಪ್ರದನು. ಉತ್ಪತ್ತಿರಹಿತನು. ಧನುಸ್ಸಿಗೆ ಜೋಡಿಸದೆ ಬಾಣ

ವಿಶ್ವೇಶ್ವರೋ ಮಹಾದೇವಸ್ತ್ರ್ಯಂಬಕಸ್ತ್ರಿಪುರಾಂತಕಃ ।
ತ್ರಿಕಾಗ್ನಿಕಾಲಃ ಕಾಲಾಗ್ನಿಃ ರುದ್ರೋ ನೀಲೋಧಿಪೋನಿಲಃ ॥೮೧॥

ಸರ್ವೇಶ್ವರಸ್ಸದಾ ಶಂಭುಃ ಶ್ರೀಮಾನ್ ಮೃತ್ಯುಂಜಯಶ್ಶಿವಃ ।
ಸ್ವರ್ಣಬಾಹುಃ ಸ್ವರ್ಣಪಾಲೋ ದಿಶಾಧೀಶೋ ವನಸ್ಪತಿಃ ॥೮೨॥

ಹರಿಕೇಶಃ ಪಶುಪತಿರುಗ್ರಃ ಸಸ್ಪಿಂಜರೋಂತಕಃ ।
ತ್ವಿಷೀಮಾನ್ ಮಾರ್ಗಪೋ ಬಭ್ರುರ್ವಿವ್ಯಾಧಿಶ್ಚಾನ್ನಪಾಲಕಃ ॥೮೩॥

ಪುಷ್ಟೋ ಭವಾಧಿಪೋ ಲೋಕನಾಥೋ ರುದ್ರಃ ಸ ನಾಯಿಕಃ ।
ಕ್ಷೇತ್ರೇಶಃ ಸೂತಪೋ ಹಂತ್ಯೋ ವನಪೋ ರೋಹಿತಃ ಸ್ಥಪಃ ॥೮೪॥

---

ಗಳನ್ನು ಪ್ರಯೋಗಿಸುವವನು. ಸತ್ವಗುಣಪ್ರಧಾನರನ್ನು ರಕ್ಷಿಸುವವನು. ಲೋಕದೊಡೆಯನು. ॥೭೯-೮೦॥

ಲೋಕಕ್ಕೆ ಒಡೆಯನು. ದೇವತೆಗಳಿಗೆಲ್ಲಾ ದೊಡ್ಡವನು. ಮೂರುಕಣ್ಣುಗಳುಳ್ಳವನು. ತ್ರಿಪುರಗಳನ್ನು ನಾಶಮಾಡುವವನು. ಅಗ್ನಿತ್ರಯಗಳನ್ನೂ ತನ್ನಲ್ಲಿ ಅಡಗಿಸಿಕೊಂಡಿರುವವನು. ಪ್ರಲಯಕಾಲದಲ್ಲಿ ಅಗ್ನಿರೂಪಿಯು. ಭಯಂಕರಸ್ವರೂಪನು. ನೀಲವರ್ಣವಿಶಿಷ್ಟನು. ವಾಯುರೂಪಿಯು. ಸರ್ವಕ್ಕೂ ಯಜಮಾನನು. ಶುಭಕರನು. ಸಂಪದ್ಯುಕ್ತನು. ಮೃತ್ಯುವನ್ನು ಗೆದ್ದವನು. ಸುಖಕರನು. ಸುವರ್ಣಮಯವಾದ ಬಾಹುಗಳುಳ್ಳವನು. ಸುವರ್ಣವನ್ನು ರಕ್ಷಿಸುವವನು, ದಿಕ್ಪತಿಯು. ವನಮೂಲಿಕೆಗಳಿಗೆಲ್ಲಾ ಒಡೆಯನೆನಿಸಿದವನು. ॥೮೧-೮೨॥

ನೀಲವರ್ಣದ ಕೂದಲುಳ್ಳವನು. ಪಶುಗಳಿಗೆ ಒಡೆಯನು. ಭಯಂಕರನು. ಬಾಲತೃಣದಂತೆ ಶ್ಯಾಮಲವರ್ಣವುಳ್ಳವನು. ಯಮಸ್ವರೂಪಿಯು. ಕಾಂತಿಮತ್ಸ್ವರೂಪಿಯು. ಮುಕ್ತಿಮಾರ್ಗದ ಒಡೆಯನು. ಮಿಶ್ರವರ್ಣದವನು. ಶತ್ರುಗಳನ್ನು ಹೊಡೆಯುವವನು. ಆಹಾರವಸ್ತುಗಳನ್ನು ರಕ್ಷಿಸುವವನು. ಪುಷ್ಟನಾದವನು. ಸಂಸಾರಕ್ಕೆ ಒಡೆಯನಾದವನು. ಲೋಕದೊಡೆಯನು. ರುದ್ರರೂಪಿಯು. ಸಕಲಕ್ಕೂ ಅಧಿಪತಿಯೆನಿಸಿದವನು. ಕ್ಷೇತ್ರಗಳಿಗೆಲ್ಲಾ ಒಡೆಯನು. ಸೂತರನ್ನೆಲ್ಲಾ ರಕ್ಷಿಸುವವನು. ಪ್ರಳಯಕಾರಣನು. ವನಾಧಿಪತಿಯು. ಲೋಹಿತ (ಕೆಂಪು) ವರ್ಣವಿಶಿಷ್ಟನು. ಪ್ರಭುವಾದವನು. ॥೮೩-೮೪॥

ವೃಕ್ಷೇಶೋ ಮಂತ್ರಜೋ ವಾಣ್ಯೋ ಭುವಂತ್ಯೋ ವರಿವಸ್ಕೃತಃ ।
ಓಷಧೀಶೋ ಮಹಾಘೋಷಃ ಕ್ರಂದನಃ ಪತ್ತಿನಾಯಕಃ ॥೮೫॥

ಕೃತ್ಸ್ನವೀತೋ ಧಾವಮಾನಃ ಸತ್ವನಾಂ ಪತಿರವ್ಯಯಃ ।
ಸಹಮಾನೋಥ ನಿವ್ಯಾರ್ಧಿರವ್ಯಾಧಿಃ ಕಕುಭೋ ನಟಃ ॥೮೬॥

ನಿಷಂಗೀ ಸ್ತೇನಪಃ ಕಕ್ಷ್ಯೋ ನಿಚೇರುಃ ಪರಿಚಾರಕಃ ।
ಅರಣ್ಯಪಃ ಸೃಕಾವೀ ಚ ಜಿಘಾಂಸುರ್ಮುಷ್ಣಪೋಸಿವಾನ್ ॥೮೭॥

ನಕ್ತಂಚರಃ ಪ್ರಕೃಂತಶ್ಚ ಉಷ್ಣೀಷೀ ಗಿರಿಸಂಚರಃ ।
ಕುಲುಂಚೋ ಇಷುಮಾನ್ ಧನ್ವೀ ಆತನ್ವಾನ್ ಪ್ರವಿಧಾನವಾನ್॥೮೮

---

ಸಕಲ ವೃಕ್ಷಗಳಿಗೂ ಅಧಿಪತಿಯು. ಮಂತ್ರಾಲೋಚನೆಯಿಂದ ಕೂಡಿದವನು. ವಣಿಕ್ (ವೈಶ್ಯ) ಜನರ ಗುಂಪಿಗೆ ಒಡೆಯನು. ಭೂಮಿಯನ್ನು ವಿಸ್ತಾರಗೊಳಿಸು ವವನು. ಸಕಲ ಐಶ್ವರ್ಯವನ್ನೂ ಒದಗಿಸುವವನು. ವನಸ್ಪತಿಗಳಿಗೆ ಒಡೆಯನು. ಹೆಚ್ಚಾದ ಪ್ರತಿಧ್ವನಿಯುಳ್ಳವನು. ಆರ್ಭಟಿಸುವವನು. ಸಕಲ ಸೈನ್ಯಕ್ಕೂ ನಾಯಕ ನೆನಿಸಿದವನು. ಸೈನ್ಯಗಳಿಂದ ಪರಿವೃತನು. ತಾನೂ ಶತ್ರುಗಳನ್ನು ಹಿಂಬಾಲಿಸಿ ಓಡುವವನು. ಸಕಲ ಪ್ರಾಣಿಗಳಿಗೂ ಒಡೆಯನು. ನಾಶರಹಿತನು. ಸರ್ವವನ್ನೂ ಸಹಿಸುವವನು. ಶತ್ರುಗಳನ್ನು ಬಹಳವಾಗಿ ಹಿಂಸಿಸುವವನು. ವ್ಯಾಧಿರಹಿತನಾದ ವನು. ದಿಗ್ರೂಪಿಯು. ನಾಟ್ಯಾಚಾರ್ಯನು. ॥೮೫-೮೬॥

ಪ್ರಶಸ್ತವಾದ ಬತ್ತಳಿಕೆಯುಳ್ಳವನು. ಸಕಲ ಗುಪ್ತಚೋರರಿಗೂ ಒಡೆಯನು. (ಸ್ತೇನರೇ ಮೊದಲಾದ ದುಷ್ಟರ ಶರೀರದಲ್ಲಿ ಈಶ್ವರನು ಜೀವರೂಪದಿಂದ ಮತ್ತು ಈಶ್ವರರೂಪದಿಂದ ಎರಡುತೆರನಾಗಿರುವವನು. ಸ್ತೇನ, ಚೋರ ಮುಂತಾದ ಶಬ್ದಗಳಿಗೆ ವಾಚ್ಯವಾದವನು ಜೀವರೂಪಿಯು. ಅವನೇ ಶಾಸ್ತ್ರಗಳಲ್ಲಿ ನಿಂದ್ಯನಾದವನು. ಸ್ತೇನಾದಿ ಶಬ್ದಗಳಿಂದ ಉಪಲಕ್ಷಿತನಾಗುವ ಈಶ್ವರರೂಪಿಯು ಪೂಜ್ಯವಸ್ತುವು. ಅವನ ಸ್ಮರಣೆಯಿಂದ ಪಾಪವು ನಿವಾರಿತವಾಗುವುದು.) ವನಗತವಾದ ಗುಲ್ಮಾದಿ ಗಳಿಗೆ ಪಾಲಕನು. ಸ್ವಾಮಿಗೃಹದಲ್ಲಿಯೇ ಇದ್ದು ಕಳ್ಳತನಮಾಡುವವನಂತಿರು ವವನು. ಸರ್ವಸಂಚಾಲಕನು. ಅರಣ್ಯಾಧಿಪತಿಯು. ವಜ್ರಾಯುಧದಿಂದ ತನ್ನ ಪ್ರಾಣಗಳನ್ನು ರಕ್ಷಿಸುವನಂತಿರುವವನು. ಕೊಲೆಗಾರ ಸ್ವರೂಪಿಯು. ರುಮಾಲನ್ನು ಹೊಂದಿ ಸಂಚರಿಸುವ ಮನುಷ್ಯನಂತೆ ಇರುವವನು. ರಾತ್ರಿ

ಆಯುಸ್ಥಃ ವಿಸೃಜೋಽಸ್ವಾತ್ಮಾ ವೇಧಸೋ ಆಸನಃ ಪರಃ ।
ಶಯಾನಃ ಸ್ವಾಪಕೃಜ್ಜಾಗ್ರಃ ಸ್ಥಿತೋ ಧಾವನಕಾರಕಃ ॥೮೯॥

ಸಭಾಪತಿಸ್ತುರಂಗೇಶೋ ಉಗಣಸ್ತ್ರಿಂಹತಿರ್ಗುರುಃ ।
ಗೃತ್ಸೋ್ಃ ವ್ರಾತೋ ಗಣೋ ವಿಶ್ವರೂಪೋ ವೈರೂಪ್ಯಕಾರಕಃ ॥೯೦॥

ಮಹಾನಣೀಯಾಗ್ರಥಪಃ ಸೇನಾನೀ ಕ್ಷತ್ರಸಂಗ್ರಹಃ ।
ತಕ್ಷಾ ಚ ರಥಕಾರಶ್ಚ ಕುಲಾಲಃ ಕರ್ಮಕಾರಕಃ ॥೯೧॥

---

ಸಂಚಾರಕನು. ದರೋಡೆಕಾರನಂತಿರುವವನು. ಉಷ್ಣೀಷ (ತಲೆಮುಸುಗು) ವನ್ನು ಧರಿಸಿದವನು. ಗಿರಿಗಳಲ್ಲಿ ಸಂಚರಿಸುವವನು. ಭೂಮಿಯನ್ನು ಅಪಹರಿಸತಕ್ಕವನು. ಪ್ರಶಸ್ತವಾದ ಬಾಣಗಳುಳ್ಳವನು. ಪ್ರಶಸ್ತವಾದ ಧನುಸ್ಸುಳ್ಳವನು. ಧನುಸ್ಸನ್ನು ಹೆದೆಯೇರಿಸುವವನು. ಶತ್ರುಬಾಣಕ್ಕೆ ಪ್ರತಿಯಾಗಿ ಬಾಣಪ್ರಯೋಗಮಾಡುವವನು. ॥೮೭-೮೮॥

ಹೆದೆಯನ್ನು ಎಳೆಯುವವನು. ಬಾಣಪ್ರಯೋಗಮಾಡುವವನು. ಆತ್ಮ ರೂಪಿಯು. ಶತ್ರುಗಳನ್ನು ಹಿಂಸಿಸುವವನು. ಶತ್ರುಗಳನ್ನು ಓಡಿಸುವವನು. ಸಭೆಗಳಿಗೆಲ್ಲಾ ಒಡೆಯನು. ಅಶ್ವಪತಿಯು. ಗುರಿಯಿಟ್ಟು ಹೊಡೆಯುವವನು. ಶ್ರೇಷ್ಠನಾದವನು. ಸರ್ವರ ಹೃದಯಾಂತರಾಳದಲ್ಲಿ ಮಲಗಿರುವವನು. ತನ್ನನ್ನು ಅಂತರ್ಹಿತನನ್ನಾಗಿ ಮಾಡಿಕೊಂಡಿರುವವನು. ಸಕಲ ವೀರಾಗ್ರೇಸರನು. ಗಣಗಳಲ್ಲಿ ಶ್ರೇಷ್ಠರಾದ ಸಪ್ತಮಾತೃಕೆಗಳಂತಿರುವವನು. ಅತ್ಯುಗ್ರವಾಗಿರುವ ದುರ್ಗಾದಿ ರೂಪದಿಂದಿರುವವನು. ಗುರುರೂಪಿಯು. ವಿಷಯಲಂಪಟನು. ನಾನಾಜಾತಿಯ ಪ್ರಾಣಿರೂಪದಿಂದಿರುವವನು. ಗಣರೂಪಿಯು. ವಿಶ್ವರೂಪಿಯು. ವಿರೂಪವನ್ನು ತಾಳಿರುವವನು. ॥೮೯-೯೦॥

ಮಹದ್ರೂಪಿಯು. ಅಣುಸ್ವರೂಪನು. ರಥಪತಿಯು. ಸೇನಾಪತಿಯು. ಕ್ಷತ್ರಿಯರನ್ನು ಒಟ್ಟುಗೂಡಿಸುವವನು. ಬಡಗಿಯ ರೂಪಿಯು. ರಥನಿರ್ಮಾಣಕನು. ಕುಂಬಾರನು. ಕಮ್ಮಾರನು. ಪಕ್ಷಿಗಳ ಸಮೂಹವನ್ನು ಹೊಡೆಯುವವನು. ಬೇಡರವನು. ಬಾಣಪ್ರಯೋಗಮಾಡುವವನು. ಧನುರ್ಧಾರಿಯು. ಬೇಟೆಯಾಡುವವನು. ನಾಯಿಗಳಿಗೂ ಒಡೆಯನೆನಿಸಿದವನು. ದೇವದೇವನು. ಉತ್ಪತ್ತ್ಯಾದಿಗಳಿಂದ

ಪುಂಜಿಷ್ಠಶ್ಚ ನಿಷಾದಶ್ಚ ಇಷುಕೃದ್ಧನ್ವಕಾರಕಃ ।
ಮೃಗಯುಃ ಶ್ವಾನಪೋ ದೇವೋ ಭವೋ ರುದ್ರೋಽಥ ಶರ್ವಪಃ ॥೯೨॥

ಪಶುಪೋ ನೀಲಕಂಠಶ್ಚ ಶಿತಿಕಂಠಃ ಕಪರ್ದಭೃತ್ ।
ವ್ಯುಪ್ತಕೇಶಃ ಸಹಸ್ರಾಕ್ಷಃ ಶತಧನ್ವಾ ಗಿರೀಶ್ವರಃ ॥೯೩॥

ಶಿಪಿವಿಷ್ಟೋಽಥ ಮೀಢುಷ್ಟ ಇಷುಮಾನ್ ಹ್ರಸ್ವವಾಮನಃ ।
ಬೃಹದ್ವರ್ಷಕರೋ ವೃದ್ಧಃ ಸಂವೃದ್ಧೋ ಪ್ರಥಮೋಽಗ್ರಗಃ ॥೯೪॥

ಆಶುಶ್ಚೈವಾಜಿರಶ್ಶೀಘ್ರಃ ಶೀಭ್ಯ ಊರ್ಮ್ಯೋರ್ಮೀ ರಥಸ್ವನಃ ।
ಸ್ರೋತೋ ದೀಪ್ಯಸ್ತಥಾ ಜ್ಯೇಷ್ಠೋ ಕನಿಷ್ಠಃ ಪೂರ್ವಜೋಽಪರಃ॥೯೫॥

---

ಸಂಸಾರಧರ್ಮವನ್ನವಲಂಬಿಸುವವನು. ಭಯಂಕರಸ್ವರೂಪನು. ಸುಖಗಳಿಗೆ ಒಡೆಯನು. ॥೯೧-೯೨॥

ಪಶುಪತಿಯು. ನೀಲವಾದ ಕಂಠಪ್ರದೇಶವುಳ್ಳವನು. ವಿಷಕಂಠನು. ಜಟಾ ಜೂಟವನ್ನು ಧರಿಸಿದವನು. ಕೆದರಿದ ತಲೆಯುಳ್ಳವನು. ಸಹಸ್ರಕಣ್ಣುಗಳುಳ್ಳವನು. ಅನೇಕ ಧನುಸ್ಸುಗಳನ್ನು ಧರಿಸಿದವನು. ಗಿರಿಗಳಿಗೆಲ್ಲಾ ಒಡೆಯನು. ಕಿರಣರೂಪ ದಿಂದ ಪ್ರಸರಿಸುವವನು. ಮೇಘರೂಪದಿಂದ ವೃಷ್ಟಿಪ್ರದನಾದವನು. ಪ್ರಶಸ್ತವಾದ ಬಾಣಗಳುಳ್ಳವನು. ಕುಳ್ಳನಾಗಿ ತೋರುವವನು, ಅತಿವೃಷ್ಟಿಪ್ರದನು. ವೃದ್ಧರೂಪಿಯು. ಅತಿಯಾದ ಬೆಳೆವಣಿಗೆಯನ್ನು ಪಡೆದಿರುವವನು. ಸಕಲ ಸೇನಾಧಿಪತಿಯಾಗಿ ಮುಂದೆ ನಿಲ್ಲುವವನು. ॥೯೩-೯೪॥

ಸರ್ವವ್ಯಾಪಿಯು. ಓಡಾಡುವುದರಲ್ಲಿ ನಿಪುಣನು. ಶೀಘ್ರಗಾಮಿಯು. ಪ್ರವಾಹ ರೂಪಿಯು. ಅಲೆಗಳಿಂದ ಕೂಡಿದವನು. ಸ್ಥಿರಜಲದಲ್ಲಿ ಅಡಗಿರುವವನು. ಪ್ರವಾಹ ದಲ್ಲಿ ನಿಂತಿರುವವನು. ಜಲಮಧ್ಯವರ್ತಿಯಾದ ಭೂಮಿಯಂತಿರುವವನು. ಸರ್ವ ಜ್ಯೇಷ್ಠನು. ಎಲ್ಲರಿಗೂ ಕಿರಿಯವನಂತಿರುವವನು. ಪೂರ್ವಿಕನು. ಮಧ್ಯಕಾಲದಲ್ಲಿ ದೇವತಿರ್ಯಕ್ಪ್ರಾಣಿರೂಪದಿಂದಿರುವವನು. ಬಾಲನಂತಿರುವವನು. ಕರುವಿನರೂಪ ದಿಂದಿರುವವನು. ವೃಕ್ಷದ ಬುಡದಂತಿರುವವನು. ಪುಣ್ಯಪಾಪಗಳಿಂದ ಕೂಡಿರುವ ಮನುಷ್ಯರೂಪಿಯು. ವಿವಾಹಕಾಲದಲ್ಲಿ ಮಂಗಳಸೂತ್ರದಂತಿರುವವನು. ಯಮ

ಮಧ್ಯಮುಶ್ಚಾಪಗಲ್ಭಶ್ಚ ಜಘನ್ಯೋ ಬುಧ್ನಿಯಃ ಸುಭೂಃ ।
ಪ್ರತಿಸರ್ಯಸ್ತಥಾ ಯಾಮ್ಯೋ ಕ್ಷೇಮ್ಯ ಉರ್ವರ್ಯಕಃ ಖಲಃ ॥೯೬॥

ಶ್ಲೋಕ್ಯೋವಸಾನ್ಯೋ ವನ್ಯಶ್ಚ ಕಕ್ಷ್ಯಃಶ್ರೇಷ್ಠಃ ಪ್ರತಿಶ್ರವಾಃ ।
ಆಶುಷೇಣಶ್ಚಾಶುರಥ ಶೂರೋವಭಿಂದವರ್ಮಧೃತ್ ॥೯೭॥

ವರೂಥೀ ಬಿಲ್ಮೀ ಕವಚೀ ಶ್ರುತಸೇನೋಥ ದುಂದುಭಿಃ ।
ಧೃಷ್ಣುಶ್ಚ ಪ್ರಹಿತೋದೂತೋ ನಿಷಂಗೀ ತೀಕ್ಷ್ಣಸಾಯಕಃ ॥೯೮॥

ಆಯುಧೀ ಸ್ವಾಯುಧೀಡೇವ ಉಪವೀತೀ ಸುಧನ್ವಧೃಕ್ ।
ಸ್ತುತ್ಯಃ ಪಥ್ಯಸ್ತಥಾ ಕಾಟ್ಯೋ ನೀಪ್ಯಃ ಸೂದ್ಯಃ ಸರೋದ್ಭವಃ ॥೯೯॥

ನಾದ್ಯೋ ವೈಶಂತಃ ಕೂಪ್ಯಶ್ಚ ವರ್ಷ್ಯೋ ಮೇಘ್ಯೋಥ ವೈದ್ಯುತಃ ।
ಈಧ್ರ್ಯ ಅತಪ್ಯವಾತೋತ್ಥೋ ರೇಷ್ಮಿಜೋ ವಾಸ್ತವಾಸ್ತುಪಃ ॥೧೦೦॥

---

ಲೋಕದಲ್ಲಿ ಶಿಕ್ಷಕನ ರೂಪದಲ್ಲಿ ಅವತರಿಸುವವನು. ಮೋಕ್ಷವನ್ನು ಪಡೆಯಲು ಅರ್ಹನಾದವನು. ಸರ್ವಸಸ್ಯಾಢ್ಯವಾದ ಭೂಮಿಯಂತಿರುವವನು. ಕಣದಲ್ಲಿ ಧಾನ್ಯರೂಪದಿಂದ ಅಡಗಿರುವವನು. ॥೯೫-೯೬॥

ವೈದಿಕಮಂತ್ರಪ್ರತಿಪಾದ್ಯನು. ವೇದಾಂತಗಳಿಂದ ಪ್ರತಿಪಾದಿತನು. ವನದಲ್ಲಿ ವೃಕ್ಷಾದಿರೂಪದಂತಿರುವವನು. ವನಸ್ಥವಾದ ಪೊದರುಗಳಲ್ಲಿ ಶ್ರೇಷ್ಠನಾದವನು. ಪ್ರತಿಧ್ವನಿರೂಪಿಯು. ಶೀಘ್ರಗಾಮಿಯಾದ ಸೈನ್ಯವುಳ್ಳವನು. ಶೀಘ್ರವಾಗಿ ಹೋಗುವ ರಥವುಳ್ಳವನು. ಶೂದ್ರನು. ವೈರಿನಾಶಕನು. ಕವಚದಂತಿರುವವನು. ಗೃಹರೂಪಿಯು. ಯುದ್ಧದಲ್ಲಿ ಶಿರಸ್ಸನ್ನು ರಕ್ಷಿಸುವ ಆಯುಧವನ್ನು ಧರಿಸಿರುವವನು. ಕವಚಧಾರಿಯು. ಹೊಗಳಿಸಿಕೊಳ್ಳುವ ಸೈನ್ಯವನ್ನುಳ್ಳವನು. ನಗಾರಿಯಂತಿರುವವನು. ಯುದ್ಧದಲ್ಲಿ ಪಲಾಯನಮಾಡದಿರುವವನು. ಯಜಮಾನನಿಂದ ಕಳುಹಿಸಲ್ಪಟ್ಟ ಸೇವಕನಂತಿರುವವನು. ಬಲಿಷ್ಠನು. ಬತ್ತಳಿಕೆಯುಳ್ಳವನು. ಕ್ರೂರವಾದ ಬಾಣಗಳುಳ್ಳವನು. ॥೯೭-೯೮॥

ಆಯುಧಧಾರಿಯು. ಪ್ರಶಸ್ತವಾದ ತ್ರಿಶೂಲವನ್ನು ಧರಿಸಿರುವವನು. ಪ್ರಶಸ್ತವಾದ ಧನುಸ್ಸುಳ್ಳವನು. ಸಣ್ಣದಾರಿಯಲ್ಲಿ ಸಂಚರಿಸುವವನು. ರಾಜಮಾರ್ಗದಲ್ಲಿ ಗಜಾಶ್ವಾದಿಗಳ ಮೇಲೆ ಹೋಗುವವನು. ಅಲ್ಪಪ್ರವಾಹದಂತಿರುವವನು. ತಗ್ಗು ಪ್ರದೇಶದಲ್ಲಿರುವ ಜಲರೂಪಿಯು. ಕೆಸರಿನಲ್ಲಿರುವ ಜಲರೂಪಿಯು. ಸರೋವರದ

ಸೋಮೋ ರುದ್ರಸ್ತಥಾ ತಾಮ್ರ ಅರುಣಃ ಶಂಗ ಈಶ್ವರಃ ।
ಉಗ್ರೋ ಭೀಮಸ್ತಥೈವೋಗ್ರವಧೋಽದೂರೇ ವಧಸ್ತಥಾ ॥೧೦೧॥

ಹಂತಾ ಹನೀಯಾನ್ ವೃಕ್ಷೇಶೋ ಹರಿಕೇಶಃ ಪ್ರತರ್ದನಃ ।
ತಾರಶ್ಶಂಭುರ್ಮಯೋಭೂಶ್ಚ ಶಂಕರಶ್ಚ ಮಯಸ್ಕರಃ ॥೧೦೨॥

ಶಿವಶ್ಶಿವತರಸ್ತೀರ್ಥ್ಯಃ ಪಾರ್ಯೋಽವಾರ್ಯಃ ಪ್ರತಾರಣಃ ।
ಉತ್ತಾರಣಸ್ತಥಾಲಾದ್ಯ ಆಪಾರ್ಯಃ ಶಷ್ಪ್ಯಫೇನಜಃ ॥೧೦೩॥

---

ನೀರಿನಂತಿರುವವನು. ನದೀಜಲರೂಪಿಯು. ಅಲ್ಪಸರ, ಬಾವಿ, ಮಳೆ, ಮೇಘ, ಮಿಂಚು ಇವುಗಳಲ್ಲಿ ಜಲರೂಪದಲ್ಲಿ ತೇಜೋರೂಪದಲ್ಲಿ ಅಡಗಿರುವವನು. ಶರತ್ಕಾಲದ ಮೇಘದಂತಿರುವವನು. ಬಿಸಿಲಿನಂತೆ ತೋರಿಬರುವವನು. ಗಾಳಿಯಿಂದ ಸಹಕೃತನು. ಪ್ರಳಯಕಾಲದಲ್ಲಿ ಶಿಲಾವೃಷ್ಟಿಯೇ ಮೊದಲಾದ ರೂಪದಿಂದ ತೋರಿಬರುವವನು. ಧನ್ಯರೂಪಿಯು. ಗೃಹನಿರ್ಮಾಣಾರ್ಥವಾದ ವಾಸ್ತುರೂಪದಿಂದಿರುವವನು. ॥೯೯-೧೦೦॥

ಉಮಾಸಹಿತನಾದವನು. ಭಯಂಕರನು. ಸೂರ್ಯರೂಪಿಯಾಗಿ ಉದಯಕಾಲದಲ್ಲಿ ಕೆಂಪು ಬಣ್ಣದಿಂದ ಕೂಡಿದವನು. ಉದಯಾನಂತರದಲ್ಲಿ ಸ್ವಲ್ಪ ಕೆಂಪು ಬಣ್ಣದಿಂದ ತೋರಿಬರುವವನು. ಸುಖವನ್ನು ಒದಗಿಸುವವನು. ಸಕಲ ಜಗನ್ನಿಯಾಮಕನು. ಶತ್ರುಗಳಿಗೆ ಕೋಪವನ್ನು ತೋರ್ಪಡಿಸುವವನು. ವಿರೋಧಿಗಳಿಗೆ ಭಯಜನಕನು. ಎದುರಿನಲ್ಲಿ ಮತ್ತು ದೂರದಲ್ಲಿರುವ ಶತ್ರುಗಳನ್ನು ನಾಶಗೊಳಿಸುವವನು. ಶತ್ರುಗಳನ್ನು ಕೊಲ್ಲುವವನ ರೂಪದಲ್ಲಿರತಕ್ಕವನು. ಸಂಹಾರಕಾಲದಲ್ಲಿ ಅತಿಶಯವಾಗಿ ಕೊಲ್ಲುವವನು. ಸಕಲ ವೃಕ್ಷಗಳಿಗೂ ಅಧಿಪತಿಯು. ಹರಿದ್ವರ್ಣದ ಕೇಶವುಳ್ಳವನು. ಶತ್ರುಸಂಹಾರನಾಶಕನು. ಸಂಸಾರವನ್ನುದ್ಧರಿಸುವವನು. ಸುಖಕರನು. ಭಕ್ತರ ಸುಖವನ್ನು ಯೋಚಿಸುವವನು. ಶುಭಕರನು. ಸೌಖ್ಯಪ್ರದನು. ॥೧೦೧-೧೦೨॥

ಕಲ್ಯಾಣರೂಪಿಯು. ಅತಿಶಯವಾಗಿ ಮಂಗಳಕರನು. ಪ್ರಯಾಗಾದಿ ಸಕಲ ತೀರ್ಥಗಳಲ್ಲಿಯೂ ನೆಲಸಿರುವವನು. ಸಂಸಾರಸಮುದ್ರದ ದಡದಲ್ಲಿ ನಿಂತಿರುವ ಮುಮುಕ್ಷುಗಳಿಂದ ಸ್ತುತಿಸಲ್ಪಡುವವನು. ಸಂಸಾರ ಮಧ್ಯದಲ್ಲಿ ಇಷ್ಟಕಾಮ್ಯಫಲಪ್ರದಾತೃವಾಗಿ ಇರತಕ್ಕವನು. ಪ್ರಕರ್ಷವಾಗಿ ಸಂಸಾರಿಗಳ ದುಃಖವನ್ನು ನಿವಾರಿಸ

ಸಿಕತ್ಯಶ್ಚ ಪ್ರನಾತ್ಯಶ್ಚೇರಿಣ್ಯಃ ಪ್ರಪಥ್ಯಃ ಕಿಂಶಿಲಃ ।
ಕ್ಷಯಣಃ ಕೂಲಗೋ ಗೋಽಷ್ಠ್ಯಃ ಪುಲಸ್ತ್ಯೋಽ ಗೃಹ್ಯ ಏವ ಚ ॥೧೦೪॥

ತಲ್ಪ್ಯೋಽ ಗೇಹ್ಯಸ್ತಥಾ ಕಾಟ್ಯೋಽ ಗಹ್ವರೇಷ್ಠೋಽ ಹ್ರದೋಽದ್ಭವಃ ।
ನಿವೇಽಷ್ಪ್ಯಃ ಪಾಂಸುಮಧ್ಯಸ್ಥೋಽ ರಜೋಽಭೂತೋಽ ಹರಿತ್ಸ್ಥಿತಃ॥೧೦೫

ಶುಷ್ಕ್ಯೋಽಲೋಽಪ್ಯಸ್ತಥಾಲುಪ್ಯ ಊರ್ವ್ಯಃ ಸೂರ್ಮ್ಯಶ್ಚ ಪರ್ಣಜಃ ।
ಪರ್ಣಶಾದ್ಯೋಽಪಗುರಮಾಣೋಽಭಿಘ್ನೋಽಕ್ಪಿದ್ಯ ಕೋಽವಿದಃ ॥೧೦೬॥

---

ವವನು. ತತ್ತ್ವಜ್ಞಾನರೂಪದಿಂದ ಸಂಸಾರದಿಂದ ಉದ್ಧರಿಸುವವನು. ಕರ್ಮಫಲ ವನ್ನು ಸಂಪೂರ್ಣವಾಗಿ ಅನುಭವಿಸುವ ಜೀವಸಹಚರಿಯಂತೆ ಇರುವನು. ಸಂಸಾರ ಸಾಗರದಿಂದ ಎಲ್ಲರನ್ನೂ ಉದ್ಧರಿಸುವವನು. ಗಂಗಾತೀರದಲ್ಲಿ ಬೆಳೆದ ಬಾಲತೃಣ ಮತ್ತು ನೊರೆ, ಮರಳು ಈ ರೂಪದಲ್ಲಿ ತೋರಿಬರುವವನು. ಬಿರುಗಾಳಿಯಂತಿರು ವವನು. ಊಷರಭೂಮಿಯಲ್ಲಿಯೂ ತೋರಿಬರುವವನು. ಬಹುಜನರಿಂದ ಸೇವಿತ ವಾದ ಮಾರ್ಗದಲ್ಲಿ ಸಂಚರಿಸುವವನು. ಕ್ಷುದ್ರವಾದ ನೊರಜುಗಲ್ಲುಳ್ಳ ಪ್ರದೇಶದಲ್ಲಿ ತೋರಿಬರುವವನು. ವಾಸಯೋಗ್ಯವಾದ ಪ್ರದೇಶದಲ್ಲಿರುವವನು. ಸಂಸಾರದ ದಡ ವನ್ನು ಕಂಡವನು. ಗೋಸ್ಥಾನದಲ್ಲಿ ನಿಂತಿರುವವನು. ಭಕ್ತರ ಪುರೋಭಾಗದಲ್ಲಿ ನಿಲ್ಲುವವನು. ಗೃಹಾಂತರ್ವರ್ತಿಯಾದವನು. ॥೧೦೩-೧೦೪॥

ಮಂಚದಲ್ಲಿ ಮಲಗಿರುವವನು. ಗೃಹದಲ್ಲಿ ತೋರುವವನು. ಮುಳ್ಳುಗಳಿಂದ ಕೂಡಿದ ಲತಾದಿಗಳಲ್ಲಿಯೂ ಪ್ರಕಾಶಿಸುವವನು. ವಿಷಮವಾದ ಗುಹೆಗಳಲ್ಲಿ ನಿಂತಿರು ವವನು. ಹಳ್ಳದಲ್ಲಿ ಹುಟ್ಟಿದವರಿಗೆ ಸದೃಶನಾದವನು. ಮಂಜಿನ ನೀರಿನಲ್ಲಿ ನಿಂತಿರುವವನು. ಧೂಳುಗಳಲ್ಲಿ ನೆಲಸಿರುವವನು. ರಜೋರೂಪಿಯಾದವನು. ಹರಿದ್ವರ್ಣದ ವಸ್ತುಗಳಲ್ಲಿ ನಿಂತವನು. ಒಣಗಿದ ಕಟ್ಟಿಗೆಗಳಲ್ಲಿ ಅಡಗಿರುವವನು. ತೃಣಾದಿಗಳಿಲ್ಲದ ಬಂಜರುಭೂಮಿಯಲ್ಲಿ ನಿಂತಿರುವವನು. ತೃಣಾದಿಗಳಿಲ್ಲದ ಪ್ರದೇಶ ಗಳಲ್ಲಿ ಪ್ರಕಾಶಿಸುವವನು. ಒಳ್ಳೆಯ ಆಲೆಗಳಲ್ಲಿ ನೆಲಸಿರುವವನು. ಭೂಮಿಯಲ್ಲಿ ನೆಲಸಿರುವವನು. ಎಲೆಗಳಲ್ಲಿ ತೋರಿಬರುವವನು. ಎತ್ತಿದ ಆಯುಧವುಳ್ಳವನು. ಶತ್ರುಗಳನ್ನು ಸದೆಬಡಿಯುವವನು. ಸ್ವಲ್ಪವಾಗಿಯೂ ಹಿಂಸೆಕೊಡುವವನು. ವಿದ್ವಾಂಸರ ದುಃಖವನ್ನೆಲ್ಲಾ ನಾಶಗೊಳಿಸುವವನು. ॥೧೦೫-೧೦೬॥

ಅವಃಕಿರಿಕ ಈಶಾನೋ ದೇವಾದಿಹೃದಯಾಂತರಃ ।
ವಿಕ್ಷೀಣಕೋ ವಿಚಿನ್ವತ್ಕೋ ಅನಿರ್ಹತ ಆಮೀವತ್ಕಃ ॥೧೦೭॥

ದ್ರಾಪಿರಂಧಸ್ಪತಿರ್ದಾತಾ ದರಿದ್ರನ್ನೀಲಲೋಹಿತಃ ।
ತವ. ಸ್ವಾಂಶ್ಚ ಕಪರ್ದೀಶಃ ಕ್ಷಯದ್ವೀರೋಥ ಗೋಹನಃ ॥೧೦೮॥

ಪೂರುಷಘ್ನೋ ಗರ್ತಗತೋ ಯುವಾ ಮೃಗವರೋಗ್ರಕಃ ।
ಮೃಚಶ್ಚ ಜರಿತಾ ರುದ್ರೋ ಮೀಢ್ವೋ ದೇವಪತಿರ್ಹರಿಃ ॥೧೦೯॥

ಮೀಢುಷ್ಟಮಶ್ಶಿವತಮಃ ಭಗವಾನರ್ಣವಾಂತರಃ ।
ಶಿಖೀ ಚ ಕೃತ್ತಿವಾಸಾಶ್ಚ ಪಿನಾಕೀ ವೃಷಭಸ್ಥಿತಃ ॥೧೧೦॥

---

ಭಕ್ತರಿಗೆ ಧನಾದಿಗಳನ್ನು ಕೊಡುವವರನ್ನು ರಕ್ಷಿಸುವವನು. ಸರ್ವರಿಗೂ ಒಡೆಯನು. ದೇವಾದಿ ಸಕಲರ ಹೃದಯದಲ್ಲಿಯೂ ಅಡಗಿರುವವನು. ಯಾವಾಗಲೂ ನಾಶರಹಿತನಾದವನು. ಅಪೇಕ್ಷಿತವಾದ ವಸ್ತುಗಳನ್ನು ಸಕಲ ಪ್ರದೇಶಗಳಲ್ಲಿಯೂ ಕಾಣುವವನು. ಪಾಪರಾಶಿಯನ್ನು ಸಂಪೂರ್ಣವಾಗಿ ನಾಶಗೊಳಿಸುವವನು. ಸರ್ವತ್ರ ಸ್ಥೂಲರೂಪದಿಂದ ಸಂಚರಿಸುವವನು. ಪಾಪಿಗಳಿಗೆ ನರಕಾದಿದುಃಖಗಳನ್ನು ಒದಗಿಸುವವನು. ಭಕ್ತರಿಗೆ ಆಹಾರವನ್ನು ಕರುಣಿಸುವವನು. ಕೇವಲ ದರಿದ್ರನಂತೆ ತೋರುವವನು. ಕಂಠದಲ್ಲಿ ನೀಲವರ್ಣದಿಂದ ಶೋಭಿಸುವವನು. ಮಹಾಬಲ ಶಾಲಿಯು. ಜಟಾಬಂಧದಿಂದ ಕೂಡಿರುವವನು. ಶತ್ರುಗಳನ್ನು ಕ್ಷಯಿಸುವಂತೆ ಮಾಡುವ ಪರಾಕ್ರಮಿಯು. ವೃಷಭವಾಹನನು. ||೧೦೭-೧೦೮||

ಪುತ್ರಪೌತ್ರಾದಿ ರೂಪವಾದ ಪುರುಷರನ್ನು ಕೊಲ್ಲುವವನು. ಗರ್ತದಲ್ಲಿ ಅಂದರೆ ಹೃದಯಕುಹರದಲ್ಲಿ ನೆಲಸಿರುವವನು. ಯುವಕನು. ಪ್ರಾಣಿಗಳಲ್ಲಿ ಶ್ರೇಷ್ಠವಾದವುಗಳನ್ನು ಹೊಂದಿರುವವನು. ಭಯಂಕರರೂಪಿಯು. ಸುಖಪ್ರದನು. ದಿನದಿನಕ್ಕೂ ಕ್ಷೀಣವಾಗುವ ದೇಹವನ್ನು ತಾಳಿದವನು. ಭಯಂಕರನು. ಕಾಮನನ್ನು ವೃದ್ಧಿಗೊಳಿಸುವವನು. ದೇವತೆಗಳಿಗೆ ಒಡೆಯನು. ಸರ್ವವ್ಯಾಪಿಯು. ಮೇಘ ರೂಪದಿಂದ ವೃಷ್ಟಿಪ್ರದನಾದವನು. ಪೂಜ್ಯನು. ಸಂಸಾರಸಮುದ್ರಕ್ಕೆ ಯಮನಂತಿರುವವನು. ಕಪರ್ದಿಯು. ಚರ್ಮಾಂಬರಧಾರಿಯು. ಪಿನಾಕಧಾರಿಯು. ವೃಷಭ ವಾಹನನು. ||೧೦೯-೧೧೦||

ಅನ್ನೇಷು ಚ್ಚೈವ ವರ್ಷೇಷು ವಾತೇಷುಶ್ಚ ಸೃಕಾರಕಃ ।
ಪೃಥಿವೀಸ್ಥೋ ದಿವಿಸ್ಥಶ್ಚ ಅಂತರಿಕ್ಷಸ್ಥಿತೋ ಹರಃ ॥೧೧೧॥

ಅಪ್ಸುಸ್ಥಿತೋ ವಿಶ್ವನೇತಾ ಪಂಥಾಸ್ಥೋ ವೃಕ್ಷಮೂಲಕಃ ।
ಭೂತಾಧಿಪಃ ಪ್ರಮಥಪಃ ಶಿಪಿವಿಷ್ಟಃ ಷಡಕ್ಷರಃ ॥೧೧೨॥

ಕ್ಷೇತ್ರಾಧಿಪೋ ಮಿತ್ರಪತಿರ್ಭೂರ್ಭುವಸ್ವಃ ಪತಿಃ ಪ್ರಭುಃ ।
ತಥಾಧಿಪತಿರನ್ನಾತ್ಮಾ ಏಕಾಕ್ಷೋನೇಕಲೋಚನಃ ॥೧೧೩॥

ಅವಪನ್ನಃ ಸಹಸ್ರಾಸ್ಯಃ ಸಹಸ್ರನಯನಶ್ರವಾಃ ।
ಋಗ್ಗಣಾತ್ಮಾ ಯಜುರ್ಮಧ್ಯಃ ಸಾಮಮುಖ್ಯೋ ಗಣಾಧಿಪಃ ॥೧೧೪॥

ಅಥರ್ವಶೀರ್ಷಃ ಪರಮಃ ಶಿಖಾಸ್ತುತ್ಯೋನಸೂಯಕಃ ।
ಮೈತ್ರಾಯಣೋ ಮಿತ್ರಗತಿಸ್ತಂಡುಪ್ರೀತೋ ರಿಟಿಪ್ರಿಯಃ ॥೧೧೫॥

---

ಆಹಾರ, ವೃಷ್ಟಿ, ವಾಯು ಮುಂತಾದುವುಗಳಲ್ಲಿ ಅಡಗಿರುವವನು. ಸರ್ವದಾ ಆಯುಧವನ್ನು ಹಿಡಿದಿರುವವನು. ಪೃಥಿವಿಯಲ್ಲಿ ತೋರುವವನು. ಅಂತರಿಕ್ಷ ಪ್ರಕಾಶಕನು. ಪಾಪನಾಶಕನು. ಜಲಾಂತರ್ವರ್ತಿಯು. ಪ್ರಪಂಚಕ್ಕೆ ಮುಂದಾಳಾದವನು. ಮಾರ್ಗದಲ್ಲಿ ನೆಲಸಿರುವವನು. ವೃಕ್ಷದ ಬುಡದಲ್ಲಿರುವವನು. ಸಕಲ ಪ್ರಾಣಿಗಳಿಗೂ ಅಧಿಪತಿಯೆನಿಸಿದವನು. ಪ್ರಮಥಗಣಗಳಿಗೆ ಈಶ್ವರನು. ಕಿರಣರೂಪದಿಂದ ಪ್ರಸರಿಸುವವನು. ಪ್ರಣವಸಹಿತವಾದ ಪಂಚಾಕ್ಷರಗಳಿಂದ ಸ್ತುತ್ಯನಾದವನು.॥೧೧೧ ೧೧೨॥

ಕಷ್ಟದಿಂದ ಕಾಪಾಡುವ ಜನರಿಗೆ ಒಡೆಯನಾದವನು. ಮಿತ್ರರಿಗೆ ಪತಿಯೆನಿಸಿದವನು. ಭೂಲೋಕ, ಭುವರ್ಲೋಕ, ಸ್ವರ್ಲೋಕಗಳಿಗೆ ಒಡೆಯನು. ಯಜಮಾನನು. ಯಜಮಾನರಿಗೆ ಅಧಿಪತಿಯು. ಆಹಾರವಸ್ತುಗಳಿಗೆ ಒಡೆಯನು. ಒಂದು ಕಣ್ಣುಳ್ಳವನು. ಅನೇಕ ಕಣ್ಣುಗಳುಳ್ಳವನು. ಕಷ್ಟಕ್ಕೆ ಸಿಕ್ಕಿದವನು. ಸಹಸ್ರ ಮುಖವುಳ್ಳವನು. ಸಹಸ್ರಕಣ್ಣು ಮತ್ತು ಕಿವಿಗಳುಳ್ಳವನು. ಋಗ್ವೇದರೂಪಿಯು. ಯಜುರ್ವೇದ ಮಧ್ಯವರ್ತಿಯು. ಸಾಮವೇದಸ್ವರೂಪನು, ಗಣಗಳಿಗೆ ಒಡೆಯನಾದವನು. ॥೧೧೩-೧೧೪॥

ಅಥರ್ವಣವೇದಕ್ಕೆ ಶಿರಸ್ಸ್ಥಾನದಲ್ಲಿರುವವನು. ಪರಮಸ್ವರೂಪಿಯು. ಉಪನಿಷತ್ತುಗಳಿಂದ ಸ್ತುತ್ಯನಾದವನು. ಅಸೂಯಾರಹಿತನು. ಸೂರ್ಯನ ಸಂಪರ್ಕದಲ್ಲಿ

ಉಮಾಧವೋ ವಿಶ್ವಭರ್ತಾ ವಿಶ್ವಹರ್ತಾ ಸನಾತನಃ ।
ಸೋಮೋರುದ್ರೋ ಮೇಘಪತಿರ್ವಂಕುರ್ವೈ ಮರುತಾಂ ಪಿತಾ ॥೧೧೬

ಕಲ್ಮಲೀಕಿರ್ಗಾಥಪತಿರರುಷೋ ಅಧ್ವರೇಶ್ವರಃ ।
ಜಲಾಷೀ ಭೇಷಜೋ ಭೂರಿದಾತಾಸುಜನಿಭಾಸುರಃ ॥೧೧೭॥

ಸಂರಾಟ್ ಪುರಾಭಿದಃ ಸ್ವಚ್ಛಃ ಸಪ್ತಭಿತ್ಪಾವನಃ ಕ್ರತುಃ ।
ಹಿರಣ್ಯರೇತಾ ದುರ್ಧರ್ಷೋ ವಿಶ್ವಾಧಿಕ ಉರುಕ್ರಮಃ ॥೧೧೮॥

ಉರಗಾಯೋಽಮಿತಗುಣೋ ಮಹಾಭೂತಸ್ತ್ರಿವಿಕ್ರಮಃ ।
ಅಮೃತೋಽಹ್ಯಜರೋ ಜಯ್ಯೋ ರುದ್ರೋಽಗ್ನಿಃ ಪುರುಷೋವಿರಾಟ್॥೧೧೯॥

---

ವಿಹರಿಸುವವನು. ಸೂರ್ಯನಂತೆ ನಡೆಯುವವನು. ತಂಡು ಮತ್ತು ರಿಟೆ ಇವರಿಬ್ಬರಲ್ಲಿ ಪ್ರೀತಿಯುಳ್ಳವನು. ಪಾರ್ವತೀಪತಿಯು. ವಿಶ್ವವನ್ನು ರಕ್ಷಿಸುವವನು. ಲೋಕವನ್ನು ನಾಶಗೊಳಿಸುವವನು. ಆದಿಪುರುಷನು. ಉಮಾಸಹಿತನು. ಶತ್ರುಭಯಂಕರನು. ಮೇಘಗಳಿಗೆ ಒಡೆಯನು. ವಂಕುವು. (ಕುಟಿಲಸ್ವಭಾವದವನು) ದೇವತೆಗಳಿಗೆ ಜನಕ ನೆನಸಿದವನು. ॥೧೧೫-೧೧೬॥

ತೇಜಸ್ವಿಯು. ಸ್ತುತಿಪಾಠಕರನ್ನು ರಕ್ಷಿಸುವವನು. ಕೋಪರಹಿತನು. ಯಾಗಪುರುಷನು. ಸುಖಿಯು. ವೈದ್ಯನು. ಭಕ್ತರಿಗೆ ಅತಿಶಯವಾಗಿ ಫಲಕೊಡುವ ವನು. ಸತ್ಪುರುಷರಲ್ಲಿ ಪ್ರಕಾಶರೂಪದಿಂದ ತೋರಿಬರುವವನು. ಚಕ್ರವರ್ತಿಯು. ತ್ರಿಪುರಾರಿಯು. ಶುದ್ಧಪ್ರಾಯನು. ಸಪ್ತಸ್ರೋತೋರೂಪವಾಗಿ ಹರಿಯುವ ಗಂಗೆ ಯನ್ನು ಪವಿತ್ರಗೊಳಿಸಿದವನು. ಯಾಗಸ್ವರೂಪನು. ಹಿರಣ್ಯರೂಪವಾದ ರೇತಸ್ಸು ಳ್ಳವನು. ಧರಿಸಲು ಅಸಾಧ್ಯನಾದವನು. ಲೋಕದಲ್ಲಿ ದೊಡ್ಡವನೆನಿಸಿದವನು. ಅತಿಶಯವಾದ ಕ್ರಮವುಳ್ಳವನು. ॥೧೧೭-೧೧೮॥

ಸರ್ಪಭೂಷಣನು. ಅತಿಶಯಗುಣಗರಿಷ್ಠನು. ಪಂಚಭೂತಗಳಿಗೆ ಆಶ್ರಯ ವಿತ್ತವನು. ತ್ರಿವಿಕ್ರಮಾವತಾರಮಾಡಿದವನು. ಮರಣರಹಿತನು. ಮುಪ್ಪಿನಿಂದ ದೂರನಾದವನು. ಯಾರಿಂದಲೂ ಜಯಿಸಲಸಾಧ್ಯನು. ಭಯಂಕರನಾದವನು. ಅಗ್ನಿರೂಪಿಯು. ಪರಮಪುರುಷರೂಪನು. ವಿಶೇಷವಾಗಿ ಪ್ರಕಾಶಿಸುವನು. ಇಂದ್ರನಿಂದ ಪೂಜಿತವಾದ ಪಾದಪದ್ಮವುಳ್ಳವನು. ಅತಿಯಾದ ಹರ್ಷವನ್ನು

ತುಷಾರಾಟ್ ಪೂಜಿತಪದೋ ಮಹಾಹರ್ಷೋ ರಸಾತ್ಮಕಃ ।
ಮಹರ್ಷಿಬುದ್ಧಿದೋ ಗೋಪ್ತಾ ಗುಪ್ತಮಂತ್ರೋ ಗತಿಪ್ರದಃ ॥೧೨೦॥

ಗಂಧರ್ವಗಾನಪ್ರೀತಾತ್ಮಾ ಗೀತಪ್ರೀತೋರುಶಾಸನಃ ।
ವಿದ್ವೇಷಣಹರೋ ಹಾರ್ಯೋ ಹರ್ಷಕ್ರೋಧವಿವರ್ಜಿತಃ ॥೧೨೧॥

ಭಕ್ತಪ್ರಿಯೋ ಭಕ್ತಿವಶ್ಯೋ ಭಯಹೃದ್ಭೂತಸಂಘಭಿತ್ ।
ಭುವನೇಶೋ ಭೂಧರಾತ್ಮಾ ವಿಶ್ವವಂದ್ಯೋ ವಿಶೇಷಕಃ ॥೧೨೨॥

ಜ್ವರನಾಶೋ ರೋಗನಾಶೋ ಮುಂಜಿಕೇಶೋ ವರಪ್ರದಃ ।
ಪುಂಡರೀಕಮಹಾಹಾರಃ ಪುಂಡರೀಕತ್ವಗಂಬರಃ ॥೧೨೩॥

ಆಖಂಡಲಮುಖಸ್ತುತ್ಯಃ ಕುಂಡಲೀ ಕುಂಡಲಪ್ರಿಯಃ ।
ಚಂಡಾಂಶುಮಂಡಲಾಂತಃ ಸ್ಥಃ ಶಶಿಖಂಡಶಿಖಂಡಕಃ ॥೧೨೪॥

---

ತೋರಿಸುವವನು. ರಸರೂಪಿಯು. ಮಹರ್ಷಿಗಳಿಗೆ ಅತಿಯಾದ ಜ್ಞಾನವನ್ನು ಒದಗಿಸುವವನು. ರಕ್ಷಕನು. ಗೂಢವಾದ ಆಲೋಚನೆಯುಳ್ಳವನು. ಸದ್ಗತಿಪ್ರದನು. ॥೧೧೯-೧೨೦॥

ಗಂಧರ್ವರ ಗಾನದಲ್ಲಿ ಪ್ರೀತಿಯಿಟ್ಟಿರುವವನು. ಗಾನಪ್ರಿಯನು. ಉಗ್ರವಾದ ಅಪ್ಪಣೆಯನ್ನು ವಿಧಿಸುವವನು. ಶತ್ರುನಾಶಕನು. ಪಾಪಹಾರಿಯು. ಸಂತೋಷ, ಕೋಪ ಇವುಗಳಿಂದ ಬಿಡಲ್ಪಟ್ಟಿರುವವನು. ಭಕ್ತರಿಗೆ ಪ್ರಿಯನಾದವನು. ಭಕ್ತಿಗೆ ವಶನಾದವನು. ಭಯಹಾರಕನು. ಪ್ರಾಣಿಸಮುದಾಯವನ್ನೆಲ್ಲಾ ಪ್ರಳಯಕಾಲದಲ್ಲಿ ನಾಶಮಾಡುವವನು. ಭುವನಪತಿಯು. ಪರ್ವತರೂಪಿಯು. ಪ್ರಪಂಚದಿಂದ ಪೂಜಿತನಾದವನು. ವಿಶೇಷ ಪ್ರೀತಿಯುಳ್ಳವನು. ॥೧೨೧-೧೨೨॥

ಮಹಾಜ್ವರಗಳನ್ನೆಲ್ಲಾ ನಾಶಮಾಡಿದವನು. ರೋಗನಾಶಕನು. ಹರಡಿದ ಕೂದಲುಳ್ಳವನು. ವರಪ್ರದಾಯಕನು. ಕಮಲದ ಪುಷ್ಪಮಾಲೆಯುಳ್ಳವನು, ವ್ಯಾಘ್ರಚರ್ಮಾಂಬರಧಾರಿಯು. ಇಂದ್ರಾದಿಗಳಿಂದ ಸ್ತುತ್ಯನಾದವನು. ನಾಗಕುಂಡಲ ಧಾರಿಯು. ಸೂರ್ಯಮಂಡಲ ಮಧ್ಯವರ್ತಿಯು. ಚಂದ್ರಶೇಖರನು. ॥೧೨೩-೧೨೪॥

ಚಂಡತಾಂಡವಸನ್ನಾಹಶ್ಚಂಡಕೋಪೋಽಖಿಲಾಂಡಕಃ ।
ಚಂಡಿಕಾಪೂಜಿತಪದೋ ಮಂಡನಾಕಲ್ಪಕೋಂಡಜಃ ॥೧೨೫॥

ರಣಶೌಂಡೋ ಮಹಾದಂಡಸ್ತುಹಂಡವರದಾಯಕಃ ।
ಕಪಾಲಮಾಲಾಭರಣಸ್ತಾರಣೋಽಚ್ಛೋಕಕಾರಣಃ ॥೧೨೬॥

ವಿಧಾರಣಃ ಶೂಲಕರೋ ಧರ್ಷಣಃ ಶತ್ರುಮಾರಣಃ ।
ಗಂಗಾಧರೋ ಗರಧರಸ್ತ್ರಿಪುಂಡ್ರಾವಳಿಭಾಸುರಃ ॥೧೨೭॥

ಶಂಬರಾರಿಹರೋ ದಕ್ಷಹರೋಽಂಧಕಹರೋ ಹರಃ ।
ವಿಶ್ವಜಿದ್ಗೋಜಿದೀಶಾನೋ ವಿಶ್ವಜಿದ್ಘನಜಿತ್ತಥಾ ॥೧೨೮॥

ಉರ್ವರಾಜಿದುರೂಜಿಚ್ಚ ಸರ್ವಹೃತ್ಸರ್ವಹಾರಕಃ ।
ಮಂದಾರನಿಲಯೋ ನಂದೋ ಕುಂದಮಾಲಾಧರೋಂಬುದಃ ॥೧೨೯

---

ಭಯಂಕರವಾದ ನಾಟ್ಯದಲ್ಲಿ ಆಸಕ್ತನಾದವನು. ಉಗ್ರವಾದ ಕೋಪವುಳ್ಳವನು. ಸಕಲ ಬ್ರಹ್ಮಾಂಡವನ್ನೂ ಒಳಗೊಂಡವನು. ಚಂಡಿದೇವಿಯಿಂದ ಪೂಜಿತವಾದ ಪಾದವುಳ್ಳವನು. ಸದಾ ಅಲಂಕೃತನಾದಂತಿರುವವನು. ಬ್ರಹ್ಮಾಂಡದಲ್ಲಿ ಉತ್ಪತ್ತಿಪಡೆದಿರುವವನು. ಯುದ್ಧದಲ್ಲಿ ಶೂರನೆನಿಸಿದವನು. ಅತಿಶಯವಾದ ಶಿಕ್ಷೆಯನ್ನು ವಿಧಿಸುವವನು. ತುಹುಂಡನೆಂಬವನಿಗೆ ವರವನ್ನು ಕೊಟ್ಟವನು. ಕಪಾಲಮಾಲೆಯನ್ನೇ ಆಭರಣವನ್ನಾಗಿ ಮಾಡಿಕೊಂಡಿರುವನು. ಸಂಸಾರದಿಂದ ಉದ್ಧರಿಸುವವನು. ದುಃಖಕ್ಕೆ ಹೆಚ್ಚಾಗಿ ಕಾರಣನಾಗುವವನು. ॥೧೨೫-೧೨೬॥

ಪ್ರಪಂಚವನ್ನು ವಿಶೇಷವಾಗಿ ಧರಿಸುವವನು. ತ್ರಿಶೂಲಹಸ್ತನು. ಪಾಪಿಗಳನ್ನು ಪೀಡಿಸುವವನು. ಶತ್ರುಗಳನ್ನು ಧ್ವಂಸಮಾಡುವವನು. ಗಂಗೆಯನ್ನು ಧರಿಸಿದವನು. ವಿಷಕಂಠನು. ತ್ರಿಪುಂಡ್ರಧಾರಣೆಯಿಂದ ಶೋಭಿಸುವವನು. ಮನ್ಮಥನನ್ನು ನಾಶಮಾಡಿದವನು. ದಕ್ಷಬ್ರಹ್ಮನ ಯಾಗವನ್ನು ಧ್ವಂಸಮಾಡಿದವನು. ಅಂಧಕಾಸುರಸೂದನನು. ಪಾಪನಾಶಕನು. ವಿಶ್ವವನ್ನೇ ಗೆದ್ದವನು. ಭೂಮಿಯನ್ನೇ ಗೆದ್ದವನು. ಈಶಾನಸ್ವರೂಪನು. ಪ್ರಪಂಚವನ್ನೇ ಜಯಿಸಿದವನು. ಮೇಘವನ್ನು ಮೀರಿದವನು. ॥೧೨೭-೧೨೮॥

ಸಸ್ಯಸಮೃದ್ಧವಾದ ಭೂಮಿಗೆ ಜಯವನ್ನುಂಟುಮಾಡುವವನು. ಸಕಲ ಲೋಕವನ್ನೂ ಜಯಿಸಿದವನು. ಸರ್ವರ ಹೃದಯ ದುಃಖವನ್ನು ನಿವಾರಿಸು

ನಂದಿಪ್ರೀತೋ ಮಂದಹಾಸಃ ಸುರವೃಂದನಿಷೇವಿತಃ ।
ಮುಚುಕುಂದಾರ್ಚಿತಪದೋ ದ್ವಂದ್ವಹೀನೋಂದಿರಾರ್ಚಿತಃ ॥೧೩೦

ವಿಶ್ವಾಧಾರೋ ವಿಶ್ವನೇತಾ ವೀತಿಹೋತ್ರೋ ವಿನೀತಕಃ ।
ಶಂಕರಶ್ಶಾಶ್ವತಃ ಶಾಸ್ತಾ ಸಹಮಾನಸಹಸ್ರದಃ ॥೧೩೧॥

ಭೀಮೋ ಮಹೇಶ್ವರೋ ನಿತ್ಯಮಂಬರಾಂತರನರ್ತನಃ ।
ಉಗ್ರೋ ಭವಹರೋ ಧೌಮ್ಯೋ ಧೀರೋದಾಂತೋ ವಿರಾಜಿತಃ॥೧೩೨

ವಂಚಕೋ ನಿಯತೋ ಜಿಷ್ಣುಃ ಪರಿವಂಚಕ ಈಶ್ವರಃ ।
ಉಮಾವರಪ್ರದೋ ಮುಂಡೀ ಜಟಿಲಃ ಶುಚಿಲಕ್ಷಣಃ ॥೧೩೩॥

---

ವವನು. ಎಲ್ಲವನ್ನೂ ಅಪಹರಿಸುವವನು. ಮಂದಾರವೃಕ್ಷದಲ್ಲಿ ನೆಲಸಿರುವವನು. ಆನಂದದಾಯಕನು. ಕುಂದಪುಷ್ಪಮಾಲಾಧಾರಿಯು. ಮೇಘಸ್ವರೂಪನು. ನಂದಿನಿಯಿಂದ ಪ್ರೀತಿಸಲ್ಪಡುವವನು. ಮುಗುಳ್ನಗೆಯುಳ್ಳವನು. ದೇವತೆಗಳ ಗುಂಪಿನಿಂದ ಸೇವಿಸಲ್ಪಡುವವನು. ಮುಚುಕುಂದನೆಂಬ ಭಕ್ತನಿಂದ ಪೂಜಿತವಾದ ಪಾದಗಳುಳ್ಳವನು. ಸುಖದುಃಖಾದಿ ದ್ವಂದ್ವದುಃಖಗಳಿಂದ ದೂರನಾದವನು. ಲಕ್ಷ್ಮಿಯಿಂದಲೂ ಪೂಜಿತನಾದವನು. ॥೧೨೯-೧೩೦॥

ಪ್ರಪಂಚಕ್ಕೆ ಆಧಾರಭೂತನು. ಪ್ರಪಂಚವನ್ನು ನಡೆಸುವವನು. ಅಗ್ನಿಸ್ವರೂಪನಾಗಿ ಪ್ರಜ್ವಲಿಸುವವನು. ವಿನಯಶೀಲನು. ಭಕ್ತರಿಗೆ ಸುಖಕರನು. ಸ್ಥಿರನಾದವನು. ಶಿಕ್ಷಕನು. ಸರ್ವಸುಖಗಳನ್ನೂ ಅಸಂಖ್ಯಾತವಾಗಿ ಕೊಡುವವನು. ಭಯಂಕರನು. ದೇವತೆಗಳಿಗೆಲ್ಲಾ ಒಡೆಯನೆನಿಸಿದವನು. ನಿತ್ಯವೂ ಆಕಾಶಮಧ್ಯದಲ್ಲಿ ನರ್ತನಮಾಡುತ್ತಿರುವವನು. ಉಗ್ರರೂಪದಿಂದಿರುವವನು. ಸಂಸಾರದುಃಖಗಳನ್ನು ನಾಶಗೊಳಿಸುವವನು. ಧೌಮ್ಯನಾಮಧಾರಿಯು. ಧೀರನು. ಉದಾರನು. ಸದಾ ಪ್ರಕಾಶಿಸುವವನು. ॥೧೩೧-೧೩೨॥

ಮೋಸಗಾರರ ಮಧ್ಯೆ ನಿಲ್ಲುವವನು. ನಿಯಮಶೀಲನು. ಜಯಶೀಲನು. ವಿಶೇಷವಾಗಿ ವಂಚಿಸುವವನು. ಜಗದೊಡೆಯನು. ಉಮಾದೇವಿಗೆ ವರವನ್ನಿತ್ತವನು. ಸಂನ್ಯಾಸಿಯು. ಜಟಾಧಾರಿಯು.. ಶುಚಿವಂತನು. ಚರ್ಮಾಂಬರಧಾರಿಯು.

ಚರ್ನಾಂಬರಃ ಕಾಂತಿಕರಃ ಕಂಕಾಲವರವೇಷಧೃಕ್ ।
ಮೇಖಲೀ ಅಜಿನೀ ದಂಡೀ ಕಪಾಲೀ ಮೇಖಲಾಧರಃ ॥೧೩೪॥

ಸದ್ಯೋಜಾತಃ ಕಾಲಿಪತಿರ್ವರೇಣ್ಯೋ ವರದೋ ಮುನಿಃ ।
ವಸಾಪ್ರಿಯೋ ವಾಮದೇವೋ ತತ್ಪುರುಷೋ ವಟಮೂಲಗಃ ॥೧೩೫॥

ಉಲೂಕರೋಮಾ ಘೋರಾತ್ಮಾ ಲಾಸ್ಯಪ್ರೀತೋ ಲಘುಸ್ಥಿರಃ ।
ಅಣೋರಣೀಯಾನೀಶಾನಃ ಸುಂದರಭ್ರೂಃ ಸುತಾಂಡವಃ ॥೧೩೬॥

ಕಿರೀಟಮಾಲಾಭರಣೋ ಗಜರಾಜಲಸದ್ಗತಿಃ ।
ಹರಿಕೇಶೋ ಮುಂಜಿಕೇಶೋ ವ್ಯೋಮಕೇಶೋ ಯಶೋಧರಃ ॥೧೩೭॥

ಪಾತಾಲವಸನೋ ಭರ್ತಾ ಶಿಪಿವಿಷ್ಟಃ ಕೃಪಾಕರಃ ।
ಹಿರಣ್ಯವರ್ಣೋ ದಿವ್ಯಾತ್ಮಾ ವೃಷಧರ್ಮಾ ವಿರೋಚನಃ ॥೧೩೮॥

---

ಕಾಂತಿಯನ್ನುಂಟುಮಾಡುವವನು. ವೃದ್ಧಸಂನ್ಯಾಸಿವೇಷಧಾರಿಯು. ಮೇಖಲ, ಕೃಷ್ಣಾಜಿನ, ದಂಡ, ಕಪಾಲ ಮೊದಲಾದವುಗಳನ್ನು ಧರಿಸಿದವನು. ॥೧೩೩-೧೩೪॥

ಇಷ್ಟಬಂದೊಡನೆ ಜನ್ಮತಾಳುವವನು. ಕಾಳಿಕಾಪತಿಯು. ಶ್ರೇಷ್ಠಮೂರ್ತಿಯು. ವರಪ್ರದನು. ಜ್ಞಾನಪ್ರದಾಯಕನು. ಮದಿರಮಾಂಸಪ್ರಿಯನು. ವಾಮದೇವ, ತತ್ಪುರುಷ ಎಂಬ ಮೂರ್ತಿಭೇದಗಳಿಂದ ವಿರಾಜಿಸುವವನು. ವಟವೃಕ್ಷದ ಮೂಲದಲ್ಲಿ ನೆಲಸಿರುವವನು. ಘೋರವಾದ ಸ್ವರೂಪವುಳ್ಳವನು. ನಾಟ್ಯಪ್ರಿಯನು. ಲಘುವಾದ ರೀತಿಯಲ್ಲಿ ಶಾಶ್ವತವಾಗಿ ಕಾಣುವವನು. ಅಣುವಿಗಿಂತ ಅಣುವು. ಈಶಾನರೂಪಿಯು. ಸುಂದರವಾದ ಹುಬ್ಬುಗಳುಳ್ಳವನು. ನಾಟ್ಯಶಾಸ್ತ್ರಜ್ಞನು. ॥೧೩೫-೧೩೬॥

ಕಿರೀಟ, ಪುಷ್ಪಮಾಲಾ ಇವುಗಳನ್ನು ಧರಿಸಿಕೊಂಡಿರುವವನು. ಐರಾವತದಂತೆ ಗಮನವುಳ್ಳವನು. ಹರಿದ್ವರ್ಣದ ಕೂದಲುಳ್ಳವನು. ಹರಡಿದ ಕೂದಲುಳ್ಳವನು. ಅಂತರಿಕ್ಷಕ್ಕೆ ವ್ಯಾಪಿಸಿದ ಕೂದಲುಳ್ಳವನು. ಯಶಸ್ವಿಯು. ಪಾತಾಲಲೋಕವನ್ನೇ ವಸ್ತ್ರವನ್ನಾಗಿ ಮಾಡಿಕೊಂಡವನು. ಯಜಮಾನನು. ಕಿರಣರೂಪದಿಂದ ಪ್ರವೇಶಿಸಿದವನು. ದಯಾಕರನು. ಹಿರಣ್ಯದಂತೆ ಬಣ್ಣವುಳ್ಳವನು. ದಿವ್ಯವಾದ ಪ್ರಕೃತಿಸ್ವರೂಪನು. ಧರ್ಮಾಕಾರವಾದ ವೃಷಭವನ್ನು ಹೊಂದಿರುವವನು. ವಿರುದ್ಧವಾದ ಕಾಂತಿಯುಳ್ಳವನು. ॥೧೩೭-೧೩೮॥

ದೈತ್ಯೇಂದ್ರವರದೋ ವೈದ್ಯಃ ಸುರವಂದ್ಯೋಽಘನಾಶಕಃ ।
ಆನಂದೇಶಃ ಕುಶಾವರ್ತೋ ನಂದ್ಯಾವರ್ತೋ ಮಧುಪ್ರಿಯಃ ॥೧೩೯॥

ಪ್ರಸನ್ನಾತ್ಮಾ ವಿರೂಪಾಕ್ಷೋ ವನಾನಾಂ ಪತಿರವ್ಯಯಃ ।
ಮಸ್ತಿಷ್ಕಾದೋ ವೇದವೇದ್ಯಃ ಶರ್ವೋ ಬ್ರಹ್ಮೌದನಪ್ರಿಯಃ ॥೧೪೦॥

ಪಿಶಂಗಿತಜಟಾಜೂಟಸ್ತಟಿಲ್ಲೋಲವಿಲೋಚನಃ ।
ಗೃಹಧಾರೋ ಗ್ರಾಮಪಾಲೋ ನರಸಿಂಹವಿನಾಶಕಃ ॥೧೪೧॥

ಮತ್ಸ್ಯಹಾ ಕೂರ್ಮಪೃಷ್ಠಾಸ್ಥಿಧರೋ ಭೂಧರಹಾರಕಃ ।
ವಿಧೀಂದ್ರಪೂಜಿತಪದೋ ಪಾರದೋ ವಾರಿಧಿಸ್ಥಿತಃ ॥೧೪೨॥

ಮಹೋದಯೋ ಮಹಾದೇವೋ ಮಹಾಬೀಜೋ ಮಹಾಂಗಧೃಕ್ ।
ಉಲೂಕನಾಗಾಭರಣೋ ವಿಧಿಕಂಧರಪಾತನಃ ॥೧೪೩॥

---

ದೈತ್ಯರಾಜರಿಗೆಲ್ಲಾ ವರವನ್ನಿತ್ತವನು. ವೈದ್ಯರೂಪಿಯು. ದೇವತೆಗಳಿಂದ ಪೂಜಿತನಾದವನು. ಪಾಪನಾಶಕನು. ಆನಂದಾಧಿಪತಿಯು. ಕುಶಾವರ್ತದ್ವೀಪದಲ್ಲಿ ನೆಲಸಿರುವವನು. ನಂದ್ಯಾವರ್ತವೆಂಬ ದ್ವೀಪವಾಸಿಯು. ವಸಂತಪ್ರಿಯನು. ಪ್ರಸನ್ನವಾದ ಆತ್ಮಸ್ವರೂಪಿಯು. ವಿರೂಪವಾದ ಕಣ್ಣುಗಳುಳ್ಳವನು. ವನಗಳಿಗೆ ಒಡೆಯನೆನಿಸಿದವನು. ನಾಶರಹಿತನಾದವನು. ಮಸ್ತಿಷ್ಕವನ್ನು ಭಕ್ಷಿಸುವವನು. ವೇದವನ್ನು ತಿಳಿದವನು. ಸುಖಕರನು. ಬ್ರಹ್ಮಭೋಜನದಲ್ಲಿ ಪ್ರೀತಿಯುಳ್ಳವನು. ॥೧೩೯-೧೪೦॥

ಹೊಂಬಣ್ಣದ ಜಟಾಕಲಾಪವುಳ್ಳವನು. ಮಿಂಚಿನಂತೆ ಚಂಚಲವಾದ ಕಣ್ಣುಗಳುಳ್ಳವನು. ಗೃಹಗಳಿಗೆ ಆಶ್ರಯಭೂತನು. ಸಕಲ ಗ್ರಾಮಗಳನ್ನು ರಕ್ಷಿಸುವವನು. ನರಸಿಂಹಾವತಾರದಿಂದ ಬಂದ ಮಹಾವಿಷ್ಣುವನ್ನು ಶರಭಾವತಾರದಿಂದ ನಾಶಮಾಡಿದವನು. ಮತ್ಸ್ಯಾವತಾರಿಯಾದ ವಿಷ್ಣುವನ್ನು ಸೋಲಿಸಿದವನು. ಕೂರ್ಮಪೃಷ್ಠದಮೇಲೆ ನಿಂತಿರುವವನು. ಕೂರ್ಮದ ಅಸ್ಥಿಯನ್ನು ಧರಿಸಿದವನು. ವರಹಾವತಾರಿಯನ್ನು ಅಪಹರಿಸಿದವನು. ಬ್ರಹ್ಮ ಮತ್ತು ಇಂದ್ರ ಇವರಿಂದ ಪೂಜಿತವಾದ ಪಾದಪದ್ಮವುಳ್ಳವನು. ಭವಸಾಗರದ ಪಾರವನ್ನು ಕಂಡುಹಿಡಿದವನು. ಸಮುದ್ರಮಧ್ಯವರ್ತಿಯು. ॥೧೪೧-೪೨॥

ಅತಿಯಾದ ಆವಿರ್ಭಾವವುಳ್ಳವನು. ಮಹಾದೇವಸ್ವರೂಪಿಯು. ಸಕಲ ಜಗತ್ತಿಗೂ ನಿಮಿತ್ತಕಾರಣನು. ಜಗತ್ತಿಗೆ ಮೂಲಭೂತವಾದ ಶಕ್ತಿಯನ್ನು ಧರಿಸಿ

ಆಕಾಶಕೋಶೋ ಹಾರ್ದಾತ್ಮಾ ಮಾಯಾವೀ ಪ್ರಕೃತೇಃ ಪರಃ ।
ಶುಕ್ಲಸ್ತ್ರಿಶುಕ್ಲಸ್ತ್ರಿಮಧುಸ್ತ್ರಿ ಸುಪರ್ಣಷಡಂಗವಿತ್ ॥೧೪೪॥

ಲಲನಾಜನಪೂಜ್ಯಾಂಘ್ರಿರ್ಲಂಕಾವಾಸೋನಿಲಾಶನಃ ।
ವಿಶ್ವತಶ್ಚಕ್ಷುರೀಶಾನೋ ವಿಶ್ವತೋ ಬಾಹುರೀಶ್ವರಃ ॥೧೪೫॥

ಸರ್ವಾತ್ಮಾ ಭಾವನಾಗಮ್ಯಃ ಸ್ವತಂತ್ರಃ ಪರಮೇಶ್ವರಃ ।
ವಿಶ್ವಭಕ್ಷೋ ವಿದ್ರುಮಾಭಃ ಸರ್ವದೇವಶಿರೋಮಣಿಃ ॥೧೪೬॥

ಬ್ರಹ್ಮಸತ್ಯಂ ತಥಾನಂದೋ ಜ್ಞಾನಾನಂದಮಹಾಫಲಃ ।
ಜ್ಞಾನಾನಂದಮಹಾಫಲೋನ್ನಮ ಇತಿ ಓಂ ತತ್ಸತ್ ॥೧೪೭॥

---

ದವನು. ಸರ್ಪಾಭರಣವಿಶಿಷ್ಟನು. ಬ್ರಹ್ಮನ ಶಿರಸ್ಸನ್ನು ಕೆಡಹಿದವನು. ಅಂತರಿಕ್ಷ ವ್ಯಾಪಿಯು. ಸ್ನೇಹದಿಂದ ಕೂಡಿದ ಆತ್ಮವುಳ್ಳವನು. ಮಾಯಾವಿಶಿಷ್ಟನು. ಪ್ರಕೃತಿಗಿಂತ ಬೇರೆಯಾದವನು. ಶುದ್ಧಸ್ವಭಾವದವನು. ಶುಕ್ಲತ್ರಯವಿಶಿಷ್ಟನು. ಮಧ್ಯತ್ರಯಪ್ರೀತನು. ತ್ರಿಸುಪರ್ಣಸ್ವರೂಪನು. ಷಟ್‌ಶಾಸ್ತ್ರವನ್ನೂ ತಿಳಿದವನು. ॥೧೪೩-೧೪೪॥

ಸ್ತ್ರೀಜನರಿಂದ ಪೂಜಿತವಾದ ಪಾದಪದ್ಮವುಳ್ಳವನು. ಲಂಕಾನಗರದಲ್ಲಿ ವಾಸಿಸುವನು. ವಾಯುವನ್ನೇ ಆಹಾರವನ್ನಾಗಿ ಉಳ್ಳವನು. ಸರ್ವತ್ರ ದೃಷ್ಟಿಯುಳ್ಳವನು. ಈಶಾನರೂಪಿಯು. ಸರ್ವತ್ರ ಬಾಹುಗಳುಳ್ಳವನು. ಈಶ್ವರ ರೂಪಿಯು. ಸರ್ವತ್ರವ್ಯಾಪಿಸಿದ ಆತ್ಮರೂಪಿಯುಳ್ಳವನು. ಭಾವನೆಗೆ ಸುಲಭನಾಗಿ ದೊರಕುವವನು. ಸ್ವತಂತ್ರರೂಪಿಯು. ಪರಶಿವಸ್ವರೂಪನು. ಪ್ರಪಂಚವನ್ನೇ ನುಂಗುವವನು. ಹವಳದಂತೆ ಕಾಂತಿಯುಳ್ಳವನು. ಸಕಲ ದೇವತೆಗಳಿಗೂ ಶಿರೋಮಣಿಯಂತಿರುವವನು. ॥೧೪೫-೧೪೬॥

ಸತ್ಯಸ್ವರೂಪನಾದ ಬ್ರಹ್ಮನೂ, ಆನಂದಮಯನೂ ಎನಿಸಿದವನು. ಜ್ಞಾನಾನಂದವನ್ನೇ ಮುಖ್ಯಫಲವನ್ನಾಗಿ ಭಾವಿಸಿರುವವನು. ಇಂತಹ ಜ್ಞಾನಾನಂದಮಯನಾಗಿರುವ ಮತ್ತು ಅನಾದಿಯಾಗಿ .ಅಂತವಿಲ್ಲದಿರುವ ಪರಮಾತ್ಮನಿಗೆ ನಮಸ್ಕಾರ. ॥೧೪೭॥

|| ಈಶ್ವರ ಉವಾಚ ||

ಅಷ್ಟೋತ್ತರಂ ಮಹಾದೇವಿ ಶೇಷಾಶೇಷಮುಖೋದ್ಗತಂ ।
ಇತ್ಯೇತನ್ನಾಮಸಾಹಸ್ರಂ ರಹಸ್ಯಂ ಕಥಿತಂ ಮಯಾ ||೧೪೮||

ಪವಿತ್ರಮಿದಮಾಯುಷ್ಯಂ ಪಠತಾಂ ಶ್ರುಣ್ವತಾಂ ಸದಾ ।
ಯಸ್ತ್ವೇತನ್ನಾಮಸಾಹಸ್ರೈಃ ಬಿಲ್ವೈಃ ಪಂಕಜಕುಟ್ಮಲೈಃ ||೧೪೯||

ಪೂಜಯೇತ್ಸರ್ವಕಾಲೇಷು ಶಿವರಾತ್ರೌ ಮಹೇಶ್ವರಿ ।
ತಸ್ಯ ಮುಕ್ತಿಂ ದದಾಮೀಶೇ ಸತ್ಯಂ ಸತ್ಯಂ ನ ಸಂಶಯಃ ||೧೫೦||

ಮಮ ಪ್ರಿಯಕರಂ ಹ್ಯೇತತ್ಫಣಿನಾ ಫಣಿತಂ ಶುಭಂ ।
ಪಠನ್ಸರ್ವಂ ಲಭೇತ್ಯೈವ ಕಾಮಾನಾಯುಷ್ಯಮೇವ ಚ ||೧೫೧||

ಯಮಲೋಕಂ ನ ಪಶ್ಯೇತ ನಾಮಸಾಹಸ್ರಪಾಠಕಃ ।
ಕಲ್ಯಾಣೀ ಸ ಲಭೇದ್ಗೌರಿ ಗತಿಂ ನಾಮ್ನಾಂ ಚ ವೈಭವಾತ್ ||೧೫೨||

---

ಎಲೌ ಮಹಾದೇವಿಯೇ, ಆದಿಶೇಷನಿಂದ ಉಕ್ತವಾದ ಈ ಸಹಸ್ರನಾಮ ಸ್ತೋತ್ರವನ್ನು ನಿನಗೆ ರಹಸ್ಯವಾಗಿ ತಿಳಿಸಿರುವೆನು. ಇದು ಬಹಳ ಪವಿತ್ರವಾದದ್ದು. ಇದನ್ನು ಪಠಿಸಿದವರೂ, ಕೇಳಿದವರೂ ಸುಕೃತಿಗಳೆನಿಸುವರು. ಈ ಸಹಸ್ರ ನಾಮಗಳಿಂದ ಯಾರು ಪ್ರತಿದಿನವೂ, ವಿಶೇಷವಾಗಿ ಶಿವರಾತ್ರಿಯಲ್ಲಿಯೂ, ಬಿಲ್ವದಳ ಗಳಿಂದಲೂ, ಕಮಲದ ಅರಳುಮೊಗ್ಗುಗಳಿಂದಲೂ, ಭಕ್ತಿಯಿಂದ ನನಗೆ ಅರ್ಚನೆ ಮಾಡುವರೋ ಅವರಿಗೆ ನಿಜವಾಗಿಯೂ ಮುಕ್ತಿಯನ್ನು ಕೊಡುವೆನು. ಇದು ನಿಜವೆಂದು ನಂಬು. ||೧೪೮-೧೪೯-೧೫೦||

ದೇವಿಯೇ, ಈ ಶೇಷಪ್ರೋಕ್ತವಾದ ಸಹಸ್ರನಾಮಸ್ತೋತ್ರವು ನನಗೆ ಬಹು ಪ್ರಿಯವಾದುದು. ಇದನ್ನು ಭಕ್ತಿಯಿಂದ ಪಠಿಸಿದವರು ತಮ್ಮ ಐಹಿಕವಾದ ಇಷ್ಟಾರ್ಥಗಳನ್ನೆಲ್ಲಾ ಪಡೆಯುವರಲ್ಲದೆ, ಯಮಲೋಕದ ದರ್ಶನವನ್ನೂ ಮಾಡಲಾರರು. ಅಲ್ಲದೆ ಅವರು ಉತ್ತಮವಾದ ಗತಿಯನ್ನು ಪಡೆದು ಆನಂದವನ್ನನು ಭವಿಸುವರು. ||೧೫೧-೧೫೨||

ನಾಖ್ಯೇಯಂ ಗುಹ್ಯಮೇತದ್ಧಿ ನಾಭಕ್ತಾಯ ಕದಾಚನ ।
ನ ಪ್ರಕಾಶ್ಯಮಿದಂ ದೇವಿ ಮಾತೃಕಾರುದ್ರಸಂಹಿತಂ ॥೧೫೩॥

ಭಕ್ತೇಷು ಲಭತೇ ನಿತ್ಯಂ ಭಕ್ತಿಂ ಮತ್ಪಾದಯೋರ್ದೃಢಾಂ ।
ದತ್ವಾಽಭಕ್ತೇಷು ಪಾಪಾತ್ಮಾ ರೌರವಂ ನರಕಂ ವ್ರಜೇತ್ ॥೧೫೪॥

॥ ಸೂತ ಉವಾಚ ॥

ಇತಿ ಶಿವವಚನಂ ನಿಶಮ್ಯ ಗೌರೀ
ಪ್ರಣಯಾತ್ಪ್ರಣತಾ ಶಿವಾಂಘ್ರಿಪದ್ಮೇ ।
ಸುರವರತರುಸುಂದರೋರುಪುಷ್ಪೈ
ರಭಿಪೂಜ್ಯ ಪ್ರಮಥಾಧಿಪಂ ಮುದಾ ತುತೋಷ ॥೧೫೫॥

ತುಷ್ಟಾವ ಕಷ್ಟಹರಮಿಷ್ಟದಮಷ್ಟದೇಹಂ
ನಷ್ಟಾಘಸಂಘದುರದೃಷ್ಟಹರಂ ಪ್ರಕೃಷ್ಟಂ ।
ಉತ್ಕೃಷ್ಟವಾಕ್ಯಸುರವೃಂದಗಣೇಷ್ಟದಾನ
ಲೋಲಂ ವಿನಷ್ಟತಮಸಂ ಶಿಪಿವಿಷ್ಟಮೀಶಂ ॥೧೫೬॥

---

ಆದರೆ ಈ ಸ್ತೋತ್ರವನ್ನು ನನ್ನ ಭಕ್ತರಲ್ಲದವರಿಗೆ ಎಂದಿಗೂ ಹೇಳಬಾರದು. ಇದು ಮಾತೃಕಾರುದ್ರಸಂಹಿತೆಯೆಂಬ ಹೆಸರಿನಿಂದ ಪವಿತ್ರವೆನಿಸಿದೆ. ಇದನ್ನು ಶ್ರವಣಮಾಡುವುದರಿಂದ ಭಕ್ತನಾದವನು ನನ್ನ ಪಾದದಲ್ಲಿ ಅಸದೃಶವಾದ ಭಕ್ತಿಯನ್ನು ಸಂಪಾದಿಸುವನು. ಭಕ್ತರಲ್ಲದವರಿಗೆ ಹೇಳಿದ್ದೇ ಆದರೆ, ಹೇಳಿದವರು ನರಕಭಾಗಿಗಳಾಗುವರು. ॥೧೫೩-೧೫೪॥

ಎಂದು ಹೇಳಿದ ಈಶ್ವರನ (ಪತಿಯ) ಮಾತುಗಳನ್ನು ಕೇಳಿ ಈಶ್ವರನ ಪಾದಪದ್ಮಗಳಮೇಲೆ, ಆದರವಿಟ್ಟು ಕಲ್ಪವೃಕ್ಷಗಳಿಂದ ತಂದ ಮೃದುಮನೋಹರವಾದ ಪುಷ್ಪಗಳಿಂದ ಭಗವಂತನಾದ ಶಂಕರನನ್ನು ತೃಪ್ತಿಯಾಗುವಷ್ಟು ಪೂಜಿಸಿದಳು. ॥೧೫೫॥

ಅನಂತರ ಅಷ್ಟಮೂರ್ತಿಯೂ, ಭಕ್ತರ ಕಷ್ಟನಿವಾರಕನೂ, ಪಾಪನಾಶಕನೂ, ದೇವತೆಗಳ ಅಮೃತವಾಣಿಯಿಂದ ಸ್ತುತ್ಯನಾದವನೂ, ಅಜ್ಞಾನವಿದೂರನೂ,

॥ ಪಾರ್ವತ್ಯುವಾಚ ॥

ಚಂಡಾಂಶುಶೀತಾಂಶುಹುತಾಶನೇತ್ರಂ
ಚಕ್ಷುಶ್ಶ್ರವಾಪಾರವಿಲೋಲಹಾರಂ ।
ಚರ್ಮಾಂಬರಂ ಚಂದ್ರಕಲಾವತಂಸಂ
ಚರಾಚರಸ್ಥಂ ಚತುರಾನನೇಡ್ಯಂ ॥೧೫೭॥

ವಿಶ್ವಾಧಿಕಂ ವಿಶ್ವವಿಧಾನದಕ್ಷಂ
ವಿಶ್ವೇಶ್ವರಂ ವಿಶ್ರುತನಾಮಸಾರಂ ।
ವಿನಾಯಕೇಡ್ಯಂ ವಿಧಿವಿಷ್ಣುಪೂಜ್ಯಂ
ವಿಭುಂ ವಿರೂಪಾಕ್ಷಮಜಂ ಭಜೇಹಂ ॥೧೫೮॥

ಮಧುಮಥನಾಕ್ಷವರಾಬ್ಜಪಾದಂ
ಮನಸಿಜತನುನಾಶನೋತ್ಥದೀಪ್ತಮನ್ಯುಂ ।
ಮಮ ಮಾನಸಪದ್ಮಪದ್ಮಸಂಸ್ಥಂ
ಮತಿದಾನೇ ನಿಪುಣಂ ಭಜಾಮಿ ಶಂಭುಂ ॥೧೫೯॥

---

ಸರ್ವವ್ಯಾಪಿಯೂ ಆದ ಮಹಾದೇವನನ್ನು ಮುಂದೆ ಹೇಳುವಂತೆ ಸ್ತುತಿಸಿದಳು. ॥೧೫೬॥

"ಮಹಾದೇವನೇ, ಸೂರ್ಯಚಂದ್ರಾಗ್ನಿಗಳೇ ನಿನಗೆ ನೇತ್ರಗಳಾಗಿವೆ. ಸರ್ಪವೇ ಚಂಚಲವಾದ ಮಾಲೆಯಾಗಿದೆ. ಚರ್ಮವನ್ನೆ ವಸ್ತ್ರವನ್ನಾಗಿಯೂ, ಚಂದ್ರನನ್ನೇ ಭೂಷಣವನ್ನಾಗಿಯೂ ಇರುವ ಮಹಾದೇವನೇ, ನೀನು ಚರಾಚರ ವಸ್ತುಗಳಲ್ಲಿಯೂ ಅಡಗಿರುವೆ. ಬ್ರಹ್ಮನಿಂದಲೂ ಪೂಜಿತನಾಗಿರುವೆ. ॥೧೫೭॥

ಮಹಾದೇವನೇ, ನೀನು ವಿಶ್ವಾಧಿಕನು. ಪ್ರಪಂಚವನ್ನು ನಡೆಸುವುದರಲ್ಲಿ ಸಮರ್ಥನು. ವಿಶ್ವೇಶ್ವರನು. ಪ್ರಸಿದ್ಧವಾದ ನಾಮಧೇಯಗಳುಳ್ಳವನು. ನಿನ್ನನ್ನು ವಿನಾಯಕ, ಬ್ರಹ್ಮ, ವಿಷ್ಣು ಮುಂತಾದವರೆಲ್ಲರೂ ಸದಾ ಪೂಜಿಸುತ್ತಿರುವರು. ಅಂತಹ ವಿಭುವೂ, ವಿರೂಪಾಕ್ಷನೂ ಆದ ನಿನ್ನನ್ನು ನಾನು ಸರ್ವದಾ ವಂದಿಸುವೆನು.॥೧೫೮॥

ಪರಶಿವನೇ, ನಿನ್ನ ಪಾದವು ವಿಷ್ಣುವಿನ ನೇತ್ರಕಮಲದಿಂದ ಪ್ರಕಾಶಿತವಾದುದು. ಮನ್ಮಥನ ದೇಹನಾಶಕ್ಕಾಗಿ ಹೆಚ್ಚಿದ ಕೋಪವುಳ್ಳವನಾಗಿರುವೆ.

ಹರಿಂ ಹರಂತಮನುಯಂತಿ ದೇವಾನ್ನಖೈ
ಸ್ತಥಾ ಪಕ್ಷಘಾತೈಃ ಸುಘೋಣೈಃ ।
ನೃಸಿಂಹಮುಗ್ರಂ ಶರಭಾಕೃತಿಂ ಶಿವಂ
ಮತ್ತಂ ತದಾ ದಾನವರಕ್ತಸಾನಾತ್ ॥೧೬೦॥

ನಖರಮುಖರಘಾತೈಸ್ತೀಕ್ಷ್ಣಯಾ ದಂಷ್ಟ್ರಯಾಪಿ
ಜ್ವರಪರಿಕರದಹನಾಶತಾಯೈ ಸುಶೋಭೇ (?) ।
ದಿತಿಜಕದನಮತ್ತಂ ಸಂಹರಂತಂ ಜಗಚ್ಚ
ಹರಿಮಸುರಕುಲಘ್ನಂ ದೇವತುಷ್ಟ್ಯೈ ಮಹೇಶಃ ॥೧೬೧॥

ಪರಶುವರನಿಖಾತೈಃ ಕ್ರೋಡಮುತ್ಕ್ರೋಡಮೀಪ್ಸ್ಟೇ ॥೧೬೨॥

---

ಇಂತಹ ನೀನು ಸರ್ವದಾ ನನ್ನ ಮನಸ್ಸೆಂಬ ತಾವರೆಯ ಮನೆಯಲ್ಲಿ ನಿಂತು, ನನಗೆ ಶುದ್ಧ ಜ್ಞಾನವನ್ನೂ ಅನುಗ್ರಹಿಸಿ ನನ್ನನ್ನು ರಕ್ಷಿಸು. ಇದರಲ್ಲಿ ಸಮರ್ಥನಾದ ನಿನ್ನನ್ನು ನಾನು ಸರ್ವದಾ ಸೇವಿಸುವೆನು. ॥೧೫೯॥

ಪರಶಿವನೇ, ಹಿಂದೆ ಹಿರಣ್ಯಕಶಿಪುವಿನ ವಧಾರ್ಥವಾಗಿ ವಿಷ್ಣುವು ನರಸಿಂಹ ರೂಪವನ್ನು ತಾಳಿ, ತನ್ನ ಉಗುರುಗಳಿಂದ ಅವನ ಹೊಟ್ಟೆಯನ್ನು ಬಗೆದು, ರಕ್ತ ವನ್ನು ಕುಡಿದು ಮತ್ತನಾಗಿ, ಕೊಬ್ಬಿಹೋಗಿದ್ದನು. ಆಗ ನೀನು ಶರಭಾವತಾರ ಮಾಡಿ ಅವನನ್ನು ಸೋಲಿಸಿ ಅವನ ಗರ್ವವನ್ನು ಸಹ ನಿರ್ಮೂಲಮಾಡಿದೆಯಲ್ಲವೆ! ಅಂತಹ ನಿನಗೆ ವಂದನೆ. ॥೧೬೦॥

ನರಸಿಂಹಾವತಾರಮಾಡಿ ವಿಷ್ಣುವು ತನ್ನ ಉಗ್ರವಾದ ಉಗುರುಗಳ ತುದಿ ಯಿಂದ ರಾಕ್ಷಸರನ್ನು ಸೀಳುತ್ತಲೂ, ಕೋರೆಹಲ್ಲಿನಿಂದ ಬಗಿಯುತ್ತಲೂ, ಮಾಂಸಾದಿ ಗಳನ್ನು ಭಕ್ಷಿಸುತ್ತಲೂ, ಹಾಗೆಯೇ ಅವನ ರಕ್ಷಣೆಗಾಗಿ ಬರುವ ಸಮಸ್ತ ರಾಕ್ಷಸ ರನ್ನೂ ಧ್ವಂಸಮಾಡುತ್ತಲೂ ಇದ್ದಾಗ, ನೀನು ದೇವತೆಗಳ ತೃಪ್ತ್ಯರ್ಥವಾಗಿ ಅವನನ್ನು ನಿನ್ನ ಪರಶುವೆಂಬ ಆಯುಧದಿಂದ ಹೊಡೆದು ಗರ್ವವನ್ನು ಶಾಂತಿಗೊಳಿ ಸಿದೆ. ಅಂತಹ ಮಹಾತ್ಮನಾದ ನಿನ್ನನ್ನು ನಾನು ಶಿರಸಾ-ವಂದಿಸುವೆನು. ॥೧೬೧-೧೬೨॥

ರೌದ್ರನಾಮಭಿರೀಶಾನಂ ಸ್ತುತ್ವಾಥ ಜಗದಂಬಿಕಾ ।
ಪ್ರೇಮಾಶ್ರುಪುಲಕಾ ದೇವಂ ಸಾ ಗಾಢಂ ಪರಿಷಸ್ವಜೇ ॥೧೬೩॥

॥ ಶೌನಕ ಉವಾಚ ॥

ಕಾನಿ ರೌದ್ರಾಣಿ ನಾಮಾನಿ ತ್ವಂ ನೋ ವದ ವಿಶೇಷತಃ ।
ನ ತೃಪ್ತಿರೀಶಚರಿತಂ ಶೃಣ್ವತಾಂ ನಃ ಪ್ರಸೀದ ಭೋಃ ॥೧೬೪॥

॥ ಸೂತ ಉವಾಚ ॥

ತಾನ್ಯಹಂ ವೋ ವದಾಮ್ಯದ್ಯ ಶೃಣುಧ್ವಂ ಶೌನಕಾದಯಃ ।
ಪವಿತ್ರಾಣಿ ವಿಚಿತ್ರಾಣಿ ದೇವ್ಯಾ ಪ್ರೋಕ್ತಾನಿ ಸತ್ತಮಾಃ ॥೧೬೫॥

॥ ದೇವ್ಯುವಾಚ ॥

ದಿಶಾಂ ಪತಿಃ ಪಶುಪತಿಃ ಪತ್ತೀನಾಂ ಪತಿರೀಶ್ವರಃ ।
ಅನ್ನಾನಾಂ ಚ ಪತಿಶ್ಶಂಭುಃ ಪುಷ್ಟಾನಾಂ ಚ ಪತಿಶ್ಶಿವಃ ॥೧೬೬॥

---

ಎಂಬುದಾಗಿಯೂ, ಇನ್ನೂ ರುದ್ರದೇವತಾಕವಾದ ನಾಮುಗಳಿಂದಲೂ ಪಾರ್ವತಿಯು ಶಿವನನ್ನು ಸಂತೃಪ್ತಿಗೊಳಿಸಿ, ಪ್ರೀತಿಯಿಂದ ಪುಳಕಿತಗಾತ್ರಳಾಗಿ ಪತಿಯನ್ನು ಗಾಢವಾಗಿ ಆಲಿಂಗಿಸಿದಳು ಎಂದು ಸೂತಮಹರ್ಷಿಯು ಶೌನಕಾದಿಗಳಿಗೆ ಹೇಳಲು, ಮತ್ತೆ ಶೌನಕಮಹರ್ಷಿಯು, ಸೂತರನ್ನು ಕುರಿತು "ಮಹರ್ಷಿಯೇ, ಆ ರುದ್ರನಾಮುಗಳು ಯಾವುವು? ಅವುಗಳನ್ನು ವಿವರವಾಗಿ ನಮಗೆ ಹೇಳುವವನಾಗು. ನೀನು ಎಷ್ಟು ಶಿವನಾಮುಗಳನ್ನು ವಿವರಿಸಿ ಹೇಳಿದರೂ ನನಗೆ ತೃಪ್ತಿಯಾಗುವುದಿಲ್ಲ" ಎಂದು ಪ್ರಾರ್ಥಿಸಿದನು. ॥೧೬೩-೧೬೪॥

ಆಗ ಸೂತರು ಹೀಗೆ ದೇವಿಯು ಪ್ರಾರ್ಥಿಸಿದುದನ್ನೇ ವಿವರಿಸಿ ಹೇಳಲಾರಂಭಿಸಿದರು. "ಎಲೈ ಶೌನಕಾದಿಗಳೇ, ದೇವಿಯು ಸ್ತುತಿಸಿದ ರುದ್ರನಾಮುಗಳನ್ನು ಕೇಳಿರಿ. 'ದೇವದೇವನಾದ ಪರಶಿವನು ಸಕಲದಿಕ್ಕುಗಳಿಗೂ ಒಡೆಯನು. ಪಶುಪತಿಯು. ಸೈನ್ಯಗಳಿಗೆ ಯಜಮಾನನು. ಆಹಾರ ವಸ್ತುಗಳಿಗೂ ಪೋಷಕದ್ರವ್ಯಗಳಿಗೂ ಅಧಿದೇವತೆಯೆನಿಸಿದವನು. ॥೧೬೫-೧೬೬॥

ಜಗತಾಂ ಚ ಪತಿಸ್ಸೋಮಃ ಕ್ಷೇತ್ರಾಣಾಂ ಚ ಪತಿರ್ಹರಃ ।
ವನಾನಾಂ ಪತಿರೀಶಾನೋ ವೃಕ್ಷಾಣಾಂ ಚ ಪತಿರ್ಭವಃ ॥೧೬೭॥

ಕಕ್ಷಾಣಾಂ ಚ ಪತಿಶ್ಶೋಗ್ರ ಓಷಧೀನಾಂ ಪತಿರ್ಮೃಡಃ ।
ಪತ್ತೀನಾಂ ಚ ಪತಿಸ್ತಾನ್ವಃ ಸತ್ವನಾಂ ಚ ಪತಿರ್ಭವಃ ॥೧೬೮॥

ಆವ್ಯಾಧಿನೀನಾಂ ಚ ಪತಿಃಸ್ತಾಯೂನಾಂ ಚ ಪತಿರ್ಗುರುಃ ।
ಆರಣ್ಯಾನಾಂ ಪತಿಶ್ಶಂಗೋ ಮುಷ್ಣತಾಂ ಪತಿರುಷ್ಣಗುಃ ॥೧೬೯॥

ಪ್ರಕೃಂತಾನಾಂ ಪತಿಶ್ಶೇಶಃ ಕುಲುಂಚಾನಾಂ ಪತಿಸ್ಸಮಃ ।
ರುದ್ರೋ ಗೃಹಪತಿರ್ವಾತ್ಯೋ ಭರ್ಗೋ ರಥಪತಿಶ್ಶುಭಃ ॥೧೭೦॥

ಅಂಧಸಾಂ ಪತಿರೀಶಾನಃ ಸಭಾಯಾಃ ಪತಿರೀಶ್ವರಃ ।
ಸೇನಾಪತಿಶ್ಚ ಶ್ವಪತಿಃ ಸರ್ವಾಧಿಪತಯೇ ನಮಃ ॥೧೭೧॥

---

ಸಕಲ ಜಗತ್ತಿಗೂ ಒಡೆಯನು. ಪಾರ್ವತೀ ಪತಿಯು. ಕ್ಷೇತ್ರಗಳಿಗೆ ಯಜಮಾನನೆನಿಸಿದವನು. ಪಾಪನಾಶಕನು. ವನಗಳಿಗೆಲ್ಲಾ ಅಭಿಮಾನ ದೇವತೆಯು. ವೃಕ್ಷಗಳಿಗೆಲ್ಲಾ ಪತಿಯೆನಿಸಿದವನು. ಉತ್ಪತ್ತಿಯುಳ್ಳವನು. ಸರ್ವ ಭಾಗದಲ್ಲಿಯೂ ನಾಶಗೊಳಿಸುವ ಶಕ್ತಿದೇವತೆಗಳಿಗೆ ಒಡೆಯನು. ಸ್ವಕೀಯರಂತಿದ್ದು ಸ್ನೇಹಿತನ ದ್ರವ್ಯಾದಿಗಳನ್ನು ಅಪಹರಿಸುವ ಕಳ್ಳರಿಗೆ ಯಜಮಾನನು. ವಿದ್ಯೋಪ ದೇಶಕನು. ಆರಣ್ಯಗಳಿಗೆಲ್ಲಾ ಒಡೆಯನಾದವನು. ಸುಖಕರನು. ಕಳ್ಳರಿಗೆಲ್ಲಾ ಒಡೆಯನಾದವನು. ಉಷ್ಣಕಿರಣಗಳುಳ್ಳವನು. ದರೋಡೆಕಾರರಿಗೂ, ಗೃಹಕ್ಷೇತ್ರಾದಿ ಗಳನ್ನು ಅಪಹರಿಸುವವರಿಗೂ ಈಶ್ವರನೆನಿಸಿದವನು. ಭಯಂಕರನು. ವಿಷಯ ಲಂಪಟರಿಗೂ, ನಾನಾಜಾತಿಯವರಿಗೂ, ಪಾಲಕನಾದವನು. ಷಡ್ಗುಣೈಶ್ವರ್ಯ ಸಂಪನ್ನನು. ಸಕಲ ರಥಗಳಿಗೂ ಒಡೆಯನೆನಿಸಿದವನು. ಮಂಗಳಕರನಾದವನು. ಸಮಸ್ತ ವೃಕ್ಷಲತೆಗಳಿಗೂ, ಚತುರಂಗಸೈನ್ಯಕ್ಕೂ, ನಿಖಿಲಪ್ರಾಣಿಗಳಿಗೂ ಸತ್ವ ಪ್ರದನು. ॥೧೬೮-೧೬೯-೧೭೦॥

ಸಕಲ ಅಜ್ಞಾನನಿವಾರಕನು. ಈಶಾನ ರೂಪಿಯು. ದೇವಸಭೆಗೆ ರಕ್ಷಕನು. ಸೇನಾಪತಿಯು. ನಾಯಿಯೇ ಮೊದಲಾದ ತಿರ್ಯಗ್ಜಂತುಗಳಿಗೂ, ಸಕಲ ಪ್ರಾಣಿ ವರ್ಗಕ್ಕೂ ಅಧಿಪತಿಯಾದವನೇ, ನಿನಗೆ ವಂದನೆ. ॥೧೭೧॥

ಪ್ರಣತಾ ವಿನತಾ ತವಾಂಘ್ರಿಪದ್ಮೇ
ಭಗವನ್ ಪರಿಪಾಹಿ ಮಾಂ ವಿಭೋ ತ್ವಂ ।
ತವ ಕಾರುಣ್ಯಕಟಾಕ್ಷಲೇಶಲೇಶೈ
ರ್ಮುದಿತಾ ಶಂಕರ ಭರ್ಗ ದೇವ ದೇವಂ ॥೧೭೨॥

॥ ಸೂತ ಉವಾಚ ॥

ಇತಿ ಗಿರಿವರಜಾಪ್ರಕೃಷ್ಟವಾಕ್ಯಂ
ಸ್ತುತಿರೂಪಂ ವಿಬುಧಾಧಿಪೋ ಮಹೇಶಃ ।
ಅಭಿವೀಕ್ಷ್ಯ ಮುದಾ ತದಾ ಭವಾನೀ
ಮಿದಮಾಹ ಸ್ಮರಗರ್ವನಾಶಕಃ ಶರ್ವಃ ॥೧೭೩॥

॥ ಶಿವ ಉವಾಚ ॥

ಇದಮಗಜಸುತೇ ಸಹಸ್ರನಾಮ್ನಾಂ
ಪರಮರಹಸ್ಯಮಹೋ ಮಹಾಘಶೋಷಂ ।
ಪ್ರಬಲತರವರೈಶ್ಚ ಪಾತಕೌಘೈ
ರ್ಯದಿ ಪಠತೇ ದ್ವಿಜಃ ಸಮುಕ್ತಿಭಾಕ್ ॥೧೭೪॥

---

ಲೋಕಶಂಕರನೇ, ನಿನ್ನ ಪಾದಪದ್ಮಗಳಿಗೆ ನಾನು ಸರ್ವದಾ ವಂದನೆ ಮಾಡುತ್ತಾ ನಿನ್ನನ್ನೇ ಆಶ್ರಯಿಸಿ ಆನಂದಪಡುತ್ತಿರುವೆನು. ನಿನ್ನ ಕರುಣಾಕಟಾಕ್ಷದಲ್ಲಿ ಲೇಶಮಾತ್ರವನ್ನು ನನ್ನ ಮೇಲಿಟ್ಟರೂ ಅದರಿಂದ ನಾನು ಧನ್ಯನಾಗುವೆನು. ದೇವದೇವನೇ ನನ್ನನ್ನು ಕಾಪಾಡು' ಎಂದು ರುದ್ರನಾಮಗಳಿಂದ ದೇವಿಯು ಶಿವನನ್ನು ಸ್ತುತಿಸಿದಳು. ॥೧೭೨॥

ಹೀಗೆಂದು ಪ್ರಾರ್ಥನೆ ಮಾಡಿದ ದೇವಿಯ ಮಾತುಗಳನ್ನು ಕೇಳಿ ದೇವದೇವನಾದ ಮಹೇಶ್ವರನು ಸಂತೋಷಪಟ್ಟು ಮನ್ಮಥನಾಶಕನಾದ ಮಹಾದೇವನು ಈರೀತಿ ಮಾತನಾಡಿದನು. ॥೧೭೩॥

"ಎಲೌ ಧೇವಿಯೇ, ಈಗ ಹೇಳಿದ ಸಹಸ್ರನಾಮ ಸ್ತೋತ್ರವು ಬಹು ರಹಸ್ಯವಾದುದು. ಮತ್ತು ಸಮಸ್ತ ಪಾಪನಾಶಕವಾದುದು. ದ್ವಿಜನಾದವನು ಎಷ್ಟೇ

ಶೈವಂ ಮೇಧ್ಯ ರಹಸ್ಯಮುದ್ಭುತತರಂ ಸದ್ದ್ವಾದಶಾಂಶಾನ್ವಿತಂ
ಶ್ರುತ್ಯೋದಾರಗಿರಾ ದರೋರು ಕಥಯಾ ಸಂಪೂರಿತಂ ಧಾರಿತಂ ।
ಪಾಪಾನಾಂ ಪ್ರಳಯಾಯ ತದ್ಭವತಿ ವೈ ಸತ್ಯಂ ವದಾಮ್ಯದ್ರಿಜೇ ॥೧೭೫॥

ಶ್ರುತಿಗಿರಿಕರಿಕುಂಭರತ್ನಕುಂಭ
ಸ್ತ್ವಯಿ ವರಗಿರಿಜೇ ತ್ವಯಾ ರಸಾದ್ರ್ರದೃಷ್ಟ್ಯಾ ।
ನಿಹಿತೋ ಜಿಹ್ಮಧಿಯಾಂ ಮುದೇ ಯ ಏಷೋ
ಮನು ಭಕ್ತಜನಾರ್ಪಣೇ ಮುದೇ ಸ್ಯಾತ್ ॥೧೭೬॥

॥ ಈಶ್ವರ ಉವಾಚ ॥

ಏತತ್ತೇ ಪಂಚಮಾಂಶಸ್ಯ ವಿಸ್ತರಃ ಕಥಿತೋ ಮಯಾ ।
ರಹಸ್ಯಾರ್ಥಂ ಚ ದೇವೇಶಿ ಕಿಂಭೂಯಃ ಶ್ರೋತುಮಿಚ್ಛಸಿ ॥೧೭೭॥

---

ಪಾಪಿಯಾಗಿದ್ದರೂ ಈ ಸಹಸ್ರನಾಮಸ್ತೋತ್ರವನ್ನು ಪಠಿಸುವುದರಿಂದ ಆತನು ನಿಜವಾಗಿಯೂ ಮುಕ್ತನಾಗುವನು. ॥೧೭೪॥

ಪಾರ್ವತಿಯೇ, ಈ ದ್ವಾದಶಾಂಶಸಮನ್ವಿತವಾದ ಶಿವರಹಸ್ಯವೆಂಬುದು ಅನೇಕ ಸಾರವಾದ ಪುಣ್ಯಕಥೆಗಳಿಂದ ಕೂಡಿದೆ. ಮತ್ತು ಆಶ್ಚರ್ಯಕರವಾಗಿದೆ. ಅಲ್ಲದೆ ಇದರ ಪಠನ ಮತ್ತು ಶ್ರವಣ ಇವುಗಳಿಂದ ಪಾಪನಾಶವೊದಗಿ ಸ್ಥಿರ ಮುಕ್ತಿಯೂ ಲಭಿಸುವುದು. ಇದು ನಿಶ್ಚಯ. ॥೧೭೫॥

ದೇವಿಯೇ, ಇದು ವೇದವೆಂಬ ಪರ್ವತಶಿಖರದ ತುದಿಯಲ್ಲಿ ನಿಂತಿರುವ ಆನೆಯ ಕುಂಭಸ್ಥಳದಲ್ಲಿ ಕಂಡುಬರುವ ರತ್ನಕುಂಭಕ್ಕೆ ಸದೃಶವಾದುದು. ಇಂತಹ ಪರಮ ಪವಿತ್ರವಾದ ಈ ಶಿವರಹಸ್ಯವು ಕಪಟಿಗಳ ಮನಸ್ಸಿನ ಕ್ರೋಧಾದಿಗಳನ್ನು ಹೋಗಲಾಡಿಸಿ, ಅವರೆಲ್ಲರೂ ನನ್ನ ಭಕ್ತರಾಗುವಂತೆ ಮಾಡುವುದು. ಅಲ್ಲದೆ ಅವರಿಗೆ ವಿಶೇಷವಾದ ಆನಂದವನ್ನುಂಟುಮಾಡುವುದು. ॥೧೭೬॥

ಎಲೌ ಪ್ರಿಯಳೇ, ನಿನಗೆ ಹಿತವೂ ರಹಸ್ಯವೂ ಆದ ಈ ಪಂಚಮಾಂಶದ ಕಥೆಯನ್ನು ಇಲ್ಲಿನವರೆಗೂ ವಿಸ್ತಾರವಾಗಿ ಹೇಳಿರುವೆನು. ಮತ್ತೇನನ್ನು ಕೇಳಲು

ಇತ್ಥಂ ಶಿವವಚಶ್ಶ್ರುತ್ವಾ ಪ್ರಣಮ್ಯಾಥ ಮಹೇಶ್ವರೀ ।
ಸಮಾಲಿಂಗ್ಯ ಮಹಾದೇವಂ ಸಹರ್ಷಾ ಗಿರಿಜಾ ತದಾ ॥೧೭೮॥

॥ ದೇವ್ಯುವಾಚ ॥

ಪ್ರಾಹ ಪ್ರೇಮಾಶ್ರುಪುಲಕಾ ಶ್ರುತ್ವಾ ಶಿವಕಥಾಸುಧಾಂ ॥೧೭೯॥

ಅಹೋ ಧನ್ಯಾಸ್ಮಿ ದೇವೇಶ ತ್ವತ್ಕಥಾಂಭೋಧಿವೀಚಿಭಿಃ ।
ಶ್ರೋತ್ರಂ ಪವಿತ್ರತಾಂ ಯಾತಿ ಮಾಹಾತ್ಮ್ಯಂ ವೇದಕಸ್ತವ ॥೧೮೦॥
ಮಾನ್ಯತೇ ದೇವದೇವೇಶ ನ ಭೇದೋಸ್ತ್ಯಾವಯೋಶ್ಶಿವ ॥೧೮೧॥

ಭವ ಭವ ಭಗವನ್ ಭವಾಬ್ಧಿಪಾರ
ಸ್ಮರಗರಖಂಡನ ಮಂಡನೋರುಗಂಡ ।
ಸ್ಫುರದುರುಮುಕುಟೋತ್ತಮಾಂಗಗಂಗಾ
ಮೃತಧಾಮಾದಿವಿದೀಪ್ತದಿವ್ಯದೇಹ ॥೧೮೨॥

---

ಬಯಸುವೆ? ಎಂದು ಶಂಕರನು ಪ್ರಶ್ನಿಸಲು, ಅದನ್ನು ಕೇಳಿ ಸಂತುಷ್ಟಳಾದ ದೇವಿಯು ಸಂತೋಷದಿಂದ ಮಹಾದೇವನನ್ನು ಆಲಿಂಗಿಸಿಕೊಂಡು ಹೀಗೆಂದಳು. ॥೧೭೭-೧೭೮॥

ದೇವಿಯು ಶಿವಕಥಾಮೃತಪಾನಮಾಡಿ, ಪ್ರೇಮಾಶ್ರುಧಾರಾಪೂರಿತಳಾಗಿದ್ದು "ಮಹಾದೇವನೇ, ನಿನ್ನ ಕಥಾಮೃತಸಮುದ್ರದ ಅಲೆಗಳಿಂದ ತಾಡಿತಳಾದ ನಾನು ಈಗ ಧನ್ಯಳಾಗಿರುವೆನು. ನನ್ನ ಶ್ರೋತ್ರಯುಗಳವೂ ಅತ್ಯಂತ ಪವಿತ್ರವಾಗಿರುವುದು. ಈ ಶಿವರಹಸ್ಯವನ್ನು ಚೆನ್ನಾಗಿ ಅರಿತವನು ನಮ್ಮಿಬ್ಬರ ಸ್ವರೂಪವನ್ನೂ ಚೆನ್ನಾಗಿ ತಿಳಿದವನೆನಿಸುವನು. ಏಕೆಂದರೆ ವಸ್ತುತಃ ನಮ್ಮಿಬ್ಬರಿಗೂ ಭೇದವೇ ಇಲ್ಲವಷ್ಟೇ. ॥೧೮೦-೧೮೧॥

ಷಡ್ಗುಣೈಶ್ವರ್ಯ ಭರಿತನಾದವನೇ, ಸಂಸಾರಸಾಗರದ ಕೊನೆಗಂಡವನೇ, ನೀನು ಮನ್ಮಥನನ್ನೂ ಮತ್ತು ವಿಷವನ್ನೂ ದಹಿಸಿದವನಲ್ಲವೆ? ಸುಂದರವಾದ ಕಪೋಲಪ್ರದೇಶದಿಂದ ಅಲಂಕೃತನಾದವನೇ, ನಿನ್ನ ಶಿರೋಭಾಗದಲ್ಲಿ ದೇವ ಗಂಗೆಯೂ, ಅಮೃತಕಿರಣನಾದ ಚಂದ್ರನೂ ಅಲಂಕಾರದಂತಿರುವವರಲ್ಲವೇ! ಮಹಾದೇವನೇ, ನನ್ನನ್ನು ಕಾಪಾಡು. ॥೧೮೨॥

ಅವ ಭವ ಭವಹನ್ ಪ್ರಕರ್ಷಪಾಪಾ
ಜ್ಜನನಮುಜ್ಝಂ ಜಡದುಃಖಭೋಗಸಂಗಂ ।
ತವ ಮುಖಕಥಯಾ ಜಗತ್ಪವಿತ್ರಂ
ಭವ ಭವತಾ ಭವತಾಪಹೃನ್ಮುದೇ ಮೇ ॥೧೮೩॥

॥ ಸೂತ ಉವಾಚ ॥

ಇತಿ ದೇವ್ಯಾ ಸ್ತುತೋ ದೇವೋ ಮಹೇಶಃ ಕರುಣಾನಿಧಿಃ ।
ತದ್ವತ್ಕಥಾನಿಧಿಃ ಪ್ರೋಕ್ತಃ ಶಿವರತ್ನಮಹಾಖನಿಃ ॥೧೮೪॥

ಭವತಾಂ ದರ್ಶನೇನಾದ್ಯ ಶಿವಭಕ್ತಿಕಥಾರಸೈಃ ।
ಪಾವಿತೋಸ್ಮಿ ಮುನಿಶ್ರೇಷ್ಠಾಃ ಕಿಂ ಭೂಯಶ್ಶ್ರೋತುಮಿಚ್ಛಥ ॥೧೮೫॥

ಇತಿ ತದ್ವದನಾಂಭೋಜಸುಧಾನಿಷ್ಪಂದಿನೀಂ ಗಿರಂ ।
ಶ್ರುತ್ವಾ ಪ್ರಕಟರೋಮಾಂಚಃ ಶೌನಕಃ ಪ್ರಾಹ ಸಾದರಂ ॥೧೮೬॥

---

ಸಂಸಾರದುಃಖನಾಶಕನಾದ ಪರಮಾತ್ಮನೇ, ಸಕಲ ಪಾಪಗಳ ಭಯವನ್ನೂ ನನಗೆ ತಪ್ಪಿಸುವವನಾಗು. ದುಃಖಾನುಭವದಿಂದ ಒದಗುವ ಜನ್ಮಗಳನ್ನು ನಿವಾರಿಸು. ನಿನ್ನ ಪವಿತ್ರವಾದ ಕಥೆಗಳಿಂದ ಈ ಜಗತ್ತೇ ಈಗ ಪವಿತ್ರವಾಗಿರುವುದು. ನನಗೆ ಮಾತ್ರ ನಿನ್ನ ಕರುಣೆಯಿಂದ ಸಂಸಾರದ ತಾಪತ್ರಯಗಳೆಲ್ಲಾ ನಾಶವಾಗಿ ನನಗೆ ಶಾಶ್ವತವಾದ ಆನಂದವಾಗುವಂತೆ ಕರುಣಿಸು." ಎಂದು ಪಾರ್ವತಿಯು ಶಿವನನ್ನು ಪ್ರಾರ್ಥಿಸಿಕೊಂಡಳು. ॥೧೮೩॥

ಎಲೈ ಶೌನಕಾದಿಗಳೇ, ಹೀಗೆ ದೇವಿಯಿಂದ ಪ್ರಾರ್ಥಿತನಾದ ಶಂಕರನು ದಯೆಯಿಂದ ಪಾರ್ವತಿಗೆ ವಿವರಿಸಿದ ಶಿವಕಥಾಭಾಗವನ್ನೆಲ್ಲಾ ನಿಮಗೆ ವಿಸ್ತಾರವಾಗಿ ಹೇಳಿರುವನು. ಹೀಗೆ ಶಿವಕಥಾನಿರೂಪಣೆಮಾಡಿದ್ದುದರಿಂದಲೂ, ನಿಮ್ಮಂತಹ ಶಿವಭಕ್ತಿವಿಶಿಷ್ಟರ ದರ್ಶನದಿಂದಲೂ ನಾನು ಪವಿತ್ರನಾಗಿರುವೆನು. ಋಷಿವರ್ಯರೇ, ನಿಮಗೆ ಮತ್ತೇನನ್ನು ಕೇಳುವ ಅಭಿಲಾಷೆಯಿರುವುದು ? ॥೧೮೪-೧೮೫॥

ಎಂದು ಕೇಳಿದ ಸೂತಮಹರ್ಷಿಯ ಮಾತುಗಳನ್ನು ಕೇಳಿ ಶೌನಕಋಷಿಯು ಶಿವಕಥಾಮೃತಪಾನದಿಂದ ರೋಮಾಂಚವುಳ್ಳವನಾಗಿ ಮತ್ತೆ ಸೂತಮಹರ್ಷಿಯನ್ನು

॥ ಶೌನಕ ಉವಾಚ ॥

ಅಹೋ ಮಹಾದೇವಕಥಾಸುಧಾಂಬುಧಿಃ
ಸಂಪ್ಲಾವಿತೋಽಸ್ಮ್ಯದ್ಯ ಭವಾಗ್ನಿತಪ್ತಃ ।
ಧನ್ಯೋಽಸ್ಮಿ ತ್ವದ್ವಾಕ್ಯಸುಜಾತಹರ್ಷೋ
ದ್ವಿಜೈಸ್ಸುಜಾತೈರಪಿ ಜಾತಹರ್ಷಃ ॥೧೮೭॥

॥ ಸೂತ ಉವಾಚ ॥

ಶ್ರೀಮತ್ಕೈಲಾಸವರ್ಯೇ ಭುವನಜನಕತಃ ಸಂಶ್ರುತಾ ಪುಣ್ಯದಾತ್ರೀ
ಶಂಭೋರ್ದಿವ್ಯಕಥಾಸುಧಾಬ್ಧಿಲಹರೀಪಾಪಾವನೋದಕ್ಷಮಾ ।
ದೇವ್ಯಾಸ್ತುಚ್ಛ್ರುತವಾನ್ ಗುರುರ್ಮಮ ಮುನಿಃಸ್ಕಂದಾಚ್ಚ ತಲ್ಲಬ್ಧವಾನ್
ಸೇಯಂ ಕಿಂಕರಶಂಕರೇಷು ವಿಹಿತಾ ವಿಶ್ವೈಕಮೋಕ್ಷಪ್ರದಾ ॥೧೮೮॥

---

ಕುರಿತು "ಮಹರ್ಷಿಯೇ, ಮಹಾದೇವನ ಕಥಾಸಮುದ್ರದಲ್ಲಿ ಮುಳುಗಿ, ಸಂಸಾರ ದುಃಖವೆಂಬ ಅಗ್ನಿಬಾಧೆಯನ್ನು ಕಳೆದುಕೊಂಡವನಾಗಿದ್ದೇನೆ. ನಿನ್ನ ಮಾತುಗಳನ್ನು ಕೇಳಿ ನಾನು ಧನ್ಯನಾಗಿರುವೆನು. ಮತ್ತು ಶ್ರೇಷ್ಠಜನ್ಮದಲ್ಲಿ ಜನಿಸಿದ ದ್ವಿಜರಿಗೂ ಸಹ ನಾನು ಹರ್ಷಪ್ರದನಾಗಿರುವೆನು," ಎಂದು ತನ್ನ ಧನ್ಯತೆಯನ್ನು ಪ್ರಕಟಗೊಳಿಸಿದನು. ॥೧೮೬-೧೮೭॥

ಕೊನೆಯದಾಗಿ ಸೂತಮಹರ್ಷಿಯು ಶೌನಕಾದಿಗಳನ್ನು ಕುರಿತು, ಮಹರ್ಷಿಗಳೇ, ಹೀಗೆ ಕೈಲಾಸಪರ್ವತದಲ್ಲಿ ಪ್ರಪಂಚಪಿತನೆನಿಸಿದ ಮಹಾದೇವನು ಪರಮ ಪಾವನವಾದ ಶಿವಕಥೆಗಳನ್ನು ಪ್ರಿಯಪತ್ನಿಯಾದ ದೇವಿಗೆ ವಿಸ್ತಾರವಾಗಿ ಹೇಳಿದುದನ್ನು ನನ್ನ ಗುರುವಾದ ವಾಜಶ್ರವಸ ಮಹರ್ಷಿಯು, ಕುಮಾರಸ್ವಾಮಿಯಿಂದ ಸಂಪೂರ್ಣವಾಗಿ ತಿಳಿದುಕೊಂಡನು. ಅವರ ಉಪದೇಶದಿಂದ ಈ ದಿವ್ಯಕಥೆಯನ್ನು ನಾನು ಲೋಕಕಲ್ಯಾಣಾರ್ಥವಾಗಿ ಈಶ್ವರಭಕ್ತರನ್ನು ಅನುಗ್ರಹಿಸಲೋಸುಗ ನಿಮಗೆ ವಿವರಿಸಿರುವೆನು. ಎಂದು ಸೂತಮಹರ್ಷಿಗಳು ಹೇಳಿ ಸುಮ್ಮನಾದರು. ॥೧೮೮॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಶಿವಗೌರೀ ಸಂವಾದೇ ಶೇಷಕೃತಸಹಸ್ರನಾಮದೇವೀಕೃತರೌದ್ರನಾಮ ನಿರೂಪಣಂ ನಾಮ ಚತ್ವಾರಿಂಶೋಽಧ್ಯಾಯಃ

## ಶ್ರೀ ಶಿವರಹಸ್ಯೆ ಭರ್ಗಾಖ್ಯಃ ಪಂಚಮಾಂಶಃ ಸಮಾಪ್ತಃ

॥ ಶ್ರೀಕಾಶೀವಿಶ್ವೇಶ್ವರಾರ್ಪಣಮಸ್ತು ॥

॥ ಶ್ರೀಭರ್ಗಾಯ ನಮಃ ॥

---

### ಈ ಅಂಶದ ಸಾರಾಂಶ

ಈ ಅಂಶವು ಅನೇಕ ಶಿವಲಿಂಗಗಳ ಉತ್ಪತ್ತಿಕ್ರಮ, ಅವುಗಳ ಮಹಿಮೆ, ಶಿವಾರ್ಚನೆಯಿಂದ ಈಶ್ವರ ಭಕ್ತರು ಹೊಂದಿದ ಫಲ ಇವೇ ಮೊದಲಾದ ಶೈವೇತಿಹಾಸಗಳನ್ನು ವಿಸ್ತಾರವಾಗಿ ತಿಳಿಸುವುದು. ಈ ಅಂಶದ ಮೊದಲನೆಯ ಭಾಗದಲ್ಲಿ ನರ್ಮದಾಲಿಂಗದ ಪ್ರಾದುರ್ಭಾವ, ಅದರ ಮಹಿಮೆ, ಓಂಕಾರ ಕುಂಡದ ಉತ್ಪತ್ತಿ ಕ್ರಮ, ಅದರ ಪ್ರಾಶಸ್ತ್ಯ, ಹಾಗೆಯೇ ಘುಸೃಣೇಶ್ವರಕ್ಷೇತ್ರದ ಮಹಿಮಾತಿಶಯ, ಇವು ವಿಶೇಷವಾಗಿ ಗಮನಿಸಬೇಕಾದ ಅಂಶಗಳು. ಎರಡನೆಯ ಭಾಗವಾದ ಈ ಪ್ರತಿಯಲ್ಲಿ ಗೋದಾವರೀನದಿಯ ಪ್ರಾಶಸ್ತ್ಯವು ವಿಶೇಷವಾಗಿ ವರ್ಣಿತವಾಗಿದೆ. ಇಪ್ಪತ್ತಾರನೆಯ ಅಧ್ಯಾಯದಲ್ಲಿ ವಾಮದೇವ ಋಷಿಕೃತವಾದ ಶಿವಸ್ತುತಿಯು ಉಪನಿಷತ್ತಿನ ಸಾರವನ್ನೇ ಹಿಂಡಿರುವಂತಿದೆ. ಅದರಲ್ಲಿರುವ ೯೩ ಶ್ಲೋಕಗಳೂ ಕೇವಲ ಶ್ರುತಿಸಾರವನ್ನೇ ಆಸ್ತಿಕರಿಗೆ ಬೋಧಿಸುವಂತಿರುವುವು. ಈ ಸ್ತೋತ್ರವು ಅಮೂಲ್ಯವೂ, ಅಪೂರ್ವವೂ ಎನಿಸಿರುವುದು.

ಇನ್ನು ೩೧-೩೨ ನೇ ಅಧ್ಯಾಯಗಳಲ್ಲಿ ಕಂಡುಬರುವ ಭಿಲ್ಲನ ಮತ್ತು ರಾಜನ ಇತಿಹಾಸಗಳು ಶಿವಭಕ್ತ್ಯತಿಶಯವನ್ನು ತಿಳಿಯಪಡಿಸುವುವು. ಇದೇ ಸಂದರ್ಭಗಳಲ್ಲಿ ಅನೇಕ ಮನಮೋಹಕವಾದ ಶಿವಸ್ತುತಿಗಳು ಅಲ್ಲಲ್ಲಿ ಗೋಚರಿಸುವುವು. ಒಟ್ಟಿನಲ್ಲಿ ಈ ಅಂಶವು ತೀರ್ಥಕ್ಷೇತ್ರಗಳ ವರ್ಣನೆ ಮತ್ತು ಮಹಿಮೆ, ಸ್ತೋತ್ರಗಳ ನೆಪದಿಂದ ಉಪನಿಷದರ್ಥಪ್ರತಿಪಾದನೆ, ಶಿವಪಾರಮ್ಯ ಈ ವಿಷಯಗಳನ್ನೊಳಗೊಂಡು ಆಸ್ತಿಕ ವೃಂದಕ್ಕೆ ಬಹು ಆದರಣೀಯವಾಗಿರುವುದು.

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗನಾಮಕವಾದ ಪಂಚಮಾಂಶದಲ್ಲಿ ಶಿವಗೌರೀ
ಸಂವಾದರೂಪವಾದ, ಶೇಷಕೃತ ಸಹಸ್ರನಾಮಸ್ತೋತ್ರ, ಮತ್ತು
ದೇವೀಕೃತ ರುದ್ರನಾಮಗಳು ಇವುಗಳನ್ನು ವಿವರಿಸುವ
ನಲವತ್ತನೆಯ ಅಧ್ಯಾಯವು ಮುಗಿದುದು.

## ಶ್ರೀಶಿವರಹಸ್ಯದಲ್ಲಿ ಭರ್ಗಾಖ್ಯವಾದ ಪಂಚಮಾಂಶವು ಮುಗಿದುದು

॥ ಓಂ ತತ್ಸತ್ ॥

